ಭಾವಿಸಮೀರ ಶ್ರೀಮದ್ವಾದಿರಾಜ ವಿರಚಿತ

# ಶ್ರೀರುಗ್ಮಿಣೀಶವಿಜಯಃ

1-6 ಸರ್ಗಗಳು



ಕನ್ನಡ ವ್ಯಾಖ್ಯಾನ

ಶ್ರೀ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು

ಶ್ರೀಅದಮಾರು ಮಠ, ಉಡುಪಿ.



ತತ್ವಸಂಶೋಧನಸಂಸತ್ (ರಿ)

ಕರ್ನಾಟಕ ಸಂಸ್ಕೃತವಿಶ್ವವಿದ್ಯಾಲಯದ ಮಾನ್ಯತೆ ಪಡೆದಿದೆ.

ಶ್ರೀಪಲಿಮಾರು ಮಠ, ಉಡುಪಿ.

॥ ಶ್ರೀರಾಮಶ್ರೀ ॥

ಭಾವಿಸಮೀರ ಶ್ರೀಮದ್ವಾದಿರಾಜವಿರಚಿತ

# ಶ್ರೀರುಗ್ಮಿಣೀಶವಿಜಯ


ಕನ್ನಡವ್ಯಾಖ್ಯಾನ

ಶ್ರೀಶ್ರೀ ವಿಶ್ವಪ್ರಿಯತೀರ್ಥಶ್ರೀಪಾದರು,

ಶ್ರೀ ಅದಮಾರು ಮಠ, ಉಡುಪಿ.





ತತ್ವಸಂಶೋಧನಸಂಸತ್(ರಿ.),

ಕರ್ನಾಟಕಸಂಸ್ಕೃತವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ

ಪಲಿಮಾರು ಮಠ,

ಉಡುಪಿ.

ಭಾವಿಸಮೀರಶ್ರೀಮದ್ವಾದಿರಾಜವಿರಚಿತಶ್ರೀರುಗ್ಮಿಣೀಶವಿಜಯ: ಮಹಾಕಾವ್ಯದ ವ್ಯಾಖ್ಯಾನ - ಕನ್ನಡಾನುವಾದ, ಶ್ರೀಶ್ರೀವಿಶ್ವಪ್ರಿಯತೀರ್ಥಶ್ರೀಪಾದರು, ಅದಮಾರುಮಠ, ಉಡುಪಿ.

ಪ್ರಕಟನೆಯ ವರ್ಷ : 2015

ಪ್ರತಿಗಳು : 1000

ಪುಟಗಳು : xlii + 349

ಬೆಲೆ : 700 ರೂ. (3 ಸಂಪುಟಗಳು ಸೇರಿ)

**ISBN: 978-93-81807-41-5**

ಪ್ರಕಾಶನಸಂಸ್ಥೆ : ತತ್ತ್ವಸಂಶೋಧನಸಂಸತ್ (ರಿ.),
ಕರ್ನಾಟಕಸಂಸ್ಕೃತವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದಿದೆ
ಪಲಿಮಾರು ಮಠ, ಉಡುಪಿ.
ದೂರವಾಣಿ : 0820-2528403
Phone:0820-2528403
E-mail:tssamsat@gmail.com



ಮುಖಪುಟ ವಿನ್ಯಾಸ : ಜನಾರ್ದನ ಆಚಾರ್ಯ

ಮುಖಪುಟದ ಭಾವಚಿತ್ರ : ಪರಶುರಾಮಭಟ್, ಕುಂಜಾರು

ಅಕ್ಷರಜೋಡಣೆ :
ಸುಬ್ಬಣ್ಣ ಕೆಂಪದಾಳಿಹಳ್ಳಿ
ಫೋನ್ : 080-26761614

ಮುದ್ರಣ : ವಾಣಿ ಪ್ರೆಸ್, ಮೈಸೂರು.
ಫೋ: 9886788295

॥ ಶ್ರೀರಾಮಶ್ರೀ ॥

# ಪ್ರಕಾಶಕರ ನುಡಿ

ಭಗವಂತನ ಅನಂತ ಅವತಾರಗಳು ಇವೆ. ಅವುಗಳಲ್ಲಿ ಕೆಲವು ನಮ್ಮ ಜೀವನಕ್ಕೆ ಅಳವಡಿಸಿಕೊಂಡಿದ್ದೇವೆ. ಅವೇ ಕೃಷ್ಣ-ರಾಮಾದಿ ರೂಪಗಳು. ಶ್ರೀಹರಿ ಸ್ವತಂತ್ರ, ಸರ್ವಸಮರ್ಥ. ಆದರೂ ಕೆಲವು ರೂಪಗಳಿಗೆ ಕೆಲವು ಪ್ರಧಾನ ಕಾರ್ಯಗಳು. ಆಚಾರ್ಯಮಧ್ವರು ಜ್ಞಾನರೂಪ-ಬಲರೂಪ ಎಂದು ಒಂದು ರೀತಿಯಲ್ಲಿ ವಿಭಾಗ ಮಾಡಿದ್ದಾರೆ. ಅವುಗಳಲ್ಲಿ ವೇದವ್ಯಾಸರೂಪ ಜ್ಞಾನಕಾರ್ಯಕ್ಕಾಗಿ ಆದದ್ದು. ಋಷಿಗಳ ಕೋಪಕ್ಕೆ ತುತ್ತಾಗಿ ಜನ ಮನದಿಂದ ಜ್ಞಾನ ದೂರ ಆದಾಗ ವ್ಯಾಸರಾಗಿ ಬಂದು ವೇದವಿಭಾಗ-ವೇದಾರ್ಥನಿರ್ಣಾಯಕ ಗ್ರಂಥಗಳನ್ನು ನೀಡಿದ್ದಾರೆ. ೧೮ ಪುರಾಣಗಳು ಇತಿಹಾಸಗ್ರಂಥಗಳು-ಬ್ರಹ್ಮಸೂತ್ರಗಳನ್ನು ರಚಿಸಿದ್ದಾರೆ. ಎಲ್ಲವೂ ಭಗವಂತನ ಸರ್ವೋ-ತ್ತಮತ್ವವನ್ನು ಪ್ರತಿಪಾದನೆ ಮಾಡುವವುಗಳೇ. ಅವುಗಳಲ್ಲಿ ಒಂದು ಭಾಗವತ. ಆ ಹೆಸರು ಕೇಳಿದ ತಕ್ಷಣ ನೆನಪಾಗುವುದು ಶ್ರೀ ಕೃಷ್ಣಕಥೆ. ಆ ಕಥೆಯಲ್ಲಿರುವ ಪ್ರತಿಯೊಂದು ಘಟ್ಟವೂ ರೋಚಕ. ಹೆಜ್ಜೆ ಹೆಜ್ಜೆಗೂ ಒಂದಲ್ಲಾ ಒಂದು ನೀತಿ. ನೀತಿಯನ್ನು ತಿಳಿಸದ ಒಂದು ಹೆಜ್ಜೆಯೂ ಭಗವಂತನಲ್ಲಿ ಇಲ್ಲ. ಆ ರೀತಿಯಾದ ಕೃಷ್ಣನ ಮಹಿಮೆಯ ಅಣು ಅಣುವನ್ನು ವರ್ಣನೆ ಮಾಡುತ್ತಾರೆ ವ್ಯಾಸರು. ಅಂತಹ ಭಾಗವತದಿಂದ ಆಯ್ದ ಒಂದು ಭಾಗವೇ ರುಗ್ಮಿಣೀಕಲ್ಯಾಣ. ಕೃಷ್ಣನ ಹೆಸರು ಹೇಳಿದ ತಕ್ಷಣ ಮಹಿಮಾಬುದ್ಧಿ ಕೆಲವರಿಗೆ ಹೇಗೆ ಬರುತ್ತೋ ಅದೇ ರೀತಿ ಕೆಲವರು ಆಕ್ಷೇಪಗಳ ಸುರಿಮಳೆಯನ್ನೇ ಸುರಿಸುತ್ತಾರೆ. ಉದಾ:- ಅವನು "ಚೋರ" ಎಂದು ಆಕ್ಷೇಪ. ಅದಕ್ಕೆ ಲೌಕಿಕ ವೈದಿಕ ಎಲ್ಲಾ ವರ್ಗದವರೂ ಒಪ್ಪುವ ರೀತಿಯಲ್ಲಿ ಉತ್ತರಿಸಿದವರು ಭಾವಿಸಮೀರ ಶ್ರೀವಾದಿರಾಜರು. ಕುಹಕಿಗಳಿಗೆ ಉತ್ತರ, ಸಜ್ಜನರಿಗೆ ಅವನ ಗುಣಚಿಂತನೆ-ಕಾವ್ಯದ ಲಕ್ಷಣಕ್ಕೆ ಅಪಮಾನವಾಗದ ರೀತಿಯ ವರ್ಣನೆಯ ಶೈಲಿ ಇದೆಲ್ಲವೂ ಮೇಳೈಸಿದ ಕೃತಿ ರಾಜರದ್ದು.

ಕೃಷ್ಣ ಯಮುನಾ ನದಿಯಲ್ಲಿ ಇರುವ ಕಾಳೀಯನ ಮರ್ದನ ಮಾಡಿದ ಘಟ್ಟ ಅದ್ಭುತ. ಸಮಾಜಕ್ಕೆ ಆಗುತ್ತಿರುವ-ಆಗಬಹುದಾದ ದುಷ್ಪರಿಣಾಮಗಳನ್ನು ಪರಿಹರಿಸಿದ ಬಗೆ ರೋಚಕ. ಆ ಘಟನೆಯನ್ನು ವರ್ಣನೆ ಮಾಡುವಾಗ ರಾಜರು ಪೂರ್ಣಾಂಗ ಕವಿಯೂ ಹೌದು ವೇದಾಂತಿಯೂ ಹೌದು. ಕಾಳಿಂಗನ ಹೆಡೆ ಮೇಲೆ ಹಾರಿ ಕುಣಿದ ಎಂದು ಇಷ್ಟು ಮಾತ್ರ ಭಾಗವತದ ಮಾಹಿತಿ. ಅದನ್ನು ರಾಜರ ದೃಷ್ಟಿಯಿಂದ ನೋಡಿದರೆ ಎಂತಹ ನಾಸ್ತಿಕನೂ ಬಾಯಿ ಮುಚ್ಚುತ್ತಾನೆ. ಗೋಕುಲದ ಗೊಲ್ಲರು ನೋಡುತ್ತಿದ್ದಂತೆ ಚತು-ರ್ಮುಖ ಮೃದಂಗ ಬಾರಿಸಿದ ವೈಷ್ಣವಾಗ್ರೇಸರ ರುದ್ರ ತಾಳ ತಟ್ಟಿದ. ಜೀವೋತ್ತಮ

ಮುಖ್ಯಪ್ರಾಣ ಪದಗಳನ್ನು ಹಾಡಿದ. ಇದನ್ನು ಕೇಳಿ ಕೃಷ್ಣ ನರ್ತನ ಮಾಡಿದ ಎಂತಹ ಅದ್ಭುತ ದೃಶ್ಯ.

ಅನೀನದತ್ ಪದ್ಮಭವೋ ಮೃದಂಗಂ
ಜಗೌ ಹನೂಮಾನ್ ಜಗತಾಮಧೀಶಮ್ ।
ಅದರ್ಶಯತ್ ತಾಲಗತೀಃ ಕಪರ್ದೀ
ನನರ್ತ ಗೋಪಾಲಕಬಾಲಮೌಲಿಃ[೧] ॥

ಇದು ರಾಜರ ಕ್ರಮ. ಹಾಗೆಯೇ ರಾಜರ ದೃಷ್ಟಿಯಲ್ಲಿ ಕೃಷ್ಣ ಕಥೆಯನ್ನು ನೋಡಿದಾಗ ಅದರ ಅನುಭವವೇ ಭಿನ್ನ. ಗೋಪಿಕಾಸ್ತ್ರೀಯರನ್ನು ಆರಂಭಿಸಿ ವೇದಾಂತದ ತುದಿ ಮುಟ್ಟಿದ ಜ್ಞಾನಿಗಳಿಗೂ ಇಂಬು ಕೊಡುವ ರೀತಿಯಲ್ಲಿ ರಾಜರು ಪ್ರತಿಪಾದನೆ ಮಾಡುತ್ತಾರೆ. ಗೋಪಿಕೆಯರ ಜೊತೆ ಅಷ್ಟು ರಸಿಕನಾಗಿ ಬೆರೆತ ಅದೇ ಕೃಷ್ಣ ಉದ್ಧವನಿಗೆ ಉಪದೇಶ ಮಾಡುವ ಸಂದರ್ಭ ವಿರುದ್ಧ. ರಾಸಕ್ರೀಡೆ ಆಡಿದ ಅದೇ ಶ್ರೀಕೃಷ್ಣನಾ ಇವನು? ಎಂದು ಮೂಗು ಮುರಿಯುವಷ್ಟು ಎತ್ತರದ ವೈರಾಗ್ಯದ ಉಪದೇಶ. ಹೀಗೆ ಈ ಕಾವ್ಯ ರಾಜರ ಒಂದು ಅದ್ಭುತ ಸೃಷ್ಟಿ. ರಾಜರೆಂಬ ಉದ್ಯಾನವನದಲ್ಲಿ ಅರಳಿದ, ಎಂದೆಂದಿಗೂ ಬಾಡದ ಅರವಿಂದದ ಪುಷ್ಪವೇ ಈ ಕಾವ್ಯ. ಅದಕ್ಕೆ ರುಗ್ಮಿಣೀಶ ಒಲಿದ.

ರಾಜರು ಅವರ ದ್ವಾಪರದ ಅನುಭವವನ್ನು ಈ ಗ್ರಂಥದಲ್ಲಿ ತೆರೆದಿಟ್ಟಿದ್ದಾರೆ. ಆಗಿನ ಕಾಲದ ಕಾಳಿದಾಸಾದಿ ಕವಿಗಳನ್ನೂ ಮೀರಿ ನಿಂತವನು ಮಾಘ ಎಂದು ಹೊಗಳಿದ್ದುಂಟು. ಅಂತಹ ಮಾಘನ ಕಾವ್ಯವೈಖರಿಯನ್ನೂ ಸೋಲಿಸಿದ ಶೈಲಿ ನಮ್ಮ ರಾಜರದ್ದು. ಈ ಗ್ರಂಥದಿಂದ ನಾಮಕರಣಕ್ಕೂ ಮಹತ್ವ ಇದೆ ಎಂಬುದನ್ನು ರಾಜರು ತೋರಿಸಿದ್ದಾರೆ. ಭಗವಂತನ ದೋಷದೂರತ್ವದ ಪ್ರತಿಪಾದನೆ ಅಲ್ಲಲ್ಲಿ ಮಾಡುತ್ತಾರೆ ರಾಜರು. ಅಂತಹ ಅದ್ಭುತ ಅರ್ಥಗರ್ಭಿತವಾದ-ಶಬ್ದಲಾಲಿತ್ಯವುಳ್ಳ ಗ್ರಂಥದ ಪರಿಮಳ-ರುಚಿಯನ್ನು ಸಾಮಾನ್ಯ ಜನರೂ ಅನುಭವಿಸುವಂತೆ ಮಾಡಿದವರು ಗುರುಗಳಾದ ಶ್ರೀಅದಮಾರು ಮಠದ ಶ್ರೀ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು. ರಾಜರ ಗ್ರಂಥದ ಅಭಿಪ್ರಾಯವನ್ನು ಚಾಚೂ ತಪ್ಪದೇ ತಮ್ಮ ವ್ಯಾಖ್ಯಾನದಲ್ಲಿ ತೋರಿದ್ದಾರೆ. ಅವರ ಪರ್ಯಾಯಾವಧಿ ಮುಗಿದ ನಂತರ ಶ್ರೀಕೃಷ್ಣಪೂಜಾ ಫಲವೋ ಎಂಬಂತೆ ಅವರಿಂದ ಮೂಡಿಬಂದ ಈ ಕನ್ನಡ

---

[೧] ಡೊಳ್ಳಿನ ಮ್ಯಾಲ್ ಕೈ ಭರಮಪ್ಪ ಹಾಕ್ಯಾನು; ತಾಳವ ಶಿವನಪ್ಪ ತಟ್ಟಾನ್ಯಾ; ಒಳ್ಳೊಳ್ಳೆ ಪದಗಳ ಹನುಮಪ್ಪ ಹಾಡ್ಯಾನು; ಚೆಲುವ ಕನಕಪ್ಪ ಕುಣಿದಾನ್ಯಾ – ಎಂಬುದಾಗಿ ಇದೇ ಶ್ಲೋಕದ ಕನ್ನಡಾನುವಾದವನ್ನು ಕನಕದಾಸರು ನೀಡಿರುವುದು ಶ್ರೀವಾದಿರಾಜರ ಈ ಚಿಂತನೆ ಆ ಕಾಲಕ್ಕೇ ಜನಪ್ರಿಯವಾಗಿತ್ತೆಂದು ತಿಳಿಯಬಹುದು.

ವ್ಯಾಖ್ಯಾನ ಸಾಧಕರಿಗೆ ರಸದೌತಣವೇ ಸರಿ. ಅವರ ಅನೇಕ ಸಮಾಜಮುಖೀ ಕಾರ್ಯಗಳ ಮಧ್ಯದಲ್ಲಿಯೂ ಈ ವ್ಯಾಖ್ಯಾನ ಒಂದು ತಪಸ್ಸೂ ಹೌದು. ಗುರುಗಳ ಅನುಭವದ ಚಿಂತನೆಗಳನ್ನು ಉಣಬಡಿಸಿದ್ದಾರೆ. ಹೀಗೆ ರಾಜರ ಗ್ರಂಥಕ್ಕೆ ವ್ಯಾಖ್ಯಾನಿಸಬೇಕಾದರೆ ಅವರ ಪೂರ್ಣಾನುಗ್ರಹವಿರಬೇಕು. ವ್ಯಾಖ್ಯಾನ ಶೈಲಿ ನೋಡುವಾಗಲೇ ರಾಜರ ಕೃಪೆಗೆ ಪಾತ್ರರಾದವರು ಎಂದು ಅರ್ಥವಾಗುತ್ತದೆ. ಗುರುಗಳ ಈ ಗ್ರಂಥಕುಸುಮ ನಮ್ಮ ಸಂಸತ್ತಿನ ಮೂಲಕ ಅರಳುತ್ತಿರುವುದು ಭಾಗ್ಯವೇ ಸರಿ. ಗುರುಗಳಿಗೆ ಸಂಸ್ಥೆಯ ಪರವಾಗಿ ಕೃತಜ್ಞತಾಪೂರ್ವಕ ಅನಂತ ನಮನಗಳನ್ನು ಸಲ್ಲಿಸುತ್ತಿದ್ದೇವೆ.

ಶ್ರೀ ಮಧ್ವರ-ರಾಜರ ಗ್ರಂಥಗಳ ಅಧ್ಯಯನ-ಅಧ್ಯಾಪನ ಹಾಗು ಕೃಷ್ಣಪೂಜೆಯನ್ನು ಮುಖ್ಯ ಕರ್ತವ್ಯವನ್ನಾಗಿಸಿಕೊಂಡಿರುವ, ನಮ್ಮ ಈ ಗ್ರಂಥಕ್ಕೆ ಅನುಗ್ರಹಸಂದೇಶವನ್ನು ನೀಡಿದ ಶ್ರೀಕೃಷ್ಣಾಪುರ ಮಠಾಧೀಶರಾದ ಶ್ರೀ ಶ್ರೀವಿದ್ಯಾಸಾಗರತೀರ್ಥ ಶ್ರೀಪಾದರಿಗೆ ಹೃತ್ಪೂರ್ವಕ ಅನಂತ ನಮನಗಳು.

ಶ್ರೀಅದಮಾರು ಶ್ರೀಗಳ ವ್ಯಾಖ್ಯಾನವು ನಮ್ಮ ಸಂಸ್ಥೆಯಿಂದ ಮುದ್ರಿತವಾಗಬೇಕು ಎಂದು ನಮಗೆಲ್ಲಾ ಪ್ರೇರಣೆನೀಡಿ ಪ್ರೇರಕಶಕ್ತಿಯಾಗಿ ನಮ್ಮ ಸಂಸ್ಥೆಯ ಬೆನ್ನೆಲುಬಾಗಿ ನಿಂತು ಈ ಸಂಶೋಧನ-ಪ್ರಕಾಶನಕಾರ್ಯ ಮಾಡಿಸುತ್ತಿರುವ ನಮ್ಮ ಸಂಸ್ಥೆಯ ಕುಲಪತಿಗಳಾದ ಶ್ರೀ ಶ್ರೀವಿದ್ಯಾಧೀಶತೀರ್ಥಶ್ರೀಪಾದರಿಗೆ ನಮ್ಮ ಅನಂತ ಸಾಷ್ಟಾಂಗ ನಮನಗಳು.

ಶ್ರೀರುಗ್ಮಿಣೀಶವಿಜಯಗ್ರಂಥಕರ್ತೃಗಳ ಪೀಠದಲ್ಲಿ ಬಂದು ಈ ಮಹಾನ್ ಗ್ರಂಥಕ್ಕೆ ತಮ್ಮ ವಾಕ್ ಕುಸುಮಗಳ ಸಂದೇಶವನ್ನು ನೀಡಿದ ಶ್ರೀಸೋದೆ ಮಠಾಧೀಶರಾದ ಶ್ರೀ ಶ್ರೀವಿಶ್ವವಲ್ಲಭತೀರ್ಥ ಶ್ರೀಪಾದರಿಗೆ ಸಂಸ್ಥೆಯ ಪರವಾಗಿ ಕೃತಜ್ಞತಾ ಸಹಿತ ಅನಂತ ನಮನಗಳು.

ಈ ಗ್ರಂಥದ ಆದಿಯಲ್ಲಿ ಶ್ರೀ ರಾಜರ ಬಗ್ಗೆ ಹಾಗೂ ಅವರ ಕಾವ್ಯಲಕ್ಷಣದ ಬಗ್ಗೆ ತಮ್ಮ ಅಮೂಲ್ಯವಾದ ಲೇಖನ ನೀಡಿದ ವಿದ್ವಾನ್ ಹಯವದನಪುರಾಣಿಕರು ಹಾಗೂ ವಿದ್ವಾನ್ ಪುಷ್ಕರಪ್ರಸಾದಾಚಾರ್ಯರಿಗೆ ಸಂಸ್ಥೆಯ ಪರವಾಗಿ ಧನ್ಯವಾದಗಳು.

ಈ ಗ್ರಂಥದ ಮೊದಲ ಆರು ಸರ್ಗದಿಂದ ಕೂಡಿದ ಒಂದು ಹೊತ್ತಿಗೆ ೨೦೦೭ ರಲ್ಲಿ ಶ್ರೀರಾಜಹಂಸ ಪ್ರತಿಷ್ಠಾನದಿಂದ ಬಿಡುಗಡೆ ಆಗಿತ್ತು. ಅದರ ರುವಾರಿಗಳು ದಿ|| ಶ್ರೀ ವಾದಿರಾಜೇಂದ್ರ ಪುರಾಣಿಕರು ಅವರು ಈ ಸಂಸ್ಥೆಯನ್ನು ಹುಟ್ಟು ಹಾಕಿ ರಾಜರ ಗ್ರಂಥಗಳ ಪ್ರಕಾಶನ ಹಾಗೂ ಪ್ರಚಾರವನ್ನು ವ್ಯಾಪಕವಾಗಿ ನಡೆಸಿದವರು ರಾಜರಲ್ಲಿ ಅಪಾರ ಭಕ್ತಿಯುಳ್ಳ ಅವರು ಲಕ್ಷ್ಮೀಶೋಭನ ಪದ-ಶ್ರೀಶ್ರೀಶಗುಣದರ್ಪಣವನ್ನು ಅರ್ಥ ಸಹಿತ-ವಾಗಿ ಶ್ರೀ ಹಯವದನ ಪುರಾಣಿಕರಿಂದ ಬರೆಸಿ ಪ್ರಕಟಿಸಿದವರು. ಮೂಲತಃ ಚೊಕ್ಕಾಡಿ-

ಯವರಾದ ಇವರು ಅನೇಕ ಸಂದರ್ಭಗಳಲ್ಲಿ ಕೋಟಿ ಹಯಗ್ರೀವ ಲೇಖನ ಯಜ್ಞವನ್ನು ಹಮ್ಮಿಕೊಂಡು ಸಾಮಾನ್ಯ ಜನರಿಂದಲೂ ಸಾಧನೆ ಮಾಡಿಸಿದವರು. ಅವರು ಮಾಡಿದ ಹಯಗ್ರೀವ ನಮನ ಸಪ್ತಾಹ, ರಾಜರ ಕೃತಿಗಳ ಲೋಕಾರ್ಪಣೆ ಕಾರ್ಯ ನಿಜವಾಗಿಯೂ ಶ್ಲಾಘ್ಯ. ಹೀಗೆ ತಾವು ಮಾತ್ರವಲ್ಲದೇ ಪ್ರತಿಷ್ಠಾನದ ಸದಸ್ಯರಿಂದ, ಸಾಧಕರಿಂದ ಸಾಧನೆ ಮಾಡಿಸಿದವರು ಶ್ರೀ ಪುರಾಣಿಕರು. ಅವರ ಕಾಲದ ನಂತರ ರುಗ್ಮಿಣೀಶವಿಜಯದ ಉಳಿದ ಭಾಗಗಳ ಮುದ್ರಿಸುವ ಕಾರ್ಯವನ್ನು ಕೈಗೆತ್ತಿಕೊಂಡವರು ಅವರ ಸಹೋದರರಾದ ಶ್ರೀ ವೇದವ್ಯಾಸ ಪುರಾಣಿಕರು. ಅವರ ಹಾಗೂ ಸಮಸ್ತ ಸಜ್ಜನರ ಆಶಯದಂತೆ ಈ ಕೃತಿಯನ್ನು ನಮ್ಮ ಸಂಸ್ಥೆಯಿಂದ ಪ್ರಕಟಿಸುತ್ತಿದ್ದೇವೆ. ಪುರಾಣಿಕದ್ವಯರಿಗೂ ಹಾಗೂ ಪ್ರತಿಷ್ಠಾನದ ಸದಸ್ಯರಿಗೆ ನಮ್ಮ ಸಂಸ್ಥೆಯ ಪರವಾಗಿ ಧನ್ಯವಾದಗಳು.

ಈ ಕೃತಿಯ ಕರಡುಪ್ರತಿಯನ್ನು ಅನತಿಕಾಲದಲ್ಲಿ ಶ್ರಮವಹಿಸಿ ತಿದ್ದಿದ ವಿ|| ಶ್ರೀನಿವಾಸಭಟ್, ವಿ|| ಲಕ್ಷ್ಮೀಶಭಟ್, ವಿ|| ವಿಶ್ವವಿಜಯ ಇವರಿಗೆ ಹೃತ್ಪೂರ್ವಕ ಧನ್ಯ-ವಾದಗಳು. ಅದೇ ರೀತಿ ಗುರುಗಳ ಈ ಕಾರ್ಯದಲ್ಲಿ ಕರಡು ಪ್ರತಿ ತಿದ್ದುವ ಸೇವಾ-ಭಾಗ್ಯ ನನಗೂ ಒದಗಿತ್ತು. ಅದಕ್ಕೂ ಚಿರಋಣಿ. ಈ ಹೊತ್ತಿಗೆಯ ಅಕ್ಷರಸಂಯೋಜನೆ ಮಾಡಿದ ಶ್ರೀಪದ್ಮನಾಭ ಕೇಕುಣ್ಣಾಯ, ಶ್ರೀಸುಬ್ಬಣ್ಣ ಕೆಂಪದಾಳಿಹಳ್ಳಿ ಇವರಿಗೆ ಸಂಸ್ಥೆಯ ಪರವಾಗಿ ಕೃತಜ್ಞತೆಗಳು. ಗ್ರಂಥಕ್ಕೆ ಅನ್ವರ್ಥಕವಾದ ಮುಖಪುಟವಿನ್ಯಾಸ ಮಾಡಿದ ವಿ|| ಜನಾರ್ದನ ಆಚಾರ್ಯರಿಗೆ, ಕಾಲಾವಕಾಶ ಕಮ್ಮಿ ಇದ್ದರೂ ಶ್ರದ್ಧೆಯಿಂದ, ಸುಂದರವಾಗಿ ಮುದ್ರಿಸಿ ಕೊಟ್ಟ ವಾಣೀಪ್ರೆಸ್ ನ ಶ್ರೀ ಶ್ರೀನಿವಾಸ್ ಅವರಿಗೆ ಧನ್ಯವಾದಗಳು.

ಅನ್ವಯಾರ್ಥ-ತಾತ್ಪರ್ಯ-ಸಂದೇಶಗಳಿಂದ ಕೂಡಿದ ಶ್ರೀರುಗ್ಮಿಣೀಶವಿಜಯದ ಕನ್ನಡವ್ಯಾಖ್ಯಾನವೆಂಬ ಜೇನನ್ನು ಎಲ್ಲ ಸಜ್ಜನರು ದುಂಬಿಯಂತೆ ಆಸ್ವಾದಿಸಿ ಗುರುಗಳ ಅಂತರ್ಯಾಮಿ ಶ್ರೀರುಗ್ಮಿಣೀಕೃಷ್ಣನೆಂಬ ದುಗ್ಧಾಂಬುಧಿಯ ಕೃಪೆಗೆ ಪಾತ್ರರಾಗಿ ಅಮೃತತ್ವ-ವನ್ನು ಪಡೆಯುವಂತಾಗಲಿ. ಆ ನಿಟ್ಟಿನಲ್ಲಿ ಈ ಕೃತಿಯು ಸಹಕಾರಿಯಾಗಲಿ ಎಂದು ಪ್ರಾರ್ಥಿಸುತ್ತೇವೆ.

ವಿ|| ವಂಶೀಕೃಷ್ಣಾಚಾರ್ಯ ಪುರೋಹಿತ್
ಉಪನಿರ್ದೇಶಕರು, ತತ್ವಸಂಶೋಧನ ಸಂಸತ್,
ಶ್ರೀಪಲಿಮಾರು ಮಠ, ಉಡುಪಿ

**ಶ್ರೀವಿದ್ಯಾಸಾಗರತೀರ್ಥಶ್ರೀಪಾದಂಗಳವರು**
**ಶ್ರೀಕೃಷ್ಣಾಪುರಮಠ,**
**ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ,**
**ಶ್ರೀಕೃಷ್ಣಮಠ, ರಥಬೀದಿ, ಉಡುಪಿ - 576101**
**ಫೋನ್ : 0820-2520578**

## ॥ ಶ್ರೀಃ ॥
## ಅನುಗ್ರಹಸಂದೇಶ

ಜಗದ್ಗುರುಗಳಾದ ಶ್ರೀಮಧ್ವಾಚಾರ್ಯರ ಯುವರಾಜರಾಗಿ ಮೆರೆದ ಸರ್ವಜ್ಞರಾದ ಶ್ರೀವಾದಿರಾಜಗುರುವರೇಣ್ಯರು 'ಶ್ರೀರುಗ್ಮಿಣೀಶವಿಜಯ' ಎಂಬ ಮಹಾಕಾವ್ಯವನ್ನು ರಚಿಸಿ ಲೋಕೋದ್ಧಾರಕಾರ್ಯವನ್ನು ಮಾಡಿರುತ್ತಾರೆ. ಸಮಸ್ತಮಂಗಲದಾಯಕವಾದ ಈ ಮಹಾಕಾವ್ಯವನ್ನು ಶ್ರೀಲಕ್ಷ್ಮೀಹಯಗ್ರೀವದೇವರ ಪೂರ್ಣಾನುಗ್ರಹಕ್ಕೆ ಪಾತ್ರರಾದ ಶ್ರೀ-ವಾದಿರಾಜಗುರುವರೇಣ್ಯರು ತಮ್ಮ ಮಾಧ್ಯಾಹ್ನಿಕ ದೇವತಾರ್ಚನೆಯನ್ನು ಮುಗಿಸಿ, ಗಂಧಾಕ್ಷತೆಯನ್ನು ಧಾರಣೆ ಮಾಡುವ ಸಮಯದಲ್ಲಿ ಪ್ರತಿನಿತ್ಯವೂ ಒಂದು ಸರ್ಗದಂತೆ ರಚಿಸಿ ಜಗತ್ಪ್ರಭುವಾದ ಶ್ರೀಕೃಷ್ಣನಿಗೆ ಸಮರ್ಪಿಸಿರುವರು. ಈ ಗ್ರಂಥದಲ್ಲಿ ಒಟ್ಟು ೧೯ ಸರ್ಗಗಳಿವೆ. ಇದು ಕೇವಲ ಕಾವ್ಯವಲ್ಲ. ಶ್ರೀಮನ್ಮಧ್ವಾಚಾರ್ಯರ ಶಾಸ್ತ್ರದ ಅನೇಕ ರಹಸ್ಯ ಪ್ರಮೇಯಗಳನ್ನು ಹಾರ್ದಿಕವಾಗಿ ಪ್ರತಿಪಾದಿಸಿರುವುದರಿಂದ ಇದು ಶಾಸ್ತ್ರಗ್ರಂಥವೂ ಹೌದು. ಆಧ್ಯಾತ್ಮಿಕಕಾವ್ಯವೂ ಹೌದು. ಲೀಲಾಮಾನುಷವಿಗ್ರಹನಾದ ಶ್ರೀಕೃಷ್ಣನ ಮಹಿಮೆ-ಯು ಈ ಗ್ರಂಥದಲ್ಲಿ ಹಾಸುಹೊಕ್ಕಾಗಿದ್ದು, ಅನೇಕ ತಾತ್ವಿಕಪ್ರಮೇಯಗಳಿಂದ ಕೂಡಿದ್ದಾಗಿ,

ಸರ್ವಾಲಂಕಾರಭರಿತವಾಗಿ, ಭಕ್ತ್ಯಾದಿ ರಸಗಳಿಂದ ಮಿಳಿತವಾಗಿ ಶ್ರವಣ, ಮನನ ಮಾಡುವವರಿಗೆ ಸಕಲಾನಿಷ್ಟನಿವೃತ್ತಿಯಾಗಿ ಸಕಲೇಷ್ಟದಾಯಕವಾದುದಾಗಿದೆ. 'ರೋಮ್ಣಾಂ ಹರ್ಷಣಕಾರಿಣೀ ಶ್ರವಣತಃ ಪಾಪೌಘವಿಧ್ವಂಸಿನೀ' ಎಂಬುದಾಗಿ ಶ್ರೀವಾದಿರಾಜ-ಗುರುವರೇಣ್ಯರೇ ಈ ಗ್ರಂಥದ ಅಧ್ಯಯನಕ್ಕೆ ದೊರಕುವ ಮಹಾಫಲಗಳನ್ನು ಪ್ರತಿಸರ್ಗದ ಕೊನೆಯಲ್ಲಿ ಸ್ಪಷ್ಟವಾಗಿ ನಿರೂಪಿಸುತ್ತಾ, ಜ್ಞಾನಿಗಳಿಗೆ ರೋಮಾಂಚ-ಕಾರಿಯಾಗಿಯೂ, ಸಂಸಾರಸಾಗರದಲ್ಲಿ ಬಳಲುವವರಿಗೆ ಸರ್ವಾನಿಷ್ಟಹಾರಿಯೂ, ಶ್ರದ್ಧಾಭಕ್ತಿಪುರಸ್ಸರವಾಗಿ ಮನನ ಮಾಡುವವರಿಗೆ ಮಂತ್ರಪಠನದಂತೆ ಮೋಕ್ಷಾದಿ-ಪುರುಷಾರ್ಥಸಾಧನವಾಗಿ, ಸಮಸ್ತದೇವತೆಗಳಿಗೂ ಆನಂದದಾಯಕವಾಗಿದೆ ಎಂದಿ-ದ್ದಾರೆ. ಈ ಗ್ರಂಥರತ್ನದಲ್ಲಿ ಶ್ರೀವಾದಿರಾಜಗುರುವರೇಣ್ಯರು ಅಲ್ಲಲ್ಲಿ ಕೆಲವು ಶ್ಲೋಕ-ಗಳಲ್ಲಿ ತಾವು ಋಜುಗಣಸ್ಥರು ಅನ್ನುವ ತಮ್ಮ ಸ್ವರೂಪದ ಬಗ್ಗೆ ಸೂಚನೆಗಳನ್ನು ತೋರಿಸಿದ್ದಾರೆ.

ಇಂತಹ ಮಹಾಕಾವ್ಯವನ್ನು ಶ್ರೀ ಅದಮಾರುಮಠದ ಶ್ರೀಶ್ರೀವಿಶ್ವಪ್ರಿಯತೀರ್ಥ-ಶ್ರೀಪಾದರು ಕನ್ನಡಾನುವಾದ ಮಾಡಿರುವುದನ್ನು ಉಡುಪಿಯ ಶ್ರೀಪಲಿಮಾರುಮಠದ **ತತ್ತ್ವಸಂಶೋಧನಸಂಸತ್ ಸಂಸ್ಥೆ**(ರಿ)ಯು ಮೂರು ಸಂಪುಟಗಳಲ್ಲಿ ಮುದ್ರಿಸಿ ಲೋಕಾರ್ಪಣೆ ಮಾಡುತ್ತಿರುವ ವಿಚಾರ ತಿಳಿದು ನಮಗೆ ತುಂಬಾ ಸಂತೋಷವಾಗಿದೆ. ರುಗ್ಮಿಣೀಶವಿಜಯದ ಶ್ಲೋಕ, ಪ್ರತಿಪದಾರ್ಥ, ತಾತ್ಪರ್ಯ, ಸಂದೇಶ ಇತ್ಯಾದಿಗಳಿಂದ ಕೂಡಿ ಜಿಜ್ಞಾಸುಗಳಿಗೆ ಅರ್ಥಸಹಿತವಾಗಿ ಚಿಂತನೆ ಮಾಡಲು ತುಂಬಾ ಸಹಕಾರಿ-ಯಾಗಿರುತ್ತದೆ. ಸುಜನರೆಲ್ಲರೂ ಈ ಗ್ರಂಥದ ಪ್ರಯೋಜನವನ್ನು ಪಡೆಯುವಂತಾಗಲಿ. ಮತ್ತು ತತ್ತ್ವಸಂಶೋಧನಸಂಸತ್ತಿನಿಂದ ಇನ್ನೂ ಹೆಚ್ಚಿನ ಜಿಜ್ಞಾಸುಗಳಿಗೆ ರಸದೌತಣವನ್ನು ನೀಡುವಂತಹ ಅನೇಕ ಕೃತಿರತ್ನಗಳು ಬರಲಿ; ಲೋಕೋದ್ಧಾರಕವಾದ ಕಾರ್ಯಗಳು ನಡೆದು ಶ್ರೀಹರಿಗುರುಗಳು ಪ್ರೀತರಾಗಲಿ; ತನ್ಮೂಲಕ ಸಂಸತ್ತಿನ ಎಲ್ಲಾ ವಿದ್ವಾಂಸರು, ಸಿಬ್ಬಂದಿವರ್ಗವೂ ಶ್ರೀಹರಿಗುರುಗಳ ಕೃಪೆಗೆ ಪಾತ್ರರಾಗಲಿ ಎಂದು ನಾವು ನಮ್ಮ ಆರಾಧ್ಯದೇವರಾದ ಕಾಳೀಯಮರ್ದನ ಶ್ರೀಕೃಷ್ಣದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ಶ್ರೀಮನ್ನಾರಾಯಣ ಸ್ಮರಣೆಗಳು.

ಉಡುಪಿ — ಶ್ರೀ ವಿದ್ಯಾಸಾಗರ ಶ್ರೀಪಾದಂಗಳವರು

ದಿನಾಂಕ. ೮.೧೧.೨೦೧೫ — ಶ್ರೀಕೃಷ್ಣಾಪುರಮಠ, ಉಡುಪಿ.

## ಶ್ರೀವಿಶ್ವವಲ್ಲಭತೀರ್ಥಶ್ರೀಪಾದಂಗಳವರು

ಶ್ರೀಸೋದೆ ವಾದಿರಾಜಮಠ,

ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ,

ಶ್ರೀಕೃಷ್ಣಮಠ, ರಥಬೀದಿ, ಉಡುಪಿ - 576101

### ಅನುಗ್ರಹಸಂದೇಶ

॥ಶ್ರೀಃ॥

ಉಪಮಾ ಕಾಳಿದಾಸಸ್ಯ ಭಾರವೇರರ್ಥಗೌರವಮ್ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ ॥

''ಉಪಮಾಲಂಕಾರದ ಸೊಬಗನ್ನು ಕಾಣುವುದು ಕಾಳಿದಾಸನ ಕಾವ್ಯಗಳಲ್ಲಿ, ಅರ್ಥದ ತೂಕವನ್ನು ಕಾಣುವುದು ಭಾರವಿಯ ಕಾವ್ಯದಲ್ಲಿ, ಪದಚಮತ್ಕಾರವನ್ನು ಕಾಣುವುದು ದಂಡಿಯ ಕಾವ್ಯದಲ್ಲಿ, ಈ ಮೂರೂ ಅಂಶಗಳನ್ನು ನಾವು ಮಾಘನ ಕಾವ್ಯದಲ್ಲಿ ಕಾಣಬಹುದಾಗಿದೆ'' – ಹೀಗೆ ಕವಿಪ್ರಪಂಚದಲ್ಲಿ ಮಾಘನ ಹೆಗ್ಗಳಿಕೆ ಜಗಜ್ಜನಿತ-ವಾಗಿದೆ. ಇಂತಹ ಮಾಘನ ಕಾವ್ಯವನ್ನು ಗೆದ್ದ ಕೀರ್ತಿ ಶ್ರೀವಾದಿರಾಜರ ರುಗ್ಮಿಣೀಶವಿಜಯ ಮಹಾಕಾವ್ಯಕ್ಕೆ ಸಲ್ಲುತ್ತದೆ.

ಕಠಿಣವಾದ ಶಾಸ್ತ್ರವನ್ನೂ ರಂಜಿಸುವ ಕಾವ್ಯಶೈಲಿಯಲ್ಲಿ ನಿರೂಪಿಸಿದ ಹೆಗ್ಗಳಿಕೆ ಭಾವಿ-ಸಮೀರ ಶ್ರೀವಾದಿರಾಜರಿಗೆ ಸಲ್ಲುತ್ತದೆ.

ಶ್ಲೇಷಾಲಂಕಾರದಲ್ಲಿ ಪದ್ಯಗಳನ್ನು ರಚಿಸುವ ಕೌಶಲ ಕೆಲವು ಕವಿಗಳಿಗಿರುತ್ತದೆ. ಅವರು ರಚಿಸಿದ ಪದ್ಯಗಳಿಗೆ ಎರಡು ಅಥವಾ ಮೂರು ಅರ್ಥಗಳನ್ನು ಹೇಳಬಹುದು. ಆದರೆ

ರಾಜರು ತಮ್ಮದೇ ಆದ ಪದ್ಯಗಳನ್ನು ಉಪನ್ಯಾಸಗಳಲ್ಲಿ ವಿವರಿಸಿದ ದಾಖಲೆ ಇದೆ. ಆ ಉಪನ್ಯಾಸಗಳಲ್ಲಿ ಕಮಲಾಸನಾಚ್ಛ ಎಂಬ ಪದ್ಯಕ್ಕೆ ಸುಮಾರು ೪೦ಕ್ಕೂ ಹೆಚ್ಚಿನ ಅರ್ಥಗಳನ್ನು ಹಾಗೂ ಶುಭಸಮುದ್ರಕರಂ ಎಂಬ ಶ್ಲೋಕಕ್ಕೆ ೩೦ಕ್ಕೂ ಹೆಚ್ಚಿನ ಅರ್ಥಗಳನ್ನು ತೋರಿಸಿಕೊಟ್ಟಿದ್ದಾರೆ. ಅದಲ್ಲದೇ ''ಪ್ರತಿಪದ್ಯದಲ್ಲಿ ಇಂತಹ ಅನೇಕ ಅರ್ಥಗಳಿವೆ. ಭಕ್ತಿಯುಳ್ಳವರಿಗೆ ಆ ಅರ್ಥಗಳು ಗೋಚರವಾಗುತ್ತವೆ'' ಎನ್ನುವ ಪ್ರಮೇಯವನ್ನೂ ರಾಜರೇ ಸ್ಪಷ್ಟಪಡಿಸಿದ್ದಾರೆ.

ಇಂತಹ ಶಾಸ್ತ್ರಮಹಾಕಾವ್ಯವನ್ನು ತಿಳಿಗನ್ನಡದಲ್ಲಿ ಅದಮಾರು ಮಠದ ಶ್ರೀ ವಿಶ್ವ-ಪ್ರಿಯತೀರ್ಥಶ್ರೀಪಾದರು ಅನುವಾದಿಸಿದ್ದಾರೆ. ಈ ಗ್ರಂಥವನ್ನು ಪಲಿಮಾರು ಮಠದ ಶ್ರೀವಿದ್ಯಾಧೀಶತೀರ್ಥಶ್ರೀಪಾದರು ತಮ್ಮ ಮಠದ ತತ್ವಸಂಶೋಧನಸಂಸತ್, ಉಡುಪಿ ಈ ಸಂಸ್ಥೆಯ ಮೂಲಕ ಪ್ರಕಾಶಿಸಿದ್ದಾರೆ. ಇದರ ಉಪಕಾರವನ್ನು ಎಲ್ಲ ಸುಜನರು ಪಡೆಯುವಂತಾಗಲಿ ಎಂದು ನಮ್ಮ ಉಪಾಸ್ಯಮೂರ್ತಿ ಮಧ್ವ-ವಾದಿರಾಜವರದ ಭೂವರಾಹ ಹಯಗ್ರೀವ ವೇದ- ವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತ್ಯನೇಕ ನಾರಾಯಣಸ್ಮರಣೆಗಳು.

ಮೊಕ್ಕಾಂ : ಉಡುಪಿ — ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು
ದಿನಾಂಕ : ೦೩-೧೧-೨೦೧೫ — ಶ್ರೀಸೋದೆ ವಾದಿರಾಜಮಠ, ಉಡುಪಿ

ಒಂದು ಅದು ಸ್ವರೂಪಾನಂದಾರ್ಭಾವ ರೂಪ ಮೋಕ್ಷ. ಈ ಚಿಂತನೆಗಳ ಹಿನ್ನೆಲೆಯಲ್ಲಿ ಈ ಮಹಾಕಾವ್ಯವನ್ನು ದಿವೌಕಸರೂ ಅಸ್ವಾದಿಸಿ ಅನುಭಾವಿಗಳಾಗುವರು ಎನ್ನುವುದಾಗಿ ರಾಜರೇ ಹೇಳಿಕೊಂಡಿದ್ದಿದೆ.

ಪರಮಪುರುಷಾರ್ಥದಾಯಿ ಆದ ಈ ಕೃತಿಯನ್ನು ಕನ್ನಡಕ್ಕಿಳಿಸಿ ಕೃಷ್ಣಭಕ್ತಿಯನ್ನು ಕನ್ನಡದ ಮಂದಿಯೂ ಅರಿಯುವಂತೆ ಮಾಡಿದ ಮಹಾನ್ ಸಾಧನೆ ಶ್ರೀ ಅದಮಾರು ಮಠದ ಶ್ರೀ ಶ್ರೀವಿಶ್ವಪ್ರಿಯತೀರ್ಥಶ್ರೀಪಾದರದ್ದು. ರಾಜರ ಶಬ್ದಗಾಂಭೀರ್ಯದ ಬಗೆಗಿನ ಅರಿವು ಕೇವಲ ಪಂಡಿತರಿಂದ ಮಾತ್ರ ಅರ್ಥೈಸಿಕೊಳ್ಳಲು ಸಾಧ್ಯ. ಇಂತಹ ರಾಜರ ಶಬ್ದಗಾಂಭೀರ್ಯದ ವೈಭವಕ್ಕನುಗುಣವಾಗಿ ಅರ್ಥಾನುವಾದ ಮಾಡಿದ ಕೀರ್ತಿ ಶ್ರೀ ಶ್ರೀಪಾದರದ್ದು. ಇಂತಹ ಬೃಹದ್‌ಗ್ರಂಥವನ್ನು ಕನ್ನಡಕ್ಕಿಳಿಸುವುದು ಬಹುಸಾಹಸವೇ ಸರಿ. ವ್ಯಾಪ್ತವಾದ ಕಾರ್ಯವೈಖರಿಯ ನಡುವೆ ಶ್ರೀಪಾದರ ಈ ಕರ್ಮ ನಿಜಕ್ಕೂ ಒಂದು ತಪಸ್ಸು. ಈ ಗ್ರಂಥವನ್ನು ಕೊಂಡು ಅಧ್ಯಯನ ಮಾಡಿ ಕೃಷ್ಣಭಕ್ತಿಯನ್ನು ಬೆಳೆಸಿಕೊಳ್ಳು- ವುದಕ್ಕಿಂತ ಹೊರತಾಗಿ ಬೇರೇನೂ ನೀಡಲು ಸಾಧ್ಯಲ್ಲ ಶ್ರೀಪಾದರಿಗೆ. ಈ ಪುಸ್ತಕವನ್ನು ನಮ್ಮ ತತ್ವಸಂಶೋಧನಸಂಸತ್ತಿನಿಂದ ಹೊರತರಲು ಅವಕಾಶಕೊಟ್ಟ ಶ್ರೀಪಾದರಿಗೆ ಭಕ್ತಿ- ಪೂರ್ವಕವಾದ ನಮನಗಳನ್ನು ಸಲ್ಲಿಸುತ್ತೇವೆ.

ಶ್ರೀ ಶ್ರೀವಿದ್ಯಾಧೀಶತೀರ್ಥ ಶ್ರೀಪಾದರು,
ಶ್ರೀ ಪಲಿಮಾರು ಮಠ, ಉಡುಪಿ.

॥ ಶ್ರೀಕೃಷ್ಣಪ್ರಸಾದಾಯ ನಮಃ ॥

ಶ್ರೀಶ್ರೀವಿಶ್ವಪ್ರಿಯತೀರ್ಥಶ್ರೀಪಾದರು,
ಶ್ರೀಅದಮಾರುಮಠ, ಉಡುಪಿ

# ಮುನ್ನುಡಿ

ಹರಿಗುರುಗಳ ಬಗ್ಗೆ ಎರಡು ಗ್ರಂಥಗಳು ಬಹಳ ಪ್ರಸಿದ್ಧಗಳು. ಒಂದು ಮಧ್ವವಿಜಯ. ಇನ್ನೊಂದು ರುಗ್ಮಿಣೀಶವಿಜಯ. ಎರಡೂ ಶಾಸ್ತ್ರಕಾವ್ಯಗಳೇ. ಸುಮಾರು ೭೫೦ವರ್ಷಗಳ ಹಿಂದೆ ಆಚಾರ್ಯಮಧ್ವರು ಈ ನೆಲದಲ್ಲಿ ಓಡಾಡಿದ್ದರು. ಇವರು ಇಡೀ ವಿಶ್ವಕ್ಕೇ ಗುರುಗಳು. ಹಾಗೆಯೇ ರುಗ್ಮಿಣೀಶವಿಜಯ ಗ್ರಂಥದ ಕರ್ತೃಗಳು ಭಾವಿಸಮೀರ ಶ್ರೀವಾದಿ-ರಾಜತೀರ್ಥರು. ಇವರು ಅಪರೋಕ್ಷೀಕೃತಶ್ರೀಶರು. ನಾರಾಯಣಪಂಡಿತರಂತೆ ಇವರು ದೇವರ ಒಡನಾಡಿಗಳು. ಆದ್ದರಿಂದ ಈ ಗ್ರಂಥಕ್ಕೆ ಜ್ಞಾನಿಪ್ರತ್ಯಕ್ಷವೇ ಪ್ರಮಾಣ. ಆರಂಭ-ದಿಂದ ಅಂತ್ಯದ ತನಕ ಪ್ರತಿಯೊಂದು ಶ್ಲೋಕವೂ ಕಾವ್ಯದ ಜೊತೆಗೆ ತತ್ವವನ್ನೂ ಪ್ರತಿಪಾದಿಸುತ್ತದೆ. ಸನ್ಯಾಸಿಗಳು ತತ್ರಾಪಿ ಮಾಧ್ವಸನ್ನ್ಯಾಸಿಗಳು ಎಂದೂ ಕೂಡಾ ಕೇವಲ ಮನೋರಂಜನೆಯ ಕೆಲಸವನ್ನು ಮಾಡುವುದಿಲ್ಲ. ಜೊತೆಯಲ್ಲಿ ಆತ್ಮರಂಜನೆಯೂ ಸೇರಿರಬೇಕು.

ಪ್ರತಿಯೊಂದು ಕೆಲಸದ ಆರಂಭದಲ್ಲಿ ಮಂಗಳಾಚರಣೆ ಅಗತ್ಯ . ಇದರಿಂದ ಆರಬ್ಧ-ವಾದ ಕೆಲಸವು ನಿರ್ವಿಘ್ನವಾಗಿ ಕೊನೆಗೊಳ್ಳುವುದು ಎಂಬುದು ಪ್ರಾಮಾಣಿಕವಾದ ವಿಚಾರ. ಮಂಗಳಾಚರಣೆಯೆಂದರೆ ದೇವರಿಗೆ ನಮಸ್ಕಾರವೇ ಆಗಬೇಕೆಂದಿಲ್ಲ. ನಮಸ್ಕಾರ, ಆಶೀರ್ವಾದ, ಮಂಗಳವಾದ ವಸ್ತುವಿನ ಸೂಚನೆ ಇವುಗಳಲ್ಲಿ ಯಾವುದಾದರೊಂದು ಆರಂಭದ ಶ್ಲೋಕದಲ್ಲಿದ್ದರೆ ಸಾಕು. ಮಂಗಳಾಚರಣೆ ಮಾಡಿದಂತೆ ಆಶೀರ್ನಮಸ್ಕ್ರಿಯಾ-ವಸ್ತುನಿರ್ದೇಶೋ ವಾಪಿ ತನ್ಮುಖಂ ಎಂಬ ಮಾತು ಈ ವಿಷಯದಲ್ಲಿ ಪ್ರಮಾಣ. ಆರಂಭದ ಶ್ಲೋಕದಲ್ಲಿ ದೇವರನ್ನು ನಮಸ್ಕರಿಸುವುದು ಅಥವಾ ದೇವರಿಂದ ಆಶೀ-ರ್ವಾದವನ್ನು ಬೇಡುವುದು, ಅಥವಾ ಹಿಮಾಲಯವೇ ಮೊದಲಾದ ಮಂಗಳಮಯ-

ವಾದ ವಸ್ತುಗಳನ್ನು ಸೂಚಿಸುವುದು. ಸದ್ಯ ರಾಜರು ಸ ಮಾಂ ಪಾಯಾತ್ ಎಂದು ದೇವರಿಂದ ಆಶೀರ್ವಾದವನ್ನು ಬೇಡುವ ಮೂಲಕ ಮಂಗಳಾಚರಣೆಯನ್ನು ಮಾಡಿದ್ದಾರೆ. ಇದರಿಂದ ಮೂರು ರೀತಿಯಲ್ಲಿಯೂ ಮಂಗಳಾಚರಣೆಯನ್ನು ಮಾಡಿದಂತೆ ಆಗುತ್ತದೆ. ದೇವರು ಆಶೀರ್ವಾದ ಮಾಡಬೇಕಾದರೆ ಆತನು ಇರಬೇಕು ತಾನೇ? 'ಮಂಗಲಾನಾಂ ಚ ಮಂಗಲಂ' ಮಂಗಲವಸ್ತುಗಳಿಗೂ ಮಾಂಗಲ್ಯ ಕೊಡುವವನು ಎಂಬ ವಚನಾನುಸಾರ ಮಂಗಲಮಯವಸ್ತುವಿನ ನಿರ್ದೇಶ ಮಾಡಿದಂತೆ ಆಯಿತು. ಆತನು ಆಶೀರ್ವಾದ ಮಾಡಬೇಕಾದರೆ ಆತನನ್ನು ನಮಸ್ಕರಿಸದೆ ಬೇರೆ ದಾರಿ ಇಲ್ಲ. ಆದ್ದರಿಂದ ನಮಸ್ಕರಿಸಿದಂತೆಯೂ ಆಯಿತು. ಈ ರೀತಿಯಾಗಿ ಏಕ ಕ್ರಿಯಾ ತ್ರ್ಯರ್ಥಕರೀ ಬಭೂವ ಎನ್ನುವಂತೆ ಮೂರು ರೀತಿಯ ಮಂಗಳಾಚರಣೆಯೂ ಆಯಿತು. ಈ ಎಲ್ಲಾ ವಿಷಯವನ್ನೂ –

**ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಮ್ ।**
**ಪ್ರಸನ್ನವದನಂ ಧ್ಯಾಯೇತ್ ಸರ್ವವಿಘ್ನೋಪಶಾಂತಯೇ ॥**

ಬಿಳಿ ಬಟ್ಟೆ ಧರಿಸಿದ, ಬೆಳದಿಂಗಳಬಣ್ಣವುಳ್ಳ, ನಾಲ್ಕು ಕೈಗಳಿಂದ ಕೂಡಿದ, ಶಾಂತಮುಖವುಳ್ಳ ವಿಷ್ಣುವನ್ನು ಸಮಸ್ತ ಕೆಲಸಗಳ ನಿರ್ವಿಘ್ನ ಪರಿಸಮಾಪ್ತಿಗಾಗಿ ಧ್ಯಾನಿಸಬೇಕು ಎಂಬ ಶ್ಲೋಕಾರ್ಥದಿಂದ ಅನುಸಂಧಾನ ಮಾಡಬಹುದಾಗಿದೆ.

ಸಮಸ್ತವೈದಿಕವಾಙ್ಮಯಕ್ಕೆ ರಮೆಯು ಅಭಿಮಾನಿನಿ. ಲಕ್ಷ್ಮಿಯ ರಮಾ ಎಂಬ ರೂಪವು ದೇವರ ಖಡ್ಗಕ್ಕೆ ಅಭಿಮಾನಿನಿ. ದುರ್ಗಾರೂಪವು ಚಕ್ರಕ್ಕೆ ಅಭಿಮಾನಿ. ಶ್ರೀರೂಪವು ಸತ್ವಗುಣಕ್ಕೆ ಅಭಿಮಾನಿನಿ. ಅಂತಹ ಶ್ರೀರೂಪವೇ ಸಮಸ್ತವೇದಗಳಿಗೂ ಅಭಿಮಾನಿನಿ ಎಂದು ತಿಳಿಸಲು ಶ್ರೀವೇದಾಂತ ಎಂದು ಆರಂಭದಲ್ಲಿ ಪ್ರಯೋಗಿಸಿದ್ದಾರೆ. ಸಮಸ್ತವೇದಗಳೂ ಅಂತತಃ ಪರಮಸಾತ್ವಿಕನಾದ ದೇವರನ್ನೇ ತಿಳಿಸುವುದು ಎಂದು ರಾಜರ ಅಭಿಪ್ರಾಯ. ಈ ಅಭಿಪ್ರಾಯವು ಪ್ರಾಮಾಣಿಕವೂ ಕೂಡಾ.

ವೇದಾಂತಗ್ರಂಥವನ್ನು ಪರ್ವತವನ್ನಾಗಿ ಮಾಡಿ, ಬ್ರಹ್ಮಸೂತ್ರಗಳನ್ನು ಹಗ್ಗದ ಸ್ಥಾನದಲ್ಲಿ ಇರಿಸಿ, ಕೃಷ್ಣನೆಂಬ ಕಡಲನ್ನು ರಾಜರು ಮಥಿಸಲು ಆರಂಭಿಸಿದ್ದಾರೆ. ವೇದಾಂತಗಳು ಅಡ್ಡಾದಿಡ್ಡಿಯಾಗಿ ಹೋಗಿ ದೇವರನ್ನು ಹೊರತು ಇನ್ನ್ಯಾರನ್ನೋ ತಿಳಿಸಬಾರದು ಅನ್ನುವ ಸಲುವಾಗಿ ಬ್ರಹ್ಮಸೂತ್ರಗಳ ಸಹಾಯವನ್ನು ಪಡೆಯುವುದು. ಈ ಬ್ರಹ್ಮಸೂತ್ರಗಳೇ ದುರ್ಬಲಗಳಾದರೆ? ಈ ಸಂಶಯ ಪರಿಹಾರಕ್ಕಾಗಿ ರಾಜರು ಸದ್ವಾತಾಗಮಪೋಷಿತಾತ್ಮಹೃದಯಂ ಎಂದಿದ್ದಾರೆ. ಸಮುದ್ರಮಥನ ಸಂದರ್ಭದಲ್ಲಿ

ವಾಸುಕಿಯು ಬಳಲಿದಾಗ ಒಳ್ಳೆಯ ತಂಗಾಳಿ ಬೀಸಿತು. ಆತನಲ್ಲಿ ಶಕ್ತಿಯನ್ನು ತುಂಬಿತು. ಸೂತ್ರಗಳು (ಅಪವ್ಯಾಖ್ಯಾನಗಳಿಂದ) ದುರ್ಬಲಗಳಾದಂತೆ ಕಂಡು ಬಂದಾಗ ಆಚಾರ್ಯಮಧ್ವರು ಅನೇಕ ಪ್ರಮಾಣಗಳನ್ನು ಉದಾಹರಿಸಿದರು. ಸೂತ್ರಗಳನ್ನು ದೃಢಪಡಿಸಿದರು. ಮಧ್ವರು ಗಾಳಿದೇವರ ಅವತಾರ. ಗಾಳಿ ದೇವರು ಎಂದಾಗ ೪೯ ಮರುತ್ತುಗಳೂ, ಮುಖ್ಯಪ್ರಾಣನ ಪುತ್ರರಾದ ಪ್ರಾಣಾದಿಗಳಿಗೂ ಅನ್ವಯವಾಗ-ಬಹುದು. ಅದರ ನಿವಾರಣೆಗಾಗಿ ವಾತ(ಗಾಳಿ) ಎಂಬ ಪದಕ್ಕೆ ಸತ್ ಎಂಬ ವಿಶೇಷಣವನ್ನು ಕೊಟ್ಟು ಮುಖ್ಯಪ್ರಾಣೇತರ ಗಾಳಿದೇವರನ್ನು ವ್ಯಾವೃತ್ತಿ ಮಾಡಿದ್ದಾರೆ.

ಈ ರೀತಿ ಮಥಿಸಿ ಸ್ವೀಯಾನಾಮ್ ಅಮೃತಂ ಪ್ರಯಚ್ಛತಿ ತನ್ನವರಿಗೆ ಅಮೃತವನ್ನು ಕೊಡುತ್ತದೆ ಎಂದಿದ್ದಾರೆ. ಇಲ್ಲಿ 'ಸ್ವೀಯಾನಾಂ' ಎಂದು ಷಷ್ಠೀವಿಭಕ್ತಿ ಇದೆ. ಯದ್ಯಪಿ ವ್ಯಾಕರಣರೀತ್ಯಾ ಸ್ವೀಯೇಭ್ಯಃ ಎಂದು ಚತುರ್ಥೀವಿಭಕ್ತಿ ಬರಬೇಕು. ಯಾರಿಗೆ ದಾನ ಮಾಡುತ್ತೇವೋ ಆತನು ಸಂಪ್ರದಾನಕಾರಕ. 'ಸಂಪ್ರದಾನೇ ಚತುರ್ಥೀ' ಎಂದು ವ್ಯಾಕರಣ. ಇದು ತಿಳಿದಿದ್ದರೂ ರಾಜರು ಷಷ್ಠೀಪ್ರಯೋಗ ಮಾಡಿದ್ದು ಬಹಳ ಉಚಿತ. ಲೋಕದ ನಿಯಮ ಈ ರೀತಿ ಇದೆ – ನಾವು ಯಾರಿಗೆ ದಾನ ಮಾಡುತ್ತೇವೋ ಅನಂತರ ದಾನ ಮಾಡಿದವನಿಗೆ ಆ ವಸ್ತುವಿನಲ್ಲಿ ಅಧಿಕಾರ ಇಲ್ಲ ಎಂಬ ಈ ಅಭಿ-ಪ್ರಾಯ ಇರುವಾಗಲೇ ಚತುರ್ಥೀ ಬರುವುದು. ದೇವರು ನಮಗೆ ಮುಕ್ತಿಯನ್ನು ಕೊಡುತ್ತಾನೆ. ಆ ಮುಕ್ತಿಯ ಸ್ವಾತಂತ್ರ್ಯ ಅವನ ಕೈಯಲ್ಲೇ ಇರುತ್ತದೆ. ಇದನ್ನು ಪುರುಷಸೂಕ್ತವು ಉತ ಅಮೃತತ್ವಸ್ಯ ಈಶಾನಃ ಮುಕ್ತರಿಗೂ ಒಡೆಯ ಎಂದು ತಿಳಿಸುತ್ತದೆ. ಆದ್ದರಿಂದ ಪೂರ್ಣವಾದ ಸಂಪ್ರದಾನತ್ವ ಜೀವರಲ್ಲಿ ಇಲ್ಲ. ಆದ್ದರಿಂದ ಚತುರ್ಥೀ ಪ್ರಯೋಗಿಸದೇ ಷಷ್ಠೀಯನ್ನೇ ಪ್ರಯೋಗಿಸಿದ್ದಾರೆ. ಇದರಿಂದ ಅನ್ಯಮತಗಳ ಖಂಡನೆಯೂ ಆಯಿತು. ಅನ್ಯರಲ್ಲಿ ಕೆಲವರು ಐಕ್ಯವನ್ನು, ಕೆಲವರು ಸಾಮ್ಯವನ್ನು, ಇನ್ನು ಕೆಲವರು ಅಸಂಬದ್ಧವಾದ್ದನ್ನು ಹೇಳುತ್ತಾ ದೇವರ ಸ್ವಾತಂತ್ರ್ಯವನ್ನೇ ಹರಣ ಮಾಡಿದ್ದಾರೆ. ಹೀಗೆ ರಾಜರು ತನ್ನ ಚತುರ ಮಾತಿನಿಂದ ಚತುರ್ಮುಖತ್ವವನ್ನೇ ದಾಖಲಿಸಿದ್ದಾರೆ.

ರಾಜರು ಆರಂಭದಲ್ಲಿ ಶ್ರೀವೇದಾಂತ ಎಂದು ಸಂಯುಕ್ತಾಕ್ಷರವಾದ ಶ್ರೀಕಾರವನ್ನು ಹಾಕಿದ್ದಾರೆ. ಇದು ಅಸಮಂಜಸದಂತೆ ತೋರುತ್ತದೆ. ಏಕೆಂದರೆ ಒಂದು ಮಾತಿದೆ – ಸಂಯೋಗಃ ಸರ್ವಥಾ ತ್ಯಾಜ್ಯಃ ವರ್ಣಾನಾಂ ಕ್ಷಂ ವಿನಾ ಮುಖೇ ಶ್ಲೋಕದ ಆರಂಭದಲ್ಲಿ ಸಂಯುಕ್ತಾಕ್ಷರವನ್ನು ಹೇಳಬಾರದು. ಕ್ಷ ಒಂದನ್ನು ಹೊರತು ಎಂದು. ಈ ದೋಷಕ್ಕೆ ಆಸ್ಪದ ಇಲ್ಲ. ಶ್ರೀಶಬ್ದವು ಮಂಗಲಾರ್ಥಕ. ಮಂಗಲಾರ್ಥಕ ಶಬ್ದವನ್ನು

ಆರಂಭದಲ್ಲಿ ಪ್ರಯೋಗಿಸಿದರೆ ಎಂತಹ ದೋಷಗಳೂ ದೂರವಾಗುತ್ತವೆ. ಈ ವಿಷಯದಲ್ಲಿ ಒಂದು ಮಾತಿದೆ –

ದೇವತಾವಾಚಕಾಃ ಶಬ್ದಾಃ ಯೇ ಚ ಭದ್ರಾದಿವಾಚಕಾಃ ।
ತೇ ಸರ್ವೇ ನೈವ ನಿಂದ್ಯಾಃ ಸ್ಯುಃ ಲಿಪಿತೋ ಗಣತೋಽಪಿ ಚ ॥

ದೇವತೆಗಳನ್ನು ಹಾಗೆಯೇ ಮಾಂಗಲ್ಯವನ್ನು ತಿಳಿಸುವ ಶಬ್ದಗಳು ಆದಿಯಲ್ಲಿ ಪ್ರಯೋಗಿಸಿದರೂ ಅಥವಾ ಹೇಳಿದರೂ ಯಾವ ದೋಷವೂ ಇಲ್ಲ.

ದೇವರ ತಿಳಿವಳಿಕೆ ಅಂದರೆ ಕೇವಲ ದೇವರ ತಿಳಿವಳಿಕೆ ಮಾತ್ರ ಅಲ್ಲ. ಪರಿವಾರ ದೇವತೆಗಳ ತಿಳಿವಳಿಕೆ ಬೇಕು. ಅದು ಕೂಡಾ ತಾರತಮ್ಯಪುರಸ್ಸರವಾಗಿ. ಅದನ್ನು ರಾಜರು ಇಲ್ಲಿ ರಮೆಯ, ವಾಯುದೇವರು, ಸರಸ್ವತಿ ಈ ಕ್ರಮದಿಂದ ಹೇಳಿದ್ದಾರೆ.

ದೇವತೆಗಳ ಲಕ್ಷಣ, ಅವರ ಹೆಸರು, ಹೆಸರಿಗೆ ಕಾರಣ ಇವೆಲ್ಲದರ ಪರಿಜ್ಞಾನ ಬೇಕು. ಯದಾ ಸ ಪದ್ಮಾಸನ ಸಂಸ್ಥಿತೋಽಲಂ ಎಂಬ ಶ್ಲೋಕದಲ್ಲಿ ಬ್ರಹ್ಮನಿಗೆ ಪದ್ಮಾಸನ ಎಂಬ ಹೆಸರು ಬರಲು ಕಾರಣವನ್ನು ತಿಳಿಸುತ್ತಾರೆ. ತದಾ ತದನ್ಯಾನ್ಯಪಹಾಯ.. ಎಂಬ ಶ್ಲೋಕದಲ್ಲಿ ರುದ್ರನಿಗೆ ಅನಂಗಜಿತ್, ದಿಗ್ವಸನ ಎಂಬ ಹೆಸರಿಗೆ ಕಾರಣವನ್ನು ಹೇಳುತ್ತಾರೆ. ತದ್ವೈವ ಶೇಷೋಜನಿ .. ಎಂಬ ಶ್ಲೋಕದಲ್ಲಿ ಶೇಷನಿಗೆ ವಾಯುಭಕ್ಷ ಎಂಬ ಹೆಸರಿಗೆ, ಇಂದ್ರನಿಗೆ ಶತಕ್ರತು ಎಂಬ ಹೆಸರಿಗೆ ಕಾರಣವನ್ನು ತಿಳಿಸುತ್ತಾರೆ. ಭೂಮಿಗೆ ಅಚಲಾ ಎಂಬ ನಾಮಕ್ಕೆ ಕಾರಣವನ್ನು ರಸಾ ಪಿಪಾಸಾ ಎಂಬ ಶ್ಲೋಕದಲ್ಲಿ ಹೇಳುತ್ತಾರೆ. ಪುರುಷಸೂಕ್ತದಿಂದಲೇ ಯಾಕೆ ಸ್ತುತಿಸಿದರು? ಎಂಬುದರ ಕಾರಣವು ಅನಂತರದ ಶ್ಲೋಕದಲ್ಲಿ ತಿಳಿಯುತ್ತದೆ.

## ಲೌಕಿಕ ಉದಾಹರಣೆಗಳು

ಶಾಸ್ತ್ರದ ವಿಷಯಗಳನ್ನು ಲೋಕದ ಉದಾಹರಣೆಯ ಮೂಲಕ ತಿಳಿಸುವಲ್ಲಿ ರಾಜರು ಅಗ್ರೇಸರರು. ದೇವತೆಗಳು ಅವತರಿಸುವುದಕ್ಕಿಂತ ಮೊದಲು ಶೇಷನು ಬಲರಾಮನಾಗಿ ಏಕೆ ಅವತರಿಸಿದ? ಎನ್ನುವುದನ್ನು ರಾಜರು ಹೃದಯಂಗಮವಾಗಿ ತಿಳಿಸುತ್ತಾರೆ. ಶ್ರೀಮಂತರು ತಾವು ಪ್ರಯಾಣ ಹೊರಡುವ ಮೊದಲು ತಮ್ಮ ಹಾಸಿಗೆಯನ್ನು ಕಳಿಸುತ್ತಾರೆ. 'ಸಂಪ್ರೇಷಯಂತಿ ಸ್ಮ ನರೈಃ ನರೇಂದ್ರಾಃ ಶಯ್ಯಾಂ ಸ್ವಕೀಯಾಂ ಪುರತಃ ಪ್ರಯಾಣೇ' ಎಂದು. ಜನರು ಹಗಲಿನಲ್ಲಿ ತಮ್ಮ ಕರ್ತವ್ಯದಲ್ಲಿ ಇರುತ್ತಾರೆ. ರಾತ್ರಿ ಆಯಿತೆಂದರೆ ವಿಲಾಸಜೀವನವನ್ನು ಆರಂಭಿಸುತ್ತಾರೆ. ಏಕೆ ಹೀಗೆ? ಎಂದರೆ ಹಗಲಿಗೆ ಇರುವವನು

ಸೂರ್ಯನು. ಚಂದ್ರನು ರಾತ್ರಿಗೆ ಸಂಬಂಧಿಸಿದವನು. ಸೂರ್ಯನು ತೀಕ್ಷ್ಣನು. ಚಂದ್ರನು ಶಾಂತನು. ಜನರು ತೀಕ್ಷ್ಣರಿಗೆ ಹೆದರುತ್ತಾರೆ. ಶಾಂತರಿಗೆ ಅಲ್ಲ. **ಬಿಭೇತಿ ಸರ್ವಃ ಪರುಷಾತ್ ನ ಶಾಂತಾತ್** ಎಂದು. ಮೋಕ್ಷವಾಗಲು ದೇವರ ಪ್ರೀತಿ ಕಾರಣ. ಪ್ರೀತನಾಗಲು ನಾಮಸ್ಮರಣೆ ಕಾರಣ. ಆದ್ದರಿಂದ ಭಕ್ತಿಯೇ ಯಾಕೆ? ಇದಕ್ಕೆ ರಾಜರು ಈ ರೀತಿ ಹೇಳಿದ್ದಾರೆ – ಆಲಿಂಗನದಿಂದ ತೃಪ್ತಿಯಾಗುವುದು ಕಂಡಿದೆ. ಹುಲಿಯು ಆಕಳನ್ನು ಕೊಲ್ಲುವ ಸಲುವಾಗಿ ಆಲಿಂಗಿಸುತ್ತದೆ. ಇದರಿಂದ ಆಕಳಿಗೆ ಆನಂದ-ವಾಗುತ್ತಾ? **ಹಿಂಸಾರ್ಥಂ ಆಲಿಂಗಯತ ಸ್ತರಕ್ಷೋಃ ಕಿಂ ಚೇಷ್ಟಯಾ ತುಷ್ಯತಿ ಕಾಮಧೇನುಃ'** ಎಂದು.

ತನ್ನ ಮನೆಯಲ್ಲೇ ಕೃಷ್ಣನು ಕೀಟಲೆ ಮಾಡಿದಾಗ ಯಶೋದೆಯು ತುಂಬಾ ಸಿಟ್ಟಾ-ದಳು. ಕೃಷ್ಣನನ್ನು ಒಂದು ಒರಳಿಗೆ ಕಟ್ಟಿದಳು. ಕಟ್ಟುವಿಕೆಯ ಯುಕ್ತಾಯುಕ್ತತೆಯನ್ನು ವಿಮರ್ಶಿಸಲಿಲ್ಲ. ಯಾಕೆಂದರೆ ಆಕೆ ಆಗ ಸಿಟ್ಟಾಗಿದ್ದಳು. ಈ ಸಂದರ್ಭದಲ್ಲಿ ಯಾವ ವ್ಯಕ್ತಿಯೂ ನ್ಯಾಯಾನ್ಯಾಯಗಳನ್ನು ವಿಮರ್ಶಿಸುವುದಿಲ್ಲ. ಕ್ರುದ್ಧವಾದ ಮನಸ್ಸು ಆ ಶಕ್ತಿಯನ್ನು ಕಳೆದುಕೊಂಡಿರುತ್ತದೆ ಎಂಬುದು ಎಲ್ಲರ ಅನುಭವ. ಇದನ್ನು ರಾಜರು –

**ನಹಿ ರೋಷರುದ್ಧಂ ಮನೋ ಮಿನೋತ್ಯಪ್ಯಮರಾನುಭಾವಮ್**

ಎಂದು ಹೇಳಿದ್ದಾರೆ. ಒಬ್ಬ ಅಸುರನು ಕೃಷ್ಣನನ್ನು ಕೊಲ್ಲುವ ಸಲುವಾಗಿ ಮಥುರೆ-ಯಿಂದ ವೃಂದಾವನಕ್ಕೆ ಬಂದನು. ನೇರವಾಗಿ ಕೃಷ್ಣನ ಬಳಿಗೆ ಬರಲು ಭಯ. ಅದಕ್ಕಾಗಿ ಮರವಾಗಿ ಹುಟ್ಟಿದನು. ತನ್ನ ವಿಷಮಯವಾದ ಫಲ, ಗಾಳಿ ಮೊದಲಾದವುಗಳಿಂದ ಕೃಷ್ಣನನ್ನು ಕೊಲ್ಲಲು ಉಪಾಯ ಹೂಡಿದನು. ಯದ್ಯಪಿ ತನ್ನ ತಾನು ತನ್ನ ಮೈಯ್ಯನ್ನು ಚಳಿ, ಮಳೆ, ಗಾಳಿ, ಬಿಸಿಲು ಇದಕ್ಕೆ ಒಡ್ಡಿ ಬಹಳ ಶ್ರಮ ಪಡುತ್ತಿದ್ದಾನೆ. ಆದರೂ ಮಾನಸಿಕವಾಗಿ ಆನಂದ ಪಡುತ್ತಿದ್ದಾನೆ – ಕೃಷ್ಣನನ್ನು ಕೊಲ್ಲಲು ಬಂದೆನೆಂದು. ಲೋಕದಲ್ಲಿ ಇಂದೂ ಇಂತಹ ಜನರಿದ್ದಾರೆ. ತಾವು ಕಷ್ಟವನ್ನು ಅನುಭವಿಸಿದರೂ ಅಡ್ಡಿಯಿಲ್ಲ. ಇನ್ನೊಬ್ಬರು ನೆಮ್ಮದಿಯಿಂದ ಇರಬಾರದು. ಉದಾ. ಯಾತ್ರೆಗೆ ಹೊರ-ಟಾಗ ಅಂಗವಿಕಲರು ಎದುರು ಬರಬಾರದು. ಬಂದರೆ ಅಪಶಕುನ. ಶಿಷ್ಟರು ಯಾತ್ರೆಗೆ ಹೊರಟಾಗ ದುಷ್ಟರು ಅದಕ್ಕೆ ವಿಘ್ನಮಾಡಲು ಅಂಗವಿಕಲತೆಯನ್ನು ತಾವೇ ಹೊಂದಿ ಶಿಷ್ಟನ ಮುಂದೆ ಬರುತ್ತಾರೆ. ತಾನು ಊನಾಂಗನಾದರೂ ಅಡ್ಡಿಯಿಲ್ಲ; ಅವರ ಯಾತ್ರೆ ಕೈಗೂಡಬಾರದು ಎಂಬ ಅಭಿಪ್ರಾಯದಿಂದ. ಇದನ್ನು ರಾಜರು – **ಸ್ವನಾಸಿಕಾಛೇದ-ಮಪೀಹ ಸೋಢ್ವಾ ಖಲೋ ನಿರುಂಧೇ ಖಲು ಸತ್ಪ್ರಯಾಣಮ್'** ಎಂದು ಹೇಳಿ-ದ್ದಾರೆ.

ಪೂತನಿಯ ಸಂಹಾರವನ್ನು ಹೇಳುವ ಸಂದರ್ಭದಲ್ಲಿ ಕೃಷ್ಣನಿಂದ ಸತ್ತ ಪೂತನಿಯು ಸ್ವರ್ಗವನ್ನು ಸೇರಿದಳು ಎಂದು ಭಾಗವತವು ಹೇಳುತ್ತದೆ. ಅದೇ ಭಾಗವತವು ಹರಿ-ದ್ವೇಷಿಗಳಿಗೆ ಸ್ವರ್ಗ ಇಲ್ಲ ಎಂದು ಹೇಳುತ್ತದೆ. ಹೀಗೆ ಪರಸ್ಪರವಿರೋಧವು ಬಂದಾಗ ರಾಜರು ಶ್ರುತಿಯನ್ನು ಉದಾಹರಿಸಿ ವಿರೋಧವನ್ನು ಪರಿಹರಿಸುತ್ತಾರೆ.

ಆಪೋಽಬ್ರುವನ್ ಇತಿ ಸನಾತನವೇದವಾಕ್ಯಾತ್
ಕಿಂ ವಕ್ತೃತಾ ಜಡಜಲಸ್ಯ ತಥಾ ಶುಕೋಕ್ತೌ ।

ವೇದದಲ್ಲಿ 'ಮಣ್ಣು ನೀರು ಮಾತನಾಡಿದವು' ಎಂದಿದೆ. ಇದು ಪ್ರಾಮಾಣಿಕವಾದ ಯುಕ್ತಿಯಿಂದ ವಿರುದ್ಧ. ಈ ಸಂದರ್ಭದಲ್ಲಿ ಮಣ್ಣು, ನೀರು ಎಂಬುದಕ್ಕೆ ತದಭಿಮಾನಿ ದೇವತೆ ಎಂದು ಅರ್ಥಮಾಡಿ ವಿರೋಧವನ್ನು ಶಾಸ್ತ್ರಕಾರರು ಪರಿಹರಿಸುತ್ತಾರೆ. ಅದೇ ರೀತಿ ಪೂತನಾದಿಗಳಿಗೆ ಸ್ವರ್ಗವಾಯಿತು ಎಂದರೆ ಆ ಶರೀರದಲ್ಲಿರುವ ಸಾತ್ವಿಕ ಜೀವರಿಗೆ ಎಂದರ್ಥ ಎಂದು.

ಈ ರೀತಿ ಶಾಸ್ತ್ರಗಳಲ್ಲಿ ಬರುವ ವಿರೋಧವನ್ನು ಆಚಾರ್ಯಮಧ್ವರಲ್ಲದೇ ಮತ್ತಾರೂ ಪರಿಹರಿಸಲು ಸಮರ್ಥರಾಗಲಿಲ್ಲ ಎಂಬುದನ್ನು ರಾಜರು ತಮ್ಮ ಮಾತಿನಿಂದ ತಿಳಿಸುತ್ತಾರೆ–

ಆನಂದತೀರ್ಥಮತಮುಜ್ಝಿತದೋಷಜಾತಂ
ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ ।
ಮಾನೌಘಶೋಭಿ ಮಮ ದುರ್ಜನಪುಂಜತೋಽಭೀಃ
ಯೇನೇದೃಶೀ ಮತಿರಭೂತ್ ಕವಿತೋಲ್ಲಸದ್ಭೂಃ ॥ ೨/೬೦

ಆನಂದತೀರ್ಥರ ಮತವೇ ಸಕಲ ಶ್ರುತಿಸಮ್ಮತವು. ದುರ್ವಾದಿಗಳ ಗರ್ವವನ್ನು ನಾಶ ಮಾಡಿದ ಮತವು. ಬಹಳ ಪ್ರಮಾಣಗಳಿಂದ ಕೂಡಿದೆ. ಮೋಕ್ಷಾನಂದವನ್ನು ಕೊಡುತ್ತದೆ. ಈ ಶಾಸ್ತ್ರವನ್ನು ಹಿಡಿದವನು ಯಾವ ದುರ್ಜನರಿಗೂ ಭಯಪಡಬೇಕಿಲ್ಲ. ನನಗೆ ಅದ್ಭುತ ಕವಿತ್ವಶಕ್ತಿ ಬಂದದ್ದು ಈ ಶಾಸ್ತ್ರದಿಂದಲೇ ಎಂದು ರಾಜರು ತುಂಬು ಹೃದಯದಿಂದ ಆಚಾರ್ಯರನ್ನು ತಮ್ಮ ಈ ಗ್ರಂಥದಲ್ಲಿ ಹೊಗಳಿದ್ದಾರೆ.

ರುಗ್ಮಿಣೀಶಗ್ರಂಥರಚನೆಯ ಹಿನ್ನೆಲೆ ಬಹಳ ರೋಚಕವಾಗಿದೆ. ಒಮ್ಮೆ ಪುಣ್ಯಪತ್ತನ (ಪೂನಾ)ದಲ್ಲಿ 'ಶಿಶುಪಾಲವಧೆ' ಎಂಬ ಕಾವ್ಯದ ಮೆರವಣಿಗೆಯ ವ್ಯವಸ್ಥೆ ಆಗಿತ್ತು. ಅಂದರೆ ಈ ಕಾವ್ಯದಲ್ಲಿ ಎಲ್ಲಾ ಲಕ್ಷಣಗಳೂ ಇದ್ದವು. ಆದ್ದರಿಂದ ಪಂಡಿತನಾದ ಆ ನಗರದ ರಾಜನು ತುಷ್ಟನಾಗಿ ಈ ವ್ಯವಸ್ಥೆಯನ್ನು ಮಾಡಿದ್ದನು. ಶ್ರೀರಾಜರು ಸಂಚಾರತ್ವೇನ ಆ

ಊರಿಗೆ ಬಂದರು. ತಾನು ಎಲ್ಲವನ್ನೂ ತಿಳಿದಿದ್ದರೂ ರಾಜನಲ್ಲಿ ಮೆರವಣಿಗೆಯ ಬಗ್ಗೆ ಪ್ರಶ್ನಿಸಿದರು. ರಾಜನಿಂದ ವಿಷಯ ಅರಿತ ಶ್ರೀರಾಜರು ಹತ್ತೊಂಬತ್ತು ದಿವಸಗಳ ಅವಕಾಶ ಕೋರಿದರು. ತಾನು ಉಡುಪಿಗೆ ಬಂದು ದಿನಕ್ಕೆ ಒಂದು ಸರ್ಗದಂತೆ ಹತ್ತೊಂಬತ್ತು ಸರ್ಗಗಳ ಮಹಾಕಾವ್ಯವನ್ನು ರಚಿಸಿದರು. ಅಲ್ಲಿಗೆ ಕಳುಹಿಸಿದರು. ಈ ಗ್ರಂಥದ ಮಹತ್ವವನ್ನು ಕಂಡು ರಾಜ ಆಶ್ಚರ್ಯಪಟ್ಟ. ಈತನು ಪಕ್ಷಪಾತರಹಿತರಾಜನಾದ್ದರಿಂದ ಶಿಶುಪಾಲವಧೆ ಎಂಬ ಕಾವ್ಯವನ್ನು ಬದಿಗಿರಿಸಿ, ಈ ಗ್ರಂಥಕಾವ್ಯಕ್ಕೆ ಮೆರವಣಿಗೆಯ ವ್ಯವಸ್ಥೆ ಮಾಡಿದ. ಈ ಗ್ರಂಥವು ಪೂರ್ಣವಾಗಿ ಶ್ರೀಕೃಷ್ಣನ ಸನ್ನಿಧಾನಕ್ಕೆ ಪಾತ್ರವಾದದ್ದು ಎಂದು ತಿಳಿಯಲು ಇದೊಂದೇ ಕಾರಣ ಸಾಕು. ಆದ್ದರಿಂದ ನಮ್ಮ ಮನೆಗಳಲ್ಲಿ ದೇವರ ಪ್ರತಿಮೆ ಇಲ್ಲದಿದ್ದರೂ ಈ ರುಗ್ಮಿಣೀಶವಿಜಯ ಪುಸ್ತಕ ಇದ್ದರೆ ದೇವರ ಪ್ರತಿಮೆ ಇದ್ದಂತೆಯೇ ಸರಿ. ಈ ಗ್ರಂಥಕ್ಕೆ ನಿತ್ಯ ಮಂಗಳಾರತಿ, ನೈವೇದ್ಯ , ಧೂಪ, ದೀಪ ಮಾಡಿದ್ದಲ್ಲಿ ಪಂಚಲೋಹದ ಪ್ರತಿಮೆಗಳಿಗಿಂತಲೂ ವಿಶಿಷ್ಟ ಸನ್ನಿಧಾನವಿರುತ್ತದೆ. ಪಂಚಲೋಹದ ಪ್ರತಿಮೆಗೆ ಎಷ್ಟು ಮಂಗಳಾರತಿ ಎತ್ತಿದರೂ ಅದು ಮಾತನಾಡುವುದಿಲ್ಲ. ಈ ಗ್ರಂಥಪ್ರತಿಮೆ ಕ್ರಮೇಣ ಮಾತನಾಡಲು ಆರಂಭಿಸುತ್ತದೆ. ಅಂದರೆ ನಮಗೆ ಆದರ ವಿಷಯಗಳು ಅಧ್ಯಯನದ ಮೂಲಕ ಅರ್ಥವಾಗಲು ತೊಡಗುತ್ತದೆ. ಅಧ್ಯಯನ ಮೊದಲಿನ ಪೂಜೆ ಮಂಗಳಾರತಿ ಎರಡನೆಯ ಪೂಜೆ. ಇದನ್ನೇ ಉಪನಿಷತ್ತು ಸ್ವಾಧ್ಯಾಯ ಪ್ರವಚನ ಏವ ಇತಿ ನಾಕೋ ಮೌದ್ಗಲ್ಯಃ ತದ್ಧಿ ತಪಃ ತದ್ಧಿ ತಪಃ ಎಂದು ಸಾರಿದೆ. ಈ ರೀತಿಯಾಗಿ ಈ ಗ್ರಂಥದ ಮೆರವಣಿಗೆಯು ಈ ಗ್ರಂಥದಲ್ಲಿ ಅಡಕವಾದ ಕೇವಲ ಕೃಷ್ಣಕಥೆಗೆ ಸಂದ ಗೌರವ ಅಲ್ಲ ಮತ್ತೇನೆಂದರೆ, ಕೃಷ್ಣಸರ್ವೋತ್ತಮತ್ವ , ಪಂಚಭೇದ, ಜಗತ್ ಸತ್ಯತ್ವ , ತಾರತಮ್ಯ ಇತ್ಯಾದಿ ಶ್ರೀಮಧ್ವರ ಮಾತುಗಳಿಗೆ ಸಂದ ಗೌರವ.

ಕೇವಲ ಕೃಷ್ಣಕಥೆಯು ಶಿಶುಪಾಲವಧೆ ಎಂಬ ಗ್ರಂಥದಲ್ಲಿಯೂ ಇದೆ. ಆದರೆ ಅದಕ್ಕೆ ಪುರಸ್ಕಾರ ಸಿಗಲಿಲ್ಲ. ಆದ್ದರಿಂದ ನಾವು ಕೇವಲ ದೇವರ ಚರಿತ್ರೆಯನ್ನು ಮಾತ್ರ ತಿಳಿದರೆ ಸಾಲದು. ಪಾರಮ್ಯಾದಿಗಳನ್ನೂ ತಿಳಿಯಬೇಕು ಎಂಬ ಸಂದೇಶವು ಇದರಲ್ಲಿ ಅಡಕವಾಗಿದೆ.

ಎರಡನೆಯ ಸಂದೇಶವೂ ಇಲ್ಲಿ ಇದೆ. ನಾವು ಮನೆಯಲ್ಲಿ ನಮ್ಮ ಮಕ್ಕಳಿಗೆ ಏನೇನೋ ಹೆಸರಿಡುತ್ತೇವೆ. ಯಾಕೆಂದರೆ ಹೆಸರು ವ್ಯಕ್ತಿಯನ್ನು ಪ್ರತ್ಯೇಕಿಸಲು ಎಂದು ಹೇಳುತ್ತೇವೆ. ಆದರೆ ಕೇವಲ ಈ ಒಂದು ಉದ್ದೇಶ ಸಾಲದು. ನಮ್ಮ ಆ ಮಗುವು ಜೀವನದಲ್ಲಿ ಉನ್ನತಿಯನ್ನು ಸದಾ ಜಯಾದಿಗಳನ್ನು ಹೊಂದಬೇಕು ಎಂಬ ಉದ್ದೇಶವೂ

ಇರಬೇಕು. ಹಾಗಿದ್ದರೆ ನಮ್ಮ ಉದ್ದೇಶಗಳನ್ನೆಲ್ಲಾ ಒಳಗೊಂಡಿರುವ ಭಗವಂತನ ಚಂದದ ಹೆಸರನ್ನು ಇಡಬೇಕು. ಹಾಗಾದಾಗ ನಮ್ಮ ಉದ್ದೇಶ ಫಲಿಸುತ್ತದೆ.

ರಾಜರು ತನ್ನ ಗ್ರಂಥಕ್ಕೆ ರುಗ್ಮಿಣೀಶವಿಜಯ ಎಂದು ನಾಮಕರಣ ಮಾಡಿದರು. ಈ ಗ್ರಂಥಕ್ಕೆ ಜಯ ಸಿಗಬೇಕು ಎಂಬ ಉದ್ದೇಶದಿಂದ. ಅವರ ಉದ್ದೇಶವು ಫಲಿಸಿತು ಕೂಡಾ. ಆದರೆ ಶಿಶುಪಾಲವಧೆ ಎಂದು ಹೆಸರಿಸಿದ ಕವಿಯ ಉದ್ದೇಶ ಜಯ ಸಿಗಲಿ ಎಂದಾಗಿದ್ದರೂ ಹೆಸರು ಅಮಂಗಳವಾದ್ದರಿಂದ ಆ ಕವಿಯ ಗ್ರಂಥದ ತೇಜೋವಧೆ ಆಯಿತು. ಆದ್ದರಿಂದ ನಾಮಕರಣದ ದಿವಸ ಬಹಳ ಜಾಗರೂಕರಾಗಿರಬೇಕು ಎಂದು.

ಕೇವಲ ಉದಾಹರಣೆಗಾಗಿ ಎರಡು ಉದ್ದೇಶಗಳನ್ನು ಹೇಳಿದೆವು. ಈ ರೀತಿಯಾಗಿ ಅನೇಕ ಉದ್ದೇಶಗಳು ಈ ಗ್ರಂಥದಲ್ಲಿ ಸೇರಿವೆ. ಈ ರೀತಿಯಾಗಿ ವಿಶ್ವತೋಮುಖನಾದ ಶ್ರೀಕೃಷ್ಣನ ವೈಭವವನ್ನು ವಿಶ್ವತೋಮುಖದಿಂದ ಸಾರುವ ಈ ಗ್ರಂಥದ ಅಧ್ಯಯನವನ್ನು ಮಾಡುವ ಶ್ರೀರಾಜರ ಅಂತರ್ಯಾಮಿ ಹಯಗ್ರೀವನ ಅನುಗ್ರಹದಿಂದ ನೆಮ್ಮದಿಯ ಜೀವನವನ್ನು ನಡೆಸೋಣ. ಈ ರೀತಿಯಲ್ಲಿ ಭಾವಿಸಮೀರ ಶ್ರೀವಾದಿರಾಜರು ಅನು-ಗ್ರಹಿಸಲಿ.

'ಸಾಧನ ಶರೀರವಿದು ನೀ ದಯದಿ ಕೊಟ್ಟದ್ದು ಸಾಧಾರಣವಲ್ಲ' ಎಂದು ದಾಸರು ಈ ದೇಹದ ಬಗ್ಗೆ ತಿಳಿಯ ಹೇಳಿದ್ದಾರೆ. ಸಾಧನೆ ಮಾಡುವುದು ಅಂದರೆ ಈ ದೇಹವನ್ನು ಕೊಟ್ಟಿರುವ ದೇವರನ್ನು ತಿಳಿಯುವುದು. ತಿಳಿಯಲು ಬೇಕಾದ ದಾರಿಯನ್ನು ಹಾಕಿಕೊಟ್ಟವರಲ್ಲಿ ಮೊದಲಿಗರು ಶ್ರೀವ್ಯಾಸರೇ. ಈ ಕ್ರಮವನ್ನೇ ಅನುಸರಿಸಿಕೊಂಡು ಬಂದವರು ಆಚಾರ್ಯಮಧ್ವರು, ಅನಂತರ ವಾದಿರಾಜರು. ವ್ಯಾಸಮಧ್ವರ ಮಾತು-ಗಳನ್ನು ಅನೇಕ ಉದಾಹರಣೆಗಳ ಮೂಲಕ ವೈದಿಕಸಮಾಜಕ್ಕೆ ಅರ್ಥೈಸಿದವರಲ್ಲಿ ಶ್ರೀವಾದಿರಾಜರು ಅಸದೃಶರು. ಶ್ರೀರಾಜರು ಸಂಸ್ಕೃತದಲ್ಲಿ ಹಾಗೂ ಕನ್ನಡದಲ್ಲಿಯೂ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಈ ಕೃತಿಗಳು ಜನಗಳ ಮನೆಮನೆಗಳನ್ನು ತಲುಪಿದವು ಕೂಡಾ. ಅರ್ಥೈಸಲು ಅಸಮರ್ಥರಾದ ಜನ ಈ ಗ್ರಂಥಗಳನ್ನು ಪೂಜೆಗೆ ಇಟ್ಟರು. ಇದರಿಂದ ಪುಣ್ಯ ಲಭಿಸಿತು. ಆದರೆ ಪುರುಷಾರ್ಥ ಲಭಿಸಲಿಲ್ಲ. ಇದನ್ನು ಮನಕಂಡು ಈ ಭಾವಿಸಮೀರ ಶ್ರೀವಾದಿರಾಜತೀರ್ಥ ಪೂಜ್ಯಚರಣರ ಸರ್ವಾಂಗೀಣ ತತ್ತ್ವ-ಚಿಂತನೆಯನ್ನು ಕೊಡುವ ಶ್ರೀರುಗ್ಮಿಣೀಶವಿಜಯದ ಈ ಕನ್ನಡಾನುವಾದವನ್ನು ಉಡುಪಿಯ ಶ್ರೀಪಲಿಮಾರು ಮಠದ, ಕರ್ನಾಟಕ ಸಂಸ್ಕೃತವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ, ಬಹುಮುಖ ಲೋಕೋದ್ಧಾರಕಾರ್ಯಗಳಲ್ಲಿ ನಿರತವಾದ ತತ್ತ್ವ-

ಸಂಶೋಧನಸಂಸತ್ (ರಿ.) ಸಂಸ್ಥೆ ಕೈಗೆತ್ತಿಕೊಂಡು ಪ್ರಕಟಿಸುತ್ತಿದೆ. ಸಂಸ್ಥೆಯು ಈಗಾಗಲೇ ಈ ಸಂಸ್ಥೆಯು ಮಾಧ್ವವಾಙ್ಮಯದಲ್ಲಿನ ಉತ್ತಮಕೃತಿಗಳ ಅನುವಾದ, ಪ್ರಕಟನಾದಿ ಕಾರ್ಯಗಳನ್ನು ಮಾಡುತ್ತಲೇ ಬಂದಿದ್ದು, ಈ ತನಕ ಸುಮಾರು ಎಪ್ಪತ್ತಕ್ಕೂ ಹೆಚ್ಚಿನ ಗ್ರಂಥಗಳನ್ನು ಪ್ರಕಟನೆ ಮಾಡಿದೆ. ಈ ಸಂಸ್ಥೆಯಿಂದ ಮುಂದೆಯೂ ಇಂತಹ ಬಹು ಕೃತಿಗಳು ಪ್ರಕಟನೆಗೊಂಡು ಸಮಾಜದ ಸರ್ವತೋಮುಖವಾದ ಅಭಿವೃದ್ಧಿಯು ಆಗಲಿ ಎಂದು ಶ್ರೀವಾದಿರಾಜಾಂತರ್ಗತ ಶ್ರೀಲಕ್ಷ್ಮೀಹಯಗ್ರೀವನಲ್ಲಿ ನಮ್ಮ ಪ್ರಾರ್ಥನೆ.

'ಇತಿ ಶಮ್'

ಇತ್ಯನೇಕ ನಾರಾಯಣಸ್ಮರಣೆಗಳು.

ಶ್ರೀಶ್ರೀವಿಶ್ವಪ್ರಿಯತೀರ್ಥ ಶ್ರೀಪಾದಂಗಳವರು
ಶ್ರೀ ಅದಮಾರುಮಠ, ಉಡುಪಿ.

## ಮುಖಪುಟದ ಮಾಹಿತಿ

ವಿಶ್ವಗುರು ಶ್ರೀಮಧ್ವಾಚಾರ್ಯಮೂಲಮಹಾಸಂಸ್ಥಾನವಾದ ಶ್ರೀ ಅದಮಾರು ಮಠದ ಮೂಲಯತಿಗಳಾದ ಶ್ರೀ ನರಹರಿತೀರ್ಥರಿಗೆ ಆಚಾರ್ಯಮಧ್ವರು ಪೂಜೆ ಮಾಡಿ ಕರುಣಿಸಿದ್ದ ಚತುರ್ಭುಜಕಾಳಿಂಗಮರ್ದನ ಶ್ರೀಕೃಷ್ಣದೇವರು. ಪ್ರಕೃತ ಭಾವಿಸಮೀರ ಶ್ರೀ ವಾದಿರಾಜಶ್ರೀಪಾದರು ರಚಿಸಿದ ಶ್ರೀರುಗ್ಮಿಣೀಶವಿಜಯದ ಮೊದಲ ಆರು ಸರ್ಗಗಳಿಂದ ಕೂಡಿದ ಈ ಸಂಪುಟದಲ್ಲಿ ಶ್ರೀಕೃಷ್ಣನ ಕಾಳಿಂಗಮರ್ದನದ ವರ್ಣನೆ ಬರುವುದರಿಂದ ಮತ್ತು ಈ ಗ್ರಂಥಕ್ಕೆ ಕನ್ನಡ ವ್ಯಾಖ್ಯಾನವನ್ನು ಶ್ರೀ ಅದಮಾರು ಮಠದ ಶ್ರೀ ವಿಶ್ವಪ್ರಿಯತೀರ್ಥ ಶ್ರೀಪಾದರು ರಚಿಸಿದ ಕಾರಣ ಈ ಸಂಪುಟದ ಮುಖಪುಟಕ್ಕೆ ಈ ಚಿತ್ರವನ್ನು ಹಾಕಲಾಗಿದೆ. ಶ್ರೀಕಾಳಿಂಗಮರ್ದನನಿಗೆ ಅರ್ಪಿಸುವ ಉದ್ದೇಶವೂ ಒಂದು.

# ಭಾವಿಸಮೀರ ಶ್ರೀಮದ್ವಾದಿರಾಜತೀರ್ಥರು

ಶ್ರೀಮಧ್ವಾಚಾರ್ಯರು ತಾವು ಬೋಧಿಸಿದ ತತ್ವಜ್ಞಾನಪ್ರಸಾರಕ್ಕಾಗಿ ತಮ್ಮ ಸಾಕ್ಷಾತ್ ಶಿಷ್ಯರುಗಳನ್ನು ಸಿದ್ಧಪಡಿಸಿ, ಅಷ್ಟಮಠಗಳನ್ನೂ ಶ್ರೀಕೃಷ್ಣಮೂರ್ತಿಯ ಪ್ರತಿಷ್ಠೆಯನ್ನೂ ಗೈದರು. ಇಂತಹ ಶ್ರೀಮದುಡುಪಿಯ ಅಷ್ಟಮಠಗಳಲ್ಲಿ ಒಂದಾದ ಶ್ರೀಸೋದಾಮಠದ ಮೊದಲನೆಯ ಪರಮಹಂಸರು, ಶ್ರೀಮದ್ವಿಷ್ಣುತೀರ್ಥರು. ಇವರು ಪೂರ್ವಾಶ್ರಮದಲ್ಲಿ ಶ್ರೀಮದಾಚಾರ್ಯರ ತಮ್ಮಂದಿರು. ಇವರ ಪರಂಪರೆಯಲ್ಲಿ ಬಂದ ಶ್ರೀಮದ್ವಾಗೀಶ-ತೀರ್ಥರ ಪ್ರಿಯಶಿಷ್ಯರೇ ಭಾವಿಸಮೀರ ಶ್ರೀಮದ್ವಾದಿರಾಜತೀರ್ಥರು. ಕುಂಭಾಸಿಯ ಹೂವಿನಕೆರೆಯ ಶ್ರೀರಾಮಾಚಾರ್ಯರ ಸೇವಾಕೈಂಕರ್ಯದೆಸೆಯಿಂದ ಗೌರಿಗದ್ದೆಯಲ್ಲಿ ಲೋಕವಿಲಕ್ಷಣವಾಗಿ ಅವತರಿಸಿದವರು. ಹೂವಿನ ಕೆರೆಯಲ್ಲಿ ಅರಳಿದ ಈ ಹೂವು, ಶ್ರೀವಾಗೀಶತೀರ್ಥರ ಕರಕಮಲಸಂಸ್ಕಾರದಿಂದ ಶ್ರೀಕೃಷ್ಣನ ಪಾದಕ್ಕೆ ಅರ್ಪಿಸಲ್ಪಟ್ಟಿತು. ಅನಂತರ ಈ ಪುಷ್ಪದ ಕಂಪು ಆಸೇತು ಹಿಮಾಲಯದವರೆಗೂ ಪಸರಿಸಿತು. ೧೨೦ ವರ್ಷಗಳು ಪೂರ್ಣವಾಗಿ ಸುಲಕ್ಷಣೋಪೇತ ಅಕಳಂಕ ದೇಹದಾರ್ಢ್ಯಾದಿಗಳಿಂದ ಕಂಗೊಳಿಸಿದವರು. ಪರಮವಿರಕ್ತ್ಯಾದಿ ಸದ್ಗುಣಗಳ ಪ್ರಭಾವವನ್ನು ಲೋಕದಲ್ಲಿ ಬೀರುತ್ತಾ, ೧೧೨ವರ್ಷಗಳಷ್ಟು ದೀರ್ಘಕಾಲ ಅಸ್ಖಲಿತ ಬ್ರಹ್ಮಚರ್ಯೆಯ ಸುದೀರ್ಘ ಸನ್ಯಾಸಾಶ್ರಮ ಜೀವನ ಉಳ್ಳವರು. ಇಂತಹ ಬೇರೊಬ್ಬ ಯತಿಯನ್ನು ಇಂದಿನವರೆಗೂ ಮಾಧ್ವ ಇತಿಹಾಸ ಕಂಡಿಲ್ಲ. ಅನೇಕಬಾರಿ ಸಮಗ್ರ ಭಾರತಖಂಡವನ್ನು ಪಾದಚಾರಿಯಾಗಿ ಕ್ರಮಿಸಿ, ಶ್ರೀವಿಷ್ಣು-ಸರ್ವೋತ್ತಮತ್ವಾದಿಗಳನ್ನು ಪ್ರತ್ಯಕ್ಷ-ಅನುಮಾನ- ಆಗಮಗಳಿಂದ ನಿರೂಪಿಸಿದವರು. ಶ್ರೀಮಧ್ವಪ್ರತಿಷ್ಠಿತ ಉಡುಪಿಯ ದೈವ ಶ್ರೀಕೃಷ್ಣಮೂರ್ತಿಯನ್ನು ಎರಡು ತಿಂಗಳ ಪದ್ಧತಿಯಂತೆ ಪಂಚಾವರ್ತಿ ಪರ್ಯಾಯಮಹೋತ್ಸವವನ್ನು ಅತಿ ವೈಭವದಿಂದ ಮಾಡಿ, ಕೋಟ್ಯಾಂತರ ಭಕ್ತರನ್ನು ಉದ್ಧಾರ ಮಾಡಿದ ಯದುಕುಲಚಕ್ರವರ್ತಿಗಳು.

ಸಾಹಿತ್ಯಾಕಾಶರಾಕೇಶೋ ಮೀಮಾಂಸಾಟವಿಕೇಸರಿ ।
ಶ್ರುತಿಕಾಸಾರಮೀನಃ ಸವಾದಿತೂಲತನೂನಪಾತ್ ॥

ವೇದಾಂತಾಬ್ಧಿಮಹಾನಕ್ರಃ ತರ್ಕವಜ್ರಾಯುಧಃ ಕೃತೀ ।
ಶಬ್ದಚಾಪಧರೋ ಧೀರೋ ವಾದಿರಾಜೋ ವ್ಯರಾಜಿತಮ್ ॥

ಎಂಬ ಪ್ರಮಾಣದಂತೆ ವೇದ-ವೇದಾಂಗ-ವೇದಾಂತಾದಿ ಮಹೋದಧಿಯ ಆಳಗಲವನ್ನು ನಿರ್ಭಯರಾಗಿ - ನಿರಾಯಾಸವಾಗಿ ಈಜಬಲ್ಲ ವಿದ್ವತ್ತಿಮಿಂಗಿಲರು. ಸದಾ ಹಯಮುಖಪಾದಕಮಲಮಧುಪರಾದ ಇವರು, ನಿತ್ಯವೂ ಕುದುರೆ ರೂಪೀ ಶ್ರೀಹರಿಯ ಸಾಕ್ಷಾತ್ ಉಚ್ಛಿಷ್ಟ ಕಡಲೆ ಹೂರಣ ಪ್ರಸಾದಕ್ಕೆ ಪಾತ್ರರು. ಇವರು ಬರೆಯದೇ ಉಳಿದ ವೇದಾಂತಾದಿ ಶಾಸ್ತ್ರಗಳಿಲ್ಲ. ಜಯಿಸದೇ ಉಳಿದ ಪ್ರತಿವಾದಿಗಳಿಲ್ಲ. ಜಪದ ಸಿದ್ಧಿ ಇಲ್ಲದ ಮಂತ್ರಗಳಿಲ್ಲ. ಸಂದರ್ಶಿಸದ ವಿಷ್ಣು- ವೈಷ್ಣವ ಕ್ಷೇತ್ರಗಳಿಲ್ಲ. ಮೀಯಲಶಕ್ಯವಾದ ಅಮಾನುಷ ತೀರ್ಥಾದಿಗಳಲ್ಲೂ ಮಿಂದಿದ್ದಾರೆ. ಮಹಾಯೋಗಿವರ್ಯರಾದ ಇವರಿಗೆ ಸಿದ್ಧಿಸದ ಯಾವ ಯೋಗರಹಸ್ಯಗಳು ಉಳಿದಿವೆ? ಬಿಡಿಸದೇ ಉಳಿದ ಯಾವ ಭೂತ- ಪ್ರೇತ- ಪಿಶಾಚಾದಿಗಳೂ ಇಲ್ಲ. ಅತ ಏವ ರುದ್ರಪದಾರ್ಹ ಶ್ರೀಭೂತರಾಜರಿಗೂ ಗುರು- ಗಳೆಂದು ಲೋಕದಲ್ಲಿ ಖ್ಯಾತಿಯುಳ್ಳವರು. ಆಚಾರ್ಯಮಧ್ವರು ವೇದ-ವೇದಾಂತ ಸಾಮ್ರಾಜ್ಯದ ಚಕ್ರವರ್ತಿಗಳಾದರೆ, ಭಾವಿಸಮೀರ ಲಾತವ್ಯಾಖ್ಯ ಋಜುದೇವತೆಯಾದ ಸೋದೆಯ ಶ್ರೀಮದ್ವಾದಿರಾಜತೀರ್ಥರು ಆ ಸಾಮ್ರಾಜ್ಯದ ಯುವರಾಜರೆಂದು ಜ್ಞಾನಿಗಳ ಅಭಿಮತ.

### ಶ್ರೀಮದ್ವಾದಿರಾಜರೆಂಬ ಅನ್ವರ್ಥಕ ನಾಮ :

ವಿಜಯನಗರಸಾಮ್ರಾಜ್ಯದ ರಾಜಧಾನಿ 'ಪೆನುಗೊಂಡೆ'ಯಲ್ಲಿ ಚತುಃಷಷ್ಟಿಕಲಾ- ಪ್ರವೀಣರಿಗಾಗಿಯೇ ನಡೆದ ವಿದ್ವತ್ ಸಭೆಯಲ್ಲಿ ಮಹಾನ್ ಪಂಡಿತರ ಪ್ರಶ್ನೆಗಳಿಗೆಲ್ಲಾ ಸಮರ್ಥವಾಗಿ ಉತ್ತರಿಸಿದವರು. ಸಭೆಯ ನಿರ್ಣೀತ ಮರ್ಯಾದೆಯಂತೆ 'ಪ್ರಸಂಗಾ- ಭರಣತೀರ್ಥ'ರೆನ್ನುವ ಸರ್ವಜ್ಞತ್ವಸಮಾನಸೂಚಕ ಈ ಗೌರವ ಬಿರುದನ್ನು ಅಂದಿನ ಸಭಾಧ್ಯಕ್ಷನೂ ರಾಜನೂ ಆದ ವೀರ ಶ್ರೀವೇಂಕಟಪತಿರಾಯನಿಂದ ಪಡೆದು ಸಭಾ- ಮಾನಿತರಾದವರು. 'ವಾದೀಭಮೃಗರಾಜತ್ವಾತ್ ವಾದಿರಾಜಾಭಿಧಾ'.

ನಿವೀತವೇಷ್ಟನಾ ಭೂಮೌ ಯಂ ನಮಂತಿ ಹಿ ವಾದಿನಃ।
ತಸ್ಯೈವ ವಾದಿರಾಜತ್ವಂ ಯುಕ್ತಂ ಅನ್ವರ್ಥಕಂ ಕ್ಷಿತೌ ॥

ಎಂಬಂತೆ ಶ್ರೀವಾದಿರಾಜತೀರ್ಥರೆನ್ನುವ ಅನ್ವರ್ಥಕ ನಾಮವನ್ನು ಪಡೆದು, ಅನೇಕ ರಾಜಧಾನಿಗಳ ವಿದ್ವತ್ ಸಭೆಗಳಲ್ಲಿ ಪ್ರತಿವಾದಿಗಳಿಗೆ ಸಿಂಹದಂತೆ ಕಂಗೊಳಿಸಿದವರು. ಮತ್ತೊಂದು ಮುಖದಲ್ಲಿ ವೇದಾಂತ ತತ್ವಪ್ರಸಾರ ಹಾಗೂ ತತ್ವಮಂಡನಾದಿಕಾರ್ಯಗಳಲ್ಲಿ ಇವರೊಬ್ಬ ವಿಶಿಷ್ಟ 'ವಾದಿಸಿಂಹ'. ಈ ವಾದಿಸಿಂಹರ ಮುಂದೆ ಮಸ್ತಕ ಮಣಿಸದ ಪ್ರತಿ ಇಭಾವಳಿಯೇ ಇಲ್ಲ. ಎಲ್ಲರೂ ಮಣಿದು ದಣಿವ ಮಸ್ತಕರೇ. ಆದರೂ ವಾದಕೌಶಲ-

ಮದದಿಂದ ಇವರೊಡನೆ ಸೆಣಸಿ, ಮಣಿದು ಮಂಕಾದ ವಾದಿಗಳು ಸಹಸ್ರಾರು. ಅತ ಏವ 'ವಾದಿರಾಜ' ಎಂಬ ನಾಮದ ಹಿರಿಮೆ, ಗರಿಮೆ, ಮಹಿಮೆ ಇವೆಲ್ಲವೂ ಇವರ ಪಾಲಿಗೆ ಮೀಸಲು. ಇವರ ಅಮಾನುಷಶಕ್ತಿ, ಅದ್ಭುತ ಪವಾಡ - ಮಾಹಾತ್ಮ್ಯಗಳು, ಅಲೌಕಿಕಪ್ರತಿಭೆಯ ತಾತ್ವಿಕ ಉಪದೇಶ, ನಾನಾ ವಿಧ ಮಂತ್ರಶಕ್ತಿಯ ಸಿದ್ಧಿ, ಧ್ಯಾನಾದಿ ತಪಃ ಪ್ರಭಾವ ಇವುಗಳಿಗೆ ತಲೆಬಾಗದ ಭಕ್ತರೇ ಇಲ್ಲ. ಮುಖ್ಯವಾಗಿ ಅಪೌರುಷೇಯ ಶ್ರುತಿಗಳಲ್ಲೂ, ವ್ಯಾಸಕೃತಪುರಾಣಗಳಲ್ಲೂ, ನಾರದ-ವ್ಯೋಮ, ಪ್ರಸಿದ್ಧ ಪ್ರಕಾಶ-ಸಂಹಿತಾದಿಗಳಲ್ಲೂ ನಿಚ್ಚಳವಾಗಿ ವರ್ಣಿಸಲ್ಪಟ್ಟ 'ಲಾತವ್ಯ'ನಾಮಕ ಋಜುವೆಂದು ಅನೇಕ ಅಪರೋಕ್ಷಜ್ಞಾನಿಗಳಿಂದ ಕೊಂಡಾಡಿಸಿಕೊಂಡವರು. ಅತ ಏವ ಇವರ ಕಾರುಣ್ಯವಾದರೋ ಎಂದು ಇಂಗದ ಕಲಿಮಲಧ್ವಂಸಾತ್ಮಕ ನಿರಂತರ ಅನುಗ್ರಹ ಪ್ರವಾಹರೂಪ. ಆದ್ದರಿಂದ ಇವರ ದಿವ್ಯನಾಮಸ್ಮರಣೆಯೇ ಸಜ್ಜನರಿಗೆ ಸರ್ವಾಭೀಷ್ಟ-ಪ್ರದವಾಗಿದೆ.

ರುಗ್ಮಿಣೀಶವಿಜಯ – ಇದು ಒಂದು ಸುಂದರ ಕಾವ್ಯ. ಕಾವ್ಯ ಎಂದಾಕ್ಷಣ ಸ್ವಕಪೋಲಕಲ್ಪಿತ ಎಂದು ಭಾವಿಸಬೇಕಾಗಿಲ್ಲ. ಈ ರೀತಿಯ ಭಾವನೆ ಅನ್ಯ ಕವಿಗಳಿಗೆ ಅನ್ವಯಿಸಬಹುದು. ಆದರೆ ಭಾವಿಸಮೀರ ವಾದಿರಾಜರು ಬರೆಯುವ - ಹೇಳುವ ಶಾಸ್ತ್ರಗ್ರಂಥಗಳಲ್ಲಾಗಲೀ, ಮಹಾಕಾವ್ಯಗಳಲ್ಲಾಗಲೀ ಅಂತಹ ಕಲ್ಪನೆಯ ಸೋಂಕಿಗೂ ಅವಕಾಶವಿಲ್ಲ. ಈ ಕಾವ್ಯದ ಶೈಲಿ ಈ ಕಾವ್ಯಕ್ಕೇ ಮೀಸಲು ಹೊರತು ಇನ್ನ್ಯಾವುದಕ್ಕೂ ಇಲ್ಲ. ಏಕೆಂದರೆ ರುಗ್ಮಿಣೀಶನಿಗೆ ಸಮನಾದವನೂ ಅವನೇ ಅಲ್ಲವೇ? ಹಾಗೆಯೇ ಈ ರುಗ್ಮಿಣೀಶವಿಜಯಕಾವ್ಯಕ್ಕೂ ಸರಿಸಾಟಿಯಾದ ಕಾವ್ಯ ಇದೇ ಹೊರತು ಮತ್ತೊಂದಿಲ್ಲ. ಎಂತಹ ಶಾಸ್ತ್ರೀಯಪ್ರಕ್ರಿಯಾ!! ಮಾಘಕವಿಯ ಶಿಶುಪಾಲವಧೆಗೆ ಪ್ರತಿಸ್ಪರ್ಧಿಯಾಗಿ ಕೇವಲ ೧೯ ದಿನಗಳಲ್ಲಿ ೧೯ ಸರ್ಗಾತ್ಮಕವಾಗಿ, ದೇವಭಾಷಾಸೌಂದರ್ಯದಿಂದ ದೇವತೆಗಳಿಗಾಗಿ ರಚಿಸಲ್ಪಟ್ಟ ಸುಮಧುರ ಸುಂದರ ಕಾವ್ಯ. ಪುಣೆಯ ರಾಜಸಭೆಯಲ್ಲಿ ಮಾನುಷ ಕವಿಗಳ ಮುಂದೆ 'ಕಾವ್ಯರಾಜ'ನೆಂದು ಬಿರುದು ಪಡೆದಿರುವುದಲ್ಲಿ ಏನು ಅತಿಶಯೋಕ್ತಿ? ದೇವತಾಗಮ್ಯವಾದ ಈ ಗ್ರಂಥ ದೇವಲೋಕದಲ್ಲೂ ಪೂಜಿತವಾಗಿದೆ. ಶ್ರೀಮದ್ಭಾಗವತದಶಮಸ್ಕಂಧಕ್ಕೆ ಸಂವಾದವೆನಿಸಿ ಇಂದಿಗೂ ಕಾವ್ಯರಾಜನೆನಿಸಿ ವಿದ್ವತ್ ಪ್ರಪಂಚದಲ್ಲಿ ಅಜೇಯವಾಗಿ ಉಳಿದಿರುವ ಕೃತಿ.

ಶ್ರೀಕೃಷ್ಣರುಗ್ಮಿಣೀದೇವಿಯರೇ ನಾಯಕ - ನಾಯಕಿಯ ಪ್ರಧಾನ ಭೂಮಿಕೆಯಲ್ಲಿ ಇರುವುದರಿಂದ ಈ ಮಹಾಕಾವ್ಯದ ಲಕ್ಷಣಾನುಸಾರವಾಗಿ ಈ ಗ್ರಂಥದಲ್ಲಿ ವರ್ಣಿಸಿರುವ ಶೃಂಗಾರಾದಿ ನವರಸಗಳೆಲ್ಲವೂ ಶ್ರೀಹರಿಯ ಭಕ್ತಿರಸದಲ್ಲಿ ಅಂತ್ಯವಾಗಿವೆ. ಸರ್ವಋತು-

ಗಳ ವರ್ಣನೆ, ವನಸೌಂದರ್ಯಗಳು, ವನವಿಹಾರಾದಿಗಳ ಕ್ರಮ, ನಾಯಕ-ನಾಯಕಿಯರ ಹಾವಭಾವ ವಿಲಾಸ ಕ್ರೀಡೆಗಳು ಮನೋಜ್ಞವಾಗಿ ವರ್ಣಿಸಲ್ಪಟ್ಟಿವೆ. ಸ್ತ್ರೀಸಹಜ-ಲಕ್ಷಣಗಳು, ಶೃಂಗಾರಾದಿ ಕ್ರೀಡೆಗಳ ಮನೋಮಯ ವಿಕಾರಾದಿ ಸರ್ವವಿಧ ಚೇಷ್ಟೆಗಳು ಹೀಗೆ ಎಲ್ಲವೂ ಶ್ರೀವಿಷ್ಣುಸರ್ವೋತ್ತಮತ್ವದಲ್ಲಿಯೇ ಕೊನೆಗೊಂಡು ಭಕ್ತಿರಸದಲ್ಲಿ ಭಕ್ತರನ್ನು ಮುಳುಗಿಸುತ್ತದೆ. ಲೋಕದ ನಾಯಕ-ನಾಯಕಿಯರ ಭ್ರೂಚಾಲನೆಯು ಕೇವಲ ಕಾಮದ ರತಿಕ್ರೀಡೆಗೆ ಎಡೆ ಮಾಡುತ್ತದೆ. ಆದರೆ ಈ ಕಾವ್ಯದ ನಾಯಕ-ನಾಯಕಿಯರಾದ ಶ್ರೀಕೃಷ್ಣ-ರುಗ್ಮಿಣೀದೇವಿಯರ ಭ್ರೂಚಾಲನೆಯಿಂದ ಜಗತ್ತಿನ ಸೃಷ್ಟಿ-ಸ್ಥಿತಿ- ಲಯಗಳಾಗುವುದೆಂಬ ವೇದಾಂತಪ್ರಕ್ರಿಯೆಯನ್ನು ಬಹು ಸುಂದರವಾಗಿ ಇಲ್ಲಿ ರಾಜರು ಬಿಡಿಸಿದ್ದಾರೆ. ಅಂಗ-ಶೃಂಗಾರಾದಿ ಸೌಂದರ್ಯದ ಎಲ್ಲ ರೀತಿಯ ವರ್ಣನೆಗೆ ಹ್ರಾಸ ಬಾರದಂತೆ ತತ್ವವಿಚಾರದ ಆವ್ಯಕದಲ್ಲಿಯೇ ವರ್ಣಿಸಿದ ಔಚಿತ್ಯ ಕಂಡುಬರು-ವುದು ಇದರ ವೈಶಿಷ್ಟ್ಯ. ತತ್ವವಿಚಾರವೂ ಸೌಂದರ್ಯರೂಪಕದಲ್ಲಿಯೇ ವರ್ಣಿಸ-ಲ್ಪಟ್ಟಿದೆ. ಇದೇ ರಾಜರ ಅಮಾನುಷದೈವಪ್ರತಿಭೆಯ ಪರಿಚಯವು. ಜೊತೆಗೆ ತರ್ಕ-ವ್ಯಾಕರಣ, ವೇದಾಂತಾದಿಶಾಸ್ತ್ರಾರ್ಥ ರೂಪುರೇಖೆಗಳಿಂದ ಕೂಡಿದ ಜಟಿಲ ಪ್ರಕ್ರಿಯೆ-ಗಳು ಕಾವ್ಯದೊಂದಿಗೆ ಪರಸ್ಪರವಾಗಿ ಹೆಣೆಯಲ್ಪಟ್ಟ ಅಪೂರ್ವಕೃತಿ ಇದಾಗಿದೆ. ಕಾವ್ಯಶಾಸ್ತ್ರದಿಂದ ವೇದಾಂತದ ಕ್ಲಿಷ್ಟಪ್ರಮೇಯಗಳನ್ನು ಲೋಕದಲ್ಲಿ ಸಾಧಿಸುವುದು ಕಂಡುಬಂದಿಲ್ಲ. ಆದರೆ ರುಗ್ಮಿಣೀಶವಿಜಯ ಕಾವ್ಯವು ಈ ಅದ್ಭುತಕಾರ್ಯವನ್ನು ಸಾಧಿಸಿದೆ. ಇದೇ ಇದರ ಅಸಾಧಾರಣಲಕ್ಷಣ.

ಶ್ರೀಕೃಷ್ಣನ ಅವತರಿಕೆಯ ಹಿನ್ನೆಲೆಯಿಂದ ಮೊದಲ್ಗೊಂಡು ಶ್ರೀಕೃಷ್ಣ ಬಾಲಲೀಲಾ, ವಿಲಾಸಪ್ರಕರಣಗಳು, ಭೂಭಾರ ಭೂತರಾದ ದೈತ್ಯಸಮೂಹದ ನಾನಾ ವಿಧ ವಧಾ-ಪ್ರಕರಣಗಳು, ದೈತ್ಯ-ದಾನವರ ಕೆಟ್ಟ ಯುಕ್ತಿಯ ಕಾರ್ಯಚಟುವಟಿಕೆಗಳೂ, ಅವರ ದುಷ್ಟಬುದ್ಧಿಯ ಪ್ರಕೋಪಗಳು ಎಲ್ಲವನ್ನೂ ವರ್ಣಿಸಲಾಗಿದೆ. ಮುಂದೆ ರುಗ್ಮಿಣೀದೇವಿ-ಯರ ವಿವಾಹ - ಅವತಾರದ ಪ್ರಯೋಜನ - ಸ್ವರಮಣತ್ವದ ವಿಶೇಷ ಗುಣ-ವ್ಯಂಜಕಾಂಶಗಳು, ಜಗತ್ತಿನ ಕಲ್ಯಾಣ ಇವೇ ಮುಂತಾದವುಗಳ ಆಧ್ಯಾತ್ಮಿಕ, ಅತ್ಯ-ಮೋಘ ವರ್ಣನೆಗಳು ಶಾಸ್ತ್ರೀಯಯುಕ್ತಿಗಳ ನಡುವೆ ಕಾವ್ಯಕುಂದಣದಲ್ಲಿ ಹುದುಗಿ, ಭಕ್ತರ ಹೃದಯದಲ್ಲಿ ಶ್ರೀಕೃಷ್ಣಭಕ್ತಿ ಸ್ಥಿರವಾಗಿ ನೆಲೆಗೊಳ್ಳುವಂತೆ ಇವೆ.

ಈ ಪರಿವ್ರಾಜಕ ಗ್ರಂಥದ ಮಹಿಮೆಯನ್ನು ಶ್ರೀಗುರುರಾಜರೇ ಪ್ರತಿಯೊಂದು ಸರ್ಗದ ಅಂತ್ಯದಲ್ಲಿ ವರ್ಣಿಸಿದ್ದಾರೆ.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಾದ್ಯೋ ಮುದಾಮ್॥**

## ಋಜುಗಣದ ದೇವಶ್ರೇಷ್ಠ ಭಾವಿಸಮೀರ ಶ್ರೀವಾದಿರಾಜರು

ಮುಂದಿನ ಕಲ್ಪದಲ್ಲಿ ವಾಯುಪದವಿಯನ್ನು ಅಲಂಕರಿಸುವ ಋಜುಗಣದ ದೇವಶ್ರೇಷ್ಠ ಲಾತವ್ಯಾಖ್ಯ ಋಜುದೇವತೆಯೇ ಶ್ರೀಮದ್ವಾದಿರಾಜತೀರ್ಥರು. ಈ ವಿಧ ದೃಢವಿಶ್ವಾಸವನ್ನು ಸಜ್ಜನ ಸಮುದಾಯದಲ್ಲಿ ಉತ್ಪಾದಿಸುವ ಮಹಾ ಅವತಾರಪುರುಷರು. ಕೇವಲ ಅತಿಶಯೋಕ್ತಿ ಅಲ್ಲವೆಂಬಂತೆ ಋಜುಲಕ್ಷಣಸ್ವರೂಪಸೂಚಕ ಸ್ವವಚನಗಳನ್ನೂ ತಮ್ಮ ಗ್ರಂಥಗಳಲ್ಲಿ ಸೂಚಿಸಿದ್ದಾರೆ. ಮಾತ್ರವಲ್ಲದೇ ಅನೇಕ ಶ್ರುತಿಗಳು - ಪುರಾಣಗಳು, ಪ್ರಕಾಶ-ನಾರದ-ವ್ಯೋಮಾದಿ ಸಂಹಿತಾದಿಗಳಲ್ಲೂ ಈ ವಿಷಯ ಪ್ರಸಿದ್ಧವಾಗಿದೆ. ಇಷ್ಟಲ್ಲದೇ ಅಪರೋಕ್ಷ ಜ್ಞಾನಿವರೇಣ್ಯರಾದ ಶ್ರೀಹರಿದಾಸಾಗ್ರಣಿಗಳ ಪದ-ಪದ್ಯ-ಸುಳಾದಿಗಳಿಂದಲೂ ಋಜುಗಣಕ್ಕೆ ಸೇರಿದ ಲಾತವ್ಯಾಂಶರೆಂದು ದೃಢೀಕರಿಸಲ್ಪಟ್ಟಿರುವವರೂ ಆಗಿದ್ದಾರೆ.

ಅನಾದಿಕಾಲತಃ ಸರ್ವದೋಷಹೀನೋರ್ಗುಣಾಧಿಕಾಃ।
ಸರ್ವಜೀವಗಣೇಭ್ಯೋ ಯೇ ತೇ ಹಿ ವಾಯುತ್ವಮಾಪ್ನುಯುಃ॥
ಬ್ರಹ್ಮತ್ವಯೋಗ್ಯಾ ಋಜವೋ ನಾಮ ದೇವಾಃ ಪೃಥಗ್ಗಣಾಃ।
ತೈರೇವಾಪ್ಯಂ ತತ್ಪದಂ ತು ನೈವಾನ್ಯೈಃ ಸಾಧನೈರಪಿ॥ (ಭಾ.ತಾ.ನಿರ್ಣಯ)

ಋಜುವೋ ನಾಮ ಯೇ ದೇವಾಃ ದೇವಾನಾಮಪಿ ದೇವತಾಃ।
ಅನಾದಿಕಾಲಭಕ್ತಾಶ್ಚ ಜ್ಞಾನಿನಸ್ತೇ ನ ಸಂಶಯಃ।
ವಿಶಿಷ್ಟಜ್ಞಾನಭಕ್ತ್ಯಾದೌ ಸರ್ವಜೀವನಿಯಾಮಕಾಃ॥ (ಭಾಗ.ತಾ.ನಿರ್ಣಯ)

ಬ್ರಹ್ಮತ್ವಯೋಗ್ಯಾ ಋಜವೋ ನಾಮ ದೇವಾಃ ಪ್ರಕೀರ್ತಿತಾಃ।
ತೇಽಪಿ ಪ್ರತ್ಯೇಕಶಃ ಸಂತಿ ಅನಂತಾ ಹಿ ಪೃಥಗ್ಗಣಾಃ॥ (ಗರುಡಪುರಾಣ.ಬ್ರ.ಕಾಂ.)

ಇತ್ಯಾದಿ ಪ್ರಮಾಣಗಳನ್ನು ವಿಮರ್ಶಿಸಿದರೆ, ನಿರ್ದೋಷತ್ವವು ಋಜುತ್ವಗಮಕಲಿಂಗಗಳಲ್ಲಿ ಒಂದು ಮತ್ತು ಮುಖ್ಯವಾದದ್ದೆಂದು ತಿಳಿಯುತ್ತದೆ. ಹಾಗೆಯೇ ಈ ಋಜುತ್ವವು ವಾಯು-ಬ್ರಹ್ಮಪದವಿಯನ್ನು ಹೊಂದುವ ಯೋಗ್ಯತೆ ಎಂಬುದಾಗಿಯೂ ಸ್ಪಷ್ಟವಾಗುತ್ತದೆ.

ಈ ಯೋಗ್ಯತೆಯು ಋಜುಜೀವರಲ್ಲಿ ಅನಾದಿಸಿದ್ಧವಾಗಿದ್ದು, ದ್ವಾತ್ರಿಂಶಲ್ಲಕ್ಷಣೋ-ಪೇತರಾಗಿ ಎಲ್ಲ ದೇವತೆಗಳಿಗಿಂತಲೂ ಉತ್ತಮರಾಗಿ, ಸರ್ವಜೀವನಿಯಾಮಕರಾಗಿದ್ದು, 'ಸಂತಿ ಅನಂತಾ ಹಿ' ಎಂಬಂತೆ ಇದ್ದಾರೆ. ಇಂತಹ ಋಜುಪಂಕ್ತಿಗೆ ಸೇರಿದ ಲಾತವ್ಯಾಂಶ-ಸಂಭೂತರೇ ಶ್ರೀಮದ್ವಾದಿರಾಜಗುರುಸಾರ್ವಭೌಮರು.

ಋಜುಗಳಿಗೆಲ್ಲಾ ಗೋತ್ರಶಬ್ದದಿಂದಲೇ ಖ್ಯಾತಿಯು. ಪ್ರಸಿದ್ಧ 'ಲಾತವ್ಯೋ ಗೋತ್ರಃ' ಎನ್ನುವ ಗೋಪಥಬ್ರಾಹ್ಮಣವಚನವು ಋಜುಸ್ವರೂಪವನ್ನು ವರ್ಣಿಸುತ್ತದೆ. ಹಾಗೆಯೇ ಶ್ರೀರಾಜರಿಗೂ ಗೋತ್ರಶಬ್ದವಾಚ್ಯತ್ವವು ಅಸಾಧಾರಣಲಕ್ಷಣವಾಗಿದೆ.

ಯೋ ಗೋಪಥಶ್ರೌತೇನ ಗೋತ್ರೇತಿ ಪ್ರಕೀರ್ತಿತಃ।
ತಂ ನಮಾಮಿ ವಾದೀಶಂ ಸಮಸ್ತಜೀವಸಾಧಕಮ್ ॥

ಯಥಾ ದೇವೌ ಬ್ರಹ್ಮವಾಯೂ ಅನ್ನಪ್ರಾಣಾಭಿಮಾನಿನೌ।
ಲಾತವ್ಯಸ್ತು ಸದಾ ನಿತ್ಯಂ ವರ್ತತೇ ಜೀವಸಾಧಕಃ॥

- (ಪ್ರಕಾಶಸಂಹಿತಾ, ಋಜು ಅಧ್ಯಾಯ)

ಇದರಂತೆ ಬೃಹತ್ಸಂಹಿತಾ - ವ್ಯಾಸಸಂಹಿತಾದಿ ವಚನಗಳೂ ತಿಳಿಸುತ್ತವೆ.

ತತ್ಪೂರ್ವಮಸ್ಯ ವಂಶೇ ತು ಋಜುಸ್ಥೋ ಹಿ ಸುರೇಶ್ವರಃ।
ವಾದಿರಾಜೋ ಯತಿರ್ಭೂತ್ವಾ ಚೈತದ್ವಿಸ್ತಾರಯಿಷ್ಯತಿ॥

ಹೀಗೆ ಪಾದ್ಮ- ಬೃಹದ್ವಚನ- ಬ್ರಹ್ಮವೈವರ್ತ- ವಾಮನಾದಿ ಪುರಾಣಗಳಲ್ಲೂ ಇದೆ. ''ಋಜುಗಳಾದ ಶ್ರೀವಾದಿರಾಜರು ಯತಿಗಳಾಗಿ ತತ್ವವಾದವನ್ನು ವಿಸ್ತಾರಗೊಳಿಸಿದ್ದಾರೆ ಎಂಬುದಾಗಿ ಪುರಾಣವಾಕ್ಯವು ಈಗಿರುವ ಪ್ರತಿಗಳಲ್ಲಿ ಲಭ್ಯವಿಲ್ಲ. ಹಾಗೂ ಏಕೆ ಕಲ್ಪಿತ-ವಾಗಿರಬಾರದು'' ಎಂಬ ಸಂಶಯಕ್ಕೆ ಅವಕಾಶವಿಲ್ಲ. ಕಾರಣ ಈ ಸಂಶಯವನ್ನು ಸ್ವತಃ ಶ್ರೀರಾಜರೇ ಪರಿಹರಿಸಿದ್ದಾರೆ. ಅವರು ತಮ್ಮ ಪ್ರಸಿದ್ಧ ಗ್ರಂಥವಾದ ''ವೈಕುಂಠವರ್ಣನೆ''ಯ ಆದಿಪದ್ಯದಲ್ಲಿಯೇ ಹೀಗೆ ಹೇಳಿಕೊಂಡಿದ್ದಾರೆ. ತತ್ವಸಾರದ ಸೊಬಗು ಧರೆಯೊಳು ವಿಸ್ತರಿಸಬೇಕೆಂದು, ಮುನಿಕುಲರತ್ನ ಶ್ರೀಗುರುವಾದಿರಾಜನು ಶ್ರುತಿಪುರಾಣಂಗಳ ಮೊತ್ತವನು ನೆರೆ ಮಥಿಸಿ' ಎಂಬುದಾಗಿ ಶ್ರೀವ್ಯಾಸರ ಬ್ರಹ್ಮಾಂಡಪುರಾಣದಲ್ಲಿ ಹೇಳಿದಂತೆ ತತ್ವವಾದವನ್ನು ವಿಸ್ತರಿಸಲು ಶ್ರೀವ್ಯಾಸರ ಅಣತಿಯಂತೆ ಧರೆಗಿಳಿದು ಬಂದ ವಿಷಯವನ್ನು 'ವಿಸ್ತರಿಸಬೇಕೆಂದು ಮುನಿಕುಲರತ್ನ ಶ್ರೀಗುರುವಾದಿರಾಜನು' ಎಂಬ ಪದವನ್ನೇ ಹಾಕಿ ಸ್ಪಷ್ಟ ಪಡಿಸಿದ್ದಾರೆ. ಶ್ರೀರಾಜರೇ ಸ್ವತಃ ಬ್ರಹ್ಮಾಂಡಪುರಾಣದ ವಾಕ್ಯವು

ಸತ್ಯವೆಂದೂ ಸೂಕ್ಷ್ಮವಾಗಿ ತಾವು ಋಜುಗಳೆಂದೂ ಶ್ರೀವ್ಯಾಸರ ಅಭಿಪ್ರಾಯವನ್ನು ಸಿದ್ಧ-ಪಡಿಸಿರುವುದನ್ನು ಕಾಣಬಹುದು. ಇದರಂತೆ ಇತರ ಪುರಾಣವಾಕ್ಯಗಳನ್ನೂ ತಮ್ಮ ಗ್ರಂಥಗಳಲ್ಲಿ ಒಂದಲ್ಲ ಒಂದು ಕಡೆ ಹೇಳಿ ಅದರ ಅರ್ಥವನ್ನೇ ನಿರೂಪಿಸಿ, ಪುರಾಣ-ವಾಕ್ಯಗಳ ಯಥಾರ್ಥವನ್ನು ಸ್ವತಃ ಅವರೇ ತಿಳಿಸಿದ್ದಾರೆ.

ಶ್ರೀಮದ್ವಾದಿರಾಜರು ತಮ್ಮ ಪ್ರಸಿದ್ಧ ಗ್ರಂಥವಾದ 'ನ್ಯಾಯರತ್ನಾವಲೀ'ಯಲ್ಲಿ

ಸುಂದೋಪಸುಂದೌ ಹಂತುಂ ಪ್ರಾಗ್ ಬ್ರಹ್ಮಾ ಚಕ್ರೇ ತಿಲೋತ್ತಮಾಮ್ ।
ಭಾವಿ ಬ್ರಹ್ಮಾ ತ್ವಿಮೌ ಚಕ್ರೇ ಯುಕ್ತಿತಿಲೋತ್ತಮಾಮ್ ॥

ಎಂಬುದಾಗಿ ತಮ್ಮ ಸ್ವರೂಪದ ಸ್ವಘೋಷವಾಕ್ಯವನ್ನು ಸೂಕ್ಷ್ಮವಾಗಿ ಪ್ರಕಟಿಸಿದ್ದಾರೆ.

ಕಲ್ಪಲತಾ ಗ್ರಂಥದಲ್ಲಿಯೂ – 'ಸರ್ವಜ್ಞಯಸಿ ಯಃ ಸ್ವೀಯಂ ಸರ್ವಜ್ಞಸ್ತಂ ನ ಚಾಪರಃ' ಎಂಬುದಾಗಿ ಕರೆದುಕೊಂಡಿದ್ದಾರೆ.

'ಸರಸಭಾರತೀವಿಲಾಸ' ಗ್ರಂಥದಲ್ಲಿ 'ಮಹಾಮತಿಃ' 'ಕುಲವೃದ್ಧೋ ಗುರು-ರ್ಮಮ' ಹಾಗೂ 'ಪಿತ್ರೇ ಧಾತ್ರೇ ಧಿಯಾಂ ಧಾತ್ರೇ ಜಾತೇ ಸತ್ರಾಯ ತೇ ನಮಃ' ಎಂದು ಪ್ರಯೋಗಿಸಿದ್ದಾರೆ.

'ಯುಕ್ತಿಮಲ್ಲಿಕಾ' ಗ್ರಂಥದಲ್ಲಿ 'ಅಹರ್ನಿಶಂ ಹಯಗ್ರೀವಸೇವೀ' ಎಂದಿದ್ದಾರೆ.

ತೀರ್ಥಪ್ರಬಂಧದಲ್ಲಿ 'ತ್ವಾಮೇವ ದೇಹಿ ಮೇ' ಎಂದು ಏಕಾಂತದಲ್ಲಿ ವರದ-ರಾಜನನ್ನು ಪ್ರಾರ್ಥಿಸಿದ್ದಾರೆ. ಅನೇಕ ಸ್ತೋತ್ರಗಳಲ್ಲಿ 'ಹೃದಧೀಮಲಮ್' ಎಂಬ ಪ್ರಯೋಗಗಳಿವೆ.

'ರುಗ್ಮಿಣೀಶವಿಜಯ'ದಲ್ಲಿ 'ಸದ್ವಾದಿರಾಜೋದಿತೇ' ಅಲ್ಲದೇ ಇನ್ನೂ ಅನೇಕ ಪ್ರಯೋಗಗಳಿವೆ.

'ಲಕ್ಷ್ಮೀಶೋಭಾನೆ'ಯಲ್ಲಿಯೂ 'ಲಕ್ಷ್ಮೀಕಾಂತನ ಕಂದನೆನಿಪ' 'ಶ್ರೀಚರಣ ಸಮೀಪದಲಿಟ್ಟು ಸಲಹಲಿ' ಎಂಬಿತ್ಯಾದಿ ಪ್ರಯೋಗಗಳು 'ಅಂತೇವಾಸಪ್ರವರಃ' ಎಂಬ ಅರ್ಥವನ್ನೇ ಕೊಡುತ್ತದೆ. ಹೀಗೆ ಭಾವಿಸಮೀರತ್ವದ ಸೂಚಕಗಳಿವೆ. ತಮ್ಮ ತಾಯಿಗೆ ತಾವೇ ಮಾಡಿಸಿಕೊಟ್ಟ ೩೨ ಲಕ್ಷಣೋಪೇತವಾದ ಸುಲಕ್ಷಣಪ್ರತಿಮಾವನ್ನು ಇಂದಿಗೂ ಶ್ರೀಮಠದಲ್ಲಿ ಕಾಣಬಹುದು.

ಶ್ರೀವಾದಿರಾಜರು ಅಪರೋಕ್ಷಜ್ಞಾನಿಗಳಾದ ಶ್ರೀಹರಿದಾಸಾಗ್ರಣಿಗಳ ಪದ- ಪದ್ಯ-ಸುಳಾದಿಗಳಿಂದಲೂ ಋಜುಗಣಕ್ಕೆ ಸೇರಿದ ಲಾತವ್ಯಾಂಶರೆಂದು ದೃಢೀಕರಿಸಲ್ಪಟ್ಟವರೂ ಆಗಿದ್ದಾರೆ.

೧. ಕಂಡೆ ಕಂಡೇ ರಾಜರ ಕಂಡೆ ಕಂಡೇ।
ಉದ್ದಂಡ ಮಾರುತ ಪದಕೆ ಬರುವವರ। (ನಿಜಪುರಂದರದಾಸರು)

೨. ಅಜಪದಕ್ಕೆ ಅರ್ಹನಾದ ಋಜುಗಣ ಜೀವೋತ್ತಮನ।
ನಿಜಪದಕೆ ಬರುವ ವಿಜಯವಿಟ್ಠಲನ ದಾಸ। (ವಿಜಯದಾಸರು)

೩. ಸುಜನಶಿರೋಮಣಿ ವಾದಿರಾಜರೆನುತ।
ನಿಜವಾಗಿ ಬೊಮ್ಮಾಂಡ ಪುರಾಣ ಸಾಧಕದಿಂದ
ಅಜಪದವಿ ಸಲ್ಲುವುದು ಲೇಶಸಂಶಯಬೇಡಿ
ನಿಜನಿಜವೆಂದು ನಿತ್ಯದಿ ಕೊಂಡಾಡಿ। (ವಿಜಯದಾಸರು)

೪. ಸಂಶಕ್ತನ ಲಾತವ್ಯನ ಮೇದಿನೀಸುರಖೇದಹರ ಪ್ರತಿವಾದಿಭೇದ-
ವಿನೋದಶೀಲನ ವಾದಿರಾಜರ ಭಜಿಸಿರೋ। (ಗೋಪಾಲದಾಸರು)

೫. ವಾದಿರಾಜ ವಾದದಲಿ ಶೂರ ...।
ಪೂತಾತ್ಮ ಜಗನ್ನಾಥವಿಟ್ಠಲನ ಖ್ಯಾತಿಯ ಸ್ತುತಿಸುವ ಶ್ವಾಸನಿಯಾಮಕ।
(ಜಗನ್ನಾಥದಾಸರು)

೬. ಘನ್ನ ಋಜುಗಣದೊಳಗೆ ಮಾನ್ಯನಾಗಿಹೆ ಸುಪ್ರಸನ್ನ ದ್ವಿಜಕುಲರನ್ನ।
ನಂಬಿದೆನು ನಿನ್ನ ಸಂತೈಸು ತವ ದಾಸನೆಂದೆನ್ನನು। (ವೇಣುಗೋಪಾಲದಾಸರು)

೭. ಶರಣಜನಪಾಲಕಗೆ ಸುಧರ್ಮಾದಿ ನಿರುತಗೆ।
ಉರಗಭೂಷಣನಿಂದ ಪೂಜ್ಯಗೆ। (ಶ್ರೀವ್ಯಾಸವಿಟ್ಠಲರು)

೮. ದೀನೋದ್ಧಾರಗೋಸುಗ ಹರಿಕಥಾಮೃತಸಾರವನು ರಚಿಸಿ।
ಸ್ಥೈರ್ಯಮಾನಸದಿಂದ ಭಾವಿಭಾರತೀಪತಿ ವಾದಿರಾಜರ।
ಭೂರಿಕೋಶಕ್ಕೊಪ್ಪಿಸುತಲಾಪಾರಮುದ ಪಡೆದ। (ಕಮಲಾಪತಿದಾಸರು)

## ಶ್ರೀಮದ್ವಾದಿರಾಜರ ಅವತಾರಸಮಾಪ್ತಿ :

ಪ್ರಪ್ರಥಮವಾಗಿ ಚತುರ್ಥಾಶ್ರಮಪ್ರಪಂಚದಲ್ಲಿ 'ಧವಳಗಂಗಾ ಸರೋವರ' ತೀರದಲ್ಲಿ ತಾವೇ ತಮ್ಮ ನಿರ್ಯಾಣದ ಮೊದಲೇ ತಮ್ಮ ಪಂಚ ಶಿಲಾಬೃಂದಾವನಗಳ ನಿರ್ಮಾಣ ಮಾಡಿಸಿ, ಮಧ್ಯದ ಬೃಂದಾವನದ ನಾಲ್ಕು ಪಾರ್ಶ್ವಗಳಲ್ಲಿ ಹನುಮಂತ - ಭೀಮ- ಮಧ್ವರ ಮತ್ತು ತಮ್ಮ ಪ್ರತೀಕವನ್ನು ಕೆತ್ತಿಸಿ ಸ್ಥಾಪಿಸಿದ್ದಾರೆ. ತತ್ವನ್ಯಾಸಾದಿ ಕ್ರಮಗಳಿಂದ ತತ್ತದ್ಭಗವದ್ರೂಪಗಳ ಪ್ರಾಣಪ್ರತಿಷ್ಠೆಯನ್ನೂ ತಾವೇ ಮಾಡಿ, ಅಭಿಷೇಕಾದಿಗಳಿಂದ ಈ ನಾಲ್ಕು ಪ್ರತೀಕಗಳ ಸಮಾನಾಂತರ ಪೂಜಿಸಿದ ಬೃಂದಾವನವನ್ನು ಇಂದೂ ದರ್ಶಿಸುತ್ತಿದ್ದೇವೆ. ಈ ರೀತಿ ಶ್ರೀರಾಜರಿಂದಲೇ ಪ್ರತಿಷ್ಠೆಗೊಂಡು ಆವಾಹಿಸಿದ ಬ್ರಹ್ಮದೇವರು, ಮಹಾವಿಷ್ಣು, ಮುಖ್ಯಪ್ರಾಣ, ಮಹಾರುದ್ರದೇವರು ಈ ನಾಲ್ಕು ವೃಂದಾವನ ವರ್ತುಲದ ಮಧ್ಯದ ಬೃಹತ್ ವೃಂದಾವನದಲ್ಲಿ ಸಶರೀರವಾಗಿ ಪ್ರವೇಶಮಾಡಿ, 'ಉಪಾಸತೇ ಹಯಗ್ರೀವಂ ಬೃಂದಾವನಗತಂ ಸದಾ' ಎಂಬಂತೆ ನಿತ್ಯಸನ್ನಿಧಾನವಿಟ್ಟಿರುವ ಶ್ರೀಸೋದಾಕ್ಷೇತ್ರವು 'ಹಯವದನಕ್ಷೇತ್ರ'ವೆನಿಸಿದೆ. ಮತ್ತೊಂದು ತೇಜೋ ರೂಪದಿಂದ ಸರ್ವಭಕ್ತಸಮೂಹ, ಜನರ ಸಮಕ್ಷಮದಲ್ಲಿ ಇಂದ್ರದೇವರಿಂದ ಕಳುಹಿಸಲ್ಪಟ್ಟ ದಿವ್ಯ ಸುವರ್ಣವಿಮಾನದಲ್ಲಿ ಕುಳಿತು ದೇವಗಂಧರ್ವಾದಿಗಳಿಂದ ಗೀಯಮಾನರಾಗಿ ಸತ್ಯಲೋಕವನ್ನು ಕುರಿತು ತೆರಳಿದ್ದು, ಇಂತಹ ಭಾವಿಸಮೀರ ಶ್ರೀಮದ್ ವಾದಿರಾಜರ ಮಹಿಮೆಗೆ ಎಣೆಯುಂಟೇ? ಇಂತಹವರ ಮಹಿಮೆಗಳು, ಅವರ ಗ್ರಂಥಗಳ ಗಾಂಭೀರ್ಯವನ್ನು ಸಂಪೂರ್ಣವಾಗಿ ತಿಳಿಯಲು ಸರ್ವಜೀವಾಭಿಮಾನಿ ಶ್ರೀವಿಷ್ಣುವಾಹನ ಗರುಡದೇವರೇ ಉತ್ತಮಾಧಿಕಾರಿಯು. ಇವರ ಅಗಾಧಮಹಿಮೆಯನ್ನು ಗಾನಮಾಡಲು ಸಹಸ್ರಜಿಹ್ವೆಯುಳ್ಳ ಶೇಷದೇವರೇ ಸಮರ್ಥರು. ಇಂತಹ ವಾದಿರಾಜರ ಒಲಿಮೆ - ನಲಿವು ಭಕ್ತ ಸಮೂಹದ ಮೇಲೆ ಸದಾ ಇರಲಿ ಎಂದು ಪ್ರಾರ್ಥಿಸುತ್ತೇನೆ.

ಇಂತಹ ಭಾವಿಸಮೀರ ಶ್ರೀಮದ್ವಾದಿರಾಜತೀರ್ಥರ ಭವ್ಯ ಕಾವ್ಯಗ್ರಂಥವಾದ ಶ್ರೀರುಗ್ಮಿಣೀಶವಿಜಯದ ಪ್ರತಿಪದಾರ್ಥ, ಹಾಗೂ ಭಾವಾನುವಾದವನ್ನು ಮಾಡಿ ಲೋಕಕ್ಕೆ ಅನುಗ್ರಹಮಾಡುತ್ತಿರುವ ಶ್ರೀಅದಮಾರು ಮಠಾಧೀಶರಾದ ಶ್ರೀ ಶ್ರೀ ವಿಶ್ವಪ್ರಿಯತೀರ್ಥರ ಚರಣಕಮಲಕ್ಕೆ ಅನಂತ ನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಶ್ರೀಸೋದಾಮಠಾಧೀಶ್ವರರಾದ ಪೂಜ್ಯ ಶ್ರೀಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರ ಚರಣಾರವಿಂದಗಳಲ್ಲಿ ಅನಂತ ಸಾಷ್ಟಾಂಗನಮಸ್ಕಾರಗಳನ್ನು ಸಲ್ಲಿಸುತ್ತೇನೆ.

ಈ ಮಹತ್ತರವಾದ ಅನುವಾದಗ್ರಂಥವನ್ನು ತಮ್ಮ ಮಠದ ಅಂಗಸಂಸ್ಥೆಯಾದ 'ತತ್ವಸಂಶೋಧನ ಸಂಸತ್' ಸಂಸ್ಥೆಯಿಂದ ಪ್ರಕಟಮಾಡಿ ಲೋಕಾರ್ಪಣೆ ಮಾಡುತ್ತಿ-ರುವ; ಹಾಗೂ ಈ ಜ್ಞಾನಕಾರ್ಯದಲ್ಲಿ ನನಗೆ ಶ್ರೀಗುರುರಾಜರ ಮಹಿಮೆಗಳ ಲೇಶವರ್ಣನಾ ಮೂಲಕ ಮಾಡಿದ ಈ ಲೇಖನ ಯಜ್ಞಕ್ಕೆ ಅವಕಾಶ ಮಾಡಿಕೊಟ್ಟ ಪಲಿಮಾರು ಮಠದ, ಹಾಗೂ ಸಂಸತ್ತಿನ ಕುಲಪತಿಗಳಾದ ಶ್ರೀಶ್ರೀವಿದ್ಯಾಧೀಶತೀರ್ಥ ಶ್ರೀಪಾದಂಗಳವರ ಚರಣಾರವಿಂದಗಳಲ್ಲಿ ಸಾಷ್ಟಾಂಗ ಪ್ರಣಾಮಗಳು.

'ತತ್ವಸಂಶೋಧನಸಂಸತ್' ಶ್ರೀರಾಜರ ಇಂತಹ ಅದ್ಭುತವಾದ ಕಾವ್ಯವನ್ನು ಕನ್ನಡಾನುವಾದ ಸಹಿತ ಪ್ರಕಟನೆಯನ್ನು ಮಾಡುತ್ತಿರುವುದು ಶ್ಲಾಘನೀಯ. ಈ ಸಂಸ್ಥೆಯ ಎಲ್ಲ ಪದಾಧಿಕಾರಿಗಳಿಗೂ ಅಭಿನಂದನೆಗಳು. ಇದೇ ರೀತಿಯ ಉತ್ತಮ ಕೃತಿ-ಗಳು ಬಹುಸಂಖ್ಯೆಯಲ್ಲಿ ಸಂಸ್ಥೆಯಿಂದ ಹೊರಬಂದು ಭಕ್ತವರ್ಗದ ತೃಷೆಯನ್ನು ತಣಿಸಲಿ ಎಂದು ರಜತಪುರಪೀಠಾಧೀಶನಲ್ಲಿ ಪ್ರಾರ್ಥಿಸುತ್ತಾ ವಿರಮಿಸುತ್ತೇನೆ.

ಇತಿ ಶಮ್,

ವಿದ್ವಾನ್ ಶ್ರೀ.ಕೆ.ಎಲ್. ಪುಷ್ಕರಾಚಾರ್ಯ,
ವೇದವಾರಿಧಿ, ಶಾಸ್ತ್ರನಿಧಿ,
ಎಂ.ಎ. ಆರ್.ಬಿ.ವಿ.
ಕ್ಯಾತಸಂದ್ರ , ತುಮಕೂರು.

ಭಾವಿಸಮೀರ ಶ್ರೀವಾದಿರಾಜಗುರುವರೇಣ್ಯರ

# ಶ್ರೀರುಗ್ಮಿಣೀಶವಿಜಯ

## ಕಾವ್ಯಲಕ್ಷಣಗಳು

ಹೂವಿನ ಕೆರೆಯಲ್ಲಿ ಹೂವಿನಂತೆ ಗೌರೀದೇವಿ ಭಟ್ಟ ದಂಪತಿಗಳಲ್ಲಿ ವರಾಹಮೂರ್ತಿ ಎಂಬ ಹೆಸರಿನಿಂದ ಉದಿಸಿದ ಶ್ರೀವಾದಿರಾಜರು ತಮ್ಮೆದೆಯ ಮಾನಸಸರೋವರದಲ್ಲಿ ಅರಳಿ ಬಂದ 'ಶ್ರೀರುಗ್ಮಿಣೀಶವಿಜಯ'ವೆಂಬ ಮಹಾಕಾವ್ಯ ಕಮಲವನ್ನು ರುಗ್ಮಿಣೀಶನ ಪಾದಕಮಲಕ್ಕೆ ಸಮರ್ಪಿಸಿದರು.

ಶ್ರೀಕೃಷ್ಣನೆಂಬ ಕ್ಷೀರಸಾಗರ ತನ್ನವರಿಗೆ ಅಮೃತರಸವನ್ನು ಉಣಿಸುತ್ತದೆ (ಕೃಷ್ಣ-ದುಗ್ಧಾಂಬುಧಿಃ ಸ್ವೀಯಾನಾಮಮೃತಂ ಪ್ರಯಚ್ಛತಿ) ಎಂದು ಮಂಗಳಾಚರಣೆಯಲ್ಲಿ ಹೇಳುವ ಮೂಲಕ ಈ ಕಾವ್ಯವೆಂಬ ಕ್ಷೀರಸಾಗರವು ಸಹೃದಯರಿಗೆ ಆನಂದಾಮೃತರಸವನ್ನೂ ತತ್ತ್ವಜ್ಞಾನಾಮೃತರಸವನ್ನೂ ಉಣಿಸುತ್ತದೆ ಎಂದು ಪರ್ಯಾಯವಾಗಿ ಹೇಳಿದ್ದಾರೆ, ರಾಜರು. ಅಲೌಕಿಕ ಪರಮಾನಂದವನ್ನೂ ತತ್ತ್ವಜ್ಞಾನವನ್ನೂ ನೀಡುವುದೇ ಸತ್ಕಾವ್ಯ-ಲಕ್ಷಣವೆಂದು ಆಲಂಕಾರಿಕರು ಹೇಳುತ್ತಾರೆ ತಾನೇ?

'ಕಾವ್ಯಂ .... ಸದ್ಯಃ ಪರನಿರ್ವೃತಯೇ
ಕಾಂತಾ ಸಮ್ಮಿತತಯೋಪದೇಶಯುಜೇ ...'

ವಾದಿರಾಜರ ಕಾಲದಲ್ಲಿ ಕಾವ್ಯವೆಂದರೆ ಮಾಘನ ಶಿಶುಪಾಲವಧ ಕಾವ್ಯವೇ. ಅದಕ್ಕೆ ಸಾಟಿಯೇ ಇಲ್ಲ ಎನ್ನುವ ಭಾವನೆ ಜನರಲ್ಲಿ ರೂಢಮೂಲವಾಗಿತ್ತು. ಪೂನಾ ಪಟ್ಟಣಕ್ಕೆ ಸಂಚಾರತ್ವೇನ ರಾಜರು ಹೋಗಿದ್ದಾಗ ಅಲ್ಲಿ ಮಾಘಕಾವ್ಯವನ್ನು ಆನೆಯ ಮೇಲೆ ಹೊರಿಸಿ ಮೆರವಣಿಗೆ ಮಾಡಲಿರುವರೆಂಬ ವಾರ್ತೆ ಕೇಳಿ ಬಂದಿತು. ರಾಜರು ಹೇಳಿದರು ''ನಮ್ಮಲ್ಲಿ ಒಂದು ಕಾವ್ಯವಿದೆ; ಮಾಘಕಾವ್ಯವನ್ನೂ ಮೀರಿಸುವಂಥದ್ದು. ಇಂದಿನಿಂದ ಇಪ್ಪತ್ತೇ ದಿನದಲ್ಲಿ ಅದನ್ನು ತರಿಸಿಕೊಡುತ್ತೇವೆ. ನೋಡಿ, ಯಾವ ಕಾವ್ಯಕ್ಕೆ ಮೆರವಣಿಗೆ ಎಂಬುದನ್ನು ಸಹೃದಯರೇ ನಿರ್ಧರಿಸಲಿ' ಎಂದು. ರುಗ್ಮಿಣೀಶವಿಜಯವಿನ್ನೂ ಆಗ ರಚನೆಯೇ ಆಗಿರಲಿಲ್ಲ. ರಾಜರು ಅಂದಿನಿಂದ ಪ್ರತಿದಿನ ಸಂಸ್ಥಾನದ ದೇವರ ಪೂಜೆಯಾದ ಬಳಿಕ ಗಂಧಾಕ್ಷತಧಾರಣಕಾಲದಲ್ಲಿ ಪುಂಖಾನುಪುಂಖವಾಗಿ ಸುಂದರ ಶ್ಲೋಕಗಳ ಅದ್ಭುತವಾದ ಒಂದು ಹೊಸ ಕಾವ್ಯರಚನೆ ಮಾಡಿ ಬರೆಸಿದರು. ದಿನಕ್ಕೊಂದು ಸರ್ಗದಂತೆ ಹತ್ತೊಂಬತ್ತು ದಿನಗಳಲ್ಲಿ ಹತ್ತೊಂಬತ್ತು ಸರ್ಗಗಳ ರುಗ್ಮಿಣೀಶವಿಜಯ ಮಹಾಕಾವ್ಯ ನಿರ್ಮಾಣ-ವಾಯಿತು. ಅದನ್ನು ರಾಜರು ಕಾವ್ಯನಾಯಕನಾದ ರುಗ್ಮಿಣೀಶನಿಗೆ ಸಮರ್ಪಿಸಿದರು.

ಅದನ್ನು ಕಂಡಾಗ ಸಹೃದಯರಿಗೆ ಮೈರೋಮಾಂಚನವಾಯಿತು. ಉದಾತ್ತ ನಿರ್ಮಲ ಪ್ರಮೇಯರತ್ನಗಳಿಂದಲೇ ತುಂಬಿದ ದಿವ್ಯರಸಲೋಕವೇ ಅದರೊಳಗೆ ಕಂಡು ಬಂದಿತು. ರಾಜರು ಪ್ರತಿಸರ್ಗದ ಕೊನೆಯಲ್ಲಿ ಹೇಳಿದ ಈ ಮಾತು ಅಕ್ಷರಶಃ ನಿಜವಾಯಿತು –

ರೋಮ್ಣಾಂ ಹರ್ಷಣಕಾರಿಣೆ ಶ್ರವಣತಃ ಪಾಪೌಘವಿಧ್ವಂಸಿನೀ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ।

ಮಾಘಕಾವ್ಯದಲ್ಲಿ ಕಾಳಿದಾಸನ ಉಪಮೆ ಇದೆ. ಭಾರವಿಯ ಅರ್ಥಗೌರವವಿದೆ ಮತ್ತು ದಂಡಿಯ ಪದಲಾಲಿತ್ಯವಿದೆ ಎಂದು ಮೂರೂ ಗುಣಗಳುಳ್ಳ ಕಾವ್ಯವೆಂದರೆ ಅದೊಂದೇ ಜನ ಪ್ರಶಂಸೆ ಮಾಡುತ್ತಿದ್ದರು –

ಉಪಮಾ ಕಾಲಿದಾಸಸ್ಯ ಭಾರವೇರರ್ಥಗೌರವಮ್ ।
ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋಗುಣಾಃ ॥

ಆದರೆ 'ಕೇವಲ ಕವಿಗಳು ಕುರಿಗಳು; ಪಂಡಿತಕವಿಗಳೇ ನಿಜವಾಗಿಯೂ ಕವಿಗಳು' ಎನ್ನುವ ತಪ್ಪು ಕಲ್ಪನೆಯಿಂದ, ಆವಯಃ ಕೇವಲ ಕವಯಃ ಕವಯಸ್ತು ಪಂಡಿತಾಃ ಕವಯಃ ಎನ್ನುತ್ತ ಮಾಘ ತನ್ನ ಕಾವ್ಯದಲ್ಲಿ ಉದ್ದಕ್ಕೂ ತನ್ನ ಶಬ್ದಪಾಂಡಿತ್ಯವನ್ನು ಮೆರೆಸುತ್ತಾನೆ. ಅದರಲ್ಲಿ ಕಾವ್ಯಸೌಂದರ್ಯವನ್ನು ಮೆರೆಸುತ್ತಾನೆ. ಹೊಸಹೊಸತಾಗಿ ಯಾರಿಗೂ ತಿಳಿಯದಿದ್ದ ಶಬ್ದಗಳನ್ನೇ ಪ್ರದರ್ಶಿಸಲು ಹೊರಟ ಭಟ್ಟಿಕಾವ್ಯ ಪಾಣಿನಿ-ವ್ಯಾಕರಣದ ಅಧ್ಯಯನಕ್ಕೆ ಒಂದು ಕೈಪಿಡಿಯಾಯಿತು. ಕಾವ್ಯವಾಗಿ ಉಳಿಯಲಿಲ್ಲ. ಹಾಗೇ ಮಾಘಕಾವ್ಯದಲ್ಲಿಯೂ ಕವಿಗೆ ತನ್ನ ಶಬ್ದಪಾಂಡಿತ್ಯವನ್ನು ತೋರುವ ಚಪಲ ಎದ್ದು ಕಾಣುವಂತಿದೆ.

'ನವ ಸರ್ಗಗತೇ ಮಾಘೇ ನವಶಬ್ದೋ ನ ವಿದ್ಯತೇ'

'ಮಾಘಕಾವ್ಯದ ನವಸರ್ಗ ಅಂದರೆ ಒಂಭತ್ತು ಸರ್ಗ ಓದಿದರೆ ಸಾಕು, ಮುಂದೆ ಸಂಸ್ಕೃತಭಾಷೆಯಲ್ಲಿ ಅವನಿಗೆ ನವಶಬ್ದಗಳೇ ಅಂದರೆ ಹೊಸ ಶಬ್ದಗಳೇ ಕಲಿಯಲಿಕ್ಕೆ ಇರುವುದಿಲ್ಲ. ಎಲ್ಲ ಶಬ್ದಗಳೂ ತಿಳಿದು ಹೋಗುವುದರಿಂದ ಹಳೆಯವೇ ಆಗುತ್ತವೆ' ಎಂದು ಮಾಘಕಾವ್ಯಕ್ಕೆ ಒಂದು ಹೆಗ್ಗಳಿಕೆ ಇದೆ.

ಆದರೆ ಕಠಿನ ಶಬ್ದಪಾಂಡಿತ್ಯಕ್ಕೆ ಕಾವ್ಯಸೌಂದರ್ಯವನ್ನು ಮುಚ್ಚಿ ಹಾಕುವಂತಿರ-ಬಾರದು ಎಂದು ರಾಜರು ಮೃದು ಸರಸ ಕಾವ್ಯವನ್ನು ಬರೆದರು. 'ಕಠಿನ ಕಾವ್ಯವೆಂದೂ ಮೃದು ಸರಸ ಕಾವ್ಯದ ಮುಂದೆ ಮೆರೆಯಲಾರದು' ಎಂದರು. ಕಾವ್ಯದ ಜೀವಾಳವಾದ,

ಆತ್ಮವೆನಿಸಿದ ರಸ ಸುಲಭವಾಗಿ ಅಪ್ರಯತ್ನವಾಗಿ ಪ್ರತೀಕವಾಗುವಂತಿದ್ದರೆ ಮಾತ್ರ ಆ ಕಾವ್ಯ ಉತ್ತಮವೆನಿಸುತ್ತದೆ. ಚಾಣೂರಮುಷ್ಟಿಕರೆಂಬ ಮಲ್ಲರ ಕಠಿನವಾದ ಮುಷ್ಟಿಪ್ರಹಾರಗಳಿಂದ ಮೃದುವಾದ ಶ್ರೀಕೃಷ್ಣನ ಮೈಯ ಮೇಲೆ ಏನೂ ಪರಿಣಾಮವಾಗಲಿಲ್ಲ ಎಂದು ವರ್ಣಿಸುವ ಸಂದರ್ಭದಲ್ಲಿ ರಾಜರು ಅರ್ಥಾಂತರನ್ಯಾಸಾಲಂಕಾರದ ಭಾಷೆಯಲ್ಲಿ ಹೇಳುತ್ತಾರೆ –

ಮೃದುಸರಸಕವೇಃ ಪುರಃ ಕಿಮೀಡ್ಯಾ
ಕಠಿನಪದಪ್ರಿಯಕಾವ್ಯಕಾರಶೀಲಾ - (೧೧/೪೪)

ಹಾಗಾದರೆ ಮಾಘ ಕಾವ್ಯವನ್ನು ಮೀರಿಸುವ ಕಾವ್ಯ ಬರೆದು ಪ್ರಸಿದ್ಧಿಗೆ ಬರಬೇಕೆನ್ನುವ ಲೌಕಿಕಫಲದ ಉದ್ದೇಶದಿಂದ ರಾಜರು ಕಾವ್ಯ ಬರೆದರೇ? ಎನ್ನುವ ಸಂದೇಹ ಇಲ್ಲಿ ಸಹಜ. ಆದರೆ ಇದು ಕೇವಲ ನಿಮಿತ್ತಮಾತ್ರ ಎಂದು ತಿಳಿಯಬೇಕು. ಕಾವ್ಯದ ಕೊನೆಯಲ್ಲಿ ರಾಜರು –

ಕೃಷ್ಣಃ ಕಾವ್ಯಕೃತೇ ಸ್ವಹಸ್ತಕಮಲಚ್ಛತ್ರಂ ಪ್ರದದ್ಯಾತ್ ಪ್ರಭುಃ। (೧೯/೩೯)

ಎಂದು ಹೇಳುತ್ತ ಕೃಷ್ಣನ ಅನುಗ್ರಹ ಒಂದನ್ನೇ ಬಯಸಿ ತಾವು ಕಾವ್ಯ ಬರೆದೆವು ಎನ್ನುತ್ತಾರೆ. ಆದಿಯ ಮಂಗಳಾಚರಣೆಯಲ್ಲಿಯೂ –

ಮಥಿತೋ ಯಃ ಕೃಷ್ಣದುಗ್ಧಾಂಬುಧಿಃ
ಸ್ವೀಯಾನಾಮಮೃತಂ ಪ್ರಯಚ್ಛತಿ

ಎನ್ನುತ್ತ, ತಾನು ಮಾಡಿರುವ ವೇದಾಂತವಿಚಾರದ ಫಲರೂಪವಾಗಿ ಅಮೃತದಂತಿರುವ ಈ ಕಾವ್ಯ ಅಪ್ರಯತ್ನವಾಗಿ ಮೂಡಿ ಬಂದಿದೆ. 'ಮಜ್ಜಿಗೆಯೊಳಗಿನ ಬೆಣ್ಣೆಯಂತೆ ತೇಲಿ ಬಂದಿದೆ' ಎಂದು ಪರ್ಯಾಯವಾಗಿ ಹೇಳಿದ್ದಾರೆ. ಹಯವದನನ ದಯಾಸಾಗರದಲ್ಲಿ ಉದಿಸಿ ಬಂದ ಅಣಿಮುತ್ತಿನಂಥ ಮಾತುಗಳೇ ತುಂಬಿದ ಕಾವ್ಯವಿದೆಂದೂ ಹೇಳಿದ್ದಾರೆ.

ಅಶ್ವಗ್ರೀವದಯಾಪಯೋಬ್ಧಿಫಲಿತ-
ಪ್ರಾಗ್ರ್ಯೋಕ್ತಿರತ್ನೋಜ್ಜ್ವಲಮ್ ॥

ಇದು ಸರ್ವಥಾ ಅತಿಶಯೋಕ್ತಿಯಲ್ಲ.

'ವೇದಾಂತಶಾಸ್ತ್ರವಿಚಾರಮಥನದ ಅಮೃತಫಲವೇ ಈ ಕಾವ್ಯ' ಎಂದು ಆದಿಯ ಮಂಗಳಾಚರಣೆಯಲ್ಲಿ ಹೇಳುತ್ತಾ ಈ ಕಾವ್ಯದಲ್ಲಿ ರಾಜರು ಅದ್ವೈತ ಮುಂತಾದ

ಪರಮತಗಳ ನಿರಾಕರಣೆಯನ್ನು ಕಾವ್ಯಭಾಷೆಯಲ್ಲಿ ಅನಾಯಾಸವಾಗಿ ತಾವು ಮಾಡುತ್ತಿದ್ದೇವೆ ಎನ್ನುವುದನ್ನು ಸೂಚಿಸಿದ್ದಾರೆ. ಶ್ರೀಕೃಷ್ಣನಿಗೆ ದಾನವರನ್ನು ಮರ್ದಿಸು-ವುದರಲ್ಲಿ ಏನೂ ಆಯಾಸವಿಲ್ಲ. ಹಾಗೇ ಶ್ರೀಕೃಷ್ಣಕಾವ್ಯದಲ್ಲಿ ಪರಮತಗಳನ್ನು ನಿರಾಸ-ಮಾಡುವಲ್ಲಿ ರಾಜರಿಗೂ ಏನೂ ಆಯಾಸ ಕಾಣುತ್ತಿಲ್ಲ, ಉದಾ –

ಸಂಪ್ರೇಷ್ಯ ಶೈವೀಂ ಪ್ರಥಮಂ ಗದಾಂ ಯೋ
ಜರಾಭಿಧಾನಾಂ ಜನನೀಂ ಜಘಾನ ।
ಜಾತ್ಯುತ್ತರೇಣೈವ ಪರಾಜಿತೋಽಭೂದ್
ಆತ್ಮೋದಿತವ್ಯಾಹತಿಹೇತುನಾಽಸೌ ॥

ಜರಾಸಂಧ ನಾರದರಲ್ಲಿ ಕೇಳಿದ, 'ಇಲ್ಲಿಂದ ಕೃಷ್ಣನ ಮಥುರೆ ಎಷ್ಟು ದೂರದಲ್ಲಿದೆ?' 'ನೂರು ಯೋಜನ' ಎಂದರು ನಾರದರು.

ಒಡನೆ ಜರಾಸಂಧ ತನ್ನ ಗಿರಿವ್ರಜ ನಗರದಿಂದಲೇ ಆಧುನಿಕಖಂಡಾಂತರಕ್ಷಿಪಣಿ-ಯಂತಿರುವ ಅಮೋಘವಾದ ಶೈವಗದೆಯನ್ನು ಬೀಸಿ ನೂರು ಯೋಜನ ದೂರಕ್ಕೆ ಎಸೆದ. ಆದರೆ ಆ ಗದೆ ಮಥುರಾಪಟ್ಟಣದ ಮೇಲೆ ಬೀಳದೇ ಅದರ ಸಮೀಪದಲ್ಲಿ ಸಂಚರಿಸುತ್ತಿದ್ದ ಜರಾ ರಾಕ್ಷಸಿಯ ತಲೆಯ ಮೇಲೆಯೇ ಬಿದ್ದು ಪುಡಿ ಮಾಡಿಬಿಟ್ಟಿತ್ತು. ಏಕೆಂದರೆ ಮಥುರೆ ಗಿರಿವ್ರಜದಿಂದ ನೂರೊಂದು ಯೋಜನ ದೂರದಲ್ಲಿತ್ತು! 'ಸ್ವಲ್ಪ ಹೆಚ್ಚು ಅಥವಾ ಕಡಿಮೆ ನೂರು ಯೋಜನ' ಎಂಬ ಅಭಿಪ್ರಾಯದಿಂದ ನಾರದರು 'ನೂರು ಯೋಜನ' ಎಂದಿದ್ದರು. ಹೀಗೆ ಜರಾಸಂಧ ತನ್ನ ತಾಯಿಯಾದ ಜರಾರಾಕ್ಷಸಿಯನ್ನೇ ಕೊಂದು ಬಿಟ್ಟ. ವಾಕ್ಯಾರ್ಥದಲ್ಲಿ ತಾನು ತನ್ನ ಪಕ್ಷಕ್ಕೇ, ತನ್ನ ಸಿದ್ಧಾಂತಕ್ಕೇ ವಿರೋಧವಾಗುವ ರೀತಿಯಲ್ಲಿ ವಾದಿಸಿದರೆ ಅದು 'ಜಾತ್ಯುತ್ತರ'ವೆನಿಸುತ್ತದೆ. ಆತ ಪರಾಜಿತನಾಗುತ್ತಾನೆ ತಾನೇ? ಕೃಷ್ಣನನ್ನೂ ಅವನ ಮಥುರೆಯನ್ನೂ ನಾಶಪಡಿಸಲು ಹೊರಟ ಜರಾಸಂಧ ತನ್ನ ತಾಯಿಯೇ ಆದ ಜರೆಯನ್ನು ಕೊಂದುದು ಅವನ ಪರಾಜಯ ನಿರ್ಣಯಕ್ಕೆ ಕಾರಣವಾಯಿತು. ಏಕೆಂದರೆ ಅವನಿಗೆ ಶಿವನಿತ್ತಿದ್ದ ಅಮೋಘವಾದ ಗದೆ ಹೀಗೆ ವ್ಯರ್ಥವಾಯಿತು.

ಸಂವಾದಂ ಕಿಲ ಕೇಽಪಿ ಬಭ್ರುರಪರೇಽನುಕ್ತಿಂ ಶರೈಸ್ತಾಡಿತಾ
ನಿರ್ಯಾಂತಃ ಕಟಕಾನ್ನಿರುಂಧತಿ ನಿಜೇ ಕ್ರುದ್ಧಾ ವಿರೋಧಂ ಪರೇ ।
ಧ್ವಸ್ತಾಃ ಕೇಚಿದಸಂಗತಿಂ ನಿಜಜನೈಃ ಸರ್ವೇ ಜಯೈರ್ನ್ಯೂನತಾ-
ಮಾಧಿಕ್ಯಂ ಹತಿಭಿಃ ಪರಾಜಿತಮಭೂದಿತ್ಥಂ ತದದ್ವೈತಿವತ್ ॥೧೦॥

ಜರಾಸಂಧನ ಸೈನ್ಯದಲ್ಲಿ ಕೆಲವರು ಸೋಲೊಪ್ಪಿಕೊಂಡರು. ಇದು ವಾದದಲ್ಲಿ ಬರುವ 'ಸಂವಾದ' ಎಂಬ ದೋಷ. ಬಾಣಗಳ ಏಟಿನಿಂದ ಏನೂ ಮಾತನಾಡದೇ ಅಶಕ್ತರಾದರು. ಇದು 'ಅನುಕ್ತಿ'. ಪಲಾಯನ ಮಾಡುತ್ತಾ ತಮ್ಮವರು ತಡೆದರೆ ವಿರೋಧ ಮಾಡಿದರು. ಇದು 'ವಿರೋಧ'. ತಮ್ಮವರೊಡನೇ ಸೇರಿಕೊಳ್ಳದೇ ಹೋದರು. ಇದು 'ಅಸಂಗತಿ'. ಎಲ್ಲರೂ ಜಯದಿಂದ ವಂಚಿತರಾದರು. ಇದು 'ನ್ಯೂನತೆ'. ಎಲ್ಲರೂ ಅಧಿಕವಾಗಿ ಏಟು ತಿಂದರು. ಇದು 'ಆಧಿಕ್ಯ'. ಹೀಗೆ ಅದ್ವೈತಿಗಳು ದ್ವೈತಿಗಳ ಮುಂದೆ ವಾದಕ್ಕೆ ನಿಂತರೆ 'ಸಂವಾದ' ಮುಂತಾದ ದೋಷಗಳಿಂದಾಗಿ ಪರಾಜಿತರಾಗುವಂತೆ ಜರಾಸಂಧನ ಸೈನಿಕರೂ ಶ್ರೀಕೃಷ್ಣನ ಮುಂದೆ ಯುದ್ಧಕ್ಕೆ ನಿಂತು ಪರಾಜಿತರಾದರೆಂದು ಶ್ಲೇಷೆಯಿಂದ ವಾದಿರಾಜರು ಯುದ್ಧವನ್ನು ವಾದಪ್ರಕ್ರಿಯೆಯಂತೆ ಅಲಂಕಾರಿಕವಾಗಿ ಬಣ್ಣಿಸಿ ವೀರರಸವನ್ನು ಕಾವ್ಯದಲ್ಲಿ ಸುಲಭವಾಗಿ ಸಹೃದಯರ ಹೃದಯದಲ್ಲಿ ಉಕ್ಕುವಂತೆ ಮಾಡಿದ್ದಾರೆ. ಆಧುನಿಕ ವಿಮರ್ಶಕರು ಹೆಚ್ಚಾಗಿ ಪರಮತದಲ್ಲಿ ಶ್ರದ್ಧೆ ಉಳ್ಳವರಾದ್ದರಿಂದ ಅವರ ಮತಖಂಡನ ಮಾಡುವ ಈ ಕಾವ್ಯದಲ್ಲಿ ಅವರಿಗೆ ಪ್ರೀತಿ ತಾದಾತ್ಮ್ಯಭಾವ ಸೌಹಾರ್ದಗಳು ಬರುವುದು ಬಲು ಕಷ್ಟ. ಹೀಗಾಗಿ ಕಾವ್ಯ ಜನಪ್ರಿಯವಾಗದೇ ಹೋಯಿತು. ಇದನ್ನು ರಾಜರು ಅಂದೇ ಹೇಳಿಬಿಟ್ಟಿದ್ದರು –

ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ॥

'ಕಾವ್ಯದ ಬಗ್ಗೆ ಪ್ರೇಮ ಸಹೃದಯತೆಗಳನ್ನು ತಮ್ಮೆದೆಯಲ್ಲಿ ತುಂಬಿಕೊಂಡಿರುವ ರಸಿಕರಿಗೆ ಮಾತ್ರ ಈ ಕಾವ್ಯ ಹೃದ್ಯವೆನಿಸುತ್ತದೆ' ಎಂದು.

ದುಷ್ಪ್ರಾಗಮ್ಯನಿಜಾರ್ಥತೋಷಿತಖಗಾ ಸಾಽಸ್ಯಾಃ ಕೃತೇರ್ವೈಖರೀಂ ।
ಬಿಭ್ರಾಣೇವ ವಿಭೂತಿ ವಿಟ್ಠಲಪುರೀ ।

ದುಷ್ಟರಿಗೆ, ದುರಾಗ್ರಹದೂಷಿತ ಹೃದಯದವರಿಗೆ ಶ್ರೀಕೃಷ್ಣನ ದ್ವಾರಕಾಪಟ್ಟಣದಲ್ಲಿ ಏನೂ ಆಕರ್ಷಣೆ ಇರಲಿಲ್ಲ; ಸುಖವಿರಲಿಲ್ಲ. ಹಾಗೇ ಈ ಕಾವ್ಯದಲ್ಲಿಯೂ ಅವರಿಗೆ ಏನೂ ರಸವಿಲ್ಲ! ಪರಮತನಿರಾಕರಣೆಗೆ ಇನ್ನೊಂದು ಉದಾಹರಣೆ –

ವಿದ್ವೇಷಮೂಲಸ್ಮರಣೇನ ತುಷ್ಟಿಃ ಇತ್ಯಪ್ಯವದ್ಯಂ ನ ಜಹಾತಿ ಪಕ್ಷಃ ।
ಹಿಂಸಾರ್ಥಮಾಲಿಂಗಯತಃ ತರಕ್ಷೋಃ ಕಿಂ ಚೇಷ್ಟಯಾ ತುಷ್ಯತಿ ಕಾಮಧೇನುಃ ॥

''ಭಗವಂತನನ್ನು ನಿರಂತರ ಸ್ಮರಿಸಬೇಕು. ಅದು ದ್ವೇಷದಿಂದಲೂ ಆಗಬಹುದು, ಭಕ್ತಿಯಿಂದಲೂ ಆಗಬಹುದು. ಅದರಿಂದ ಭಗವಂತನೊಲಿದು ಮುಕ್ತಿ ನೀಡುತ್ತಾನೆ''

ಎಂದು ವಾದಿಸುವವರಿಗೆ 'ಹುಲಿ ಕಾಮಧೇನುವನ್ನು ತಬ್ಬಿಕೊಳ್ಳುವುದು ಕೊಲ್ಲುವ ಉದ್ದೇಶದಿಂದ. ಆದರಿಂದ ಕಾಮಧೇನುವಿಗೆ ಸಂತೋಷವಾಗುವುದೇ?' ಎಂದು ಸವಾಲು ಹಾಕುತ್ತಾರೆ ರಾಜರು.

ಹೀಗೆ ಪರಮತೀಯರಿಗೆ ಈ ಕಾವ್ಯದಲ್ಲಿ ಪದೇ ಪದೇ ಕಿರಿಕಿರಿಯಾಗುವುದರಿಂದ ಕಾವ್ಯರಸಾನುಭವವಾಗಲು ಶಕ್ಯವಿಲ್ಲ.

'ಈ ಕಾವ್ಯ ಸರ್ವಜನಾದರಣೆಗೆ ಯೋಗ್ಯವಲ್ಲ' ಎನ್ನುವವರನ್ನು ಕೇಳಬೇಕು, ಸರ್ವ-ಜನಾದರಣೆಗೆ ಯೋಗ್ಯವಾಗಬಲ್ಲ ಕಾವ್ಯ ಒಂದಿದೆಯೇ? ಎಂದು. ಏಕೆಂದರೆ, ರಾಮನ ಪಾತ್ರವನ್ನು ವೈಭವೀಕರಿಸಿದರೆ ರಾವಣನ ಭಕ್ತರಿಗೆ ರುಚಿಸಲಾರದು. ರಾವಣಪಾತ್ರವನ್ನು ವೈಭವೀಕರಿಸಿದರೆ ರಾಮಭಕ್ತರಿಗೆ ಗ್ರಾಹ್ಯವಾಗಲಾರದು. ಪ್ರೌಢಸಂಸ್ಕೃತಪಂಡಿತರಿಗೆ ಮಾತ್ರ ಅರ್ಥವಾಗುವ ಮಾಘಕಾವ್ಯ ಸಾಮಾನ್ಯ ಓದುಗರಿಗೆ ಎಟುಕಲಾರದು. ಸಾಮಾನ್ಯರಿಗೆ ಎಟಕುವ ಕಾವ್ಯ ಪಂಡಿತರಿಗೆ ರುಚಿಸಲಾರದು.

'ರುಗ್ಮಿಣೀಶವಿಜಯದಲ್ಲಿಯೂ ಶ್ಲೇಷ, ಯಮಕಗಳು ಬಹಳವಾಗಿವೆ. ಸಂಸ್ಕೃತ ಬಾರದ ನಮಗೆ, ಸಾಮಾನ್ಯರಿಗೆ ಅರ್ಥವಾಗದು' ಎನ್ನುವವರಿಗೆ ರಾಜರು ಹೇಳುತ್ತಾರೆ 'ನಿಮಗಾಗಿ ನಾನೇ ಕನ್ನಡದಲ್ಲಿ ತುಳುವಿನಲ್ಲಿ ಪದ ಪದ್ಯಗಳನ್ನು ಯಥೇಚ್ಛ ರಚಿಸಿಕೊಟ್ಟಿ-ದ್ದೇನೆ. ಆದರಿಂದಲೇ ತೃಪ್ತಿಪಡಿರಿ' ಎಂದು.

ಕೆಲವೆಡೆ ಈ ಕಾವ್ಯದಲ್ಲಿ ಕೇವಲ ಪ್ರೌಢಸಂಸ್ಕೃತಪಂಡಿತರಿಗಷ್ಟೇ ಅರ್ಥವಾಗಬಲ್ಲ ಕಠಿಣವಾದ ಏಕಾಕ್ಷರ ಮುಂತಾದ ಶ್ಲೋಕಗಳೂ ಇವೆ. ಉದಾಹರಣೆಗೆ ಎಂಟನೇ ಸರ್ಗದಲ್ಲಿ –

ನಾನಾನನಾನನುನ್ನೂನಂ ನೈನೋಽನನ್ನೇಽನ್ನಿನಾಂ ನು ನೌಃ ।
ನಾನಾನ್ನನುನ್ನೇನಾನೇನ ನೋನೋ ನೇನ ನ ನೋ ನನು ॥ ೮/೩ ॥

ಆದರೆ ಕಾವ್ಯವು ಮಹಾಕಾವ್ಯವೆನಿಸಬೇಕಾದರೆ ಒಂದು ಸರ್ಗದಲ್ಲಿ ಇಂಥ ಕ್ಲಿಷ್ಟವಾದ ಶ್ಲೋಕಗಳಿರಬೇಕೆಂದು ಆಲಂಕಾರಿಕರು ನಿಯಮಮಾಡಿದ್ದಾರೆ. ಆದರಿಂದ ರಾಜರಿಗೆ ಇದು ಅಪರಿಹಾರ್ಯವಾಗಿತ್ತು. ಬೇರೆ ಸರ್ಗಗಳಲ್ಲಿ ಇಂಥ ಪದ್ಯಗಳಿಲ್ಲ. ಈ ಅಷ್ಟಮಸರ್ಗ-ದಲ್ಲಿಯೂ ಯಮಕಾಲಂಕಾರಗಳು ತುಂಬ ಸರಳವಾಗಿವೆ. ಉದಾಹರಣೆಗೆ –

ಕಮಲಾಸನಾಚ್ಚ ಭವತೋಽಭವತೋ ಮಹತೀಂದಿರಾ ಕಿಲ ತಯಾ ಲತಯಾ ।
ತರುವದ್ಭವಾನ್ಪರಿವೃತೋಽರಿವೃತೋದಯದಾವ ಸೇದಮನು ತೇ ಮನುತೇ ॥ ೨೯ ॥

ಕಮಲಾಸನನಾದ ಬ್ರಹ್ಮನಿಗಿಂತಲೂ ಅವನಿಂದ ಜನಿಸಿದ ಶಿವನಿಗಿಂತಲೂ ರಮಾದೇವಿ ಉತ್ತಮಳು. ಬಳ್ಳಿ ಮರದಾಸರೆಯಲ್ಲಿ ಇರುವಂತೆ ಅವಳು ನಿನ್ನಾಸರೆಯಲ್ಲಿಯೇ ಇರುತ್ತಾಳೆ. ಬೇರೆ ದೇವಾಸುರರೆಲ್ಲರೂ ಅವಳಿಗಿಂತ ತೀರ ಕಡಿಮೆಯವರೆಂದ ಮೇಲೆ ಶ್ರೀಹರಿ, ನೀನು ಸರ್ವೋತ್ತಮನು ತಾನೇ? ಎಂದು ಸುಲಭವಾಗಿ ಯಮಕಗರ್ಭಿತವಾದ ಸರಸ ಸಂಸ್ಕೃತ-ದಲ್ಲಿಯೇ ವರ್ಣಿಸುತ್ತಾರೆ. ಉಪನ್ಯಾಸರತ್ನಮಾಲೆಯಲ್ಲಿ ರಾಜರು ತಮ್ಮ ಈ ಶ್ಲೋಕಕ್ಕೆ ತಾವೇ ಸುಂದರವಾದ ವ್ಯಾಖ್ಯಾನ ಮಾಡಿ 'ಕಮಲಾಸನಾಚ್ಚ ಭವತೋ ಭವತೋ' ಎಂಬ ಮೂರು ಪದಗಳು ತ್ರಿವಿಕ್ರಮನ ಮೂರು ಪಾದಗಳಂತೆ ಮುಕ್ತಾಮುಕ್ತ ಸಕಲಪ್ರಪಂಚವನ್ನು ತಮ್ಮ ಅರ್ಥವ್ಯಾಪ್ತಿಯಲ್ಲಿ ಹೇಗೆ ಒಳಗೊಂಡಿವೆ? ಎಂಬುದನ್ನು ತೋರಿಸಿದ್ದಾರೆ. ಅದನ್ನು ಅಲ್ಲಿಯೇ ನೋಡಬೇಕು. ನೋಡಿದರೆ ಯಾರಿಗಾದರೂ ಬೆರಗಾಗದಿರಲಾರದು.

'ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನೀ' ಎಂದು ತಾವು ಹೇಳಿದ್ದನ್ನು ತಾವೇ ರುಜುವಾತು ಮಾಡಿ ತೋರಿಸಿದ್ದಾರೆ ಇಲ್ಲಿ!

ಮಾಘಕಾವ್ಯದಲ್ಲಿ ಕವಿ ಕಾಲಿದಾಸಾದಿಗಳ ಕೃತಿಚೌರ್ಯ ಮಾಡಿದ್ದೂ ಇದೆ.

ಜಾಲಾಂತರಪ್ರೇಷಿತದೃಷ್ಟಿರನ್ಯಾ ಪ್ರಸ್ಥಾನಭಿನ್ನಾಂ ನವಬಂಧನೀವೀಮ್ ।
ನಾಭಿಪ್ರವಿಷ್ಟಾಭರಣಪ್ರಭೇಣ ಹಸ್ತೇನ ತಸ್ಥಾವವಲಂಬ್ಯ ವಾಸಃ ॥

ಎಂದು ಕಾಳಿದಾಸ ರಘುವಂಶದಲ್ಲಿ ಹೇಳಿದ್ದನ್ನೇ ಮಾಘ ಬೇರೆ ಶಬ್ದಗಳಿಂದ ಹೇಳು-ತ್ತಾನೆ –

ವಲಯಾರ್ಪಿತಾಸಿತ ಮಹೋಪಲಪ್ರಭಾ ಬಹುಲೀಕೃತಪ್ರತನುರೋಮರಾಜಿನಾ ।
ಹರಿವೀಕ್ಷಣಾಕ್ಷಣಿಕಚಕ್ಷುಷಾಽನ್ಯಯಾ ಕರಪಲ್ಲವೇನ ಗಲದಂಬರಂ ದಧೇ ॥

ಆದರೆ ಕಾಳಿದಾಸನ ಮಾತಿನಲ್ಲಿರುವ ಸ್ವಾರಸ್ಯ ಮಾಘನಲ್ಲಿಲ್ಲ! ಸರ್ವತಂತ್ರಸ್ವತಂತ್ರ-ಕವಿಕುಲತಿಲಕರಾದ ವಾದಿರಾಜರು ಮಾತ್ರ ಹೀಗೆ ಎಲ್ಲಿಯೂ ಕೃತಿಚೌರ್ಯಮಾಡಿದ್ದು ಕಂಡು ಬರುವುದಿಲ್ಲ.

'ಮಾಘ ಓದಿ ಮಗ ಕೆಟ್ಟ' ಎಂಬ ಗಾದೆ ಮಾತಿನಂತೆ ಮಾಘದಲ್ಲಿ ಶೃಂಗಾರವರ್ಣನೆ ಅತಿಯಾಯಿತು. ನಾಲ್ಕನೇ ಸರ್ಗದಿಂದ ಹದಿಮೂರನೇ ಸರ್ಗದವರೆಗೂ ಕೇವಲ ಶೃಂಗಾರರಸವೇ ನಿರಂತರ ಪ್ರವಹಿಸುತ್ತಿದೆ. ವೀರಕಾವ್ಯದಲ್ಲಿ ಇಷ್ಟೊಂದು ಶೃಂಗಾರ ಬೇಕಾಗಿರಲಿಲ್ಲ. ಆದರಲ್ಲಿಯೂ ಪೂರ್ತಿ ಆರು ಸರ್ಗಗಳಷ್ಟು ಶೃಂಗಾರ ವರ್ಣನೆಯನ್ನು ತೆಗೆದು ಹಾಕಿದರೂ ಕಾವ್ಯದಲ್ಲಿ ಏನೂ ನ್ಯೂನತೆ ಬರಲಾರದು. ವಾದಿರಾಜರ ಕಾವ್ಯದಲ್ಲಿ

ಮುಕ್ತಿಂ ಕರಸ್ಥಾಂ ಕಿಲ ತಾ ವಿತೇನುಃ
ಪುಂಸ್ತ್ವೇನ ಕಿಂ ಪೂರುಷಮೌಲಿಭಾಜಾಮ್ ॥ ೫೩ ॥

ಸ ವಿಪ್ರಪತ್ನ್ಯರ್ಪಿತಭಕ್ತಭುಕ್ತ್ಯಾ
ವಿಭುಃ ಸಮಾಸಕ್ತಮನಾ ಇವೈಂದ್ರಮ್ ।
ಅಭುಂಕ್ತ ಭೋಜ್ಯಂ ಗತಭೀರ್ಗಿರೀಂದ್ರ
ವಪುಃ ಸ್ವಕೀಯಾರ್ಪಿತಮಪ್ರತೀತಃ ॥ ೫೪ ॥

ಪ್ರದಕ್ಷಿಣೀಕೃತ್ಯ ಗಿರಿಂ ಸ್ವವರ್ಗ್ಯೈ
ರ್ಮುದಾಽರ್ಪಿತಂ ಪರ್ವತರೂಪಧಾರೀ ।
ಬಲಿಂ ಚ ಕೃಷ್ಣಃ ಶತಮನ್ಯುಮನ್ಯು
ವಿವರ್ಧನೋಽಸಾವುರರೀಚಕಾರ ॥ ೫೫ ॥

ಸಹಸ್ರನೇತ್ರೋಽಪಿ ಸ ಕೃಷ್ಣಸತ್ತ್ವಂ
ಮನಾಗವಿಜ್ಞಾಯ ದಿದೇಶ ಮೇಘಾನ್ ।
ಪ್ರವರ್ಷಣಾರ್ಥಂ ನಿಗಮೈಕವೇದ್ಯೇ
ಕಿಮಕ್ಷಿಬಾಹುಲ್ಯಮುಪೈತಿ ಕೃತ್ಯಮ್ ॥ ೫೬ ॥

ಶತಕ್ರತೌ ವರ್ಷತಿ ವಾಸುದೇವೋ
ಗಿರಿಂ ಸಮುದ್ಧೃತ್ಯ ಬಭೂವ ತೂಷ್ಣೀಮ್ ।
ಜಿಹೀರ್ಷುಭಿಃ ಸ್ವಾಸಮಶತ್ರುಶೌರ್ಯಂ
ತದಾದ್ಯವೈರ್ಯುದ್ಧರಣಂ ಹಿ ಕಾರ್ಯಮ್ ॥ ೫೭ ॥

ಮಯೀಶ್ವರೇ ಭೂಭೃತಿ ಜಾಗರೂಕೇ
ಸ್ವಯಂ ಚ ಭೂಭೃತ್ಕಿಲ ಬುದ್ಧಿಶೂನ್ಯಃ ।
ಸ ಇತ್ಯಮರ್ಷಾದಿವ ಭೂಧರೇಂದ್ರಂ
ಕರೇಣ ಭೂಮೇರುದಬೀಭಿದತ್ತಮ್ ॥ ೫೮ ॥

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।

ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ಪಂಚಮಃ ॥ ೫೯

॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಕ್ಮಿಣೀಶವಿಜಯೇ ಪಂಚಮಃ ಸರ್ಗಃ ॥೫॥

* * * *

## ಷಷ್ಠಃ ಸರ್ಗಃ

ಮಹೇಂದ್ರವಿಜ್ಞಪ್ತಘನಾಲಿಮುಕ್ತ-
ಪಯಃಪ್ರವಾಹಾವೃತಭಿನ್ನಭಾಗಮ್ ।
ಮುಕುಂದಹಸ್ತೋದ್ಧೃತಮದ್ರಿರಾಜ-
ಮನುದ್ಧೃತಂ ತಂ ಮನುಜಾ ವ್ಯಜಾನನ್ ॥ ೧ ॥

ವರ್ಷಾಸು ವರ್ಷಸಹತಾಮಧಿಗಮ್ಯ ವಾರ್ಷ್ಣ
ತಪ್ತ್ವಂ ತಪಃ ಕೃತಪದಸ್ಯ ಪದಂ ಪ್ರಪೇದೇ ।
ಶರ್ಮಾನ್ಯಜನ್ಮನಿ ಸಿಷಾಧಯಿಷೋರ್ಮಹೀಧ್ರೋ
ಹ್ಯನ್ಯದ್ಯಲಬ್ಧಪರಮಸ್ಯ ತದೋಪಮಾಯಾಃ ॥ ೨ ॥

ಅಂತಃ ಕೃಪಾವಿಪುಲಧಾರವಿಲೋಚನಶ್ರೀ-
ಕಾಂತಾಖ್ಯಮೇಘವಿಭವೇಕ್ಷಣಲೋಲನೇತ್ರೈಃ ।
ಸಂತೋಷಹೇತುಷು ಗುಹಾಸು ಗತೈಃ ಸ ಸತ್ವೈಃ
ಕ್ರಾಂತೋ ಬಹಿಶ್ಚ ಘನದರ್ಶಿಭಿರದ್ರಿರಾಸೀತ್ ॥ ೩ ॥

ಸುವರ್ಣಶೃಂಗೈಃ ಕಲಶೋಪಮಾನೈಃ
ಮೃಗಾದಿಭಿಃ ಕೃತ್ರಿಮಸನ್ನಿಭೈಶ್ಚ ।
ಗುಹೋಲ್ಲಸದ್ದ್ವಾರಗಣೈಃ ಸಮಂತಾತ್
ವೃತೋ ಗಿರಿರ್ಗೋಪುರತೀವ ವಿಷ್ಣೋಃ ॥ ೪ ॥

ಬಭೌ ಸಮುತ್ತುಂಗನಗಂ ದಧಾನಃ
ಸ ಭಾವಿಮಲ್ಲೇಂದ್ರಜಯೋಪಯೋಗಿ ।

ತದೀಯವಿದ್ಯಾಭ್ಯಸನಂ ವಿಧಾತುಂ
ಶಿಲೋಚ್ಚಯಂ ಬಿಭ್ರದಿವಾಭ್ರಲಗ್ನಮ್ ॥ ೫ ॥

ಕೃಷ್ಣಧೃತಃ ಸುರವಿಸ್ಮಯಕಾರೀ ವಿಸ್ತೃತಪುಷ್ಕರಮಧ್ಯಗತಾರ್ದ್ರಃ ।
ಸಿಂಧುಕಬಂಧಸಮುದ್ಧೃತಭಾಸ್ವನ್ಮಂದರಕಾಂತಿಮಚೂಚುರದದ್ರಿಃ ॥ ೬ ॥

ಅನುಚಕ್ರೇಽಂಭಸಾಂಚಕ್ರೇ ಲಸತಾ ತೇನ ಭೂಭೃತಾ ।
ತಿತೀರ್ಷೋರ್ವ್ರಜವರ್ಗಸ್ಯ ಶಮಿತೋಪಪ್ಲವಃ ಪ್ಲವಃ ॥ ೭ ॥

ಖಗಾನ್ ಸವೃಷ್ಟೇರ್ದ್ರುಮಕೋಟರೇಷು
ಮೃಗಾನ್ ಜುಗೋಪ ಸ್ವಗುಹಾಗೃಹೇಷು ।
ಮುನೀನ್ ಘನಾತ್ಯುಚ್ಛ್ರಿತಮೇಖಲಾಸು
ವಿಪತ್ಸು ಕಃ ಸ್ವೀಯಮುಪೇಕ್ಷತೇಽಗ್ರ್ಯಃ ॥೮॥

ಪ್ರಸೂನಕೋಶೈರ್ಘನವರ್ಷಪಾತ-
ನಿಪಾತಿತೈರಂಕಿತಸರ್ವಗಾತ್ರಃ ।
ಮುಕುಂದಹಸ್ತಾಂಬುಜಸಂಗಸೌಖ್ಯ-
ಪ್ರಹೃಷ್ಟರೋಮಾಲಿರಿವಾದ್ರಿರಾಸ್ತೇ ॥ ೯ ॥

ಸ ಭೂಧರಃ ಸಾಶನಿವರ್ಷಪಾತ-
ಸಮಾಹತೋಽಪ್ಯಣ್ವಪಿ ನೋ ಚಕಂಪೇ ।
ತಥಾಹಿ ಗೋಬ್ರಾಹ್ಮಣರಕ್ಷಕಸ್ಯ
ಕ್ವ ಕೃಷ್ಣದೋರ್ದಂಡಧೃತಸ್ಯ ಕಂಪಃ ॥೧೦॥

ಪಯಃ ಶ್ರಿತಸ್ವಪ್ರತಿಬಿಂಬಲೋಲಂ
ಪತತ್ಪ್ರಸೂನಾಂಚಿತಶೃಂಗಜಾಲಮ್ ।
ಸ್ವಕುಕ್ಷಿಮಧ್ಯಾರ್ಪಿತನಂದಬಾಲಂ
ಜನೋಽದ್ಭುತಂ ಸಂಪುಟಮಾಶಶಂಕೇ ॥ ೧೧ ॥

ತ್ರಿವಿಷ್ಟಪಾಭ್ರಪ್ರತಿರೂಪಧಾರೀ
ಸ ಪರ್ವತಃ ಸ್ಫಾಟಿಕತುಂಗಶೃಂಗೇ ।

ಹರೇರ್ನಿದೇಶಾದಪರಾಧಿಶಕ್ರ-
ಘನಾಲಯೌ ತೌ ಗ್ರಸತೀವ ಲೋಕೌ ॥೧೨॥

ಸ ಪರ್ಯಟತ್ಕುಂಜರಪುಂಜಶೋಭಂ
ಧರಂ ಯದಾ ಶ್ರೀಪತಿರುದ್ದಧಾರ ।
ತದಾ ಸಮಸ್ಯಾಂ ಪರಿಪೂರಯಂತಿ
ಶಿಶೋಃ ಕರೇ ಹಸ್ತಿಸಹಸ್ರಮಸ್ತಿ ॥೧೩॥

ಸ ಭಾಸುರಶ್ರೀಶಕಪೋಲಲಗ್ನ-
ನಖೋಲ್ಲಸದ್ರತ್ನಕರಾಗ್ರಸಂಸ್ಥಃ ।
ಬಿಭರ್ತಿ ಕೂರ್ಮಾಶ್ರಿತನಾಗರಾಜ
ಫಣಾಸ್ಥಪೃಥ್ವೀಶ್ರಿಯಮದ್ರಿರಾಜಃ ॥೧೪॥

ಉದ್ಗಚ್ಛದೂಷ್ಮಾವಲಿಧೂಮಲಿಂಗ-
ಮದ್ರಿಂ ದ್ರವದ್ಧಾತುರಸಾರ್ದ್ರಶೃಂಗಮ್ ।
ವಿಷಕ್ತತದ್ರತ್ನಚಯಸ್ಫುಲಿಂಗ-
ಮಗ್ನ್ಯಸ್ತ್ರಮೀಶಾಚರಿತಂ ಪ್ರತರ್ಕೇ ॥೧೫॥

ಅದ್ರಿಸ್ತಂ ಘನಮಿಂದ್ರನೀಲಧರಣೀಕಾಂತ್ಯಾ ಶಿಖಂಡಶ್ರಿಯಾ
ತಸ್ಯಾಖಂಡಲಚಾಪಮಂಬುನಿಚಯಂ ಮುಕ್ತಾಫಲಾನಾಂ ರುಚಾ ।
ಸೌವರ್ಣಸ್ಥಲಶೋಭಯಾ ಚ ತಟಿತಂ ಪಂಚಾಸ್ಯನಾದೇನ ತ-
ನ್ನಾದಂ ಸಾಧು ಜಿಗಾಯ ಕಿಂ ನ ಸುಕರಂ ನಿತ್ಯಂ ಕ್ಷಮಾಧಾರಿಣಃ ॥ ೧೬ ॥

ನಿರ್ಗತ್ಯ ಪಶ್ಯತಾಟೋಪಃ ಕಿಮದ್ಯಾಪ್ಯಸ್ತಿ ವಾರ್ಮುಚಾಮ್ ।
ಇತ್ಯುಕ್ತಃ ಕೋಽಪಿ ಗೋಪಸ್ತದ್ವಿದಿತ್ವಾ ವಕ್ತಿ ಮಾಧವಮ್ ॥ ೧೭ ॥

ಧಾರಾ ನೈವ ಪಯೋಮುಚಾಂ ಯದುಪತೇ ಪ್ರೇಮಾಶ್ರುಧಾರಾ ಪರಂ
ಸ್ನಾನಾಂ ನಾಪಿ ಚ ಗರ್ಜಿತಂ ಸ್ತುತಿಕೃತಾಂ ಸಿದ್ಧೇಶ್ವರಾಣಾಂ ಧ್ವನಿಃ ।
ವಿದ್ಯುನ್ನಾಮರನರ್ತಕೀಕರಚಯಾಲಂಕಾರಕಾಂತಿಃ ಪ್ರಭೋ
ನೋ ವಾಯುಃ ಸುರವೃಷ್ಟಪುಷ್ಪಸಹಗಾನಲ್ಪಾಲಿಪಕ್ಷೈರ್ಮರುತ್ ॥ ೧೮ ॥

ನೀಲಂ ನೈವ ನಭಃ ಸುಲಜ್ಜಿತಶಚೀಭರ್ತುರ್ಮುಖೇ ನೀಲಿಮಾ
ಮೇಘಾಃ ಕ್ವಾಪಿ ನ ಸಂತಿ ಕಿಂತು ದಿವಿಜಭ್ರಾಜದ್ವಿಮಾನಾಂಬುದಾಃ।
ತಾಮಿಸ್ರಂ ನಹಿ ದಿಶ್ಯಥೇದೃಶಮಪಿ ತ್ವಾಂ ಮಾನುಷಂ ಮನ್ವತಾಂ
ಚಿತ್ತೇಷ್ವಸ್ತಿ ನ ವೇಪಥುರ್ನಿಜಜನೇ ಭೀತೇಂದ್ರಗಾತ್ರೇ ಪರಮ್ ॥ ೧೯ ॥

ತತಃ ಪರೀತಃ ಸ್ವೈರ್ಗೋಪೈರ್ಗೋಪೀಭಿರ್ಗೋಧನೈರಪಿ।
ಪ್ರತಸ್ಥೇ ಪ್ರಯತಂ ಗೋಷ್ಠಂ ಸ್ತೂಯಮಾನಃ ಸುರೈರ್ನರೈಃ ॥ ೨೦ ॥

ನಾಥಾಪರಾಧಕೃದುಪೇತ್ಯ ಸುಲಜ್ಜಿತೋಽಥೋ
ಶಕ್ರೋಽಚ್ಯುತಂ ರಹಸಿ ರಮ್ಯತಮಂ ತ್ರಿಲೋಕ್ಯಾಮ್।
ಮೂರ್ಧ್ನಾ ಪ್ರಣಮ್ಯ ಸದಯಂ ಸುಧಯಾಽಭ್ಯಷಿಂಚತ್
ಗೋವಿಂದನಾಮ ಚ ಪಠನ್ ಸ್ವಕೃತಾಘಶಾಂತ್ಯೈ ॥ ೨೧ ॥

ಬಧ್ವಾ ನಿನಾಯ ಕಿಲ ನಂದಮಕಾಲವಾರಿ-
ಮಧ್ಯಪ್ರವಿಷ್ಟಮನುಗಃ ಸಲಿಲೇಶ್ವರಸ್ಯ।
ಭೃತ್ಯಚ್ಛಲೇನ ಸ ಸಮನ್ಯುರಮುಂ ಬಬಂಧ
ಶ್ರುತ್ವಾ ಸ್ವನಾಥಪಿತರಂ ತ್ವಿತಿ ಮೇ ಪ್ರತರ್ಕಃ ॥ ೨೨ ॥

ಕೃಷ್ಣೋಽಪಿ ವೀಕ್ಷ್ಯ ದೃಢಭಕ್ತಿಮಿವ ಪ್ರತುಷ್ಟಃ
ಕೃತ್ಯಚ್ಛಲೇನ ನಿಜದರ್ಶನಮೇವ ದಿತ್ಸನ್।
ಗತ್ವಾಽಂಬುರಾಶಿನಿಲಯಂ ಜನಕೇನ ಸಾಕ-
ಮಭ್ಯರ್ಚಿತಃ ಸ್ವಭವನಂ ಪುನರಾಜಗಾಮ ॥ ೨೩ ॥

ತಪ್ತಂ ಹೇಮಕೃಶಾನುಸಂಗಿ ಗಗನೇ ವಾತಾಯನೇ ಭಾಜನೇ
ಮಾಹೇಂದ್ರ್ಯಾಃ ಶುಭಕುಂಡಲಂ ರಚಯಿತುಂ ದೇವೈರುಪಾಯಾದ್ದಿಶಃ।
ಸಂಗೃಹ್ಯಾಂಬುನಿ ಸನ್ನಿವೇಶಿತಮಿವೋತ್ತುಂಗಸ್ಫುಲಿಂಗಾವೃತಂ
ತೇಜೋರಾಶಿರಿನೋ ಜಗಾಮ ಜಲಧಿಂ ರಾಗಾಂಚಿತಃ ಪಶ್ಚಿಮಮ್ ॥೨೪ ॥

ಕರೈರ್ಗಿರೀಂದ್ರಾನ್ ಪರಿತೋ ದಧಾನೋಽ-
ಪ್ಯಸೌ ವಿವಸ್ವಾನ್ ಪತಿತಃ ಕಿಲಾಬ್ಧೌ।

ಮಮೇತ್ಥಮಾಭಾತಿ ಸರಿಚ್ಛರೀರ-
ವಿಶೋಷಕಂ ತತ್ಪತಿರಗ್ರಸೀತ್ತಮ್ ॥ ೨೫ ॥

ತ್ಯಕ್ತ್ವಾ ಕ್ರಮೇಣ ಸಹಜಾತಮಪಿ ಸ್ವರಾಗಂ
ಚಕ್ರಾಬ್ಜಮಾನಿತಕರಃ ಪ್ರತತೋರ್ಧ್ವಪಾದಃ ।
ಆಶ್ರಿತ್ಯ ವಿಷ್ಣುಪದಮುಗ್ರತಪೋಽತಪದ್ಯಃ
ತಸ್ಯೈವ ಧಾಮ ಸ ಜಗಾಮ ಕುತೋಽಸ್ಯ ಪಾತಃ ॥ ೨೬ ॥

ತಪ್ತಂ ತಪಸ್ವಿನಿವಹಂ ಭುವಿ ಯಸ್ತತಾನ
ಪೃಥ್ವ್ಯಾಶ್ಚ ಜೀವನಮಪಿ ಸ್ವಕರೈರ್ಜಹಾರ ।
ಲಕ್ಷ್ಮೀಂ ತಥೋಡುನಿಕರಸ್ಯ ವೃಥೈವ ಭಾನೋಃ
ಸ್ತಸ್ಯಾಸ್ಯ ಪಾತಮಪಿ ಯುಕ್ತಿಸಹಂ ವದಾಮಃ ॥ ೨೭ ॥

ಸ ಲಬ್ಧಜನ್ಮಾ ದಿಶಿ ವಜ್ರಪಾಣೇಃ
ಪ್ರವೃದ್ಧಗಾತ್ರೋ ಗಗನಸ್ಯ ಮಧ್ಯೇ ।
ಅಗಾದ್ವಿನಾಶಂ ದ್ಯುಮಣಿಃ ಪ್ರತೀಚ್ಯಾಂ
ವಿಧೇರ್ನಿದೇಶೋ ಮಹತಾಽಪ್ಯಲಂಘ್ಯಃ ॥೨೮॥

ರಾಗಂ ಪಯೋಧರತಟೇ ಹರಿದಂಗನಾನಾಂ
ರಾಗೀ ಸಮರ್ಪ್ಯ ಸವಿತಾ ಸಮಗಾದಗಾಂತಮ್ ।
ಕೂಜದ್ವಿಹಂಗಮರವೈರಿವ ತಾ ರುದಂತ್ಯೋ
ಭೇಜುಸ್ತಮಸ್ತತಿಮಥಾಂತರಿವೋರುಮೂರ್ಛಾಮ್ ॥ ೨೯ ॥

ಅಂಭೋಧಿಹೃತ್ಕೃತಪದಂ ಪ್ರತಿರೂಪಮರ್ಕಃ
ಸಂದೃಶ್ಯ ಸಾಧು ಧವಲೀಕೃತತಜ್ಜಲೌಘಮ್ ।
ಶಾಂತೋ ಹಿ ಸರ್ವಹೃದಯಂಗಮತಾಮುಪೈತೀ-
ತ್ಯಂತೇ ಶಮಂ ಸಮಧಿಗಮ್ಯ ವಿವೇಶ ಸೋಽಬ್ಧಿಮ್ ॥ ೩೦ ॥

ಮಿತ್ರೇಽಂಬುಜಾತನಿಕರಸ್ಯ ನಿತಾಂತಮಿತ್ರೇ
ಹ್ಯಸ್ತಂ ಸಮೀಯುಷಿ ಮುಖಂ ಮುಕುಲೀಬಭೂವ ।

ಪದ್ಮಸ್ಯ ಶುದ್ಧಜಲಗಸ್ಯ ಚ ಮುದ್ರಯಂತಿ
ನಷ್ಟಾಃ ಪ್ರಿಯಾಃ ಖಲು ಸಮೃದ್ಧಿಯುಜೋಽಪಿ ವಕ್ತ್ರಮ್ ॥ ೩೧ ॥

ಆಕಂಠೋದಕವಾಸಿ ಹೃದ್ಗಮಧುಕೃಝ್ಝಂಕಾರರಮ್ಯೋಂಕೃತಿ
ಭ್ರಾಜತ್ ಕಂಟಕಕಂಟಕದ್ಯುತಿ ಮುಹುರ್ಮಂತ್ರಾರ್ಥಸಂಚಿಂತಯಾ ।
ಈಷತ್‌ಕಂಪಿತಮೂರ್ಧಶೋಭಿ ನಲಿನಂ ಹಂಸೌಘಸಂಶಿಕ್ಷಿತಂ
ಸ್ವಾಂತಃ ಸ್ಥಾಪಿತಧಾತೃ ಸಾಧು ತಪತೀವಾಕಾಂಕ್ಷ್ಯ ಮಿತ್ರೋದಯಮ್ ॥೩೨॥

ದಿಗಾಯತಾಕ್ಷೀಮಪರಾಮುಪೇತ್ಯ
ದಿಶಾಪತೌ ರಾಗಮುಪೇಯುಷೀಂದುಃ ।
ಅದೃಶ್ಯತೈಂದ್ರ್ಯಾಂ ದಿಶಿ ರೋಷರಕ್ತಂ
ನಿಬದ್ಧನೀಲಭ್ರುಕುಟೀವ ವಕ್ತ್ರಮ್ ॥೩೩॥

ನಕ್ಷತ್ರಾಲಿಭಿರಿಂದ್ರದಿಙ್‌ಮೃಗದೃಶಂ ಸಂಧಾಯ ಪೂರ್ವಂ ಪುನ-
ಸ್ತತ್ಪಾದೇ ಪ್ರಣತಿಂ ವಿಧಾಯ ನಿತರಾಮಾಶಾಂತರಾಸಕ್ತಿಜಮ್ ।
ತಸ್ಯಾಃ ಕೋಪಸಮಂ ತಮಃ ಪರಿಹರನ್ ಸ್ವೀಯೈಃ ಕರೈಸ್ತಾಂ ಸ್ಪೃಶನ್
ವಕ್ತ್ರಾಂಭೋರುಹಚುಂಬನಾಯ ಶನಕೈರುದ್ಯಾತಿ ನೂನಂ ಶಶೀ ॥ ೩೪ ॥

ಚಂದ್ರಸ್ಯ ಕೋಮಲಕರೈ ರಚಿತಾಂಗಸಂಗಾಃ
ಸಾಂದ್ರಾಂಧಕಾರಮಪಿ ತಾಃ ಸಹಸಾ ವಿಹಾಯ ।
ಈಶಂ ಸ್ವಪತ್ಸ್ವಖಿಲಜಂತುಷು ವವ್ರುರೇನಂ
ಆಶಾ ಹಿ ನೂತ್ನವಿಷಯಾ ಗಣಯಂತಿ ನೈನಃ ॥ ೩೫ ॥

ಪೂರ್ವಾಬ್ಧಾವವಗಾಹ್ಯ ಫೇನನಿಚಯಶ್ರೀಖಂಡಲೇಪದ್ಯುತಿಃ
ಸ್ವಾಂಕಾಲಂಕೃತಿಮೂಲನೀಲತಿಲಕಸ್ತಾರೌಘಹಾರಾನ್ ದಿಶನ್ ।
ವ್ಯೋಮಾಖ್ಯಾಂ ಕಬರೀಂ ಪ್ರಗೃಹ್ಯ ಸುಕರೈರಾಶ್ಲಿಷ್ಯ ದಿಕ್ಕಾಮಿನೀಂ
ಐಂದ್ರೀಮಿಂದುರಸೌ ಚುಚುಂಬ ಸರಸೋ ರಾಗೇಣ ತಾಂ ರಂಜಯನ್ ॥೩೬

ಸುವರ್ಣಸಂವೀತವರೇಂದ್ರನೀಲ-
ಸುಮಧ್ಯನಿಷ್ಕಾಂಚಿತಕೃಷ್ಣವಕ್ಷಃ ।

ಸಹಾರಮನ್ವೇತ್ಯುದಿತೋರ್ಧ್ವರಶ್ಮಿ-
ಶಶಾಂಕಸಂಗ್ಯಭ್ರಮುದಾರತಾರಮ್ ॥ ೩೭ ॥

ವಾರ್ವಾಹಾವೃತಸರ್ವಭಾಗಮುದಿತಂ ಬಿಂಬಂ ಶಶಾಂಕಂ ವಿಧೋಃ
ಈಷದ್ದರ್ಶಿತಕೋಣಮಚ್ಯುತಮನಸ್ತೋಷಂ ನಭೋಽಗ್ರಸ್ಥಿತಮ್ ।
ರೇಜೇ ಕುಂಕುಮಶೋಭಿ ರಮ್ಯವಸನಚ್ಛನ್ನಂ ಮರುದ್ದರ್ಶಿತ-
ಪ್ರಾಂತಂ ಶ್ರೀಕುಚಕೋಶಮೀಷದುದಯನ್ಮಧ್ಯೋಪರಿಷ್ಟಾದಿವ ॥ ೩೮ ॥

ಗತೇ ದಿಶಾಂ ಭರ್ತರಿ ದೇಶಮನ್ಯಂ
ದಿವಾಕರೇ ಮಂದಮುಪೇತ್ಯ ಚಂದ್ರಃ ।
ತದಂಬರಂ ಯಜ್ಜಗೃಹೇ ಕರೈಃ ಸ್ವೈಃ
ತತಃ ಕಲಂಕೀತಿ ಮಮ ಪ್ರತರ್ಕಃ ॥ ೩೯ ॥

ಯತ್ಪೂರ್ಣಂ ಪೌರ್ಣಮಾಸ್ಯಾಮುದಯತಿ
ನಿಶಿ ತತ್ಕೀರ್ತಿನಾರ್ಯಾಃ ಕುಮಾರ್ಯಾ
ವಕ್ತ್ರಂ ಕಸ್ತೂರಿಕಾಕ್ತಂ ಪ್ರವಿರಲಕಚವಿನ್ಯಸ್ತಪುಷ್ಪಂ ಹಿ ಮನ್ಯೇ ।
ಸ್ತೋತ್ರವ್ಯಾಜೇನ ದೇವೈರ್ವದನವಿನಿಹಿತಂ ನಂದಸೂನೋರ್ನ ಚೇತ್
ತತ್ಪ್ರೀತ್ಯೈ ಗೋಪಾಂಗನಾನಾಂ
ಕಥಮಹಿತವಧೂವರ್ಗತಾಪಾಯ ಚ ಸ್ಯಾತ್ ॥ ೪೦ ॥

ದಿವಸಕರೇ ಹೃತತಸ್ಕರಪ್ರಚಾರೇ
ನರನಯನಸ್ಯ ವಿದೂರವರ್ತ್ಮ ಯಾತೇ ।
ರಜನಿಕರೋಽಯಮುಪೇತ್ಯ ಮಾನವಾನಾಂ
ಶ್ರಮಮಧರೀಕುರುತೇ ಸ್ಮ ಪೂರ್ಣಬಿಂಬಃ ॥೪೧॥

ಸ ಮಾರಮೌರ್ವೀಸ್ಥಿತಮಲ್ಲಿಕೇಷುಃ
ಇವ ವ್ರಜಸ್ತ್ರೀಹೃದಯಂ ವಿಜಿತ್ಯ ।
ಹರೇಃ ಪದಂ ಪ್ರಾಪ ಶನೈಃ ಸ್ಮರೇಣ
ತಮಾತ್ಮಸಾತ್ ಕರ್ತುಮಿವೋತ್ಸ್ರಯುಕ್ತಃ ॥ ೪೨ ॥

ಗಂಧರ್ವಗೀತವೃತಮಭ್ರಮಪಾರತಾರಂ
ಚಂದ್ರೇಣ ರಂಜಿತಮುದೀಕ್ಷ್ಯ ಮುದಾ ಮುಕುಂದಃ।
ವೃಂದಾವನಂ ಮಧುಪಮಂಜುರವಂ ಪ್ರಸೂನ
ಸಂದೋಹಸಾಂದ್ರಮವಿಶತ್ತರುಜಾಲನೀಲಮ್ ॥೪೩॥

ಇಂದುಃ ಸ್ವರಮ್ಯಕಿರಣೈರ್ವಿಪಿನಂ ಪ್ರಪೂರೇ
ಮಂದಾನಿಲಶ್ಚ ಮುದಿತೋತ್ಪಲಮಾನ್ಯಗಂಧೈಃ।
ಸಾಂದ್ರಪ್ರಸೂನನಿಚಯೈಸ್ತರವಃ ಸಮಂತಾತ್
ಕಂದರ್ಪತಾತಮವಲೋಕ್ಯ ಪಿಕಾಶ್ಚ ಗೀತೈಃ ॥ ೪೪ ॥

ವಿಶ್ವಸ್ಯ ಮೋಹನ ಇತೀಶ ಯಶೋ ಮದೀಯಂ
ವಿಸ್ತಾರಯೇಹ ಲಲನಾಸಹಿತೋ ವಿಹೃತ್ಯ।
ಇತ್ಯರ್ಥನಾಕೃದಿವ ವೃಕ್ಷತಲಪ್ರವಿಷ್ಟೈಃ
ಕೃಷ್ಣಾಂಘ್ರಿಮಾಸ್ಪೃಶತಿ ಹೃದ್ಯಕರೈರ್ಹಿಮಾಂಶುಃ ॥ ೪೫ ॥

ವ್ಯಾಕೀರ್ಣಕಾಮ ಇವ ತೈರ್ವಿವಿಧೈರ್ವಿಭಾವೈ
ರಾಕರ್ಷಯನ್ ವ್ರಜವಧೂರ್ನಿಜಸಂಗಯೋಗ್ಯಾಃ।
ವೇಣುಂ ಕ್ರಮೇಣ ರಣಯನ್ ಬಹುತಾನಗಾನ
ಮಾನಜ್ಞಮೌಲಿರುದಗಾಯದಧೀಶ್ವರೋಽಸೌ ॥೪೬॥

ಹೃದ್ಗಂ ಹೃದ್ಯನುರಂಜಯನ್ ಸವಯಸಃ ಸಂಹರ್ಷಯನ್ ಕರ್ಷಯನ್
ಗೋಪಸ್ತ್ರೀಹೃದಯಂ ಪಶೂನ್ ಋಷಿಗಣಾನ್ನಿಶ್ಚೇಷ್ಟಯನ್ ಸ್ವಷ್ಟಯನ್।
ವಿಶ್ವಂ ಸ್ವಸ್ಯ ವಶಂ ವಿಯದ್ಗೃಹವಧೂಸ್ಸಂಮೂರ್ಛಯನ್ ಚಾರಣಾನ್
ಸಿದ್ಧಾನ್ ಸಂತ್ರಪಯನ್ ಸುರಾನ್ ವಿನಿಮಯನ್
ವೇಣುಂ ಪುಪೋಷಾಚ್ಯುತಃ ॥ ೪೭ ॥

ಶುಷ್ಕಾಮಪಿ ಸ್ಮ ಸರಸಾಮಧರಾಮೃತೇನ
ಹೃದ್ಯಸ್ವನಾಮಪಿ ವಿಧಾಯ ಮೃದೂಕ್ತಿಶೂನ್ಯಾಮ್।
ಛಿದ್ರಂ ನಿಗೂಹ್ಯ ಮುರಲೀಂ ಮುರಜಿಚ್ಚುಚುಂಬೇ
ಸದ್ವಂಶಜಾತಲಲನಾಸು ನ ಕಸ್ಯ ಪಕ್ಷಃ ॥ ೪೮ ॥

ಅಪರವಶಮಪೀಶಂ ಸ್ವಾನುರಕ್ತಂ ವಿಧತ್ತೇ
ಸಹಜಮಪಿ ವಿರೋಧಂ ಹಂತಿ ಜಂತುಷ್ವಭೇದ್ಯಮ್ ।
ವಶಯತಿ ಜಗದೇತನ್ಮಾನ್ಯತಾಮಾಪ ವೇಣು-
ರ್ಮಧುರನಿನದಭಾಜಾಂ ಕಿಂ ನ ಸಾಧ್ಯಂ ಹಿ ಲೋಕೇ ॥ ೪೯ ॥

ಸ ಜಯತಿ ಯದುನಾಥಃ ಶ್ರಾವಿತಾನೇಕಗೀತಃ
ಕರಧೃತವರವೇಣುಃ ಕಾಮಿನೀಕಾಮಧೇನುಃ ।
ಸುಲಲಿತವನಮಾಲಃ ಸುಂದರಾಪಾಂಗಲೀಲಃ
ಸಜಲಜಲದಮೂರ್ತಿಃ ಸಾಧುಭಿರ್ಗೀತಕೀರ್ತಿಃ ॥ ೫೦ ॥

ಚಂದ್ರೇ ಜೃಂಭತಿ ತನ್ಮುಖತ್ವಿಷಿ ಮುಹುರ್ಮಂದಾನಿಲೇ ತದ್ವಪುಃ
ಗಂಧೇ ವಾತಿ ವಿಯೋಗವಹ್ನಿಸಚಿವೇ ತತ್ಕೋಮಲಾಲಾಪವತ್ ।
ವೇಣೌ ಕೂಜತಿ ಪಂಚಬಾಣವಿಶಿಖೈಃ ಶಾಣಾಶಿತೈಸ್ತಾಡಿತಾ
ಮಾನಿನ್ಯೋಽಪಿ ಯಯುರ್ಮನೋಭವಪಿತುಃ ಶ್ರೇಯೋನಿಧಿಂ ಸನ್ನಿಧಿಮ್ ॥

ದೋಹಂ ಕಾಪಿ ವಿಹಾಯ ಕೃಷ್ಣಸುರಭಿಂ ದೋಗ್ಧುಂ ಸಮಸ್ತೇಪ್ಸಿತಂ
ತದ್ಬಿಂಬೋಷ್ಠಸುಧಾತಿಲುಬ್ಧಹೃದಯಾ ಭುಕ್ತಿಂ ವಿಸೃಜ್ಯಾಪರಾ ।
ಕಾಂತಂ ಕಾಂಚನಸದ್ಗುಣಾರ್ಣವಭೃತೇ ಭರ್ತ್ರೇ ಸ್ಪೃಹಾಂ ಬಿಭ್ರತೀ
ತೋಕಂ ಕೃಷ್ಣವಿಹಾರಯೋಗ್ಯವಿಭವಾ ಕನ್ಯೇತಿ ಕಾಚಿದ್ಗತಾ ॥ ೫೨ ॥

ಗೋಪ್ಯನ್ಯಾಽಂಜನರೂಷಿತಂ ಸ್ವನಯನಂ ಕುರ್ವಂತ್ಯಗಾತ್ ಸತ್ವರಾ
ತಜ್ಜ್ಞಾನಾಂಜನತುಷ್ಟಧೀರಿವ ಪದೋರ್ಭೂಷಾಂ ಸ್ವದೋಷ್ಣೀತರಾ ।
ಸಂಧಾಯಾಚ್ಯುತಸನ್ನಿಧಿಂ ಸಮಗಮತ್ಕೃಷ್ಣಾಂಘ್ರಿಸೇವಾಂ ಸದಾ
ತನ್ವಂತ್ಯಾಃ ಕರಭೂಷಣಂ ಮಮ ಭವೇತ್ತತ್ಪಾದಯೋರ್ಭೂಷಣಮ್ ॥೫೩॥

ಆನಂದಪೂರ್ಣತಾಂ ಕೃಷ್ಣಃ ಸ್ವಾನಾಂ ಸಂದರ್ಶಯನ್ ವಿಭುಃ ।
ಆನತಾ ಅಪಿ ತಾಃ ಪ್ರೀತಾ ಮಾನಿನೀರಿತ್ಯಚೀಕಥತ್ ॥ ೫೪ ॥

ಪಿತೃಭರ್ತೃಜನನ್ಯಾದೇಃ ಪರಿಚರ್ಯಾ ಯತೋಽರ್ಥದಾ ।
ವ್ರಜತ ವ್ರಜಮೇವಾತಃ ಕುರುತ ಸ್ಮರತಾಂ ಹಿತಮ್ ॥ ೫೫ ॥

ಯದೀಶ ತೇಷಾಂ ಹಿತಮೇವ ಕಾರ್ಯಂ
ತದಾಽಂಗ ನಾಜ್ಞಾಪಯ ಗಂತುಮಸ್ಮಾನ್ ।
ವಿಯೋಗದಗ್ಧೈರ್ಬತ ನಃ ಶರೀರೈ-
ರ್ಮಹೀಂ ನ ತಾಂ ಪ್ರೇತಮಹೀಂ ವಿಧೇಹಿ ॥ ೫೬ ॥

ಪತ್ಯಾದಿಸೇವಾಽಪಿ ಭವತ್ಪ್ರಸಾದ-
ಪ್ರಾಪ್ತ್ಯರ್ಥಮೇವೇತಿ ವದಂತಿ ಸಂತಃ ।
ತ್ವತ್ಪಾದಮೂಲಂ ವಿಧಿನೋಪನೀತಾಃ
ಕಸ್ಮಾನ್ಮುಧಾಽಽಜ್ಞಾಪಯಸೀಶ ಗಂತುಮ್ ॥೫೭॥

ನಾನಾಯೋನಿಷು ಸಂಭವೇ ಸತಿ ಕತಿ ಶ್ರೀನಾಥ ನೋ ಮಾತೃತಾಂ
ಮಾನ್ಯತ್ವಂ ಪಿತೃತಾಂ ಪ್ರಿಯತ್ವಮಗಮಂಸ್ತತ್ಕುತ್ರ ಕುರ್ಮೋಽರ್ಚನಮ್ ।
ವೈರಂ ವಾ ಕತಿವಾರಮೇಷು ನ ಕೃತಂ ವಿಶ್ವಾಂತರಾತ್ಮನ್ ವಿಭೋ
ತನ್ನಿತ್ಯಂ ಪಿತರಂ ಪತಿಂ ಚ ಜನನೀಂ ತ್ವಾಮೇವ ಸೇವಾಮಹೇ ॥ ೫೮ ॥

ಜಗತ್ಪಿತಾ ತ್ವಂ ನ ಪಿತಾ ಕಿಮಾಸಾಂ
ಜಗತ್ಪ್ರಸೂತಿರ್ಜನನೀ ನ ಕಿಂ ನಃ ।
ಜಗತ್ಪತಿಃ ಕಿಂ ನ ಪತಿಃ ಸಖೇ ನಃ
ತದನ್ಯಜುಷ್ಟ್ಯಾಲಮರಿಷ್ಟವೃಷ್ಟ್ಯಾ ॥೫೯॥

ಕಾಂತಃ ಸ ಏವ ಯಃ ಸ್ಥೈರ್ಯಶೌರ್ಯಸೌಂದರ್ಯಸಾಗರಃ ।
ಸುಖಸ್ಯಾಂತಕರಂ ಕಾಂತಮಪರಂ ತರ್ಕಯಾಮಹೇ ॥ ೬೦ ॥

ಯಃ ಸಾರಭಾಗಮನುಭೂಯ ಶರೀರಭಾಜಾಂ
ಶಿಷ್ಟಂ ಪ್ರಯಚ್ಛಸಿ ಕಿಲಾರಸಮಲ್ಪಭೋಗ್ಯಮ್ ।
ದುಃಖಾತಿದೂರ ಗತಪಾರ ಸುಖೈಕಭೋಕ್ತುಃ
ತಸ್ಯೇಶ ಭೋಗಮಖಿಲಂ ತವ ತರ್ಕಯಾಮಃ ॥ ೬೧ ॥

ಧರ್ಮೋ ನ ವೋಽಯಂ ಶ್ರುತಿಸಂಗತಾಕ್ಷ್ಯೋ
ಧರ್ಮೋ ನವೋಽಯಂ ಶ್ರುತಿಸಂಗತಾಕ್ಷ ।

ಮಾನ್ಯಂ ಭಜಧ್ವಂ ರಮಣಂ ವಿಹಾಯ
ಮಾನ್ಯಂ ಭಜಾಮೋ ರಮಣಂ ವಿಹಾಯ ॥೬೨॥

ಹಿತಾಹಿತಾಜ್ಞಾ ಬತ ಯೂಯಮಂಗನಾ
ಯತೋ ಹ್ಯಧರ್ಮೇ ಮತಿರಸ್ತಿ ನಿಶ್ಚಲಾ ।
ಹಿತಾಹಿತಜ್ಞಾ ವಯಮಚ್ಯುತ ಪ್ರಭೋ
ಯತೋ ಹ್ಯಧರ್ಮೇ ಮತಿರಸ್ತಿ ನಿಶ್ಚಲಾ ॥೬೩॥

ವಾಗ್ವೈಖರೀಮಿವ ನಿರೀಕ್ಷ್ಯ ಸ ವಲ್ಲವೀನಾಂ
ಪ್ರೀತಃ ಪ್ರಿಯೋಕ್ತಿಪರಿರಂಭಣಚುಂಬನಾದ್ಯೈಃ ।
ಸುಪ್ತಂ ಪ್ರಬೋಧ್ಯ ಮದನಂ ಸಮಭೂದದೃಶ್ಯಃ
ಸತ್ಯಾಂ ವಿಧಾತುಮಿವ ಕಾಮಿವಿದೂರತಾಂ ಸ್ವಾಮ್ ॥ ೬೪ ॥

ತಾಃ ಪತ್ಯಪತ್ಯಭವನೇಷು ವಿರಕ್ತಚಿತ್ತಾಃ
ಶ್ರೀಪುಂಡರೀಕನಯನೇಕ್ಷಣಕಾರ್ಯಸಕ್ತಾಃ ।
ಆರಣ್ಯಕೇಷು ಮುನಿವರ್ಗ ಇವಾತಿಮುಗ್ಧಾಃ
ಚೇರುರ್ವಿಮೃಗ್ಯ ಬಹುಧಾ ತಮರಣ್ಯಕೇಷು ॥ ೬೫ ॥

ಸಮಮುದಿತವಿಮೋಹಾವಸ್ಥಯಾ ಕ್ವಾಪಿ ಮುಗ್ಧಾಃ
ಸಮುದಿತಘನಚಿಂತಾವಸ್ಥಯಾ ಕ್ವಾಪಿ ಶಾಂತಾಃ ।
ವಶಯಿತುಮಿವ ಕಾಂತಂ ಯೋಗಿಪೂಗೈಕಚಿಂತ್ಯಂ
ಮಧುರವಚನದಕ್ಷಾಸ್ತಂ ಜಗುಸ್ತಾಃ ಪರೋಕ್ಷಮ್ ॥ ೬೬ ॥

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಶ್ಚ ಷಷ್ಠೋ ಮುದಾಮ್ ॥ ೬೭ ॥

॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಕ್ಮಿಣೀಶವಿಜಯೇ ಷಷ್ಠಃ ಸರ್ಗಃ ॥ ೬ ॥

* * * * * *

॥ ಶ್ರೀಮದ್ಧನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕಲಕ್ಷ್ಮೀಹಯಗ್ರೀವಾಯ ನಮಃ ॥
॥ಶ್ರೀ ಕೃಷ್ಣಶ್ರೀಃ ॥
॥ ಓಂ ಕ್ಷಿಪ್ರಪ್ರಸಾದಾಯ ನಮಃ ॥
॥ ಶ್ರೀಗುರುಭ್ಯೋ ನಮಃ ॥

ಭಾವಿಸಮೀರ ಶ್ರೀಮದ್ವಾದಿರಾಜವಿರಚಿತ

# ॥ಶ್ರೀರುಗ್ಮಿಣೀಶವಿಜಯಃ ॥

## ಪ್ರಥಮಃ ಸರ್ಗಃ

**ಶ್ರೀವೇದಾಂತಮಹಾಚಲಂ ಹಿ ಪರಿತಃ ಸಂಯೋಜ್ಯ ಸೂತ್ರಾಹಿಪಂ**
**ಸದ್ವಾತಾಗಮಪೋಷಿತಾತ್ಮಹೃದಯಂ ತತ್ಪೂರ್ವಪಕ್ಷಾಸುರೈಃ ।**
**ಸಿದ್ಧಾಂತೋಕ್ತಿಸುರೇಶ್ವರೈಶ್ಚ ಮಥಿತೋ ಯಃ ಕೃಷ್ಣದುಗ್ಧಾಂಬುಧಿಃ**
**ಸ್ವೀಯಾನಾಮಮೃತಂ ಪ್ರಯಚ್ಛತಿ ಸ ಮಾಂ ಪಾಯಾದ್ಗುಣೋದ್ಯನ್ಮಣಿಃ ॥ ೧ ॥**

**ಶ್ರೀವೇದಾಂತಮಹಾಚಲಂ**= ಶೋಭಿಸುವ ಉಪನಿಷತ್ತುಗಳೆಂಬ ಪರ್ವತಗಳನ್ನು , **ಹಿ** = ಪ್ರಸಿದ್ಧ, **ಪರಿತಃ** = ಸುತ್ತಲೂ, **ಸಂಯೋಜ್ಯ** = ಸುತ್ತುವರಿಸಿ, **ಸೂತ್ರಾಹಿಪಂ** = ಬ್ರಹ್ಮ-ಸೂತ್ರಗಳೆಂಬ ಹಗ್ಗವೆಂಬ ಸರ್ಪವನ್ನು, **ಸದ್ವಾತಾಗಮಪೋಷಿತಾತ್ಮಹೃದಯಂ**= ಒಳ್ಳೆಯ ಗಾಳಿಯ ಬರುವಿಕೆಯಿಂದ ರಕ್ಷಿಸಲ್ಪಟ್ಟ ಸೂತ್ರಗಳೆಂಬ ಸರ್ಪದ ಹೃದಯವುಳ್ಳ, **ತತ್ ಪೂರ್ವಪಕ್ಷಾಸುರೈಃ** = ಆ ಪ್ರಶ್ನೆಗಳೆಂಬ ದೈತ್ಯರಿಂದ, **ಸಿದ್ಧಾಂತೋಕ್ತಿಸುರೇಶ್ವರೈಃ** = ಉತ್ತರರೂಪವಾದ ಮಾತುಗಳೆಂಬ ಶ್ರೇಷ್ಠದೇವತೆಗಳಿಂದ, **ಚ** = ಕೂಡಾ, **ಮಥಿತಃ** = ಕಡೆಯಲ್ಪಟ್ಟ, **ಯಃ** = ಯಾವ, **ಕೃಷ್ಣದುಗ್ಧಾಂಬುಧಿಃ** = ಕೃಷ್ಣನೆಂಬ ಹಾಲಿನ ಸಮುದ್ರವು, **ಸ್ವೀಯಾನಾಂ** = ತನ್ನವರಿಗೆ, **ಅಮೃತಂ** = ಅಮೃತವನ್ನು , **ಪ್ರಯಚ್ಛತಿ** = ಕೊಡುತ್ತದೆ, **ಸಃ** = ಅಂತಹ ಕೃಷ್ಣನೆಂಬ ಕಡಲು, **ಮಾಂ** = ನನ್ನನ್ನು , **ಪಾಯಾತ್** = ರಕ್ಷಿಸಲಿ, **ಗುಣೋ-ದ್ಯನ್ಮಣಿಃ**= ಆನಂದಾದಿಗುಣಗಳೆಂಬ ಪ್ರಕಾಶಿಸುವ ರತ್ನವುಳ್ಳ.

ಈ ಗ್ರಂಥವನ್ನು ಆರಂಭಿಸುವ ಮೊದಲು ಶ್ರೀವಾದಿರಾಜರು ಶ್ರೀಕೃಷ್ಣನನ್ನು ಪ್ರಾರ್ಥಿ-ಸುತ್ತಾರೆ. ಶ್ರೀಕೃಷ್ಣನೆಂಬ ಸಮುದ್ರವು ನಮ್ಮನ್ನು ರಕ್ಷಿಸಲಿ. ಕೃಷ್ಣನನ್ನು ಸಮುದ್ರಕ್ಕೆ ಹೋಲಿ-ಸುತ್ತಾರೆ. ಸಮುದ್ರವು ಸರ್ವತ್ರ ಇದೆ. ಕೃಷ್ಣನೂ ಸರ್ವತ್ರ ಇದ್ದಾನೆ. ಸಮುದ್ರವೂ , ಕೃಷ್ಣನೂ ಅಪಾರ. ಸಮುದ್ರವು ಅನೇಕ ರತ್ನಗಳಿಗೆ ಆಶ್ರಯ. ಕೃಷ್ಣನೂ ಅನಂತಗುಣಗಳಿಗೆ ಆಶ್ರಯ.

ಸಮುದ್ರವು ದೇವತೆಗಳಿಗೆ ಅಮೃತವನ್ನು ಒದಗಿಸಿದೆ. ಕೃಷ್ಣನು ಸಜ್ಜನರಿಗೆ ಅಮೃತವನ್ನು ಅಂದರೆ ಮೋಕ್ಷವನ್ನು ಕೊಡುತ್ತಾನೆ. ಮಂದರಪರ್ವತವನ್ನು ತಂದು ವಾಸುಕಿಯನ್ನು ಅದಕ್ಕೆ ಸುತ್ತಿ ದೇವತೆಗಳೂ ದೈತ್ಯರೂ ಸೇರಿ ಸಮುದ್ರವನ್ನು ಮಥಿಸಿದಾಗ ಸಮುದ್ರದಿಂದ ಅಮೃತ ಸಿಕ್ಕಿದ್ದು. ಹಾಗೆಯೇ ಉಪನಿಷತ್ತುಗಳೆಂಬ ಪರ್ವತಕ್ಕೆ ಬ್ರಹ್ಮಸೂತ್ರಗಳೆಂಬ ಹಗ್ಗವನ್ನು ಸುತ್ತಿ ಪ್ರಶ್ನೆ-ಉತ್ತರ ಎಂಬ ದೈತ್ಯ-ದೇವತೆಗಳು ಸೇರಿ ಕೃಷ್ಣನನ್ನು ಮಥಿಸಿದಾಗ ಅಂದರೆ ವಿಮರ್ಶೆ ಮಾಡಿದಾಗ ಕೃಷ್ಣ ತನ್ನವರಿಗೆ ಅಮೃತವನ್ನು ಕೊಡುತ್ತಾನೆ.

• • • •

**ಸಂದೇಶ**

**ಅಕೌಶಲೇನ ಗ್ರಥಿತೇತಿ ಜಾತಿಪ್ರಸೂನಮಾಲಾಂ ಕಿಮು ಸಂತ್ಯಜಂತಿ**

ತಿಳಿಯದವ ನೇಯ್ದದ್ದು ಎಂದು ಒಳ್ಳೆಯ ಜಾಜಿಯ ಮಾಲೆಯನ್ನು
ಯಾರು ಪರಿತ್ಯಜಿಸುತ್ತಾರೆ?

---

ಉಪನಿಷತ್ತುಗಳನ್ನು ಪರ್ವತಕ್ಕೆ ಹೋಲಿಸಿದ್ದಾರೆ. ಪರ್ವತಗಳು ಯಾವ ಚಳಿ, ಮಳೆ, ಬೇಸಿಗೆ ಕಾಲಕ್ಕೂ ಅಚಲವಾಗಿಯೇ ಇರುತ್ತವೆ. ಯಾವ ಬದಲಾವಣೆಯೂ ಇರುವುದಿಲ್ಲ. ಹಾಗೆಯೇ ಉಪನಿಷತ್ತುಗಳೂ ಕೂಡಾ. ಯಾವ ಬ್ರಹ್ಮಕಲ್ಪದಲ್ಲಿಯೂ ಬದಲಾವಣೆಯನ್ನು ಹೊಂದದೇ ಒಂದೇ ರೀತಿಯ ಆನುಪೂರ್ವಿಯಿಂದ ಅಂದರೆ ಅಕ್ಷರಗಳ ಜೋಡಣೆಯಿಂದ ಇರುವವು. ಪರ್ವತ ಅಂದರೆ ಪರಾನ್ ಅವತಿ. ಅಂದರೆ ಬೇರೆಯವರನ್ನು ರಕ್ಷಿಸುತ್ತದೆ. ಆದ್ದರಿಂದ 'ಪರ್ವತ' ಎಂದು ಹೆಸರು. ಉಪನಿಷತ್ತುಗಳು ಕೂಡಾ ನಮ್ಮನ್ನು ದುಃಖ-ದಿಂದ ರಕ್ಷಿಸುತ್ತವೆ. ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ' ಜೀವರ ದುಃಖಪರಿಹಾರಕ್ಕಾಗಿ ಶ್ರುತಿಯು ಹೊರಟಿದೆ. ಹೀಗೆ ಅನೇಕ ರೀತಿ ಮಂದರಕ್ಕೂ ಉಪನಿಷತ್ತುಗಳಿಗೂ ಸಾಮ್ಯವಿದೆ.

ಬ್ರಹ್ಮಸೂತ್ರಗಳನ್ನು ಸರ್ಪನಿಗೆ ಹೋಲಿಸಿದ್ದಾರೆ. ಇಲ್ಲಿ ಸರ್ಪವು ಹಗ್ಗ. ಸೂತ್ರ ಎಂದೂ ಹಗ್ಗಕ್ಕೆ ಹೆಸರಿದೆ. ಹಗ್ಗ ಇಲ್ಲದೆ ಕಡೆಯಲು ಆಗುವುದಿಲ್ಲ. ಕಡೆಗೋಲು ನೇರ ನಿಲ್ಲಲು ಹಗ್ಗದ ಆವಶ್ಯಕತೆ ಇದೆ. ಉಪನಿಷತ್ತುಗಳು ನೇರ ನಿಲ್ಲುವುದು ಅಂದರೆ ಋಜುವಾಗಿ ತನ್ನ ಅರ್ಥವನ್ನು ಪ್ರತಿಪಾದಿಸುವುದು. ನಾನಾ ಮತಾಚಾರ್ಯರು ಉಪನಿಷತ್ತುಗಳನ್ನು ತಮಗೆ ಮನಬಂದಂತೆ ಜಗ್ಗಿದರು. ಫಲಿತಾಂಶ ಸೊನ್ನೆ. ನಿಶ್ಚಯಾ-ತ್ಮಕಜ್ಞಾನ ಎಂಬ ಬೆಣ್ಣೆ ಬರಲಿಲ್ಲ. ಯಾಕೆಂದರೆ, ಉಪನಿಷತ್ತು ಒಮ್ಮೆ ಭೇದದ ಕಡೆಗೆ ಒಮ್ಮೆ ಅಭೇದದ ಕಡೆಗೆ ಒಮ್ಮೆ ಭೇದಾಭೇದದ ಕಡೆಗೆ ಸುತ್ತಾಡಿತು; ಹೊರತು ಏಕತ್ರ ನಿಲ್ಲಲಿಲ್ಲ. ಆಗ ಕಡೆಗೋಲಿಗೆ ಹಗ್ಗದಂತೆ, ಉಪನಿಷತ್ತುಗಳಿಗೆ ಬ್ರಹ್ಮಸೂತ್ರದ ನೆರವು

ಬೇಕಾಯಿತು. ಸಮುದ್ರಮಥನಕಾಲದಲ್ಲಿ ಸರ್ಪನಿಗೆ ಶ್ರಮವಾಯಿತು. ಆಗ ಸದ್-ವಾತಾಗಮವಾಯಿತು. ಅಂದರೆ ಒಳ್ಳೆ ಗಾಳಿ ಬೀಸಿತು. ಸರ್ಪವು ಬಲಿಷ್ಠವಾಯಿತು. ಸರ್ಪಗಳು ಪವನಾಶನಗಳು. ಅಂದರೆ ಗಾಳಿಯಿಂದಲೂ ಬದುಕುವ ಪ್ರಾಣಿಗಳು. ಸ್ವಯಂ ತಾವು ವಿಷಜಂತುಗಳು. ತಮ್ಮ ವಿಷ ತಮಗೆ ಮಾರಕವಲ್ಲದಿದ್ದರೂ ಅನ್ಯ ವಿಷ ಮಾರಕವಾಗುತ್ತದೆ. ಆಗ ಔಷಧಿಯಂತೆ ಶುದ್ಧಗಾಳಿಯ ಸೇವನೆ ಬೇಕಾಗುತ್ತದೆ. ಆಗ ಮಥನಕ್ಕೆ ಅನುಕೂಲವಾಗುತ್ತದೆ. ಹಾಗೆಯೇ ಈ ಬ್ರಹ್ಮಸೂತ್ರಗಳೂ ಅನ್ಯರ ಕೈಗೆ ಸಿಕ್ಕಿದಾಗ ಸರ್ಪಗಳಂತೆ ಅಸಮರ್ಥಗಳಾದವು. ಆಗ ಸದ್‌ವಾತಾಗಮದಿಂದ ಬಲಿಷ್ಠಗ-ಳಾದವು. ಅಂದರೆ ಸದ್ವಾತ ಅಂದರೆ ವಾಯುದೇವರ ಅವತಾರರಾದ ಆಚಾರ್ಯ ಮಧ್ವರು. ಅವರು ಅನೇಕ ಆಗಮಶಾಸ್ತ್ರಗಳೆಂಬ ಪ್ರಮಾಣಗಳನ್ನು ಉದಾಹರಿಸಿ ಸೂತ್ರಗಳನ್ನು ಪುಷ್ಟೀಕರಿಸಿದರು. ಆಗ ವಿಮರ್ಶೆಗೆ ಅನುಕೂಲಗಳಾದವು.

ಸಮುದ್ರಮಥನದಲ್ಲಿ ದೇವದೈತ್ಯರು ಭಾಗಿಗಳಾಗಿದ್ದರು. ಹಾಗೆಯೇ ಇಲ್ಲಿ ಪ್ರಶ್ನೋತ್ತರಗಳೇ ದೇವದೈತ್ಯರು. ಮಥನಾನಂತರದಲ್ಲಿ ದೈತ್ಯರು ಉಳಿಯಲಿಲ್ಲ. ದೇವತೆಗಳಿಂದ ಹತರಾದರು. ವಿಮರ್ಶೆ ಅಂದರೆ ದೇವರ ವಿಷಯದಲ್ಲಿ ಪ್ರಶ್ನೆ-ಉತ್ತರ. ಪ್ರಶ್ನೆಗಳು ದೈತ್ಯರು. ಯಾಕೆಂದರೆ, ಉತ್ತರದಿಂದ ಪ್ರಶ್ನೆಗಳು ಹೋಗುತ್ತವೆ. ಪ್ರಶ್ನೆಗಳು ಯಾವಾಗಲೂ ದೈತ್ಯರಂತೆ ಅಸಂಬದ್ಧಗಳಾಗಿರುತ್ತವೆ. ಉತ್ತರಗಳು ದೇವತೆಗಳಂತೆ ಸಮಂಜಸಗಳಾಗಿರುತ್ತವೆ. ದೇವತೆಗಳು ಉಳಿದಂತೆ ಉತ್ತರಗಳು ಉಳಿಯುತ್ತವೆ.

ಈ ರೀತಿ ಮಥಿಸಿದ ಅನಂತರ ವರುಣದೇವ ಅಮೃತವನ್ನು ತನ್ನವರಾದ ದೇವತೆಗಳಿಗೆ ಕೊಟ್ಟಂತೆ ವಿಮರ್ಶಿಸಲ್ಪಟ್ಟ ಭಗವಂತನು ತನ್ನವರಿಗೆ ಸಾತ್ವಿಕರಿಗೆ ಅಮೃತತ್ವವನ್ನು, ಮೋಕ್ಷವನ್ನು ಕೊಟ್ಟನು. ಇಂತಹ ಗುಣಪೂರ್ಣನಾದ ಶ್ರೀಕೃಷ್ಣನು ನಮ್ಮನ್ನು ರಕ್ಷಿಸಲಿ ಎಂದು ಈ ಶ್ಲೋಕದ ಅಭಿಪ್ರಾಯ.

**ಸಚ್ಛಾಸ್ತ್ರೋದಿತವರ್ತ್ಮನಾ ಪದಮಿದಂ ಧ್ಯಾಯನ್ ಮದಂಕಾಂಕಿತೋ**
**ಮನ್ಮಂತ್ರಂ ಜಪ ಶಾಸ್ತ್ರಸಂಪದಮಥೋ ದಾಸ್ಯಾಮಿ ಭಾಗ್ಯೈಃ ಸಹ ।**
**ತತ್ತತ್ತ್ವಾನ್ಯಪಿ ಬೋಧಯಾಮಿ ತದನು ಪ್ರಾಪ್ಸ್ಯೋ ಮದಂಘ್ರಿರ್ಭವೇ-**
**ದಿತ್ಯಾಘೋಷಯತೀವ ಯಃ ಕರಚಯೈಃ ತಂ ವಾಜಿವಕ್ತ್ರಂ ಭಜೇ ॥ ೨ ॥**

ಸಚ್ಛಾಸ್ತ್ರೋದಿತವರ್ತ್ಮನಾ = ಒಳ್ಳೆಯ ಶಾಸ್ತ್ರದಲ್ಲಿ ಹೇಳಿದ ಕ್ರಮದಿಂದ, ಪದಂ = ಚರಣವನ್ನು, ಇದಂ = ಈ, ಧ್ಯಾಯನ್ = ಧ್ಯಾನಮಾಡುತ್ತಾ, ಮದಂಕಾಂಕಿತಃ = ನನ್ನ ಚಿಹ್ನೆಯಾದ ಚಕ್ರಾದಿಗಳಿಂದ ಚಿಹ್ನಿತನಾಗಿ, ಮನ್ಮಂತ್ರಂ = ನನ್ನ ಹಯಗ್ರೀವ-

ಮಂತ್ರವನ್ನು, **ಜಪ** = ಜಪಿಸು; **ಶಾಸ್ತ್ರಸಂಪದಮ್**= ಶಾಸ್ತ್ರವೆಂಬ ಸಂಪತ್ತನ್ನು, **ಅಥೋ** = ಅನಂತರ, **ದಾಸ್ಯಾಮಿ** = ಕೊಡುತ್ತೇನೆ, **ಭಾಗ್ಯೈಃ** = ಐಶ್ವರ್ಯಗಳಿಂದ, **ಸಹ** = ಕೂಡಿಕೊಂಡು, **ತತ್** = ಆ ಶಾಸ್ತ್ರಗಳ, **ತತ್ವಾನಿ ಅಪಿ** = ವಿಷಯಗಳನ್ನು ಕೂಡ, **ಬೋಧಯಾಮಿ** = ತಿಳಿಸುತ್ತೇನೆ. **ತದನು** = ಆ ತಿಳಿವಳಿಕೆಗೆ ಅನುಸಾರವಾಗಿ, **ಪ್ರಾಪ್ಯಃ** = ಹೊಂದಲು ಯೋಗ್ಯವು, **ಮದಂಘ್ರಿಃ** = ನನ್ನ ಚರಣವು, **ಭವೇತ್** = ಆಗುತ್ತದೆ **ಇತಿ** = ಈ ರೀತಿಯಾಗಿ, **ಆಘೋಷಯತೀವ** = ತಿಳಿಸುತ್ತಾನೋ ಎಂಬಂತೆ, **ಯಃ** = ಯಾರು, **ಕರಚಯೈಃ** = ಕೈಗಳ ಸಮೂಹದಿಂದ, **ತಂ** = ಅಂತಹ, **ವಾಜಿವಕ್ತ್ರಂ** = ಕುದುರೆಯ ಮುಖವುಳ್ಳ ದೇವರನ್ನು, **ಭಜೇ**= ಸೇವಿಸುತ್ತೇನೆ.

ಈ ಶ್ಲೋಕದಲ್ಲಿ ತನ್ನ ಉಪಾಸ್ಯಮೂರ್ತಿ ಹಯಗ್ರೀವನನ್ನು ಸ್ತುತಿಸುತ್ತಾರೆ. ಹಯಗ್ರೀವ ನಾಲ್ಕು ಕೈಗಳಲ್ಲಿ - ಕೆಳಗಿನ ಬಲಗೈಯಲ್ಲಿ ಜ್ಞಾನಮುದ್ರೆ, ಕೆಳಗಿನ ಎಡಗೈಯ್ಯಲ್ಲಿ ಪುಸ್ತಕ, ಹಾಗೆಯೇ ಕಿರುಬೆರಳು ಸ್ವಲ್ಪ ಕೆಳಮುಖವಾಗಿದೆ. ಮೇಲಿನ ಬಲಗೈಯಲ್ಲಿ ಶಂಖ, ಮೇಲಿನ ಎಡಗೈಯಲ್ಲಿ ಜಪಮಾಲೆ. ಇದು ಹಯಗ್ರೀವನ ಭಂಗಿ.

ಪುಸ್ತಕವು ಸಚ್ಛಾಸ್ತ್ರಕ್ಕೆ ಸೂಚಕ; ಸಚ್ಛಾಸ್ತ್ರ ಅಂದರೆ ಆಪ್ತರಿಂದ ಹೇಳಲ್ಪಟ್ಟ ಗ್ರಂಥ. ಅದರಲ್ಲಿ ದೇವರ ಚಿತ್ರಣ ಸರಿಯಾಗಿ ಇರುತ್ತದೆ. ಅಂದರೆ ಹೇಳಿದ ಕ್ರಮದಿಂದ ದೇವರನ್ನು ಭಜಿಸಬೇಕು. ಯಾವ ಭಾಗದಿಂದ ಭಜಿಸಬೇಕು ಎಂದರೆ, ಪಾದವನ್ನು ಎಂದು ತಿಳಿಸಲು ಕಿರುಬೆರಳನ್ನು ಸ್ವಲ್ಪ ಕೆಳಮುಖವಾಗಿ ಮಾಡಿದ್ದು. ಅಧ್ಯಯನ ಮಾಡಿ ಧ್ಯಾನಮಾಡುವ ಮೊದಲು ತಾನು ಸಂಸ್ಕಾರವುಳ್ಳವನು ಆಗಬೇಕು. ಸಂಸ್ಕಾರ ಏನು? ಅಂದರೆ, ಮುದ್ರಾ-ಧಾರಣೆ. ಯಾಕೆಂದರೆ, ವೇದವು 'ಧೃತೋರ್ಧ್ವಪುಂಡ್ರೋ ದರಚಕ್ರಧಾರೀ ವಿಷ್ಣುಂ ಪರಂ ಧ್ಯಾಯತಿ ಯೋ ಮಹಾತ್ಮಾ' ಗೋಪೀ ಚಂದನದಿಂದ ದ್ವಾದಶನಾಮಗಳನ್ನು ಹಾಕಿಕೊಂಡು ಚಕ್ರಶಂಖಮುದ್ರೆಗಳನ್ನು ಧರಿಸಿ ಧ್ಯಾನಮಾಡಬೇಕು ಎಂದು ಹೇಳುತ್ತದೆ. ಅದಕ್ಕಾಗಿ ಒಂದು ಕೈಯ್ಯಲ್ಲಿ ಶಂಖವನ್ನು ಧರಿಸಿದ್ದಾನೆ. ಧ್ಯಾನಕ್ಕೆ ಅಂತಃಕರಣದ ಶುದ್ಧಿ ಅಗತ್ಯ. ಅಂತಃಕರಣಶುದ್ಧಿಯು ಕರ್ಮಾಚರಣೆಯಿಂದ ಆಗುವುದು. ಕರ್ಮಣಾ ಜ್ಞಾನಮಾತನೋತಿ - ಅಂತಃಕರಣಶುದ್ಧಿದ್ವಾರಾ ಜ್ಞಾನವನ್ನು ಪಡೆಯಬೇಕು ಎಂದು ವೇದವು ಹೇಳುತ್ತದೆ. ಕರ್ಮಾಚರಣೆ ಅಂದರೆ, ಜಪ, ತಪಾದಿ ಅನುಷ್ಠಾನಗಳು. ಈ ಅನುಷ್ಠಾನವನ್ನು ತಿಳಿಸಲು ಕೈಯ್ಯಲ್ಲಿ ಜಪಮಾಲೆಯ ಧಾರಣೆ.

ಈ ರೀತಿ ಭಜಿಸುವವರಿಗೆ ಪಾರತ್ರಿಕ ಫಲ- ಭಗವಂತನ ಪದಪ್ರಾಪ್ತಿ- ಎಂದು ಕೆಳಮುಖವಾದ ಕಿರುಬೆರಳಿನಿಂದ ಸೂಚನೆ. ಈ ಲೋಕದಲ್ಲಿ ಒಳ್ಳೆಯ ಜ್ಞಾನ ಹಾಗೂ ಸಾತ್ವಿಕಸಂಪತ್ತು ಎಂದು ತಿಳಿಸಲು ಜ್ಞಾನಮುದ್ರೆ ಹಾಗೂ ಶಂಖದ ಧಾರಣೆ. ಶಂಖ

ಎನ್ನುವುದು ಒಂದು ನಿರ್ದಿಷ್ಟವಾದ ಮೊತ್ತದ ಸಂಪತ್ತಿನ ಹೆಸರು. ಇಂತಹ ಸಾಧನೆ ಹಾಗೂ ಫಲವನ್ನು ಘೋಷಣೆ ಮಾಡಲು ಕೈಯ್ಯಲ್ಲಿ ಶಂಖದ ಧಾರಣೆ.

**ಶ್ರಯೇ ಹಯಮುಖಂ ಶ್ರಾವ್ಯಕಾವ್ಯಮಾರ್ಗಸಮಾಪ್ತಯೇ ।**
**ಸರಾಗಯೋಗಿಪೂಗೋಕ್ತಸ್ತೋತ್ರತೋತ್ರವಶಂ ಮಹಃ ॥ ೩ ॥**

**ಶ್ರಯೇ** = ಆಶ್ರಯಿಸುತ್ತೇನೆ, **ಹಯಮುಖಂ** = ಕುದುರೆಯ ಮುಖವುಳ್ಳ ದೇವರನ್ನು, **ಶ್ರಾವ್ಯ** = ಕೇಳಲು ಯೋಗ್ಯವಾದ, **ಕಾವ್ಯ**= ಈ ಗ್ರಂಥವೆಂಬ, **ಮಾರ್ಗ**= ದಾರಿಯ, **ಸಮಾಪ್ತಯೇ** = ಮುಗಿಸುವುದಕ್ಕೋಸ್ಕರ, **ಸರಾಗ**= ಭಕ್ತಿಯಿಂದ ಕೂಡಿದ, **ಯೋಗಿ**= ಋಷಿಗಳ, **ಪೂಗೋಕ್ತ**= ಸಮೂಹದಿಂದ ಹೇಳಲ್ಪಟ್ಟ, **ಸ್ತೋತ್ರ**= ಸ್ತುತಿಗಳೆಂಬ, **ತೋತ್ರ**= ಚಾಟಿಯ, **ವಶಂ**= ಅಧೀನವಾದ, **ಮಹಃ** = ಬೆಳಕನ್ನು.

ಪುನಃ ಹಯಗ್ರೀವನ ಪ್ರಾರ್ಥನೆ– ಈ ಗ್ರಂಥರಚನೆ ಎಂಬ ದಾರಿಯಲ್ಲಿ ಹೊರಟಿದ್ದೇವೆ. ಈ ದಾರಿ ಕೊನೆಗೊಳ್ಳಬೇಕು. ಅದಕ್ಕಾಗಿ ಈ ಕುದುರೆಯನ್ನು ಆಶ್ರಯಿಸುತ್ತೇವೆ. ಕುದುರೆ ಚೆನ್ನಾಗಿ ಹೋಗಬೇಕಾದರೆ ಒಂದು ಬಾರುಕೋಲು ಬೇಕು. ಅದು ಯಾವುದು? ಅಂದರೆ, ಸ್ತೋತ್ರಗಳು. ಯಾರು ಮಾಡಿದ್ದು ಅಂದರೆ, ಋಜುಯೋಗಿಗಳು ಮಾಡಿದ್ದು. ಹೇಗೆ ಮಾಡಿದ್ದು ಅಂದರೆ, ದೇವರಲ್ಲಿ ಪ್ರೀತಿಯಿಂದ ಮಾಡಿದ್ದು. ಪ್ರೀತಿಯಿಂದ ಮಾಡಿದ ಸ್ತೋತ್ರಗಳಿಗೆ ದೇವರು ವಶನಾಗುತ್ತಾನೆ. ಹಾಗೆಯೇ ದಾರಿ ಸಾಗಲು ಒಂದು ದೀಪವು ಬೇಕು. ಹಯಗ್ರೀವನೇ ಒಂದು ತೇಜಸ್ಸು. ಈ ರೀತಿ ಒಬ್ಬ ಹಯಗ್ರೀವನನ್ನು ಆಶ್ರಯಿಸಿದರೆ ದಾರಿಯೂ ಸಾಗುತ್ತದೆ, ಬೆಳಕೂ ಸಿಗುತ್ತದೆ. ಆದ್ದರಿಂದ ಹಯಗ್ರೀವನನ್ನು ಆಶ್ರಯಿಸುತ್ತೇವೆ ಎಂದು ಶ್ರೀವಾದಿರಾಜರು ಹೇಳುತ್ತಾರೆ.

**ಸಿಂಜನ್ನೂಪುರಶೋಭಿಪಾದಕಮಲಾಂ ಮಂದಸ್ಮಿತೋದ್ಯನ್ಮುಖೀಂ**
**ಕಂಜಾಕ್ಷೀಂ ಕುಚಭಾರಭೀರುವಿಲಸನ್ಮಧ್ಯಾಂ ಕ್ವಣತ್ಕಂಕಣಾಮ್ ।**
**ಶಂಭ್ವಾದ್ಯೈಃ ಪರಿಸೇವಿತಾಂ ಸುವಸನಾಂ ಜಾಂಬೂನದಾಲಂಕೃತಾ-**
**ಮಂಬಾಂ ತಾಂ ಪ್ರಣತೋಽಸ್ಮಿ ಕೃಷ್ಣರಮಣೀಂ ಲಂಬಾಲಕಾಂ ರುಗ್ಮಿಣೀಮ್ ॥೪**

**ಸಿಂಜನ್** = ಶಬ್ದಮಾಡುವ, **ನೂಪುರ** = ಗೆಜ್ಜೆಯಿಂದ, **ಶೋಭಿ** = ಶೋಭಿಸುವ, **ಪಾದ**= ಕಾಲುಗಳೆಂಬ, **ಕಮಲಾಂ** = ಕಮಲಗಳುಳ್ಳ, **ಮಂದಸ್ಮಿತ** = ನಗುವಿನಿಂದ, **ಉದ್ಯತ್** = ಪ್ರಕಾಶಿಸುವ, **ಮುಖೀಂ** = ಮುಖವುಳ್ಳ, **ಕಂಜ**= ಕಮಲದಂತೆ, **ಅಕ್ಷೀಂ**= ಕಣ್ಣುಗಳುಳ್ಳ, **ಕುಚ** = ಸ್ತನಗಳ, **ಭಾರ**= ಭಾರದಿಂದ, **ಭೀರು** = ಹೆದರಿದ, **ವಿಲಸತ್**= ಶೋಭಿಸುವ, **ಮಧ್ಯಾಂ** = ಸೊಂಟವುಳ್ಳ, **ಕ್ವಣತ್** = ಧ್ವನಿಗೈಯುವ, **ಕಂಕಣಾಂ** =

ಬಳೆಗಳುಳ್ಳ, **ಶಂಭು** = [1]ಬ್ರಹ್ಮನೇ, **ಆದ್ಯೈಃ** = ಮೊದಲಾದವರಿಂದ, **ಪರಿಸೇವಿತಾಂ**= ಪೂಜಿಸಲ್ಪಡುವ, **ಸುವಸನಾಂ**= ಒಳ್ಳೆಯ ಉಡುಪುಳ್ಳ, **ಜಾಂಬೂನದ**= ಚಿನ್ನದಿಂದ, **ಅಲಂಕೃತಾಂ**= ಸಿಂಗರಿಸಲ್ಪಟ್ಟ, **ಅಂಬಾಂ** = ತಾಯಿಯಾದ, **ತಾಂ**= ಆ, **ಪ್ರಣತಃ**= ನಮಸ್ಕರಿಸುವವನು, **ಅಸ್ಮಿ** = ಆಗುತ್ತೇನೆ. **ಕೃಷ್ಣ** = ಕೃಷ್ಣನ, **ರಮಣೀಂ** = ಪತ್ನಿಯಾದ, **ಲಂಬ**= ದೀರ್ಘವಾದ, **ಅಲಕಾಂ** = ಮುಂಗುರುಳುಳ್ಳ, **ರುಗ್ಮಿಣೀಂ** = ರುಗ್ಮಿಣಿ-ಯನ್ನು.

ಹರಿಸ್ತುತಿಯ ಅನಂತರ ಶ್ರೀಸ್ತುತಿ. ರುಗ್ಮಿಣೀರೂಪಿಯಾದ ಲಕ್ಷ್ಮಿಯ ಸ್ತೋತ್ರ. ಸನ್ಯಾಸಿಗಳು ದೇವರನ್ನು ಪಾದದಿಂದ ವರ್ಣಿಸುವ ಕ್ರಮ. ಅದಕ್ಕನುಗುಣವಾಗಿ ಲಕ್ಷ್ಮಿಯನ್ನು ಪಾದದಿಂದ ವರ್ಣಿಸುತ್ತಾರೆ. ಕಮಲದಂತಹ ಪಾದಗಳು. ಪಾದಗಳಲ್ಲಿ ಧ್ವನಿ-ಗೈಯುವ ಗೆಜ್ಜೆಗಳು. ಕೂಡಲೇ ಮುಖದ ವರ್ಣನೆ. ಲಕ್ಷ್ಮಿಯ ಎಲ್ಲಾ ಅವಯವಗಳಿಗೂ ಅಭೇದವನ್ನು ತೋರಿಸುವ ಉದ್ದೇಶ. ಮಂದಹಾಸ ಹಾಗೂ ದೂರದೃಷ್ಟಿಯಿಂದ ಕೂಡಿದ ಮುಖವುಳ್ಳವಳು. ನೀರು ಸ್ವಯಂ ಪವಿತ್ರ. ಅದರಲ್ಲಿ ಹುಟ್ಟಿದ ಕಮಲವೂ ಪವಿತ್ರ. ಅಂತಹ ಕಣ್ಣುಗಳುಳ್ಳವಳು ರುಗ್ಮಿಣೀ. ಅಂದರೆ, ಅವಳ ದೃಷ್ಟಿ ನಮ್ಮ ಮೇಲೆ ಬಿತ್ತೆಂದರೆ ನಮಗೆ ಪಾವಿತ್ರ್ಯ ಎಂದರ್ಥ. ಮಾನವರ ದೃಷ್ಟಿ ದೋಷದಾಯಕ; ಇವಳದ್ದು ದೋಷ-ಹಾರಕ.

ಇನ್ನು ಎದೆ ಹಾಗೂ ಉದರ – ಸ್ತನಗಳ ಭಾರದಿಂದ ಹೊಟ್ಟೆ ಹೆದರಿ ಮುದು-ಡಿದೆಯೋ ಎಂಬಂತಿರುವ ದೊಡ್ಡದಾದ ಸ್ತನಗಳು. ಚಿಕ್ಕ ಹೊಟ್ಟೆ. ಇವುಗಳಿಂದ ಶೋಭಿತೆ. ದೊಡ್ಡದಾದ ಸ್ತನಗಳು ಎದೆಯಲ್ಲಿ ಇರಬೇಕಾದರೆ ಎದೆ ವಿಶಾಲವಾಗಿರ-ಬೇಕು. ಅಂದರೆ ಹೃದಯವೈಶಾಲ್ಯ ಬೇಕು. ಎದೆ ದೇವರ ವಾಸಸ್ಥಳ. ದಾಸರು ಸದಾ ಎನ್ನ ಹೃದಯದಲ್ಲಿ ವಾಸ ಮಾಡೋ ಶ್ರೀಹರಿ ಎಂದು ಹೇಳಿದ್ದಾರೆ. ಹೆದರಿ ಮುದುಡಿದ ಹೊಟ್ಟೆ ಅಂದರೆ ಉದರ ಚಿಕ್ಕದಿರಬೇಕು ಎಂದರ್ಥ. ಇದು ಶರೀರದ ಲಕ್ಷಣ. ಉದರ ಊಟಕ್ಕೆ ಸಂಬಂಧಿಸಿದ್ದು. ತಥಾ ಚ 'ಊಟ ಕಡಿಮೆ. ಪಾಠ ಜಾಸ್ತಿ' ಎಂಬ ವಿಷಯ-ವನ್ನು ಲಕ್ಷ್ಮಿಯು ತನ್ನ ಅವಯವಗಳಿಂದ ತೋರಿಸುತ್ತಾಳೆ ಎಂಬುದನ್ನು ರಾಜರು ಈ ರೀತಿ ಸೂಚಿಸುತ್ತಾರೆ. ಕೈತುಂಬಾ ವಸ್ತ್ರ ಆಭರಣಗಳಿಂದ ಕೂಡಿದ್ದಾಳೆ. ಸುತ್ತಮುತ್ತ ಬ್ರಹ್ಮಾದಿಗಳು ಸೇವಿಸುತ್ತಿದ್ದಾರೆ. ಮುಖದಲ್ಲಿ ಮುಂಗುರುಳು ಬಹಳ ಇವೆ. ಕೃಷ್ಣನಿಂದ ಸುಖವನ್ನು ಪಡೆಯುವ ಆದ್ದರಿಂದಲೇ ಕೃಷ್ಣರಮಣಿಯಾದ ರುಗ್ಮಿಣಿಗೆ ನಮನವು.

ಕೇವಲ ಲಕ್ಷ್ಮಿಯ ನಮನವು ಶಾಸ್ತ್ರನಿಷಿದ್ಧ. ಅದಕ್ಕಾಗಿ ಕೃಷ್ಣರಮಣೀಂ ಎಂದು

[1] ಶಂಭುರ್ಬ್ರಹ್ಮಾ। 'ಶಂಭೂಬ್ರಹ್ಮತ್ರಿಲೋಚನೌ' ಇತ್ಯಮರಃ (ವ್ಯಾ)

ಹೇಳಿ ಕೃಷ್ಣನ ಪಾರಮ್ಯದ ತಿಳುವಳಿಕೆಯಿಂದ ಕೂಡಿದ ನಮನವೇ ಲಕ್ಷ್ಮಿಗೆ ಪ್ರಶಸ್ತ ಎಂದು ತಿಳಿಸಿದರು. ಬ್ರಹ್ಮಾದಿಗಳನ್ನು ಸುತ್ತಮುತ್ತ ಇರಿಸಿ ಅವಳ ವೈಭವವನ್ನು ತೋರಿಸಿ-ದರು. ಹಾಗೆಯೇ, ಆಭರಣಗಳು, ವಸ್ತ್ರಗಳು ಇವುಗಳನ್ನು ಹೇಳಿದ್ದರಿಂದ ಸ್ತ್ರೀಯರು ಹೇಗಿರಬೇಕು ಎಂಬುದನ್ನೂ ಸೂಚಿಸಿದ್ದಾರೆ.

• • • •

**ಸಂದೇಶ**

**ವಿದಗ್ಧೈಃ ಕಿಮುಪೇಕ್ಷಣೀಯಾ ಪಯೋऽಬ್ಧಿಜಾ ಚಂಚಲಾಖ್ಯದೋಷಾತ್**

ಲಕ್ಷ್ಮಿಯು ಬಹಳ ಚಂಚಲಳು ಎಂದು ಯಾರೂ ಅವಳನ್ನು ಕಡೆಗಣಿಸುವುದಿಲ್ಲ

---

**ಸತ್ಸಂಘಮಾನಸಸರೋವರಮಧ್ಯವರ್ತೀ**
**ಕೃಷ್ಣಾಂಘ್ರಿಚಾರುಕಮಲಾರ್ಪಿತಚಿತ್ತವೃತ್ತಿಃ ।**
**ಶಾಸ್ತ್ರಾತಿಮಂಜುಪದರಂಜಿತರಮ್ಯಸಂಸತ್**
**ಆಸ್ಮಾಕಹೃತ್ಸರಸಿಜೇऽಸ್ತು ಸ ಮಧ್ವಹಂಸಃ ॥ ೫ ॥**

**ಸತ್** = ಸಜ್ಜನರ, **ಸಂಘಃ** = ಸಮೂಹದ, **ಮನಃ** = ಮನಸ್ಸೆಂಬ, **ಸರೋವರ** = ಕೊಳದ, **ಮಧ್ಯವರ್ತೀ** = ಮಧ್ಯದಲ್ಲಿರುವ, **ಕೃಷ್ಣ** = ಕೃಷ್ಣನ, **ಅಂಘ್ರಿ** = ಕಾಲುಗಳೆಂಬ, **ಚಾರು** = ಚಂದದ, **ಕಮಲ** = ಪದ್ಮದಲ್ಲಿ, **ಅರ್ಪಿತ** = ಇಡಲ್ಪಟ್ಟ, **ಚಿತ್ತ** = ಮನಃಸ್ಥಿತಿ, **ವೃತ್ತಿ** = ಕ್ರಿಯೆಗಳುಳ್ಳ, **ಶಾಸ್ತ್ರ** = ಶಾಸ್ತ್ರಗಳ, **ಅತಿಮಂಜು** = ಬಹಳ ಚಂದದ, **ಪದ** = ಶಬ್ದಗಳಿಂದ, **ರಂಜಿತ** = ವಶೀಕೃತವಾದ, **ರಮ್ಯ** = ಚಂದದ, **ಸಂಸತ್** = ಸಭೆಯುಳ್ಳ, **ಆಸ್ಮಾಕ** = ನಮ್ಮ, **ಹೃತ್** = ಹೃದಯವೆಂಬ, **ಸರಸಿಜೇ** = ಕಮಲದಲ್ಲಿ, **ಅಸ್ತು** = ಇರಲಿ, **ಸಃ** = ಆ, **ಮಧ್ವಹಂಸಃ**= ಮಧ್ವರೆಂಬ ಹಂಸವು.

ಆಚಾರ್ಯಮಧ್ವರ ಸ್ತುತಿ – ಮಧ್ವರೆಂಬ ಹಂಸಪಕ್ಷಿಯು ಸಜ್ಜನರ ಸಭೆ ಎಂಬ ಮಾನಸ ಸರೋವರದಲ್ಲಿ ಶ್ರೀಕೃಷ್ಣನ ಪಾದಗಳೆಂಬ ಕಮಲಗಳಲ್ಲಿ ಆಸಕ್ತವಾಗಿದೆ. ಮಧ್ವರಚಿತ ಶಾಸ್ತ್ರಗಳಲ್ಲಿರುವ ಶಬ್ದಗಳೆಂಬ ಪಾದಗಳಿಂದ ಸಂತೋಷಗೊಳಿಸಲ್ಪಟ್ಟ ಸಭೆಗಳುಳ್ಳದ್ದು. ಇಂತಹ ಮಧ್ವರೆಂಬ ಹಂಸವು ನಮ್ಮ ಹೃದಯಕಮಲದಲ್ಲಿ ನೆಲೆಸಲಿ.

ಹಂಸಪಕ್ಷಿಗಳು ಶುದ್ಧವಾದ ನೀರನ್ನೇ ಆಶ್ರಯಿಸುತ್ತವೆ. ಕಮಲಗಳಿಂದಲೇ ಅವುಗಳ ಮುಖ್ಯವಾದ ಜೀವನ. ಅವುಗಳ ಬಾಯಿ ಮತ್ತು ಕಾಲುಗಳು ರಕ್ತಬಣ್ಣದವುಗಳು. ಆದ್ದರಿಂದ ಬಹಳ ಆಕರ್ಷಕ.

ಮಧ್ವರು ಕೇವಲ ಹಂಸರಲ್ಲ. ಪರಮಹಂಸರು (ಸನ್ಯಾಸಿಗಳು). ಸನ್ಯಾಸಿಗಳಿಗೆ ಪರಮಹಂಸರೆಂದು ಹೆಸರು. ಮಧ್ವರು ಸದಾ ಸಜ್ಜನರ ಮನಸ್ಸಿನಲ್ಲಿ ಇರುತ್ತಾರೆ.

ಸಜ್ಜನರ ಮನಸ್ಸೂ ಮಾನಸಸರೋವರದ ನೀರಿನಂತೆ ಸ್ವಚ್ಛ. ಸಜ್ಜನರು ಸದಾ ಮಧ್ವರನ್ನು ಧ್ಯಾನಿಸುತ್ತಾರೆ. ಮಧ್ವರು ಸದಾ ಶ್ರೀಕೃಷ್ಣನ ಚರಣವನ್ನೇ ಆಶ್ರಯಿಸಿದವರು. ಚರಣಗಳು ಕಮಲಗಳಂತೆ ಕೋಮಲಗಳು. ಮಧ್ವರು ತನ್ನ ಶಾಸ್ತ್ರಗಳಲ್ಲಿ ಒಳ್ಳೆಯ ಶಬ್ದಗಳನ್ನು ಸೇರಿಸಿದ್ದಾರೆ. ಅಂದರೆ ನಾನಾರ್ಥಕವಾದ ಶಬ್ದಗಳು ಬಹಳ ಇವೆ. ಹಾಗೆಯೇ ತನ್ನ ಬಾಯಿಯಿಂದ ಅಂದರೆ ಮಾತಿನಿಂದ ಜನರನ್ನು ತನ್ನತ್ತ ಸೆಳೆಯುವ ಶಕ್ತಿ ಉಳ್ಳವರು. ಈ ರೀತಿಯಾಗಿ ಹಂಸಪಕ್ಷಿಗಳಂತೆ, ಆಚಾರ್ಯಮಧ್ವರು ಹಂಸಪಕ್ಷಿಗಳು. ತಮ್ಮ ಕಾಲಿನ ನಡಿಗೆಯಿಂದ ಅಥವಾ ಕಾಲಿನಿಂದ ಹಾಗೂ ತಮ್ಮ ಮುಖದಿಂದ, ಮಧ್ವರು ತಮ್ಮ ಶಾಸ್ತ್ರದ ಶಬ್ದಗಳಿಂದ ಹಾಗೂ ಮುಖದಿಂದ ಹೊರಟ ಮಾತುಗಳಿಂದ ಜನರನ್ನು ರಸಿಕರನ್ನು ತಮ್ಮತ್ತ ಸೆಳೆಯುವ ಶಕ್ತಿಯುಳ್ಳವರು. ರಸಿಕರು ಅಂದರೆ ಹಂಸ-ಪಕ್ಷಿಗಳಿಗಾಗುವಾಗ ಲೋಕದ ರಸಿಕರು. ಮಧ್ವರಿಗಾಗುವಾಗ ದೇವರ ಪ್ರಜ್ಞೆಯುಳ್ಳ-ವರು. ಯಾಕೆಂದರೆ, ರಸೋ ವೈ ಸಃ ದೇವರೇ ರಸವು ಎಂದರೆ ಸಾರವು ಎಂದು ಉಪನಿಷತ್ತು ಹೇಳುತ್ತದೆ. ಆದ್ದರಿಂದ 'ಆಧ್ಯಾತ್ಮಿಕರನ್ನು' ಎಂದು ರಸಿಕಶಬ್ದಕ್ಕೆ ಅರ್ಥ.

ಇಂತಹ ಮಧ್ವರು ನಮ್ಮ ಹೃದಯದಲ್ಲಿ ನೆಲೆಸಬೇಕಾದರೆ ನಮ್ಮ ಹೃದಯವೂ ನೀರಿನಂತೆ ಸ್ವಚ್ಛವಾಗಿರಬೇಕು. ಹಾಗೆಯೇ ತಳಸ್ಪರ್ಶಿಯಾದ ಜ್ಞಾನಕ್ಕೆ ನಮ್ಮ ಮನಸ್ಸು ಸ್ವಚ್ಛವಾಗಿರಬೇಕು. ತಿಳಿನೀರಿನಲ್ಲಿ ತಳದಲ್ಲಿರುವ ವಸ್ತುವೂ ಕಾಣುತ್ತದೆ. ಹಾಗೆಯೇ ನಮ್ಮ ಮನಸ್ಸಿನಲ್ಲಿಯೂ ತಳಸ್ಪರ್ಶಿಯಾದ ಜ್ಞಾನ ಇರಬೇಕು. ಆಗ ಮಧ್ವರನ್ನು ನಮ್ಮ ಮನಸ್ಸಿಗೆ ಕರೆಯಲು ನಾವು ಅಧಿಕಾರಿಗಳು ಆಗುತ್ತೇವೆ. ಮಧ್ವರು ಬರುವಾಗ ತನ್ನ ಆಹಾರವಾದ ಅಂದರೆ ತನಗೆ ಆಶ್ರಯವಾದ ದೇವರೆಂಬ ಕಮಲವನ್ನೂ ತರುತ್ತಾರೆ.

**ತಾಟಂಕದ್ವಯಶೋಭಿಕರ್ಣಯುಗಲಂ ಭ್ರಾಜದ್ದಯಾವೀಕ್ಷಣಂ**
**ಪೂರ್ಣೇಂದುದ್ಯುತಿ ವಿದ್ರುಮಾಧರರುಚಾ ವ್ಯಾಮಿಶ್ರಮಂದಸ್ಮಿತಮ್ ।**
**ಈಷತ್ಕುಂಚಿತಕುಂತಲಂ ಸತಿಲಕಂ ನಾಸೋಲ್ಲಸನ್ಮೌಕ್ತಿಕಂ**
**ಭೂಯಾತ್ಕೂರ್ಮಸದೃಕ್ಷಗಂಡಯುಗಲಂ ವಾಣೀಮುಖಂ ಶ್ರೇಯಸೇ ॥ ೬ ॥**

**ತಾಟಂಕ** = ಓಲೆಗಳ, **ದ್ವಯ** = ಎರಡರಿಂದ, **ಶೋಭಿ** = ಶೋಭಿಸುವ, **ಕರ್ಣ** = ಕಿವಿಗಳ, **ಯುಗಲಂ** = ದ್ವಂದ್ವವುಳ್ಳ, **ಭ್ರಾಜತ್** = ಶೋಭಿಸುವ, **ದಯಾ** = ದಯೆಯಿಂದ ಕೂಡಿದ, **ವೀಕ್ಷಣಂ** = ನೋಟವುಳ್ಳ, **ಪೂರ್ಣ** = ಹುಣ್ಣಿಮೆಯ, **ಇಂದು** = ಚಂದ್ರನಂತೆ, **ದ್ಯುತಿ** = ಕಾಂತಿಯುಳ್ಳ, **ವಿದ್ರುಮ** = ಹವಳದಂತಿರುವ, **ಅಧರ** = ತುಟಿಯ, **ರುಚಾ** = ಕಾಂತಿಯಿಂದ, **ವ್ಯಾಮಿಶ್ರ** = ಕೂಡಿದ, **ಮಂದಸ್ಮಿತಂ** =

ಮುಗುಳ್ನಗುವುಳ್ಳ, **ಈಷತ್** = ಸ್ವಲ್ಪ, **ಕುಂಚಿತ** = ಡೊಂಕಾದ, **ಕುಂತಲಂ** = ಕೂದಲುಳ್ಳ, **ಸತಿಲಕಂ** = ತಿಲಕದಿಂದ ಕೂಡಿದ, **ನಾಸಾ** = ಮೂಗಿನಲ್ಲಿ, **ಉಲ್ಲಸತ್** = ಹೊಳೆಯುವ, **ಮೌಕ್ತಿಕಂ** = ಮೂಗುತಿಯುಳ್ಳ, **ಭೂಯಾತ್** = ಆಗಲಿ, **ಕೂರ್ಮ** = ಆಮೆಗೆ, **ಸದೃಶ** = ಸಮಾನವಾದ, **ಗಂಡ** = ಕಪೋಲಗಳ, **ಯುಗಲಂ** = ದ್ವಂದ್ವವುಳ್ಳ, **ವಾಣೀ** = ಭಾರತಿಯ, **ಮುಖಂ** = ಮುಖವು, **ಶ್ರೇಯಸೇ** = ಕ್ಷೇಮ- ಕ್ಕೋಸ್ಕರ.

**ಭಾರತಿಯ ಸ್ತೋತ್ರ** – ಕಿವಿಗಳಲ್ಲಿ ಆಭರಣಗಳನ್ನು ಧರಿಸಿದ್ದಾಳೆ. ಸಜ್ಜನರಲ್ಲಿ ದಯೆಯಿಂದ ಕೂಡಿದ ಕಣ್ಣುಗಳುಳ್ಳವಳು. ಮುಖವು ಪೂರ್ಣಚಂದ್ರನಂತೆ ಕಾಂತಿ-ಯುಳ್ಳದ್ದು. ತುಟಿಗಳು ಹವಳದಂತೆ ಕೆಂಪಗಿವೆ. ಅಂತಹ ತುಟಿಗಳಿಂದ ಮಂದಹಾಸವು ಹೊರಡುತ್ತಿದೆ. ವಕ್ರವಾದ ಮುಂಗುರುಳಿನಿಂದ ಕೂಡಿದ ಮುಖ. ಹಣೆಯಲ್ಲಿ ತಿಲಕವಿದೆ. ಮುತ್ತಿನ ಮೂಗುತಿಯು ಶೋಭಿಸುತ್ತಿದೆ. ದವಡೆಯು ಆಮೆಯ ಬೆನ್ನಿನಂತೆ ದುಂಡಗಿದೆ. ಇಂತಹ ಭಾರತಿಯ ಮುಖವನ್ನು ನಾನು ಆಶ್ರಯಿಸುತ್ತೇನೆ.

ಲಕ್ಷ್ಮಿಯನ್ನು ವರ್ಣಿಸುವಾಗ ಮುಖವನ್ನು ಹೆಚ್ಚು ವರ್ಣಿಸಲಿಲ್ಲ. ಭಾರತಿಯ ಮುಖದಲ್ಲಿ ವರ್ಣಿಸಲು ಇನ್ನು ಉಳಿದ ಭಾಗವಿಲ್ಲ. ಭಾರತಿಯ ಮುಖವನ್ನು ಚೆನ್ನಾಗಿ ಪರಿಚಯಿಸಿಕೊಟ್ಟ ವಾದಿರಾಜರು ತಮ್ಮ ಋಜುತ್ವವನ್ನು ಇಲ್ಲಿ ತಿಳಿಸುತ್ತಾರೆ. ಪತ್ನಿಯ ಮುಖದ ಪರಿಚಯ ಪತಿಗಲ್ಲದೆ ಇನ್ನಾರಿಗೆ ಇರುತ್ತದೆ? ಭಾರತಿಯ ಪತಿ ಋಜು ಹೊರತು ಮತ್ತೊಬ್ಬನಿಲ್ಲ. ಆದ್ದರಿಂದ ಭಾರತಿಯ ಮುಖವನ್ನು ಚೆನ್ನಾಗಿ ಚಿತ್ರಿಸಿದ ವಾದಿರಾಜರು ಭಾರತೀಪತಿಯೇ ಆಗಬೇಕು. (ಭಾರತೀ ಎಂಬ ನಾಮವು ಎಲ್ಲ ಋಜುಪತ್ನಿಯರಿಗೂ ಇರುವುದು; ಮತ್ತು ಅವರೆಲ್ಲರೂ ಋಜುಗಳಂತೆಯೇ ಪರಸ್ಪರ ಸಮಾನರು).

ಇದರ ಜೊತೆಗೆ ಉತ್ತಮಸ್ತ್ರೀಯರ ಮುಖದ ಲಕ್ಷಣವನ್ನೂ ತಿಳಿಸಿದಂತಾಯಿತು. ಇವುಗಳಲ್ಲಿ ಯಾವುದಾದರೊಂದು ಕಡಿಮೆ ಇದ್ದರೂ ಸ್ತ್ರೀತ್ವದ ಮಟ್ಟ ಕಮ್ಮಿಯೇ ಸರಿ. ಹೀಗೆ ಲಕ್ಷ್ಮೀ, ಭಾರತಿ ಇಬ್ಬರನ್ನೂ ಜೊತೆಗೆ ವರ್ಣಿಸಿದರೆ ಒಬ್ಬಳು ಸ್ತ್ರೀಗೆ ಬೇಕಾದ ಎಲ್ಲಾ ಲಕ್ಷಣಗಳೂ ಸಿಗುತ್ತವೆ.

> ಶ್ರೀನಾಥಕೀರ್ತ್ಯಂಬುಜಸೇವ್ಯಗಂಧಂ
> ಪ್ರಾಣಃ ಸ ಸಂಗೃಹ್ಯ ವಿಹರ್ತುಮೀಷ್ಟೇ ।
> ಸೋऽಹಂ ತದೀಯಾಗಮವಿಸ್ಮೃತಂ
> ತದ್ವಾಣೀಮುಖಂ ವಾಸಯಿತುಂ ವೃಣೋಮಿ ॥ ೭ ॥

**ಶ್ರೀನಾಥ** = ಲಕ್ಷ್ಮೀಪತಿಯ, **ಕೀರ್ತಿ** = ಕೀರ್ತಿಗಳೆಂಬ, **ಅಂಬುಜ** = ಕಮಲಗಳ, **ಸೇವ್ಯ** = ಸೇವಿಸಲು ಯೋಗ್ಯವಾದ, **ಗಂಧಂ** = ಒಂದಂಶವನ್ನು, **ಪ್ರಾಣಃ** = ಮುಖ್ಯ-ಪ್ರಾಣನು, **ಸಃ** = ಆ, **ಸಂಗೃಹ್ಯ** = ಸ್ವೀಕರಿಸಿ, **ವಿಹರ್ತುಂ** = ವಿಹರಿಸಲು, **ಈಷ್ಟೇ** = ಸಮರ್ಥನಿದ್ದಾನೆ. **ಸಃ** = ಪ್ರಸಿದ್ಧನಾದ, **ಅಹಂ** = ನಾನು, **ತದೀಯ** = ವಾಯು-ಸಂಬಂಧಿಯಾದ, **ಆಗಮ** = ಶಾಸ್ತ್ರದಿಂದ, **ವಿಸೃತಂ** = ಪ್ರಕಟಿತವಾದ, **ತಂ** = ಆ ಗಂಧವನ್ನು, **ವಾಣೀಮುಖಂ** = ಮಾತನ್ನು, **ವಾಸಯಿತುಂ** = ಪರಿಮಳವನ್ನಾಗಿ ಮಾಡಲು, **ವೃಣೋಮಿ** = ಸ್ವೀಕರಿಸುತ್ತೇನೆ.

ದೇವರ ಕೀರ್ತಿ ಎಂಬುದೇ ಕಮಲದ ಪರಿಮಳ. ಈ ಪರಿಮಳವನ್ನು ಅನುಭವಿಸಲು ವಾಯುದೇವರು ಸಮರ್ಥರು. ನಾನು ಅಷ್ಟು ಸಮರ್ಥನಲ್ಲ. ಆದರೆ ಮಧ್ವರ ಶಾಸ್ತ್ರದಿಂದ ಆ ಪರಿಮಳವು ದುರ್ಲಭ ಅಲ್ಲ. ಆದ್ದರಿಂದ ನಾನು ಈ ಪರಿಮಳವನ್ನು ಸ್ವೀಕರಿಸುತ್ತೇನೆ. ನನ್ನ ವಾಣಿಯ ಮುಖವನ್ನು ಪರಿಮಳಿಸುತ್ತೇನೆ ಎಂದು ರಾಜರು ತನ್ನ ಗ್ರಂಥದ ಬಗ್ಗೆ ಪ್ರತಿಜ್ಞೆ ಮಾಡುತ್ತಾರೆ.

ಪುಷ್ಪದ ಪರಿಮಳವನ್ನು ಒಯ್ದು ಜನರಿಗೆ ತಲುಪಿಸಲು ಗಾಳಿಗೆ ಮಾತ್ರ ಸಾಧ್ಯ. ಪರಿಮಳದ ಪರಿಚಯವಾಗುವುದೇ ಗಾಳಿಯಿಂದ. ದೇವರ ಗುಣಗಳ ಪರಿಚಯವೂ ವಾಯುದೇವರಿಗೇ ಸಾಧ್ಯ. ಅವರಿಗೂ ಪೂರ್ಣ ಸಾಧ್ಯ ಇಲ್ಲ ಎಂದು ತಿಳಿಸಲು ಗಂಧ-ಶಬ್ದವನ್ನು ಬಳಸಿದ್ದು. ವಾಯುದೇವರ ಅವತಾರರಾದ ಮಧ್ವರು ದೇವರ ಗುಣಗಳ ಪರಿಚಯವನ್ನು ನಮಗೆ ಮಾಡಿಸುವವರು. ಮಧ್ವರು ಉತ್ತಮ ಅಧಿಕಾರಿಗಳು. ನಾವು ಅಧಮಾಧಿಕಾರಿಗಳು. ಆದ್ದರಿಂದ ನಾವೇ ದೇವರ ಗುಣಗಳನ್ನು ಪರಿಚಯಿಸಿಕೊಳ್ಳಲು ಅಸಮರ್ಥರು. ಗಾಳಿಯ ಆಗಮನದಿಂದ ಗಂಧದ ಪರಿಚಯವಾಗುವಂತೆ ಮಧ್ವರ ಆಗಮನದಿಂದ (ಶಾಸ್ತ್ರದಿಂದ) ನಮಗೆ ದೇವರ ಗುಣಗಳ ಪರಿಚಯ ಆಗುತ್ತದೆ. ಗಾಳಿಗೆ ಅಭಿಮುಖವಾಗಿ ಇರುವವನಿಗೆ ಮಾತ್ರ ಗಂಧದ ಪರಿಮಳ ಬರುತ್ತದೆ. ವಿಮುಖನಾದವನಿಗೆ ಇಲ್ಲ. ಅದೇ ರೀತಿ ಮಧ್ವರಿಗೆ ಅನುಕೂಲನಾದವನಿಗೆ ಅವರ ಶಾಸ್ತ್ರದಿಂದ ಗುಣಗಳ ಪರಿಚಯ ಆಗುತ್ತದೆ. ಇಂತಹ ಗಂಧದಿಂದ ವಾಣೀಮುಖವನ್ನು ಅಂದರೆ, ಮಾತನ್ನು ಶುದ್ಧೀಕರಿಸುವುದು ಎಂದು ಅರ್ಥ. ಲೌಕಿಕವಾಗಿ ಒಬ್ಬ ವಿಲಾಸಿಯು ವಾಣೀಮುಖವನ್ನು ಅಂದರೆ ವಾಣೀ ಎಂದು ಹೆಸರುಳ್ಳ ತನ್ನ ಪತ್ನಿಯ ಮುಖವನ್ನು ಗಂಧದಿಂದ ಶುದ್ಧೀಕರಿಸು-ತ್ತಾನೆ ಎಂದರ್ಥ. ದೇವರ ಗುಣಗಾನದಿಂದಲೇ ನಮ್ಮ ಮಾತು ಶುದ್ಧವಾಗುವುದು ಎಂದು ತಾತ್ಪರ್ಯ.

**ಹಯಾಸ್ಯನಾಸಾಪುಟಜಾತವಾತ-**
**ವಿಘಾತಧೂತಾಘಪಲಾಲಜಾತಃ ।**
**ಮುನೀಶವಾಗೀಶಸುತಃ ಸುರಮ್ಯಾಂ**
**ಹರೇಃ ಕಥಾಂ ಶಂಸತಿ ವಾದಿರಾಜಃ ॥ ೮ ॥**

**ಹಯಾಸ್ಯ** = ಹಯಗ್ರೀವನ, **ನಾಸಾ** = ಮೂಗಿನ, **ಪುಟ** = ರಂಧ್ರದಿಂದ, **ಜಾತ** = ಹುಟ್ಟಿದ, **ವಾತ** = ಗಾಳಿಯ, **ವಿಘಾತ** = ಹೊಡೆತದಿಂದ, **ಧೂತ** = ಹಾರಿಹೋದ, **ಅಘ** = ಪಾಪವೆಂಬ, **ಪಲಾಲ** = ಹೊಟ್ಟುಗಳ, **ಜಾತಃ** = ಸಮೂಹವುಳ್ಳ, **ಮುನೀಶ** = ಮುನಿಶ್ರೇಷ್ಠರಾದ, **ವಾಗೀಶ** = ವಾಗೀಶತೀರ್ಥರ, **ಸುತಃ** = ಕರಕಮಲಸಂಜಾತರಾದ, **ವಾದಿರಾಜಃ** = ವಾದಿರಾಜರು, **ಸುರಮ್ಯಾಂ** = ಒಳ್ಳೆಯ, **ಹರೇಃ** = ದೇವರ, **ಕಥಾಂ** = ಚರಿತ್ರೆಯನ್ನು , **ಶಂಸತಿ** = ಹೇಳುತ್ತಾರೆ.

ಗ್ರಂಥರಚನೆಯ ವಿಷಯದಲ್ಲಿ ತನಗೆ ಯಾವುದೇ ವಿಘ್ನಗಳಿಲ್ಲ ಎಂಬುದನ್ನು ರಾಜರು ತಿಳಿಸುತ್ತಾರೆ. ಕುದುರೆಯ ಮುಂದೆ ಆಹಾರವನ್ನು ಹಾಕಿದಾಗ ಅದು ತನ್ನ ಮೂಗಿನ ಗಾಳಿಯಿಂದ ಆಹಾರದಲ್ಲಿರುವ ಕಶ್ಮಲವನ್ನು ಓಡಿಸುತ್ತದೆ. ಅದೇ ರೀತಿ ವಾದಿರಾಜರು ಸದಾ ಹಯಗ್ರೀವನ ಮುಂದೆಯೇ ಇರುತ್ತಾರೆ. ಹಯಗ್ರೀವನ ಮೂಗಿನ ಗಾಳಿಯ ಸಂಪರ್ಕವು ವಾದಿರಾಜರಿಗೆ ಯಾವಾಗಲೂ ಆಗುತ್ತಿದೆ. ಅದರ ಪರಿಣಾಮವಾಗಿ ರಾಜರಲ್ಲಿ ಯಾವ ದೋಷಗಳೂ ಇರುವುದಿಲ್ಲ. ಇಂತಹ ರಾಜರು ಶ್ರೀವಾಗೀಶತೀರ್ಥರ ಆಶ್ರಮಶಿಷ್ಯರು. ಇವರು ದೇವರ ಚರಿತ್ರೆಯನ್ನು ಹೇಳುತ್ತಾರೆ.

ಮೂಗಿನ ಗಾಳಿಯಿಂದ ತೃಣಗಳು ದೂರವಾಗಿ ಆಹಾರ ಶುದ್ಧವಾಗುತ್ತದೆ ಎಂದು ಹೇಳಿದ್ದರಿಂದ ದೇವರ ಅನುಗ್ರಹ ಮುಖ್ಯಪ್ರಾಣನ ಮೂಲಕ ಬರಬೇಕು ಎಂದು ತಿಳಿಸುತ್ತಾರೆ. ಪಾಪಗಳು ತೃಣಪ್ರಾಯಗಳು ಎಂದೂ ತಿಳಿಯುತ್ತದೆ. ವಾದಿರಾಜ ಎಂದು ತನ್ನನ್ನು ಹೇಳಿಕೊಂಡಿದ್ದರಿಂದ ತನಗೆ ಗ್ರಂಥಕರಣಶಕ್ತಿಯನ್ನು ತಿಳಿಸುತ್ತಾರೆ. ವಾದಿಗಳಿಗೆ ಅಂದರೆ ಒಳ್ಳೆಯ ಮಾತುಗಾರರಿಗೆ ರಾಜ ಎಂದರೆ ಒಡೆಯ ಎಂದರ್ಥ. ವಾಗೀಶಸುತಃ ಎಂದು ಹೇಳಿದ್ದರಿಂದ ನಮಗೆ ಇಂತಹ ಶಕ್ತಿಗಳು ಗುರುವಿನ ಅನುಗ್ರಹದಿಂದಲೇ ಬರ-ಬೇಕು ಎಂದು ಸೂಚಿಸುತ್ತಾರೆ.

**ಅಪಂಡಿತೇನಾಪಿ ಮಯಾರ್ಜಿತೇಯಂ**
**ಮುಕುಂದಲೀಲಾ ಕವಿಕಂಠಮಾಲಾ ।**

**ಅಕೌಶಲೇನ ಗ್ರಥಿತೇತಿ ಜಾತಿ-**
**ಪ್ರಸೂನಮಾಲಾಂ ಕಿಮು ಸಂತ್ಯಜಂತಿ ॥ ೯ ॥**

**ಅಪಂಡಿತೇನ ಅಪಿ** = ಪಂಡಿತನಲ್ಲದಿದ್ದರೂ, **ಮಯಾ** = ನನ್ನಿಂದ, **ಆರ್ಜಿತಾ** = ಸಂಪಾದಿಸಲ್ಪಟ್ಟ, **ಇಯಂ** = ಈ, **ಮುಕುಂದಲೀಲಾ** = ದೇವರ ಲೀಲೆಯು, **ಕವಿ** = ಜ್ಞಾನಿಗಳ, **ಕಂಠ** = ಕುತ್ತಿಗೆಯ, **ಮಾಲಾ** = ಮಾಲೆಯು, **ಅಕೌಶಲೇನ** = ಸೋಮಾರಿ-ಯಿಂದ, **ಗ್ರಥಿತಾ** = ಕಟ್ಟಲ್ಪಟ್ಟದ್ದು, **ಇತಿ** = ಎಂದು, **ಜಾತಿ** = ಜಾಜಿ ಎಂಬ, **ಪ್ರಸೂನ** = ಪುಷ್ಪಗಳ, **ಮಾಲಾಂ** = ಮಾಲೆಯನ್ನು, **ಕಿಂ** = ಏನು, **ಸಂತ್ಯಜಂತಿ** = ಬಿಸಾಡು-ತ್ತಾರೋ?

ಈ ಶ್ಲೋಕದಲ್ಲಿ ಅಹಂಕಾರದ ಖಂಡನೆ – ತುಂಬಾ ಪಂಡಿತನಲ್ಲದ ನಾನು ಈ ಗ್ರಂಥವನ್ನು ರಚಿಸಿದ್ದೇನೆ. ಜ್ಞಾನಿಗಳ ಹೃದಯಕ್ಕೆ ಮಾಲಿಕೆಯಂತಿದೆ. ಆದರೆ, ಪಂಡಿತರು ಈ ಗ್ರಂಥವನ್ನು ತಿರಸ್ಕರಿಸಬಾರದು. ಕಾವ್ಯರಚನೆ ಉತ್ತಮವಾಗಿರದಿದ್ದರೂ ದೇವರ ಲೀಲೆಗಳ ಮೇಲಿನ ಪ್ರೀತಿಯಿಂದ ಈ ಗ್ರಂಥವನ್ನು ಸ್ವೀಕರಿಸಬೇಕು. ಹೇಗೆಂದರೆ, ಹಾರ ಚೆನ್ನಾಗಿರ-ದಿದ್ದರೂ ಹಾರದಲ್ಲಿ ಇರುವ ಉತ್ತಮ ಪುಷ್ಪಗಳ ಆಸೆಯಿಂದ ಹಾರವನ್ನು ಸ್ವೀಕರಿಸುವಂತೆ ಎಂದು ರಾಜರು ಈ ಶ್ಲೋಕದಲ್ಲಿ ಹೇಳುತ್ತಾರೆ.

ಇದರಿಂದ ಜಗತ್ತಿಗೆ ಒಂದು ನೀತಿ – ಲೋಕದಲ್ಲಿ ಜನರು ತಮಗೆ ಏನೂ ಬರು-ವುದಿಲ್ಲ ಎಂದು ದೇವರ ವಿಷಯದಲ್ಲಿ ಏನೂ ಮಾಡುವುದಿಲ್ಲ. ಹಾಗೆ ಕೂಡದು. ಏನೂ ಬರದಿದ್ದರೂ ಪ್ರಯತ್ನ ಮಾಡಬೇಕು ಎಂದು ಸೂಚಿಸುತ್ತಾರೆ. ಹೊರತು ತಾನು ಅಪಂಡಿತ ಎಂದು ಅರ್ಥವಲ್ಲ. ತಾನು 'ಅಪಂಡಿತ' ಅಂದರೆ, 'ಅ+ಪಂಡಿತ', ಅ = ದೇವರು, ದೇವರ ವಿಷಯದಲ್ಲಿ ಪಂಡಿತ ಎಂದರ್ಥ.

**ಅಪಿ ಪ್ರಮಾದಾಗತದೋಷಲೇಶಾ-**
**ಮಿಮಾಂ ಕವಿತ್ವಶ್ರಿಯಮಾದ್ರಿಯಧ್ವಮ್ ।**
**ಬುಧಾ ವಿದಗ್ಧೈಃ ಕಿಮುಪೇಕ್ಷಣೀಯಾ**
**ಪಯೋಽಬ್ಧಿಜಾ ಚಂಚಲತಾಖ್ಯದೋಷಾತ್ ॥ ೧೦॥**

**ಅಪಿ** = ಕೂಡಾ, **ಪ್ರಮಾದ** = ಮರೆಯುವಿಕೆಯಿಂದ, **ಆಗತ** = ಉಂಟಾದ, **ದೋಷ-ಲೇಶಾಂ** = ಸ್ವಲ್ಪದೋಷವುಳ್ಳ, **ಇಮಾಂ** = ಈ, **ಕವಿತ್ವ** = ಜ್ಞಾನವೆಂಬ, **ಶ್ರಿಯಂ** = ಸಂಪತ್ತನ್ನು, **ಆದ್ರಿಯಧ್ವಂ** = ಗೌರವಿಸಿರಿ; **ಹೇ ಬುಧಾಃ** = ಎಲೈ ಪಂಡಿತರೇ! **ವಿದಗ್ಧೈಃ** = ತಿಳಿದವರಿಂದ, **ಕಿಂ** = ಏನು, **ಉಪೇಕ್ಷಣೀಯಾ** = ತಿರಸ್ಕರಿಸಲ್ಪಡುವಳು,

**ಪಯೋऽಬ್ಧಿಜಾ** = ಕ್ಷೀರಸಮುದ್ರದಲ್ಲಿ ಕಾಣಿಸಿದ ಲಕ್ಷ್ಮಿಯು, **ಚಂಚಲತಾ** = ಚಾಂಚಲ್ಯವೆಂಬ, **ಆಖ್ಯಾ** = ಹೆಸರುಳ್ಳ, **ದೋಷಾತ್**= ದೋಷದಿಂದ.

ತಿಳಿಯದವರು ಮಾಡಿದ ಈ ಗ್ರಂಥದಲ್ಲಿ ದೋಷಗಳು ಇರುವುದರಿಂದ ಈ ಗ್ರಂಥವು ಗ್ರಾಹ್ಯ ಹೇಗೆ? ಎಂಬ ಪ್ರಶ್ನೆಗೆ ಇಲ್ಲಿದೆ ಉತ್ತರ –

ಅಪ್ಪಿ ತಪ್ಪಿ ಏನಾದರೂ ದೋಷ ಈ ಗ್ರಂಥದಲ್ಲಿ ಇರಬಹುದು. ಆದರೂ ಈ ಕಾವ್ಯ ಎಂಬ ಸಂಪತ್ತನ್ನು ಸಜ್ಜನರು ಸ್ವೀಕರಿಸಬೇಕು. ಹೇಗೆಂದರೆ, ಕಡಲಿನಿಂದ ಹುಟ್ಟಿದ ಲಕ್ಷ್ಮಿಯನ್ನು ಇವಳು ಚಂಚಲೆ ಎಂದು ಯಾರೂ ತ್ಯಜಿಸುವುದಿಲ್ಲ. ಹಾಗೆಯೇ, ಲಕ್ಷ್ಮಿಯ ಉಗಮಸ್ಥಾನ ಕಡಲು. ಉಪ್ಪುನೀರಿನಿಂದ ಕೂಡಿದ್ದು. ಆದ್ದರಿಂದ ಚೆನ್ನಾಗಿಲ್ಲ. ಆದರೂ ಜನ ಅವಳನ್ನು ತಮ್ಮ ಮನೆಗೆ ಆಮಂತ್ರಿಸುತ್ತಾರೆ. ಅವಳಲ್ಲಿರುವ ಚಾಂಚಲ್ಯಾದಿ ದೋಷಗಳನ್ನು ಬಿಡಿಸಲು ಪ್ರಯತ್ನ ಮಾಡುತ್ತಾರೆ. ಅದೇ ರೀತಿ ಈ ಗ್ರಂಥದಲ್ಲಿಯೂ ಏನಾದರೂ ದೋಷಗಳಿದ್ದರೆ ಅದನ್ನು ತಮ್ಮ ಪ್ರಯತ್ನದಿಂದ ದೂರಮಾಡಿ ಸ್ವೀಕರಿಸಬೇಕು ಎಂದು ಆಂತರ್ಯ.

● ● ● ●

**ಸಂದೇಶ**

**ಲೋಕೇ ಪತಿನಿಂದಕೇಭ್ಯಃ ಪತಿವ್ರತಾನಾಂ ಅಪರಃ ಕ್ವ ಭಾರಃ**

ಪತಿವ್ರತೆಯರಿಗೆ ಭಾರ ಯಾರು ಅಂದರೆ ತಮ್ಮ ಪತಿಗಳನ್ನು ನಿಂದಿಸುವವರೇ ಹೊರತು ಬೇರೆ ಯಾರೂ ಅಲ್ಲ

---

**ಅಸಂಖ್ಯಪಾಪಾಚಲಕೋಟಿಭಾಜಾಂ**
**ದಿತೇಃ ಸುತಾನಾಂ ವಶಮಾಗತೇಯಮ್ ।**
**ಅಸಹ್ಯಭಾರಾರ್ದಿತಸರ್ವಗಾತ್ರೀ**
**ಜಗಾಮ ಧಾತ್ರೀ ಶರಣಂ ವಿರಿಂಚಮ್ ॥ ೧೧ ॥**

**ಅಸಂಖ್ಯ** = ಬಹಳ, **ಪಾಪ** = ಪಾಪಗಳೆಂಬ, **ಅಚಲಾ** = ಪರ್ವತಗಳ, **ಕೋಟಿ** = ಕೋಟಿಯನ್ನು, **ಭಾಜಾಂ** = ಹೊಂದಿರುವ, **ದಿತೇಃ** = ದಿತಿಯ, **ಸುತಾನಾಂ** = ಮಕ್ಕಳ, **ವಶಂ** = ಅಧೀನವನ್ನು, **ಆಗತಾ** = ಹೊಂದಿದ, **ಇಯಂ** = ಈ, **ಅಸಹ್ಯ** = ಸಹಿಸಲು ಅಸಾಧ್ಯವಾದ, **ಭಾರ** = ಹೊರೆಯಿಂದ, **ಆರ್ದಿತ** = ಪೀಡಿತವಾದ, **ಸರ್ವ** = ಎಲ್ಲಾ, **ಗಾತ್ರೀ** = ಶರೀರವುಳ್ಳ, **ಜಗಾಮ** = ಹೊಂದಿದಳು, **ಧಾತ್ರೀ** = ಭೂಮಿಯು, **ಶರಣಂ** = ಮೊರೆಯನ್ನು, **ವಿರಿಂಚಮ್**= ಬ್ರಹ್ಮನನ್ನು.

ಈಗ ರಾಜರು ಕಥಾಭಾಗವನ್ನು ಆರಂಭಿಸುತ್ತಾರೆ –

ಲೆಕ್ಕ ಇಲ್ಲದಷ್ಟು ಪಾಪಗಳೆಂಬ ಪರ್ವತಗಳನ್ನು ಹೊತ್ತಿರುವ ಅಸುರರ ಪಾಲಾಗಿದೆ ಈ ಭೂಮಿ. ಈ ಭೂದೇವಿಗೆ ಇವರು ಭಾರಭೂತರಾಗಿದ್ದಾರೆ. ಇದನ್ನು ಸಹಿಸಲು ಅಸಮರ್ಥಗಳಾದ ಭೂಮಿಯು ದುಃಖಿತಳಾಗಿ ಬ್ರಹ್ಮನನ್ನು ಮೊರೆ ಹೊಂದಿದ್ದಾಳೆ.

ಪಾಪಗಳನ್ನು ಅಚಲಗಳಿಗೆ ಹೋಲಿಸಿದ್ದರಿಂದ ಪಾಪಗಳು ದೈತ್ಯರಲ್ಲಿ ಸ್ಥಿರ ಎಂದಾಯಿತು. 'ಸರ್ವಗಾತ್ರೀ' ಎಂದು ಹೇಳಿದ್ದರಿಂದ ದೈತ್ಯರು ಭೂಮಿಯ ತುಂಬಾ ಹರಡಿದ್ದಾರೆ ಎಂದಾಯಿತು. ಚತುರ್ಮುಖನನ್ನು ವಿರಿಂಚ ಎಂಬ ಶಬ್ದದಿಂದ ಹೇಳಿದ್ದಾರೆ. ವಿರೇಚಯತಿ ಇತಿ ವಿರಿಂಚಃ = ಭೂಮಿಯ ದೆಸೆಯಿಂದ ಭಾರವನ್ನು ಇಳಿಸುವ ತಾಕತ್ತುಳ್ಳವನು ಎಂದರ್ಥ. ಆದ್ದರಿಂದ ಇವನನ್ನು ಮೊರೆಹೋದಳು.

ಯಾರನ್ನು ಮೊರೆಹೋದರೆ ನಮ್ಮ ಉದ್ದೇಶ ಈಡೇರುತ್ತದೋ ಅಂತಹವರನ್ನೇ ಆಶ್ರಯಿಸಬೇಕು ಎಂದು ತಿಳಿಸಲು ಬ್ರಹ್ಮನನ್ನು ವಿರಿಂಚ ಎಂಬ ಶಬ್ದದಿಂದ ಕರೆದಿದ್ದಾರೆ.

**ಮುಕುಂದವಿದ್ವೇಷಿಭರೇಣ ಭಿನ್ನಾ**
**ಬಭೂವ ಸಾ ಕ್ಷಾಂತಿಯುತಾऽಪಿ ಖಿನ್ನಾ ।**
**ತಥಾಹಿ ಲೋಕೇ ಪತಿನಿಂದಕೇಭ್ಯಃ**
**ಪತಿವ್ರತಾನಾಮಪರಃ ಕ್ವ ಭಾರಃ ॥ ೧೨ ॥**

**ಮುಕುಂದವಿದ್ವೇಷಿ** = ದೇವರಲ್ಲಿ ದ್ವೇಷಮಾಡುವವರ, **ಭರೇಣ** = ಭಾರದಿಂದ, **ಭಿನ್ನಾ** = ಧ್ವಸ್ತಳಾದ, **ಬಭೂವ** = ಆದಳು, **ಸಾ** = ಆ ಭೂಮಿಯು, **ಕ್ಷಾಂತಿಯುತಾ ಅಪಿ** = ತಾಳ್ಮೆಯಿಂದ ಕೂಡಿದ್ದರೂ, **ಖಿನ್ನಾ** = ದುಃಖಿತಳು, **ತಥಾ ಹಿ** = ಅದು ಹಾಗೆಯೇ, **ಲೋಕೇ** = ಲೋಕದಲ್ಲಿ, **ಪತಿನಿಂದಕೇಭ್ಯಃ** = ಗಂಡನನ್ನು ಬೈಯುವವರಿಗಿಂತ, **ಪತಿವ್ರತಾನಾಂ** = ಪತಿವ್ರತೆಯರಿಗೆ, **ಅಪರಃ** = ಬೇರೆ, **ಕ್ವ** = ಯಾವುದು, **ಭಾರಃ** = ಹೊರೆಯು.

ಭೂಮಿಗೆ ಕ್ಷಮಾ ಎಂದು ಹೆಸರು. ಅಂದರೆ ಎಲ್ಲವನ್ನೂ ಸಹಿಸುವವಳು ಎಂದರ್ಥ. ಹೀಗಿರುವಾಗ ದೈತ್ಯರ ಭಾರವನ್ನೂ ಸಹಿಸಬೇಕಿತ್ತು? ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರಿಸುತ್ತಾರೆ – ದೈತ್ಯರು ಭೂಮಿಯಲ್ಲಿ ಇರುವುದು ಮಾತ್ರವಾಗಿದ್ದರೆ ಭೂಮಿಗೆ ಭಾರ ಆಗುತ್ತಿರಲಿಲ್ಲ. ಆದರೆ ಅವರು ದೇವರನ್ನು ದ್ವೇಷಿಸುತ್ತಲಿದ್ದರು. ಆದ್ದರಿಂದ ಭೂಮಿಯು ವ್ಯಗ್ರಳಾಗಿ ದುಃಖಿಯಾಗಿದ್ದಳು. ಇದನ್ನು ಉದಾಹರಣೆಯ ಮೂಲಕ ತಿಳಿಸುತ್ತಾರೆ – ಲೋಕದಲ್ಲಿ ಪತಿವ್ರತಾ ಸ್ತ್ರೀಯರು ತನಗೆ ಯಾರು ಏನು ಹೇಳಿದರೂ ಸಹಿಸುತ್ತಾರೆ. ಆದರೆ

ತನ್ನ ಪತಿಯನ್ನು ಯಾರಾದರೂ ನಿಂದಿಸಿದರೆ ಆಕೆ ಅದನ್ನು ಸಹಿಸುವುದಿಲ್ಲ. ಹೀಗೆ ಗಂಡನನ್ನು ನಿಂದಿಸುವವರನ್ನು ಪ್ರತಿಭಟಿಸುವುದು ಆಕೆಗೆ ಭೂಷಣವೇ ಆಗಿದೆ.

**ನಿಶಮ್ಯ ಗೋಬ್ರಾಹ್ಮಣಮುಖ್ಯಬಂಧುಂ**
**ಧ್ರುವಂ ಮುಕುಂದಂ ಶರಣಂ ವ್ರಜಂತೀ ।**
**ಬಭೂವ ಗೋರೂಪಧರಾ ಧರಾ ಸಾ**
**ತಮಾರ್ತಭಾರಾಪಹರಂ ಚ ದೀನಾ ॥೧೩॥**

**ನಿಶಮ್ಯ** = ಕೇಳಿ, **ಗೋ** = ಆಕಳುಗಳು, **ಬ್ರಾಹ್ಮಣ** = ಬ್ರಾಹ್ಮಣರು ಇವರಿಗೆ, **ಮುಖ್ಯಬಂಧುಂ** = ಮುಖ್ಯವಾಗಿ ಬಂಧುವಾದ, **ಧ್ರುವಂ** = ನಿಶ್ಚಯವಾಗಿ, **ಮುಕುಂದಂ** = ದೇವರನ್ನು, **ಶರಣಂ** = ಮೊರೆಯನ್ನು, **ವ್ರಜಂತೀ** = ಹೊಂದಿದ, **ಬಭೂವ** = ಆದಳು, **ಗೋರೂಪಧರಾ** = ಪಶುವಿನ ಆಕಾರವನ್ನು ಧರಿಸಿದವಳು, **ಧರಾ** = ಭೂಮಿಯು, **ಸಾ** = ಆ, **ತಂ** = ಆ, **ಆರ್ತ** = ದುಃಖಿತರ, **ಭಾರ** = ಹೊರೆಯನ್ನು, **ಅಪಹರಂ** = ಪರಿಹರಿಸುವ, **ಚ** = ಮತ್ತು, **ದೀನಾ**= ದುಃಖಿತಳು.

ಭೂಮಿಯು ಗೋವಿನ ರೂಪವನ್ನು ತಾಳಿ ದೇವರನ್ನು ಮೊರೆಹೊಕ್ಕಳು. ಯಾಕೆಂದರೆ, '**ಗೋಬ್ರಾಹ್ಮಣಹಿತಾಯ ಚ**' ಎಂಬ ಪುರಾಣದ ಮಾತಿನಂತೆ ಗೋವುಗಳು ದೇವರಿಗೆ ಬಹಳ ಪ್ರಿಯಗಳು. ಪ್ರಿಯರ ಮಾತಿಗೆ ಎಲ್ಲರೂ ಬೇಗ ಸ್ಪಂದಿಸುತ್ತಾರೆ. ಭೂಮಿಯು ಬ್ರಾಹ್ಮಣರೂಪವನ್ನು ತಾಳಿಯೂ ಹೋಗಬಹುದಿತ್ತು. ಆದರೆ **ಗೋಬ್ರಾಹ್ಮಣಹಿತಾಯ ಚ** ಎಂಬ ಪ್ರಮಾಣದಲ್ಲಿ ಮೊದಲು ಗೋವಿನ ಉಲ್ಲೇಖವಿದೆ. ಮೊದಲಿನ ರೂಪವನ್ನು ಬಿಟ್ಟು, ಎರಡನೇ ರೂಪವನ್ನು ತೆಗೆದು-ಕೊಳ್ಳಲು ಕಾರಣ ಇಲ್ಲವಾದ್ದರಿಂದ ಗೋವಿನ ರೂಪವನ್ನು ಧರಿಸಿದಳು. ನಿಜವಾಗಿ ಬ್ರಾಹ್ಮಣರಾಗುವುದು ಗೋವಿನಿಂದ. ಹೇಗೆಂದರೆ, ಗೋವಿನ ಪಂಚಗವ್ಯಪ್ರಾಶನದಿಂದ. ಆದ್ದರಿಂದ ಬ್ರಾಹ್ಮಣನಿಗಿಂತ ಗೋವಿಗೇ ಪ್ರಾಶಸ್ತ್ಯ. ಬ್ರಾಹ್ಮಣ ಒಮ್ಮೊಮ್ಮೆ ಗೋಮುಖ-ವ್ಯಾಘ್ರನಾಗುತ್ತಾನೆ. ಆದರೆ ಗೋವು ಸದಾ ಒಂದೇ ಸ್ವಭಾವವುಳ್ಳದ್ದು.

ವಿರಿಂಚವೈರಿಂಚಿಮುಖಾಮರೇಶಾಃ
ಸ್ವಪಾರತಂತ್ರ್ಯಂ ಭುವಿ ದರ್ಶಯಂತಃ ।
ಹರಿಂ ಧರಾಕಾರ್ಯಕೃತೇ ಗೃಣಂತಃ
ಪುರಾನ್ನಿರೀಯುರ್ಹೃದಿ ತಂ ಸ್ಮರಂತಃ ॥ ೧೪ ॥

**ವಿರಿಂಚ** = ಬ್ರಹ್ಮನು, **ವೈರಿಂಚಿ** = ರುದ್ರನು, **ಮುಖ** = ಮೊದಲಾದ, **ಅಮರೇಶಾಃ** = ದೇವತೆಗಳ ಒಡೆಯರು, **ಸ್ವ** = ತಮ್ಮ, **ಪಾರತಂತ್ರ್ಯಂ** = ಪರಾಧೀನತೆಯನ್ನು, **ಭುವಿ** = ಭೂಮಿಯಲ್ಲಿ, **ದರ್ಶಯಂತಃ** = ತೋರಿಸುವವರಾಗಿ, **ಹರಿಂ** = ದೇವರನ್ನು, **ಧರಾ** = ಭೂಮಿಯ, **ಕಾರ್ಯಕೃತೇ** = ಕೆಲಸಕ್ಕಾಗಿ, **ಗೃಣಂತಃ** = ಹೊಗಳುವವರಾಗಿ, **ಪುರಾತ್** = ತಮ್ಮ ಮನೆಗಳಿಂದ, **ನಿರೀಯುಃ** = ಹೊರಟರು, **ಹೃದಿ** = ಹೃದಯದಲ್ಲಿ, **ತಂ** = ಅವನನ್ನು, **ಸ್ಮರಂತಃ** = ಎಣಿಸು(ನೆನೆಯು)ವವರಾಗಿ.

ಬ್ರಹ್ಮನಲ್ಲಿ ಮೊರೆ ಹೊಂದಿದ ಭೂಮಿಯನ್ನು ಕುರಿತು ಬ್ರಹ್ಮನು 'ನಾವು ಅಸ್ವ-ತಂತ್ರರು. ನಾವೇನೂ ಮಾಡುವಂತಿಲ್ಲ. ನಿನ್ನ ಪ್ರಾರ್ಥನೆಗೆ ಸ್ಪಂದಿಸುವುದಾದರೆ ಅದು ದೇವರು ಮಾತ್ರ. ಆದ್ದರಿಂದ ದೇವರ ಬಳಿಗೆ ಹೋಗೋಣ' ಎಂದು ಹೇಳಿ ರುದ್ರಾದಿಗಳಿಂದ ಕೂಡಿಕೊಂಡು ದೇವರನ್ನು ಸ್ತುತಿಸುತ್ತಾ, 'ದೇವರೇ! ಭೂಮಿಯ ಭಾರ ಇಳಿಸು' ಎಂದು ಪ್ರಾರ್ಥಿಸುತ್ತಾ ತನ್ನ ಮನೆಯಿಂದ ದೇವರಿದ್ದಲ್ಲಿಗೆ ಹೊರಟನು.

**ಸುರಾವಲೀ ಸಾ ಶ್ರುತಿವರ್ಣ್ಯವೇಷಾ**
**ನಭಸ್ಥಲೇ ನಷ್ಟತಮಿಸ್ರಜಾತೀ ।**
**ಯಯೌ ಯತೀಂದ್ರೈರಪಿ ಯತ್ನಗಮ್ಯಾಂ**
**ಪಯೋಽಬ್ಧಿವೇಲಾಂ ಪತದೂರ್ಮಿಮಾಲಾಮ್ ॥೧೫॥**

**ಸುರ** = ದೇವತೆಗಳ, **ಆವಲೀ** = ಸಮೂಹವು, **ಸಾ** = ಆ, **ಶ್ರುತಿ** = ವೇದಗಳಿಂದ, **ವರ್ಣ್ಯ** = ಹೇಳಲ್ಪಡುವ, **ವೇಷಾ** = ಸ್ವರೂಪವುಳ್ಳ, **ನಭಸ್ಥಲೇ** = ಆಕಾಶದಲ್ಲಿ, **ನಷ್ಟ** = ನಾಶವಾದ, **ತಮಿಸ್ರ** = ಕತ್ತಲೆಯ, **ಜಾತೀ** = ಸಮೂಹವುಳ್ಳ, **ಯಯೌ** = ಹೊಂದಿತು, **ಯತೀಂದ್ರೈಃ ಅಪಿ** = ಯೋಗಿಗಳಿಂದಲೂ, **ಯತ್ನಗಮ್ಯಾಂ** = ಪ್ರಯತ್ನದಿಂದ ಹೊಂದಲು ಯೋಗ್ಯವಾದ, **ಪಯೋಽಬ್ಧಿ** = ಕ್ಷೀರಸಮುದ್ರದ, **ವೇಲಾಂ** = ದಡವನ್ನು, **ಪತತ್** = ಬೀಳುವ, **ಊರ್ಮಿ** = ತೆರೆಗಳ, **ಮಾಲಾಂ** = ಸಮೂಹವುಳ್ಳ.

ಈ ದೇವತೆಗಳೆಲ್ಲಾ ಶ್ರುತಿಯಲ್ಲಿ ಹೇಳಿದ ವಸ್ತ್ರಾಭರಣಾದಿಗಳನ್ನು ಧರಿಸಿದವರು. ತಮ್ಮ ದೇಹದ ಕಾಂತಿಯಿಂದ ತಾವು ಹೋಗುವ ದಾರಿಯಾದ ಗಗನವನ್ನು ಚೆನ್ನಾಗಿ ಬೆಳಗಿಸಿದವರು. ಇಂತಹವರು ಕ್ಷೀರಸಮುದ್ರದ ಬಳಿಗೆ ಹೋದರು. ಎಲ್ಲವನ್ನೂ ತ್ಯಜಿಸಿ ದೇವರ ಬಳಿ ಸೇರಬೇಕು ಎಂದು ಜೀವನ ಇಡೀ ಪ್ರಯತ್ನಿಸುವ ಯತಿಗಳೂ ಬಹಳ ಶ್ರಮದಿಂದ ಈ ಜಾಗವನ್ನು ತಲುಪುತ್ತಾರೆ. ಈ ಜಾಗದಲ್ಲಿ ತೆರೆಗಳು ಬೀಳುತ್ತವೆ. ಅಂದರೆ ಅವಸಾನವನ್ನು ಕಾಣುತ್ತವೆ.

ಶ್ರುತಿವರ್ಣ್ಯವೇಷಾ ಎಂದು ಹೇಳಿದ್ದರಿಂದ ಒಂದು ಸೂಚನೆ – ನಮ್ಮ ಹಿಂದೂ ಸಂಸ್ಕೃತಿಯಲ್ಲಿ 'ಡ್ರೆಸ್‌ಕೋಡ್' ಇದೆ. ದೇವಾಲಯಗಳಿಗೆ ಹೋಗುವಾಗ ಶಾಸ್ತ್ರ-ಸಿದ್ಧವಾದ ವೇಷಭೂಷಣಗಳನ್ನು ತೊಡಬೇಕು ಎಂದು. ಪತದೂರ್ಮಿಮಾಲಾಂ ಎನ್ನುವುದರಿಂದ ಜೀವನದಲ್ಲಿ ನಾನಾರೀತಿಯ ಕ್ಲೇಶಗಳೆಂಬ ತೆರೆಗಳು ಬರುತ್ತಿರುತ್ತವೆ. ದೇವರನ್ನು ಮೊರೆಹೋದರೆ ಅವೆಲ್ಲಾ ನಷ್ಟವಾಗುತ್ತವೆ ಎಂದು ತಿಳಿಸುತ್ತಾರೆ.

**ತತೋಽಬ್ಜಭೂಃ ಕ್ಷೀರಪಯೋಽಬ್ಧಿತೀರೇ**
**ಸಮಾಧಿಮಾಸ್ಥಾಯ ಸುಸಂಯತಾಕ್ಷಃ ।**
**ಸ್ಥಿರಾಸನಃ ಪ್ರಾಣಗಣಾನ್ ನಿಯಮ್ಯ**
**ಪ್ರಚಕ್ರಮೇ ಪ್ರಾಂಜಲಿರಾತ್ಮದೀಕ್ಷಾಮ್ ॥ ೧೬ ॥**

**ತತಃ** = ಅನಂತರ, **ಅಬ್ಜ** = ಕಮಲದಿಂದ, **ಭೂಃ** = ಹುಟ್ಟಿದ ಬ್ರಹ್ಮನು, **ಕ್ಷೀರ** = ಹಾಲಿನ, **ಪಯೋಽಬ್ಧಿ** = ಸಮುದ್ರದ, **ತೀರೇ** = ದಡದಲ್ಲಿ, **ಸಮಾಧಿಂ** = ಧ್ಯಾನವನ್ನು, **ಆಸ್ಥಾಯ** = ಹೊಂದಿ, **ಸುಸಂಯತ** = ಚೆನ್ನಾಗಿ ನಿಗ್ರಹೀತವಾದ, **ಅಕ್ಷಃ** = ಇಂದ್ರಿಯ-ವುಳ್ಳ, **ಸ್ಥಿರ** = ದೃಢವಾದ, **ಆಸನಃ** = ಆಸನವುಳ್ಳ, **ಪ್ರಾಣ** = ಶ್ವಾಸಗಳ, **ಗಣಾನ್** = ಸಮೂಹವನ್ನು, **ನಿಯಮ್ಯ** = ತಡೆ ಹಿಡಿದು, **ಪ್ರಚಕ್ರಮೇ** = ಆರಂಭಿಸಿದನು. **ಪ್ರಾಂಜಲಿಃ** = ಕೈಮುಗಿದವನಾಗಿ, **ಆತ್ಮ** = ದೇವರ, **ದೀಕ್ಷಾಂ** = ಪೂಜೆಯನ್ನು.

ಬ್ರಹ್ಮನು ಅಲ್ಲೇ ಕುಳಿತನು. ಮನಸ್ಸಿಗೆ ಏಕಾಗ್ರತೆಯನ್ನು ತಂದುಕೊಂಡನು. ಇಂದ್ರಿಯ-ಗಳನ್ನು ನಿಗ್ರಹಿಸಿದನು. ಪ್ರಾಣಾಯಾಮ ಮಾಡಿದನು. ಕೈಗಳನ್ನು ಜೋಡಿಸಿಕೊಂಡು ತಪಸ್ಸಿನಲ್ಲಿ ತೊಡಗಿದನು.

ಎಷ್ಟೇ ಉತ್ತಮಾಧಿಕಾರಿಯಾದರೂ ಸಾಧನಾನುಷ್ಠಾನ, ಕರ್ಮಾಚರಣೆ ಬೇಕೇ ಬೇಕು ಎಂದು ಬ್ರಹ್ಮನು ತಾನು ಮಾಡಿ ಸೂಚಿಸುತ್ತಾನೆ. ಇದು ಮಾನವನ ಕರ್ತವ್ಯ . ದೀಕ್ಷೆಯೂ ಕೂಡಾ.

**ಯದಾ ಸ ಪದ್ಮಾಸನಸಂಸ್ಥಿತೋಽಲಂ**
**ಜಜಾಪ ವಿದ್ಯಾಮಿತರೈರವೇದ್ಯಾಮ್ ।**
**ತದಾ ಪ್ರಭೃತ್ಯೇವ ಜಗತ್ಸು ನೂನಂ**
**ಬಭೂವ ಪದ್ಮಾಸನಶಬ್ದಿತೋಽಸೌ ॥ ೧೭ ॥**

**ಯದಾ** = ಯಾವಾಗ, **ಸಃ** = ಬ್ರಹ್ಮನು, **ಪದ್ಮಾಸನ** = ಪದ್ಮಾಸನದಲ್ಲಿ, **ಸಂಸ್ಥಿತಃ** = ಇದ್ದ-ವನಾಗಿ, **ಅಲಂ** = ಚೆನ್ನಾಗಿ, **ವಿದ್ಯಾಂ** = ಮಂತ್ರವನ್ನು, **ಇತರೈಃ** = ಬೇರೆಯವರಿಂದ,

**ಅವೇದ್ಯಾಂ** = ತಿಳಿಯಲು ಅಯೋಗ್ಯವಾದ, **ತದಾ ಪ್ರಭೃತಿ ಏವ** = ಅಂದಿನಿಂದಲೇ, **ಜಗತ್ಸು** = ಲೋಕದಲ್ಲಿ, **ನೂನಂ** = ನಿಶ್ಚಯವಾಗಿಯೂ, **ಬಭೂವ** = ಆದನು, **ಪದ್ಮಾಸನ** = ಪದ್ಮಾಸನ ಎಂದು, **ಶಬ್ದಿತಃ** = ಹೆಸರುಳ್ಳವನು, **ಅಸೌ** = ಇವನು.

ತಾನು ಪದ್ಮಾಸನ ಹಾಕಿಕೊಂಡು ಜಪ ಮಾಡಿದ. ಅಧ್ಯಯನ ಮಾಡಿದ. ಈತನ ಜಪ, ಅಧ್ಯಯನಗಳು ಇತರರಿಗೆ ಎಟುಕತಕ್ಕದ್ದಲ್ಲ. ಸ್ಥಿರವಾದ ಈ ಆಸನದಿಂದ ಈತನು ಕಾಣಿಸಿ-ಕೊಂಡದ್ದರಿಂದ ಈತನನ್ನು ಎಲ್ಲರೂ 'ಪದ್ಮಾಸನ' ಎಂದೇ ಕರೆದರು.

ಧ್ಯಾನಕ್ಕೆ ಆಸನ ಅಗತ್ಯ. ಮನಸ್ಸಿನ ಅಚಾಂಚಲ್ಯಕ್ಕೆ ಆಸೀನಃ ಸಂಭವಾತ್ 'ಕುಳಿತರೆ ಏಕಾಗ್ರತೆ ಬರುವುದು' ಎಂದು ವ್ಯಾಸರು ಸೂತ್ರದಲ್ಲಿ ಹೇಳಿದ್ದಾರೆ. ಅದನ್ನು ಬ್ರಹ್ಮ ಅಳವಡಿಸಿಕೊಂಡ. ಈತನಿಗೆ ಪದ್ಮಾಸನ ಎಂಬ ಹೆಸರು ಯಾವಾಗಲೂ ಇದೆ. ತಥಾ ಚ ಸದಾ ಧ್ಯಾನಮಗ್ನ. ಸಂಕಟ ಬಂದಾಗ ಮಾತ್ರವಲ್ಲ ಎಂದು ತಿಳಿಯುತ್ತದೆ. ಈ ಕಾರಣ-ದಿಂದ ಬಿರುದು ಬಂದಿದ್ದರಿಂದ ನಮಗೂ ವೈದಿಕಕಾರ್ಯದಿಂದ ಬಿರುದು ಬರಬೇಕೇ ಹೊರತು ಕೇವಲ ಲೌಕಿಕದಿಂದಲ್ಲ ಎಂದು ಇಲ್ಲಿ ಸೂಚಿತ.

**ತದಾ ತದನ್ಯಾನ್ಯಪಹಾಯ ಹೇಯಾನಿ**
**ಅರಕ್ತಚಿತ್ತಃ ಸ ವಿರಿಂಚಪುತ್ರಃ ।**
**ಸ್ತುವನ್ ಗಿರೀಶೋಽಪಿ ಗಿರಾ ಮುರಾರಿ-**
**ಮನಂಗಜಿತ್ ದಿಗ್ವಸನೋ ಬಭೂವ ॥೧೮॥**

**ತದಾ** = ಆಗ, **ತದನ್ಯಾನಿ** = ದೇವರಿಗಿಂತ ಬೇರೆಯಾದದ್ದನ್ನು, **ಅಪಹಾಯ** = ಬಿಟ್ಟು, **ಹೇಯಾನಿ** = ತ್ಯಾಜ್ಯಗಳನ್ನು, **ಅರಕ್ತಚಿತ್ತಃ** = ಕಾಮರಹಿತವಾದ ಮನಸ್ಸುಳ್ಳ, **ಸಃ** = ಆ, **ವಿರಿಂಚಿ** = ಬ್ರಹ್ಮನ, **ಪುತ್ರಃ** = ಮಗನಾದ ರುದ್ರನು, **ಸ್ತುವನ್** = ಹೊಗಳುತ್ತಾ, **ಗಿರೀಶಃ** = ರುದ್ರನು, **ಅಪಿ** = ಕೂಡಾ, **ಗಿರಾ** = ಮಾತಿನಿಂದ, **ಮುರಾರಿಂ** = ದೇವರನ್ನು, **ಅನಂಗಜಿತ್** = ಮನ್ಮಥನನ್ನು ಗೆದ್ದವನು, **ದಿಗಂಬರಃ** = ದಿಗಂಬರನು, **ಬಭೂವ**= ಆದನು.

ರುದ್ರದೇವರು 'ದೇವರನ್ನು ಹೊರತು ಎಲ್ಲವೂ ಅನಿತ್ಯ ; ನಮ್ಮ ಜೊತೆಗೆ ಬರುವು-ದಿಲ್ಲ' ಎಂದು ವಸ್ತ್ರಾದಿಗಳನ್ನೂ ತ್ಯಜಿಸಿದರು. ಆದ್ದರಿಂದ ಅವರಿಗೆ ದಿಗಂಬರ ಎಂಬ ಹೆಸರು ಬಂತು. ಮನಸ್ಸಿನಲ್ಲಿ ಲೌಕಿಕವಸ್ತುಗಳ ಕಾಮನೆ ಮೂಡಲಿಲ್ಲ. ಆದ್ದರಿಂದ ಅನಂಗಜಿತ್ ಆದರು. ಒಳ್ಳೆಯ ಶಬ್ದಗಳಿಂದ ಸ್ತುತಿಸಿದರು. ಆದ್ದರಿಂದ ಗಿರೀಶ ಆದರು.

ಕೆಲವು ಸಲ ನಮಗೆ ದೈಹಿಕವಾಗಿ ಬೇಡವಾದ್ದು ಮಾನಸಿಕವಾಗಿ ಬೇಕೆನಿಸುತ್ತದೆ. ಮಾನಸಿಕವಾಗಿ ಬೇಡವಾದ್ದು ದೈಹಿಕವಾಗಿ ಬಿಡಲು ಆಗುವುದಿಲ್ಲ. ವಾತಾವರಣದ ಪ್ರಭಾವದಿಂದ. ಹಾಗೆಯೇ ದೇವರನ್ನು ಸ್ತುತಿಸಬೇಕೆಂದು ತೋರುತ್ತದೆ. ಆದರೆ ಶಬ್ದದಾರಿದ್ರ್ಯ ಇರುತ್ತದೆ. ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಏನೆಂದರೆ - ರುದ್ರದೇವರನ್ನು ದಿಗಂಬರ, ಅನಂಗಜಿತ್, ಗಿರೀಶ ಎಂಬ ನಾಮಗಳಿಂದ ಉಪಾಸನೆ ಮಾಡುವುದು.

**ತದೈವ ಶೇಷೋऽಜನಿ ವಾಯುಭಕ್ಷಃ**
**ಸಹಸ್ರನೇತ್ರೋऽಪಿ ತದೈವ ನೂನಮ್ ।**
**ಶತಕ್ರತುಃ ಸುಪ್ತಿವಿದೂರಭಾವಾ**
**ಬಭೂವುಃ ಅಸ್ವಪ್ನಪದಾಶ್ಚ ದೇವಾಃ ॥ ೧೯ ॥**

**ತದಾ ಏವ** = ಆಗಲೇ, **ಶೇಷಃ** = ಶೇಷನು, **ಅಜನಿ** = ಆದನು, **ವಾಯುಭಕ್ಷಃ** = ಗಾಳಿಯನ್ನು ಸೇವಿಸುವವನು, **ಸಹಸ್ರನೇತ್ರಃ ಅಪಿ** = ಸಾವಿರ ಕಣ್ಣುಳ್ಳ ಇಂದ್ರನಾದರೂ, **ಶತಕ್ರತುಃ** = ಶತಕ್ರತು ಎಂಬ ಹೆಸರುಳ್ಳವನು, **ಸುಪ್ತಿವಿದೂರಭಾವಾಃ** = ನಿದ್ರೆಯಿಂದ ದೂರವಾಗುವ ಸ್ವಭಾವವುಳ್ಳವರು, **ಬಭೂವುಃ** = ಆದರು, **ಅಸ್ವಪ್ನಪದಾಃ ಚ** = ನಿದ್ರೆಯಿಲ್ಲದವರು ಎಂಬ ಹೆಸರುಳ್ಳವರು, **ದೇವಾಃ** = ದೇವತೆಗಳು.

ಶೇಷನು ಅನ್ನಾದಿಗಳನ್ನು ತ್ಯಜಿಸಿದನು. ಕೇವಲ ಗಾಳಿಯಿಂದ ಜೀವಿಸಿ ದೇವರನ್ನು ಧ್ಯಾನಿಸಿದನು. ಆದ್ದರಿಂದ ವಾಯುಭಕ್ಷನಾದನು. ಇಂದ್ರನಿಗೆ ಸಾವಿರ ಕಣ್ಣುಗಳಿದ್ದರೂ ದೇವರನ್ನು ಕಾಣಲು ನೂರು ಯಾಗಗಳನ್ನು ಮಾಡಿದನು. ಆದ್ದರಿಂದ ಶತಕ್ರತು ಆದನು. ದೇವತೆಗಳೆಲ್ಲರೂ ನಿದ್ದೆಯನ್ನು ಬಿಟ್ಟು ದೇವರ ಧ್ಯಾನದಲ್ಲಿ ತೊಡಗಿದ್ದರಿಂದ ಅವರಿಗೆ **ಅಸ್ವಪ್ನಾಃ** ಎಂಬ ಹೆಸರು ಬಂತು. ಸಾತ್ವಿಕರು ಹದಿನೈದು ದಿವಸಕ್ಕೆ ಒಮ್ಮೆ, ಅಂದರೆ ಏಕಾದಶೀ ದಿವಸ ಕೇವಲ ಗಾಳಿಯನ್ನು ಸೇವಿಸಿ ಬದುಕುತ್ತಾರೆ. ದೇವರನ್ನು ಕಾಣ-ಬೇಕೆಂದರೆ ಏಕಾದಶೀ ಉಪವಾಸ ಕಡ್ಡಾಯ. ಕೆಲವರಿಗೆ ಮನಸ್ಸಿದ್ದರೂ ದೈಹಿಕವಾಗಿ ಆಗುತ್ತಿಲ್ಲ. ಅಂತಹವರು ಶೇಷದೇವರ ಉಪಾಸನೆಯನ್ನು ವಾಯುಭಕ್ಷಶಬ್ದದಿಂದ ಮಾಡಬೇಕು. ನಮ್ಮ ಈ ಕಣ್ಣುಗಳು ಎಷ್ಟು ಸ್ವಚ್ಛವಾಗಿದ್ದರೂ ದೇವರು ಕಾಣುವುದಿಲ್ಲ. ಕರ್ಮಾಚರಣೆ ಮಾಡಿದಾಗ ಮಾತ್ರ ದೇವರು ಗೋಚರಿಸುವುದು. ದಾಸರು –

**ಹೊಸ ಕಣ್ಣು ಎನಗೆ ಹಚ್ಚಲಿಬೇಕು ಜಗದಂಬೆ ।**
**ವಸುದೇವಸುತನ ಕಾಂಬುದಕೆ ॥**

ಎಂದು ಹಾಡಿದ್ದಾರೆ. ಈ ರಹಸ್ಯವು ಸಹಸ್ರಾಕ್ಷ, ಶತಕ್ರತು ಎಂಬ ನಾಮಗಳಿಂದ ತಿಳಿಯುತ್ತದೆ. ಧ್ಯಾನಕ್ಕೆ ಪ್ರತಿಬಂಧಕವಾದ ಜಾಡ್ಯಪರಿಹಾರಕ್ಕಾಗಿ ದೇವತೆಗಳ ಸಹಾಯ

**ಅವೇದ್ಯಾಂ** = ತಿಳಿಯಲು ಅಯೋಗ್ಯವಾದ, **ತದಾ ಪ್ರಭೃತಿ ಏವ** = ಅಂದಿನಿಂದಲೇ, **ಜಗತ್ಸು** = ಲೋಕದಲ್ಲಿ, **ನೂನಂ** = ನಿಶ್ಚಯವಾಗಿಯೂ, **ಬಭೂವ** = ಆದನು, **ಪದ್ಮಾಸನ** = ಪದ್ಮಾಸನ ಎಂದು, **ಶಬ್ದಿತಃ** = ಹೆಸರುಳ್ಳವನು, **ಅಸೌ** = ಇವನು.

ತಾನು ಪದ್ಮಾಸನ ಹಾಕಿಕೊಂಡು ಜಪ ಮಾಡಿದ. ಅಧ್ಯಯನ ಮಾಡಿದ. ಈತನ ಜಪ, ಅಧ್ಯಯನಗಳು ಇತರರಿಗೆ ಎಟುಕತಕ್ಕದ್ದಲ್ಲ. ಸ್ಥಿರವಾದ ಈ ಆಸನದಿಂದ ಈತನು ಕಾಣಿಸಿ-ಕೊಂಡದ್ದರಿಂದ ಈತನನ್ನು ಎಲ್ಲರೂ 'ಪದ್ಮಾಸನ' ಎಂದೇ ಕರೆದರು.

ಧ್ಯಾನಕ್ಕೆ ಆಸನ ಅಗತ್ಯ. ಮನಸ್ಸಿನ ಅಚಾಂಚಲ್ಯಕ್ಕೆ ಆಸೀನಃ ಸಂಭವಾತ್ 'ಕುಳಿತರೆ ಏಕಾಗ್ರತೆ ಬರುವುದು' ಎಂದು ವ್ಯಾಸರು ಸೂತ್ರದಲ್ಲಿ ಹೇಳಿದ್ದಾರೆ. ಅದನ್ನು ಬ್ರಹ್ಮ ಅಳವಡಿಸಿಕೊಂಡ. ಈತನಿಗೆ ಪದ್ಮಾಸನ ಎಂಬ ಹೆಸರು ಯಾವಾಗಲೂ ಇದೆ. ತಥಾ ಚ ಸದಾ ಧ್ಯಾನಮಗ್ನ. ಸಂಕಟ ಬಂದಾಗ ಮಾತ್ರವಲ್ಲ ಎಂದು ತಿಳಿಯುತ್ತದೆ. ಈ ಕಾರಣ-ದಿಂದ ಬಿರುದು ಬಂದಿದ್ದರಿಂದ ನಮಗೂ ವೈದಿಕಕಾರ್ಯದಿಂದ ಬಿರುದು ಬರಬೇಕೇ ಹೊರತು ಕೇವಲ ಲೌಕಿಕದಿಂದಲ್ಲ ಎಂದು ಇಲ್ಲಿ ಸೂಚಿತ.

**ತದಾ ತದನ್ಯಾನ್ಯಪಹಾಯ ಹೇಯಾನಿ**
**ಅರಕ್ತಚಿತ್ತಃ ಸ ವಿರಿಂಚಪುತ್ರಃ।**
**ಸ್ತುವನ್ ಗಿರೀಶೋಽಪಿ ಗಿರಾ ಮುರಾರಿ-**
**ಮನಂಗಜಿತ್ ದಿಗ್ವಸನೋ ಬಭೂವ ॥೧೮॥**

**ತದಾ** = ಆಗ, **ತದನ್ಯಾನಿ** = ದೇವರಿಗಿಂತ ಬೇರೆಯಾದದ್ದನ್ನು, **ಅಪಹಾಯ** = ಬಿಟ್ಟು, **ಹೇಯಾನಿ** = ತ್ಯಾಜ್ಯಗಳನ್ನು, **ಅರಕ್ತಚಿತ್ತಃ** = ಕಾಮರಹಿತವಾದ ಮನಸ್ಸುಳ್ಳ, **ಸಃ** = ಆ, **ವಿರಿಂಚಿ** = ಬ್ರಹ್ಮನ, **ಪುತ್ರಃ** = ಮಗನಾದ ರುದ್ರನು, **ಸ್ತುವನ್** = ಹೊಗಳುತ್ತಾ, **ಗಿರೀಶಃ** = ರುದ್ರನು, **ಅಪಿ** = ಕೂಡಾ, **ಗಿರಾ** = ಮಾತಿನಿಂದ, **ಮುರಾರಿಂ** = ದೇವರನ್ನು, **ಅನಂಗಜಿತ್** = ಮನ್ಮಥನನ್ನು ಗೆದ್ದವನು, **ದಿಗಂಬರಃ** = ದಿಗಂಬರನು, **ಬಭೂವ**= ಆದನು.

ರುದ್ರದೇವರು 'ದೇವರನ್ನು ಹೊರತು ಎಲ್ಲವೂ ಅನಿತ್ಯ ; ನಮ್ಮ ಜೊತೆಗೆ ಬರುವು-ದಿಲ್ಲ' ಎಂದು ವಸ್ತ್ರಾದಿಗಳನ್ನೂ ತ್ಯಜಿಸಿದರು. ಆದ್ದರಿಂದ ಅವರಿಗೆ ದಿಗಂಬರ ಎಂಬ ಹೆಸರು ಬಂತು. ಮನಸ್ಸಿನಲ್ಲಿ ಲೌಕಿಕವಸ್ತುಗಳ ಕಾಮನೆ ಮೂಡಲಿಲ್ಲ. ಆದ್ದರಿಂದ ಅನಂಗಜಿತ್ ಆದರು. ಒಳ್ಳೆಯ ಶಬ್ದಗಳಿಂದ ಸ್ತುತಿಸಿದರು. ಆದ್ದರಿಂದ ಗಿರೀಶ ಆದರು.

ಕೆಲವು ಸಲ ನಮಗೆ ದೈಹಿಕವಾಗಿ ಬೇಡವಾದ್ದು ಮಾನಸಿಕವಾಗಿ ಬೇಕೆನಿಸುತ್ತದೆ. ಮಾನಸಿಕವಾಗಿ ಬೇಡವಾದ್ದು ದೈಹಿಕವಾಗಿ ಬಿಡಲು ಆಗುವುದಿಲ್ಲ. ವಾತಾವರಣದ ಪ್ರಭಾವದಿಂದ. ಹಾಗೆಯೇ ದೇವರನ್ನು ಸ್ತುತಿಸಬೇಕೆಂದು ತೋರುತ್ತದೆ. ಆದರೆ ಶಬ್ದದಾರಿದ್ರ್ಯ ಇರುತ್ತದೆ. ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಏನೆಂದರೆ - ರುದ್ರದೇವರನ್ನು ದಿಗಂಬರ, ಅನಂಗಜಿತ್, ಗಿರೀಶ ಎಂಬ ನಾಮಗಳಿಂದ ಉಪಾಸನೆ ಮಾಡುವುದು.

**ತದೈವ ಶೇಷೋಽಜನಿ ವಾಯುಭಕ್ಷಃ**
**ಸಹಸ್ರನೇತ್ರೋಽಪಿ ತದೈವ ನೂನಮ್ ।**
**ಶತಕ್ರತುಃ ಸುಪ್ತಿವಿದೂರಭಾವಾ**
**ಬಭೂವುಃ ಅಸ್ವಪ್ನಪದಾಶ್ಚ ದೇವಾಃ ॥ ೧೯ ॥**

**ತದಾ ಏವ** = ಆಗಲೇ, **ಶೇಷಃ** = ಶೇಷನು, **ಅಜನಿ** = ಆದನು, **ವಾಯುಭಕ್ಷಃ** = ಗಾಳಿಯನ್ನು ಸೇವಿಸುವವನು, **ಸಹಸ್ರನೇತ್ರಃ ಅಪಿ** = ಸಾವಿರ ಕಣ್ಣುಳ್ಳ ಇಂದ್ರನಾದರೂ, **ಶತಕ್ರತುಃ** = ಶತಕ್ರತು ಎಂಬ ಹೆಸರುಳ್ಳವನು, **ಸುಪ್ತಿವಿದೂರಭಾವಾಃ** = ನಿದ್ರೆಯಿಂದ ದೂರವಾಗುವ ಸ್ವಭಾವವುಳ್ಳವರು, **ಬಭೂವುಃ** = ಆದರು, **ಅಸ್ವಪ್ನಪದಾಃ ಚ** = ನಿದ್ರೆಯಿಲ್ಲದವರು ಎಂಬ ಹೆಸರುಳ್ಳವರು, **ದೇವಾಃ** = ದೇವತೆಗಳು.

ಶೇಷನು ಅನ್ನಾದಿಗಳನ್ನು ತ್ಯಜಿಸಿದನು. ಕೇವಲ ಗಾಳಿಯಿಂದ ಜೀವಿಸಿ ದೇವರನ್ನು ಧ್ಯಾನಿಸಿದನು. ಆದ್ದರಿಂದ ವಾಯುಭಕ್ಷನಾದನು. ಇಂದ್ರನಿಗೆ ಸಾವಿರ ಕಣ್ಣುಗಳಿದ್ದರೂ ದೇವರನ್ನು ಕಾಣಲು ನೂರು ಯಾಗಗಳನ್ನು ಮಾಡಿದನು. ಆದ್ದರಿಂದ ಶತಕ್ರತು ಆದನು. ದೇವತೆಗಳೆಲ್ಲರೂ ನಿದ್ದೆಯನ್ನು ಬಿಟ್ಟು ದೇವರ ಧ್ಯಾನದಲ್ಲಿ ತೊಡಗಿದ್ದರಿಂದ ಅವರಿಗೆ **ಅಸ್ವಪ್ನಾಃ** ಎಂಬ ಹೆಸರು ಬಂತು. ಸಾತ್ವಿಕರು ಹದಿನೈದು ದಿವಸಕ್ಕೆ ಒಮ್ಮೆ, ಅಂದರೆ ಏಕಾದಶೀ ದಿವಸ ಕೇವಲ ಗಾಳಿಯನ್ನು ಸೇವಿಸಿ ಬದುಕುತ್ತಾರೆ. ದೇವರನ್ನು ಕಾಣ-ಬೇಕೆಂದರೆ ಏಕಾದಶೀ ಉಪವಾಸ ಕಡ್ಡಾಯ. ಕೆಲವರಿಗೆ ಮನಸ್ಸಿದ್ದರೂ ದೈಹಿಕವಾಗಿ ಆಗುತ್ತಿಲ್ಲ. ಅಂತಹವರು ಶೇಷದೇವರ ಉಪಾಸನೆಯನ್ನು ವಾಯುಭಕ್ಷಶಬ್ದದಿಂದ ಮಾಡಬೇಕು. ನಮ್ಮ ಈ ಕಣ್ಣುಗಳು ಎಷ್ಟು ಸ್ವಚ್ಛವಾಗಿದ್ದರೂ ದೇವರು ಕಾಣುವುದಿಲ್ಲ. ಕರ್ಮಾಚರಣೆ ಮಾಡಿದಾಗ ಮಾತ್ರ ದೇವರು ಗೋಚರಿಸುವುದು. ದಾಸರು –

**ಹೊಸ ಕಣ್ಣು ಎನಗೆ ಹಚ್ಚಲಿಬೇಕು ಜಗದಂಬೆ ।**
**ವಸುದೇವಸುತನ ಕಾಂಬುದಕೆ ॥**

ಎಂದು ಹಾಡಿದ್ದಾರೆ. ಈ ರಹಸ್ಯವು ಸಹಸ್ರಾಕ್ಷ, ಶತಕ್ರತು ಎಂಬ ನಾಮಗಳಿಂದ ತಿಳಿಯುತ್ತದೆ. ಧ್ಯಾನಕ್ಕೆ ಪ್ರತಿಬಂಧಕವಾದ ಜಾಡ್ಯಪರಿಹಾರಕ್ಕಾಗಿ ದೇವತೆಗಳ ಸಹಾಯ

ಬೇಕು. ಅದಕ್ಕೆ ಅವರು ಅಸ್ವಪ್ನರು, ಜಾಡ್ಯ ಇಲ್ಲದವರು ಎಂದು ಉಪಾಸಿಸಬೇಕು ಎಂದು ಈ ಶ್ಲೋಕದ ಅಭಿಪ್ರಾಯ.

ರಸಾ ಪಿಪಾಸೋಗ್ರಭರಾಶನಾಯಾ
ವಿಷಹ್ಯ ವಿಷ್ಣುಂ ಮನಸಾಽಚಲೇನ ।
ತದಾಽನುಧಾವಂತ್ಯಚಲೇತಿ ಸರ್ವಂ
ಸಹೇತಿ ನೂನಂ ಜಗದೇ ಜಗತ್ಯಾಮ್ ॥ ೨೦ ॥

**ರಸಾ** = ಭೂಮಿಯು, **ಪಿಪಾಸಾ**= ಕುಡಿಯುವ ಇಚ್ಛೆ, **ಉಗ್ರಭರ** = ಬಹಳಭಾರವು, **ಅಶನಾಯಾಃ** = ಊಟದ ಇಚ್ಛೆ ಇವುಗಳನ್ನು, **ವಿಷಹ್ಯ** = ತಡೆದು, **ವಿಷ್ಣುಂ** = ದೇವರನ್ನು, **ಮನಸಾ** = ಮನಸ್ಸಿನಿಂದ, **ಅಚಲೇನ** = ದೃಢವಾದ, **ತದಾ** = ಆಗ, **ಅನುಧಾವಂತೀ** = ಅನುಸರಿಸಿದವಳಾಗಿ, **ಅಚಲಾ ಇತಿ** = ಅಚಲಾ ಎಂಬುದಾಗಿ, **ಸರ್ವಂಸಹಾ ಇತಿ** = ಸರ್ವಂ ಸಹಾ ಎಂಬುದಾಗಿಯೂ, **ನೂನಂ** = ನಿಶ್ಚಯವಾಗಿ, **ಜಗದೇ** = ಹೇಳಲ್ಪಟ್ಟಳು, **ಜಗತ್ಯಾಂ**= ಲೋಕದಲ್ಲಿ.

ಭೂಮಿಯು ತೃಷಾದಿಗಳನ್ನು ಸಹಿಸಿಕೊಂಡು, ದೃಢವಾದ ಮನಸ್ಸಿನಿಂದ ದೇವರನ್ನು ಧ್ಯಾನಿಸಿದಳು. ಆದ್ದರಿಂದ ಅವಳಿಗೆ ಸರ್ವಂಸಹಾ, ಅಚಲಾ ಎಂಬ ಹೆಸರು ಬಂತು.

ಸಾಮಾನ್ಯವಾಗಿ ಸಮಸ್ಯೆಗಳು ಬಂದಾಗ ಮನಸ್ಸಿನಲ್ಲಿ ದಾರ್ಢ್ಯ ಇರುವುದಿಲ್ಲ. ಸಂಶಯವೇ ಇರುತ್ತದೆ. ದೇವರು ದಯೆ ತೋರುತ್ತಾನೋ ಇಲ್ಲವೋ ಎಂದು. ಈ ಸಂಶಯವು ಹೋಗಿ ಮನಸ್ಸಿಗೆ ಸ್ಥಿರತೆ ಈ ಭೂಮಿತಾಯಿಯಿಂದ ಬರುತ್ತದೆ. ಸಮಸ್ಯೆ ಮುಗಿಯಲಿ, ಅನಂತರ ಧ್ಯಾನ ಮಾಡೋಣ ಎಂಬ ಭಾವನೆ ಕೂಡದು. ಸಮಸ್ಯೆಗಳು ಇರುವಾಗಲೇ ಧ್ಯಾನ ಮಾಡಬೇಕು. ಮನಸ್ಸನ್ನು ಗಟ್ಟಿ ಮಾಡಿಕೊಳ್ಳಬೇಕು ಎಂಬ ಸಂದೇಶ ಈ ಭೂಮಿಯಿಂದ.

● ● ● ●

ಸಂದೇಶ

ಕರಸ್ಥದೇವಸ್ಯ ಕುತಃ ಅಂತರಾಯಃ

ದೇವರನ್ನು ತನ್ನಲ್ಲಿ ಇಟ್ಟುಕೊಂಡವನಿಗೆ ಎಲ್ಲಿಯೂ ವಿಘ್ನಗಳು ಬರುವುದಿಲ್ಲ

---

ಸಹಸ್ರಕಾರ್ಯೇಷು ಭವಾನ್ ಸಮರ್ಥಃ
ಸಹಸ್ರನೇತ್ರಾನನಪಾಣಿಪಾದಃ ।

**ಇತೀವ ವಿಜ್ಞಾಪಯಿತುಂ ವಿರಿಂಚಃ**
**ಸ್ತುತಿಂ ಸ ಪುಂಸೂಕ್ತಗತಾಂ ತತಾನ ॥೨೧॥**

**ಸಹಸ್ರ** = ಸಾವಿರಾರು, **ಕಾರ್ಯೇಷು** = ಕೆಲಸಗಳಲ್ಲಿ, **ಭವಾನ್** = ನೀನು, **ಸಮರ್ಥಃ** = ಶಕ್ತನು, **ಸಹಸ್ರಃ** = ಸಾವಿರಾರು, **ನೇತ್ರ** = ಕಣ್ಣುಗಳು, **ಆನನ** = ಮುಖಗಳು, **ಪಾಣಿ** = ಕೈಗಳು, **ಪಾದಃ** = ಕಾಲುಗಳುಳ್ಳವನು, **ಇತಿ ಇವ** = ಈ ರೀತಿಯಾಗಿಯೋ ಎಂಬಂತೆ, **ವಿಜ್ಞಾಪಯಿತುಂ** = ತಿಳಿಸಲು, **ವಿರಿಂಚಃ** = ಬ್ರಹ್ಮನು, **ಸ್ತುತಿಂ** = ಸ್ತೋತ್ರವನ್ನು , **ಸಃ** = ಆ, **ಪುಂಸೂಕ್ತ** = ಪುರುಷಸೂಕ್ತದಲ್ಲಿ, **ಗತಾಂ** = ಇರುವ, **ತತಾನ** = ಮಾಡಿದನು.

ಬ್ರಹ್ಮನು ದೇವರನ್ನು ಪುರುಷಸೂಕ್ತದಿಂದ ಸ್ತುತಿಸಿದನು. ಯಾಕೆಂದರೆ, ದೇವರಿಗೆ ಭೂಮಿಯಲ್ಲಿ ಸಾವಿರಾರು ಕೆಲಸಗಳಿವೆ. ಆ ಕೆಲಸಗಳನ್ನು ನೋಡಿಕೊಂಡು ಮಾಡಲು ಸಾವಿರಾರು ಕಣ್ಣು, ಕೈ, ಕಾಲುಗಳು ಬೇಕು. ಆದ್ದರಿಂದ ದೇವರಿಗೆ ಅಷ್ಟು ಕೈಕಾಲುಗಳು ಇವೆ ಎಂದು ಪುರುಷಸೂಕ್ತ ಹೇಳುತ್ತದೆ.

ಪುರುಷಸೂಕ್ತದಿಂದ ದೇವರನ್ನು ಅರ್ಚಿಸಿಯೇ ಪೂಜಿಸಬೇಕು ಎಂದು ಶಾಸ್ತ್ರದ ನಿಯಮವನ್ನು ಇಲ್ಲಿ ತಿಳಿಸುತ್ತಾರೆ. ಒಬ್ಬರಿಂದ ನಮಗೆ ಒಂದು ಕೆಲಸ ಆಗಬೇಕಾದರೆ ಅವರ ಸಾಮರ್ಥ್ಯವನ್ನು ನಾವು ತಿಳಿದಿದ್ದೇವೆ ಎಂದಾದರೆ ಹಾಗೆಯೇ ಅವರ ಮುಂದೆ ಹೇಳಿ-ಕೊಂಡರೆ ಆಗ ಅವರು ನಮ್ಮ ಕೆಲಸವನ್ನು ಮಾಡಿಕೊಡುತ್ತಾರೆ ಎಂಬುದು ಲೋಕದಲ್ಲಿನ ನ್ಯಾಯ.

**ತಚ್ಚಿತ್ತೇಽಂಕುರಿತಃ ಸುಭಕ್ತಿಲತಯಾ ಶ್ಲಿಷ್ಟಃ ಪ್ರಮೋದಾಶ್ರುಭಿಃ**
**ಸಿಕ್ತಃ ಸತ್‌ಪುಲಕಾಲಿಮೂಲವಿತತಃ ಕಾಯಪ್ರಭಾಪಲ್ಲವಃ ।**
**ಈಷನ್ಮೀಲಿತನೇತ್ರಕುಡ್ಮಲಯುತಃ ಶಾಖಾಸಹಸ್ರೋಽರ್ಜಿತಃ**
**ಪ್ರಾಪ್ತಃ ಶ್ರೀರಮಣದ್ವಿಜೇನ ಫಲಿತಸ್ತದ್ಧ್ಯಾನಕಲ್ಪದ್ರುಮಃ ॥ ೨೨ ॥**

**ತತ್** = ದೇವತೆಗಳ, **ಚಿತ್ತೇ** = ಮನಸ್ಸಿನಲ್ಲಿ, **ಅಂಕುರಿತಃ** = ಚಿಗುರಿದ, **ಸುಭಕ್ತಿ** = ಒಳ್ಳೆಯ ಭಕ್ತಿ ಎಂಬ, **ಲತಯಾ** = ಬಳ್ಳಿಯಿಂದ, **ಶ್ಲಿಷ್ಟಃ** = ಆಲಂಗಿಸಲ್ಪಟ್ಟ, **ಪ್ರಮೋದ** = ಆನಂದದ, **ಅಶ್ರುಭಿಃ** = ಕಣ್ಣೀರಿನಿಂದ, **ಸಿಕ್ತಃ** = ಸಿಂಪಡಿಸಲ್ಪಟ್ಟ, **ಸತ್** = ಒಳ್ಳೆಯ, **ಪುಲಕಾಲಿ** = ರೋಮಾಂಚಗಳ ಸಮೂಹವೆಂಬ, **ಮೂಲ** = ಬೇರುಗಳಿಂದ, **ವಿತತಃ** = ಹರಡಿದ, **ಕಾಯ** = ಶರೀರದ, **ಪ್ರಭಾ** = ಕಾಂತಿ ಎಂಬ, **ಪಲ್ಲವಃ** = ಚಿಗುರುಗಳುಳ್ಳ, **ಈಷತ್** = ಸ್ವಲ್ಪ, **ಮೀಲಿತ** = ಮುಚ್ಚಿದ, **ನೇತ್ರ** = ಕಣ್ಣುಗಳೆಂಬ, **ಕುಡ್ಮಲ** = ಮೊಗ್ಗು-ಗಳಿಂದ, **ಯುತಃ** = ಕೂಡಿದ, **ಶಾಖಾ** = ವೇದಗಳೆಂಬ ಗೆಲ್ಲುಗಳ, **ಸಹಸ್ರ** =

ಸಾವಿರದಿಂದ, **ಊರ್ಜಿತಃ** = ಪುಷ್ಟವಾದ, **ಪ್ರಾಪ್ತಃ** = ಹೊಂದಲ್ಪಟ್ಟ, **ಶ್ರೀರಮಣ** = ಶ್ರೀಲಕ್ಷ್ಮೀಪತಿಯೆಂಬ, **ದ್ವಿಜೇನ** = ಹಕ್ಕಿಯಿಂದ, **ಫಲಿತಃ** = ಫಲಿಸಿತು, **ತತ್** = ದೇವತೆಗಳ, **ಧ್ಯಾನ** = ಧ್ಯಾನ ಎಂಬ, **ಕಲ್ಪದ್ರುಮಃ** = ಕಲ್ಪವೃಕ್ಷವು.

'ದೇವತೆಗಳ ಚಿತ್ತದಲ್ಲಿ ದೇವರು ಪ್ರತ್ಯಕ್ಷನಾದ' ಎಂಬುದನ್ನು ಕಾವ್ಯದ ಶೈಲಿಯಲ್ಲಿ ವರ್ಣಿಸುತ್ತಾರೆ. ಮನಸ್ಸನ್ನು ಹದಗೊಳಿಸಿದರೆ ಚಿತ್ತವಾಗುತ್ತದೆ. ಇದೇ ಫಲವತ್ತಾದ ಭೂಮಿ. ಈ ಭೂಮಿಯಲ್ಲಿ ಧ್ಯಾನವೆಂಬ ವೃಕ್ಷವು ಅಂಕುರಿಸಿತು. ಭಕ್ತಿ ಎಂಬ ಬಳ್ಳಿಯು ಈ ಮರವನ್ನು ಆವರಿಸಿದೆ. ಮರಗಳನ್ನು ಬಳ್ಳಿಗಳು ಆವರಿಸಿಕೊಂಡಿದ್ದರೆ ಮರಕ್ಕೆ ಶೋಭೆ. ಭಕ್ತಿ ಇಲ್ಲದ ಧ್ಯಾನ ಶುಷ್ಕ . ಸದಾ ಕಾಲ ನೀರಾವರಿ ಇದ್ದರೆ ಮರಗಳು ಚೆನ್ನಾಗಿವೆ ಎಂದರ್ಥ. ನಿಜವಾದ ಧ್ಯಾನವಾಗುವುದು ಕಣ್ಣುಗಳಿಂದ ಆನಂದಾಶ್ರುಗಳು ಉದುರಿದಾಗ. ಮೂಗಿನ ತುದಿಯನ್ನು ನೋಡಿಕೊಂಡು ಧ್ಯಾನಮಾಡಬೇಕು ಎಂದು ಶಾಸ್ತ್ರದ ನಿಯಮ. ಆಗ ಸಹಜವಾಗಿ ಕಣ್ಣುಗಳಿಂದ ಅಶ್ರುಗಳು ಉದುರುತ್ತವೆ. ದಾಸರೂ ಕೂಡಾ ಈ ದೃಶ್ಯಗಳನ್ನು 'ಬಿಗಿದ ಕಂಠದಿಂ, ದೃಗ್‌ಭಾಷ್ಪದಿಂ' ಎಂದು ವರ್ಣಿಸಿದ್ದಾರೆ. ಧ್ಯಾನದಿಂದಾಗಿ ಮೈ ರೋಮಾಂಚಗೊಂಡಿದೆ. ಇದು ಧ್ಯಾನವೃಕ್ಷದ ಬೇರುಗಳು. ಯದ್ಯಪಿ ಧ್ಯಾನವೃಕ್ಷ ಶರೀರವೆಂಬ ಕಟ್ಟೆಯ ಒಳಗಿದೆ. ದೊಡ್ಡ ಮರದ ಬೇರುಗಳು ಕಟ್ಟೆಯಿಂದ ಹೊರ ಬರುವಂತೆ ಇಲ್ಲಿಯೂ ರೋಮಾಂಚ ಎಂಬುದು (ಧ್ಯಾನವೃಕ್ಷದ) ಬೇರುಗಳು ಹೊರ ಬಂದಂತೆ. ಸರಿಯಾಗಿ ಧ್ಯಾನಮಾಡುವವನಿಗೆ ರೋಮಾಂಚವಾಗುವುದು ಸಹಜ ಎಂಬುದು ಇಲ್ಲಿಯ ಅಭಿಪ್ರಾಯ. ಧ್ಯಾನಿಯ ಮುಖದಲ್ಲಿ ಸಹಜವಾದ ತೇಜಸ್ಸು ಇರುತ್ತದೆ. ಅದು ಮರದ ಚಿಗುರಿಗೆ ಸಮಾನ. ಚಿಗುರು ಮೃದು. ಹಾಗೆಯೇ, ತೇಜಸ್ಸಿನಿಂದ ಮುಖದಲ್ಲಿ ಮಾರ್ದವ, ಶಾಂತತೆ ವ್ಯಕ್ತವಾಗುತ್ತದೆ. ಧ್ಯಾನಕಾಲದಲ್ಲಿ ಕಣ್ಣುಗಳನ್ನು ಪೂರಾ ಮುಚ್ಚಲೂ ಬಾರದು, ನಿದ್ದೆ ಬಂದೀತು; ಪೂರ್ಣ ತೆರೆಯಲೂ ಬಾರದು, ಬೇಡದ್ದೇ ಕಂಡೀತು. ಆ ರೀತಿಯಾಗಿ ರೆಪ್ಪೆಗಳು ಇರಬೇಕು. ಆಗ ಕಣ್ಣುಗಳು ಮೊಗ್ಗಿನಂತೆ ತೋರುತ್ತವೆ. ವೃಕ್ಷಗಳಿಗೆ ಗೆಲ್ಲುಗಳು ಬಹಳ ಇರುತ್ತವೆ. ಆಗಲೇ ಮರ ಚಂದ. ಧ್ಯಾನಕಾಲದಲ್ಲಿ ಅನೇಕ ವೇದಗಳ ಅರ್ಥಗಳನ್ನು ಮೆಲಕು ಹಾಕಬೇಕು. ಇಂತಹ ಧ್ಯಾನಕ್ಕೆ ದೇವರು ಗೋಚರ ಆಗುತ್ತಾನೆ. ಇಂತಹ ಧ್ಯಾನವೇ ದೇವರ ಮನಸ್ಸನ್ನು ಆಕರ್ಷಿಸುವುದರಲ್ಲಿ ಸಮರ್ಥ. ಆಗಲೇ ಈ ಧ್ಯಾನವು ಫಲಿಸುವುದು. ಮರವು ಫಲಿಸಿದ್ದಕ್ಕೆ ಖಾತ್ರಿಯಾಗುವುದು ಪಕ್ಷಿಗಳು ಆ ಮರವನ್ನು ಆಶ್ರಯಿಸಿದ್ದರಿಂದ. ಅದೇ ರೀತಿ ದ್ವಾ ಸುಪರ್ಣಾ ಸಯುಜಾ ಸಖಾಯ ಎಂಬ ಶ್ರುತಿಯ ಪ್ರಕಾರ ದೇವರೆಂಬ ಪಕ್ಷಿಯು ಧ್ಯಾನಕ್ಕೆ ಗೋಚರವಾದಾಗ ಧ್ಯಾನ ಫಲಿಸಿತು ಎಂದು ಖಾತ್ರಿಯಾಗುತ್ತದೆ.

**ತತಃ ಪ್ರಸನ್ನಃ ಕರುಣಾಂಬುರಾಶಿಃ**
**ಸುರಾನ್ ಸಮಾಶ್ವಾಸ್ಯ ವಿರಿಂಚಪೂರ್ವಾನ್ ।**
**ಧರಾಂ ಗತಕ್ಲೇಶಭರಾಂ[੧] ವಿಧಾಯ**
**ಸ್ವಕೀಯಮಾಯಾಂ ಹರಿರಿತ್ಯವೋಚತ್ ॥೨೩॥**

**ತತಃ** = ಅನಂತರ, **ಪ್ರಸನ್ನಃ** = ಸಂತೋಷಗೊಂಡ, **ಕರುಣ** = ದಯೆ ಎಂಬ, **ಅಂಬು** = ನೀರಿನ, **ರಾಶಿ** = ಸಮೂಹವುಳ್ಳ, **ಸುರಾನ್** = ದೇವತೆಗಳನ್ನು, **ಸಮಾಶ್ವಾಸ್ಯ** = ಸಮಾಧಾನ ಮಾಡಿ, **ವಿರಿಂಚಿ** = ಬ್ರಹ್ಮನೇ, **ಪೂರ್ವಾನ್** = ಮೊದಲಾದವರನ್ನು, **ಧರಾಂ** = ಭೂಮಿಯನ್ನು, **ಗತ** = ನಾಶಮಾಡಿದ, **ಕ್ಲೇಶ** = ಕಷ್ಟ ಎಂಬ, **ಭರಾಂ** = ಭಾರವುಳ್ಳವಳನ್ನಾಗಿ, **ವಿಧಾಯ** = ಮಾಡಿ, **ಸ್ವಕೀಯ** = ತನ್ನ, **ಮಾಯಾಂ** = ಲಕ್ಷ್ಮಿ-ಯನ್ನು, **ಹರಿಃ** = ದೇವರು, **ಇತಿ** = ಈ ರೀತಿಯಾಗಿ, **ಅವೋಚತ್** = ಹೇಳಿದನು.

ದೇವತೆಗಳ ತಪಸ್ಸಿಗೆ ಮೆಚ್ಚಿದ ದೇವರು ಈ ದೇವತೆಗಳನ್ನು ಸಮಾಧಾನ ಪಡಿಸಿದನು. ಭೂಮಿಯ ಭಾರ ಇಳಿಸುತ್ತೇನೆಂದು ಸಂಕಲ್ಪ ಮಾಡಿದನು. ಹಾಗೆಯೇ ತನ್ನ ಪತ್ನಿಯಾದ ಲಕ್ಷ್ಮಿಯಲ್ಲಿ ಇಂತೆಂದನು.

**ದೇವೇಷು ಧಾತಾ ಪ್ರಭುರಸ್ಯ ಲಕ್ಷ್ಮೀಃ**
**ತಸ್ಯಾಃ ಪ್ರಭುಃ ಸೋಽಹಮಿತೀವ ಶಂಸನ್ ।**
**ಆಜ್ಞಾಮಜಸ್ಯೈವ ದದಾವದೃಶ್ಯೋ**
**ವಿಜ್ಞೇಯಮೂರ್ತಿಃ ಸ್ಫುಟಮಿಂದಿರಾಯಾಃ ॥೨೪॥**

**ದೇವೇಷು** = ದೇವತೆಗಳಲ್ಲಿ, **ಧಾತಾ** = ಬ್ರಹ್ಮನು, **ಪ್ರಭುಃ** = ಒಡೆಯನು, **ಅಸ್ಯ** = ಇವನಿಗೆ, **ಲಕ್ಷ್ಮೀ** = ಲಕ್ಷ್ಮಿಯು, **ತಸ್ಯಾಃ** = ಅವಳಿಗೆ, **ಪ್ರಭುಃ** = ಒಡೆಯನು, **ಸಃ ಅಹಂ** = ಅಂತಹ ನಾನು, **ಇತಿ ಇವ** = ಈ ರೀತಿಯೋ ಎಂಬಂತೆ, **ಶಂಸನ್** = ಹೇಳುತ್ತಾ, **ಆಜ್ಞಾಂ** = ಅಪ್ಪಣೆಯನ್ನು, **ಅಜಸ್ಯ ಏವ** = ಬ್ರಹ್ಮನಿಗೇ, **ದದೌ** = ಕೊಟ್ಟನು, **ಅದೃಶ್ಯಃ** = ಕಾಣದವನಾಗಿ, **ವಿಜ್ಞೇಯ** = ಕಾಣುವ, **ಮೂರ್ತಿಃ** = ಶರೀರವುಳ್ಳವನಾಗಿ, **ಸ್ಫುಟಂ** = ಚೆನ್ನಾಗಿ, **ಇಂದಿರಾಯಾಃ** = ರಮೆಗೆ.

ದೇವರು ದೇವಿಯಲ್ಲಿ ಮಾತನಾಡುವಾಗ ಅವಳಿಗೆ ದೇವರ ರೂಪ, ಶಬ್ದ ಎರಡರ ಪ್ರತ್ಯಕ್ಷವೂ ಆಯಿತು. ಬ್ರಹ್ಮನಿಗೆ ಶಬ್ದ ಮಾತ್ರ ಕೇಳಿಸಿತು. ಇತರ ದೇವತೆಗಳಿಗೆ ಏನೂ ಇಲ್ಲ.

---

[੧] ಗತಪ್ರೇಶಭರಾಂ -(ಪಾ) ಗತಃ ಪ್ರೇಶಸ್ಯ ದುಃಖಸ್ಯ ಭರಃ ಯಸ್ಯಾಸ್ತಾಂ; ವಿಧಾಯ ಕೃತ್ವಾ ಮನಸಾ ಇತಿ ಶೇಷಃ - (ವ್ಯಾ)

ಇದರಿಂದ ಒಂದು ಸಿದ್ಧಾಂತ ಬೆಳಕಿಗೆ ಬಂತು. ದೇವತೆಗಳು ಕೆಳಗಿನ ಕಕ್ಷೆಯವರು. ಬ್ರಹ್ಮನಿಗೆ ಕೇಳಿಸಿದ್ದರಿಂದ ಆತ ದೇವತೆಗಳಿಗಿಂತ ದೊಡ್ಡವ. ಲಕ್ಷ್ಮಿಗೆ ಎರಡೂ ದರ್ಶನ; ಆದ್ದರಿಂದ ಬ್ರಹ್ಮನಿಗಿಂತಲೂ ದೊಡ್ಡವಳು. ಆಜ್ಞೆ ಮಾಡಿದವ ದೇವರು. ಆದ್ದರಿಂದ ಆತ ಸರ್ವೋತ್ತಮ ಎಂದು. ಇತರ ದೇವತೆಗಳಿಗೆ ಬ್ರಹ್ಮನ ಮೂಲಕವೇ ಆಜ್ಞೆ. ಇದರರ್ಥ ಪ್ರತಿಯೊಬ್ಬ ಸಾತ್ವಿಕನೂ ಋಜುವಿನ ಮೂಲಕವೇ ದೇವರನ್ನು ಹೊಂದಬೇಕು. ಋಜುವಿನ ಮೂಲಕವೇ ದೇವರಿಂದ ಪಡೆಯಬೇಕು. ಆಗಲೇ ಅದು ಫಲಿಸುವುದು.

ತ್ವಮೇತ್ಯ ದೇವಕ್ಯುದರಸ್ಥಗರ್ಭಂ
ನಿಧೇಹಿ ರೋಹಿಣ್ಯುದರೇ ಸ್ವಶಕ್ತ್ಯಾ ।
ಇತೀರಿತಾ ತಂ ರಮಣಂ ರಮಾ ಸಾ
ಪ್ರದಕ್ಷಿಣೀಕೃತ್ಯ ತಥಾಽಕರೋತ್ತತ್ ॥೨೫॥

**ತ್ವಂ** = ನೀನು, **ಏತ್ಯ** = ಹೊಂದಿ, **ದೇವಕೀ** = ದೇವಕಿಯ, **ಉದರ** = ಹೊಟ್ಟೆಯಲ್ಲಿ, **ಸ್ಥ** = ಇರುವ, **ಗರ್ಭಂ** = ಗರ್ಭವನ್ನು, **ನಿಧೇಹಿ** = ಇಡು, **ರೋಹಿಣೀ** = ರೋಹಿಣಿಯ, **ಉದರೇ** = ಹೊಟ್ಟೆಯಲ್ಲಿ, **ಸ್ವಶಕ್ತ್ಯಾ** = ತನ್ನ ಶಕ್ತಿಯಿಂದ, **ಇತಿ** = ಈ ರೀತಿಯಾಗಿ, **ಈರಿತಾ** = ಹೇಳಲ್ಪಟ್ಟ, **ತಂ** = ಆ, **ರಮಣಂ** = ಪತಿಯನ್ನು, **ರಮಾ** = ರಮೆಯು, **ಸಾ** = ಅವಳು, **ಪ್ರದಕ್ಷಿಣೀಕೃತ್ಯ** = ಪ್ರದಕ್ಷಿಣೆ ಮಾಡಿ, **ತಥಾ** = ಹಾಗೆಯೇ, **ಅಕರೋತ್** = ಮಾಡಿದಳು, **ತತ್** = ಅದನ್ನು.

ಹೇ ಲಕ್ಷ್ಮೀ! ದೇವಕಿಯು ಏಳನೆಯ ಗರ್ಭವನ್ನು ಧರಿಸಿದ್ದಾಳೆ. ಆ ಗರ್ಭದಲ್ಲಿದ್ದ ಮಗುವನ್ನು ಕರ್ಷಣೆ ಮಾಡಿ, ರೋಹಿಣಿಯ ಉದರದಲ್ಲಿ ಇಡು ಎಂದು ಆಜ್ಞಾಪಿಸಿದನು. ಆಗ ದೇವಿಯು ಹಾಗೆಯೇ ಆಗಲೆಂದು ದೇವರನ್ನು ಪ್ರದಕ್ಷಿಣೆ ಮಾಡಿ ಆಜ್ಞೆಯನ್ನು ನೆರವೇರಿಸಿದಳು.

ಆದ್ದರಿಂದ ಏಳನೆಯ ಮಗುವು ಸಂಕರ್ಷಣನಾಯಿತು. ಸಂಕರ್ಷಣ ಅಂದರೆ ಶೇಷ = ಬಲರಾಮ. ದೇವರಿಗೆ ಪ್ರದಕ್ಷಿಣೆ ಬಂದು ಎಂದು ಹೇಳಿದ್ದರಿಂದ ಒಳ್ಳೆಯ ಕೆಲಸಕ್ಕೆ ಹೊರಡುವಾಗ ದೇವರ ಪ್ರದಕ್ಷಿಣೆ, ನಮಸ್ಕಾರಗಳನ್ನು ಮುಗಿಸಿ ಹೊರಟರೆ ಕೆಲಸ ಆಗುತ್ತದೆ ಎಂದು ಅಭಿಪ್ರಾಯ.

ಆಜ್ಞಾಪಯಾಮಾಸ ಪುರಾ ಸ ಶೇಷಂ
ಜಜ್ಞೇ ಸ ರೋಹಿಣ್ಯುದರೋದಯಾದ್ರೇಃ ।

ಸಂಪ್ರೇಷಯಂತಿ ಸ್ಮ ನರೈರ್ನರೇಂದ್ರಾಃ
ಶಯ್ಯಾಂ ಸ್ವಕೀಯಾಂ ಪುರತಃ ಪ್ರಯಾಣೇ ॥೨೬॥

**ಆಜ್ಞಾಪಯಾಮಾಸ** = ಅಪ್ಪಣೆ ಮಾಡಿದನು, **ಪುರಾ** = ಮೊದಲು, **ಸಃ** = ದೇವರು, **ಶೇಷಂ** = ಶೇಷನನ್ನು, **ಜಜ್ಞೇ** = ಹುಟ್ಟಿಸಿದನು, **ಸಃ** = ಆ ಶೇಷನು, **ರೋಹಿಣಿ** = ರೋಹಿಣಿಯ, **ಉದರ** = ಹೊಟ್ಟೆಯೆಂಬ, **ಉದಯಾದ್ರೇಃ** = ಉದಯಪರ್ವತದ ದೆಸೆಯಿಂದ, **ಸಂಪ್ರೇಷಯಂತಿ** = ಕಳಿಹಿಸುತ್ತಾರೆ, **ನರೈಃ** = ಜನರಿಂದ, **ನರೇಂದ್ರಾಃ** = ರಾಜರು, **ಶಯ್ಯಾಂ** = ಹಾಸಿಗೆಯನ್ನು, **ಸ್ವಕೀಯಾಂ** = ತಮ್ಮ, **ಪುರತಃ** = ಮೊದಲು, **ಪ್ರಯಾಣೇ** = ಯಾತ್ರೆಯಲ್ಲಿ.

ದೇವರ ಆಜ್ಞೆಯಂತೆ ಶೇಷನು ದೇವರಿಗಿಂತ ಮೊದಲು ರೋಹಿಣಿಯಲ್ಲಿ ವಸುದೇವನಿಂದ ಅವತರಿಸಿದನು. ಮೊದಲು ಅವತರಿಸಿದ್ದಕ್ಕೆ ವಾದಿರಾಜರು ಲೋಕದ ಉದಾಹರಣೆಯನ್ನು ಕೊಡುತ್ತಾರೆ – ಲೋಕದಲ್ಲಿ ರಾಜರುಗಳು ತಾವು ಪ್ರಯಾಣಕ್ಕೆ ಹೊರಡುವಾಗ ಮೊದಲು ತಮ್ಮ ಹಾಸಿಗೆಯನ್ನು ಕಳುಹಿಸುತ್ತಾರೆ. ದೇವರು ರಾಜಾಧಿರಾಜ. ಆದ್ದರಿಂದ ಲೋಕದ ಕ್ರಮವನ್ನು ಅನುಸರಿಸಿದ್ದಾನೆ.

ದೇವಕಿಯ ಗರ್ಭದಲ್ಲಿ ಅವತರಿಸುವ ಮೊದಲು ಆ ಗರ್ಭದಲ್ಲಿ ಶೇಷನು ಸ್ವಲ್ಪ ಸಮಯ ಇದ್ದು ಅನಂತರ ರೋಹಿಣಿಯ ಗರ್ಭಕ್ಕೆ ಹೋದನು. ಯಾಕೆ ಹೀಗೆ ಅಂದರೆ – ದೇವರು ಸ್ವಚ್ಛವಾದ ಜಾಗದಲ್ಲಿ ಕಾಣಿಸುವವನು. ದೇವಕಿಯ ಗರ್ಭವನ್ನು ಸ್ವಚ್ಛ ಮಾಡುವ ಸಲುವಾಗಿ ದೇವಕಿಗಿಂತ ಕಕ್ಷೆಯಲ್ಲಿ ಎತ್ತರನಾದ ಶೇಷನು ಅಲ್ಲಿ ಇದ್ದನು. ಅನಂತರ ಅಲ್ಲಿಂದ ಹೊರಟನು. ಅನಂತರ ಆ ಜಾಗಕ್ಕೆ ದೇವರು ಬಂದನು ಎಂದು ತಿಳಿಯಬೇಕು.

ಇನ್ನೊಂದು ಸಂಕೇತ – ಜನರು ಮಲಗಲು, ಉಡಲು, ಕುಳಿತುಕೊಳ್ಳಲು ತಮ್ಮದೇ ಆದ ವಸ್ತುಗಳನ್ನು ಉಪಯೋಗಿಸುವುದು ಉತ್ತಮ ಎಂದು

ಕೇಶಾತ್ಮನಾ ಸನ್ನಿಹಿತಃ ಸ ತಸ್ಮಿನ್
ಶ್ರೀಶೋಽಗ್ರಜತ್ವಂ ಸ್ವಯಮೇವ ನೂನಮ್ ।
ಧತ್ತೇ ವಿಧತ್ತೇ ಬಲಭದ್ರಮಾತು-
ರ್ನಿತ್ಯಂ ಸ್ವಮಾತೃತ್ವಸುಖಂ ಸುಖಾತ್ಮಾ ॥ ೨೭ ॥

**ಕೇಶಾತ್ಮನಾ** = ಕೂದಲಿನ ರೂಪದಿಂದ, **ಸನ್ನಿಹಿತಃ** = ಇದ್ದಾನೆ. **ಸಃ** = ಆ, **ತಸ್ಮಿನ್** = ಬಲರಾಮನಲ್ಲಿ, **ಶ್ರೀಶಃ** = ದೇವರು, **ಅಗ್ರಜತ್ವಂ** = ಅಣ್ಣನಾಗುವಿಕೆಯನ್ನು, **ಸ್ವಯ-**

**ಮೇವ** = ತಾನಾಗಿಯೇ, **ನೂನಂ** = ನಿಶ್ಚಯ, **ಧತ್ತೇ** = ಧರಿಸುತ್ತಾನೆ. **ವಿಧತ್ತೇ** = ಮಾಡುತ್ತಾನೆ, **ಬಲಭದ್ರ** = ಬಲರಾಮನ, **ಮಾತುಃ** = ತಾಯಿಗೆ, **ನಿತ್ಯಂ** = ಯಾವಾಗಲೂ, **ಸ್ವ** = ತನಗೆ, **ಮಾತೃತ್ವ** = ತಾಯಿತನದ, **ಸುಖಂ** = ಸುಖವನ್ನು, **ಸುಖಾತ್ಮಾ** = ಸುಖಸ್ವರೂಪನಾದ.

ದೇವರಿಗೂ ಒಬ್ಬ ಹಿರಿಯನು ಇದ್ದಾನೆಯೇ? ಎಂಬ ಪ್ರಶ್ನೆಗೆ ಉತ್ತರ ಇಲ್ಲಿದೆ – ಇಲ್ಲ ಎಂದು. ಹಾಗಾದರೆ ಬಲರಾಮ? ಆತನು ಹಿರಿಯನಲ್ಲ. ಆತನಲ್ಲಿ ದೇವರ ಶುಕ್ಲಕೇಶದ ಆವೇಶ ಇದೆ. ದೇವರ ವಿಶೇಷ ಸನ್ನಿಧಾನ. ಆದ್ದರಿಂದ (ದೇವರು) ತನಗೆ ತಾನೇ ಹಿರಿಯನಾದ ಎಂದು ಅರ್ಥವಾಗುತ್ತದೆ. ರೋಹಿಣಿಯು ಆ ರೀತಿ ದೇವರನ್ನು ಪ್ರಾರ್ಥಿಸಿದ್ದಳು. ದೇವರ ವಿಶೇಷಸನ್ನಿಧಾನ ಇರುವ ಬಲಿಷ್ಠನಾದ ಪುತ್ರ ಬೇಕೆಂದು. ಅದಕ್ಕಾಗಿ ದೇವರು ತಾನು ಆತನಲ್ಲಿ ಆವಿಷ್ಟನಾಗಿ ರೋಹಿಣಿಗೆ ದೇವರ ತಾಯ್ತನದ ಸುಖವನ್ನು ಕೊಟ್ಟ. ರೋಹಿಣಿಯು ಸದಾ ಬಲರಾಮನಲ್ಲಿ ದೇವರ ಸನ್ನಿಧಾನವನ್ನು ಅನುಭವಿಸಿ ಸುಖಿಸುತ್ತಿದ್ದಳು. ಇದು ದೇವರು ಅವಳಿಗೆ ಮಾಡಿದ ಅನುಗ್ರಹ.

ಲೋಕದಲ್ಲಿ ಯಾರೂ ತನಗೆ ತಾನೇ ಹಿರಿಯ ಅಥವಾ ಕಿರಿಯ ಆಗುವುದಿಲ್ಲ. ಹಿರಿಯನಾದರೆ ಕಿರಿಯನಲ್ಲ. ಕಿರಿಯನಾದರೆ ಹಿರಿಯನಲ್ಲ. ಆದರೆ ದೇವರು ವಿರುದ್ಧವಾದ ಎಲ್ಲಾ ಧರ್ಮಗಳನ್ನೂ ತನ್ನಲ್ಲಿ ಕೂಡಿಸಿಕೊಳ್ಳುವವನು. **'ಅಣೋಃ ಅಣೀಯಾನ್ ಮಹತೋ ಮಹೀಯಾನ್'** ಅಣುತ್ವ ಮಹತ್ವ ಏಕತ್ರ ವಿರುದ್ಧ ಲೋಕದಲ್ಲಿ. ಆದರೆ ದೇವರಲ್ಲಿ ಕೂಡುತ್ತದೆ. ಹಾಗೆಯೇ ಇಲ್ಲಿಯೂ ಕೂಡಾ ಎಂದು ಒಂದು ವಿಷಯ. ಎರಡನೆಯದಾಗಿ ನಾವು ಯಾವ ವಸ್ತುವನ್ನು ನೋಡಿ ಆನಂದಿಸುವಾಗಲೂ ಅದರ ಒಳಗೆ ದೇವರಿದ್ದಾನೆ ಎಂಬ ಅನುಸಂಧಾನವನ್ನು ಮಾಡಬೇಕೆಂಬ ತತ್ತ್ವ ಇಲ್ಲಿ ಅಡಗಿದೆ.

**ಬಲಾತ್ಪ್ರಗೃಹ್ಯ ಸ್ವಕವಾಟಪಾಲೌ**
**ನಿಶಾಚರೌ ಭೂತಲಮೇತ್ಯ ದೃಪ್ತೌ।**
**ನೃತಸ್ಕರೌ ತೌ ವಿನಿಹತ್ಯ ವಿಷ್ಣು-**
**ರ್ನಿಜೌ ನಿನೀಷನ್ನಿವ ಗಾಂ ಗತೋಽಭೂತ್ ॥ ೨೮ ॥**

**ಬಲಾತ್** = ಬಲಾತ್ಕಾರದಿಂದ, **ಪ್ರಗೃಹ್ಯ** = ಹಿಡಿದು, **ಸ್ವ** = ತನ್ನ, **ಕವಾಟ** = ಬಾಗಿಲಿನ, **ಪಾಲೌ** = ರಕ್ಷಕರನ್ನು, **ನಿಶಾಚರೌ** = ರಾಕ್ಷಸರನ್ನು, **ಭೂತಲಂ** = ಭೂಮಿಯನ್ನು, **ಏತ್ಯ** = ಹೊಂದಿ, **ದೃಪ್ತೌ** = ಕೊಬ್ಬಿದ, **ನೃ** = ಜನರನ್ನು, **ತಸ್ಕರೌ** = ಕದ್ದಿರುವ, **ತೌ** = ಅವರನ್ನು, **ವಿನಿಹತ್ಯ**= ಕೊಂದು, **ವಿಷ್ಣುಃ** = ದೇವರು, **ನಿಜೌ** = ತನ್ನವರನ್ನು,

**ನಿನೀಷನ್ ಇವ** = ಹಿಂದೆ ಒಯ್ಯುವವನಂತೆ, **ಗಾಂ** = ಭೂಮಿಯನ್ನು, **ಗತಃ** = ಹೊಂದಿದವನು, **ಅಭೂತ್** = ಆದನು.

ದೇವರ ಮನೆಯ ದ್ವಾರಪಾಲಕರನ್ನು ಇಬ್ಬರು ರಾಕ್ಷಸರು ಕದ್ದು ಭೂಮಿಗೆ ಬಂದರು. ಇಲ್ಲಿ ಬಹಳ ಅನ್ಯಾಯ ಮಾಡಿದರು. ಇಂತಹ ಕಳ್ಳರನ್ನು ಕೊಂದು ತನ್ನ ಸೇವಕರನ್ನು ಪುನಃ ತನ್ನಲ್ಲಿಗೆ ಒಯ್ಯಲು ದೇವರು ಧರೆಗೆ ಬಂದನು.

ಇಲ್ಲಿ ನಿಶಾಚರೌ ಎಂಬ ಶಬ್ದವು ಕಳ್ಳರನ್ನು ಸೂಚಿಸುತ್ತದೆ. ಕಳ್ಳರು ರಾತ್ರಿಯಲ್ಲಿಯೇ ಸಂಚರಿಸುವವರು. ಇಂತಹ ಕಳ್ಳರನ್ನು ಕೊಲ್ಲಲು ಕೃಷ್ಣರೂಪದಿಂದ ಧರೆಗೆ ಬರುವ ದೇವರು ಸ್ವಯಂ ಕಳ್ಳನಾಗಲು ಹೇಗೆ ಸಾಧ್ಯ? ಶ್ರೀವಾದಿರಾಜರು ಕೃಷ್ಣನಿಗೆ ಮುಂದೆ ಜನರು ಆರೋಪಿಸುವ ಚೋರತ್ವವನ್ನು ಈಗಲೇ ಚಿವುಟಿ ಹಾಕುತ್ತಾರೆ. ದೇವರ ಸೇವಕರನ್ನು ಕದ್ದ ರಾಕ್ಷಸರು ದೇವರಿಗೆ ಸಂಬಂಧಿಸಿದ ಯಾವ ವಸ್ತುವನ್ನು ಅಪಹರಿಸಿದರೂ ಅದಕ್ಕೆ ಶಿಕ್ಷೆ ಅನುಭವಿಸಲೇಬೇಕು ಎಂಬ ಸಂದೇಶಗಳು ಇಲ್ಲಿ ಸೇರಿವೆ.

**ನ ಗರ್ಭವಾಸೋ ಮಮ ನಿರ್ಮಲಸ್ಯೇತ್ಯದೋ**
**ಬುಧಾನ್ ಬೋಧಯಿತುಂ ಹೃದೇವ।**
**ಫಣೀಶ್ವರಂ ಗರ್ಭಗತಂ ವಿಧಾಯ**
**ಪುನಃ ಸ್ವಯಂ ಸನ್ನಿಹಿತೋ ಬಭೂವ ॥೨೯॥**

**ನ** = ಇಲ್ಲ, **ಗರ್ಭವಾಸಃ** = ಗರ್ಭವಾಸವು, **ಮಮ** = ನನಗೆ, **ನಿರ್ಮಲಸ್ಯ** = ಶುದ್ಧನಾದ, **ಇತಿ** = ಎಂದು, **ಅದಃ** = ಅದನ್ನು, **ಬುಧಾನ್** = ಪಂಡಿತರನ್ನು, **ಬೋಧಯಿತುಂ** = ತಿಳಿಸಲು, **ಹೃದಾ ಇವ** = ಅಭಿಪ್ರಾಯದಂತೆ, **ಫಣೀಶ್ವರಂ** = ಶೇಷನನ್ನು, **ಗರ್ಭಗತಂ** = ಗರ್ಭದಲ್ಲಿ ಇರುವವನನ್ನು, **ವಿಧಾಯ** = ಮಾಡಿ, **ಪುನಃ** = ಮತ್ತೆ, **ಸ್ವಯಂ** = ತಾನು, **ಸನ್ನಿಹಿತಃ** = ಇರುವವನು, **ಬಭೂವ** = ಆದನು.

ದೇವರಿಗೆ ಗರ್ಭವಾಸದುಃಖ ಇಲ್ಲ. ಆತ ನಿತ್ಯಮುಕ್ತ, ಸ್ವತಂತ್ರ ಎಂಬ ತಿಳುವಳಿಕೆಯನ್ನು ಯೋಗ್ಯರಿಗೆ ತಿಳಿಸಬೇಕಾಗಿದೆ. ಅದಕ್ಕಾಗಿ ಮೊದಲು ತನ್ನ ಸೇವಕನಾದ ಶೇಷನನ್ನು ಗರ್ಭಕ್ಕೆ ಕಳುಹಿಸಿದನು. ಅನಂತರ ತಾನು ಪ್ರವೇಶಿಸಿದನು. ಪ್ರತಿಮೆಯಲ್ಲಿ ಸನ್ನಿಹಿತನಾದ ದೇವರಿಗೆ ಯಾವ ಲೇಪವೂ ಇಲ್ಲದಿರುವಂತೆ ದೇವಕಿಯಲ್ಲಿ ಸನ್ನಿಹಿತನಾದ ದೇವರಿಗೂ ಯಾವ ಲೇಪವೂ ಇಲ್ಲ ಎಂದು ತಿಳಿಸುತ್ತಾರೆ.

**ಗರ್ಭೇऽಪ್ಯದಭ್ರಾತ್ಮಸುಖೈಕಮೂರ್ತಿ-**
**ಮಭ್ಯೇತ್ಯ ಪದ್ಮಾಸನಮುಖ್ಯದೇವಾಃ।**

ಗೀರ್ಭಿರ್ಭವದ್ಗರ್ಭನಿವಾಸಜಾರ್ತಿ-
ನಿರ್ಭಂಗಸಿದ್ಧ್ಯರ್ಥಮಿವಾಸ್ತುವನ್ ತಮ್ ॥ ೩೦ ॥

**ಗರ್ಭೇಽಪಿ** = ಗರ್ಭದಲ್ಲಿಯೂ, **ಅದಭ್ರ** = ಪೂರ್ಣವಾದ, **ಆತ್ಮ** = ತನ್ನ, **ಸುಖ** = ಆನಂದವೇ, **ಏಕ** = ಮುಖ್ಯವಾದ, **ಮೂರ್ತಿಂ** = ಶರೀರವಾಗಿ ಉಳ್ಳ, **ಅಭ್ಯೇತ್ಯ** = ಹೊಂದಿ, **ಪದ್ಮಾಸನ** = ಬ್ರಹ್ಮನೇ, **ಮುಖ್ಯ** = ಮೊದಲಾದ, **ದೇವಾಃ** = ದೇವತೆಗಳು, **ಗೀರ್ಭಿಃ** = ಮಾತುಗಳಿಂದ, **ಭವನ್** = ಉಂಟಾಗುವ, **ಗರ್ಭ** = ಗರ್ಭದಲ್ಲಿ, **ನಿವಾಸ** = ವಾಸದಿಂದ, **ಜ** = ಉಂಟಾಗುವ, **ಆರ್ತಿ** = ದುಃಖದ, **ನಿರ್ಭಂಗ** = ನಾಶದ, **ಸಿದ್ಧ್ಯರ್ಥಂ** = ಸಿದ್ಧಿಗೋಸ್ಕರ, **ಇವ** = ಹಾಗೆ, **ಅಸ್ತುವನ್**= ಹೊಗಳಿದರು, **ತಂ** = ದೇವರನ್ನು.

ಈ ಸಂದರ್ಭದಲ್ಲಿ ಬ್ರಹ್ಮಾದಿದೇವತೆಗಳು ದೇವಕಿಯ ಗರ್ಭವನ್ನು ಪ್ರವೇಶಿಸಿದರು ದೇವರು ಆ ಗರ್ಭದಲ್ಲಿಯೂ ಆನಂದಭರಿತನಾಗಿಯೇ ಇದ್ದಾನೆ. ಅಂತಹ ದೇವರನ್ನು ಈ ದೇವತೆಗಳು ಸ್ತುತಿಸಿದರು. 'ದೇವರೇ ಸಾತ್ವಿಕರು ಗರ್ಭವಾಸದಿಂದ ಬಹಳ ದುಃಖವನ್ನು ಅನುಭವಿಸುತ್ತಿದ್ದಾರೆ. ಅದನ್ನು ಪರಿಹರಿಸು' ಎಂದು.

ಕಾರಾಗೃಹದ ಅಧಿಪತಿಗೆ ಅಲ್ಲಿಗೆ ಬಂದರೂ ಆತನಿಗೆ ದುಃಖವಿಲ್ಲ. ಕೈದಿಗಳು ಮಾತ್ರ ಬಹಳ ದುಃಖ ಅನುಭವಿಸುತ್ತಿರುತ್ತಾರೆ. ಈ (ಪಶ್ಚಾತ್ತಾಪ ಹೊಂದಿದ) ಕೈದಿಗಳ ಬಗ್ಗೆ ಅಧಿಪತಿಯ ಸೇವಕರು ಅವನಲ್ಲಿ (ದೇವರಲ್ಲಿ) ಇವರ ಬಿಡುಗಡೆಯ ಬಗ್ಗೆ ಬೇಡಿಕೊಳ್ಳುತ್ತಾರೆ. ಅದೇ ರೀತಿ ದೇವರಲ್ಲಿ ಈ ದೇವತೆಗಳು ನಮ್ಮ ಬಗ್ಗೆ ಬೇಡುತ್ತಾರೆ.

ಅಥೋ ಜಯಂತ್ಯಾಮುದಭೂನ್ನಿಶೀಥೇ
ಶಶೀವ ದೇವಕ್ಯುದರೋದಯಾದ್ರೇಃ ।
ದಿಗಷ್ಟಕೇ ರಾತ್ರಿಚರಾನ್ ಜಿಗೀಷೋಃ
ತಿಥಿರ್ನಿಶಾ ಸಾ ಚ ಗುಣೋಚಿತೈವ ॥೩೧॥

**ಅಥೋ** = ಅನಂತರ, **ಜಯಂತ್ಯಾಂ** = ಕೃಷ್ಣಾಷ್ಟಮಿಯಲ್ಲಿ, **ಉದಭೂತ್** = ಅವತರಿಸಿದನು, **ನಿಶೀಥೇ** = ರಾತ್ರಿಯಲ್ಲಿ, **ಶಶೀವ** = ಚಂದ್ರನಂತೆ, **ದೇವಕಿ** = ದೇವಕಿಯ, **ಉದರ** = ಹೊಟ್ಟೆಯೆಂಬ, **ಉದಯಾದ್ರೇಃ** = ಉದಯಪರ್ವತದಿಂದ, **ದಿಕ್** = ದಿಕ್ಕುಗಳ, **ಅಷ್ಟಕೇ** = ಎಂಟರಲ್ಲಿ, **ರಾತ್ರಿಚರಾನ್** = ದೈತ್ಯರನ್ನು, **ಜಿಗೀಷೋಃ** = ಗೆಲ್ಲುವ ಇಚ್ಛೆಯುಳ್ಳ, **ತಿಥಿಃ** = ತಿಥಿಯು, **ನಿಶಾ** = ರಾತ್ರಿಯು, **ಸಾ** =ಆ, **ಚ** = ಕೂಡಾ, **ಗುಣ** = ಗುಣಗಳಿಗೆ, **ಉಚಿತಾ ಏವ** = ಯೋಗ್ಯವೇ.

ಸಿಂಹಮಾಸದ ಕೃಷ್ಣಪಕ್ಷದ ಅಷ್ಟಮೀ ತಿಥಿಯಂದು ರಾತ್ರಿ ಚಂದ್ರೋದಯಕ್ಕೆ ರೋಹಿಣೀ ನಕ್ಷತ್ರ ಇರುವಾಗ ದೇವರು ಅವತರಿಸಿದನು. ಆದ್ದರಿಂದ ಆ ಮುಹೂರ್ತವನ್ನು 'ಜಯಂತೀ' ಎಂದು ಕರೆಯುತ್ತಾರೆ. ದೇವರು ರಾತ್ರಿಂಚರರನ್ನು ಜಯಿಸಲು ಬರುವುದರಿಂದ ರಾತ್ರಿಯಲ್ಲಿ ಅವತರಿಸಿದ್ದು ಉಚಿತವಾಗಿದೆ. ದೇವರು ಹಗಲಲ್ಲಿ ಅವತರಿಸಿದ್ದರೆ ವೈಯಧಿಕರಣ್ಯ ಬರುತ್ತಿತ್ತು. ದೈತ್ಯರನ್ನು ಜಯಿಸಲು ಬರುವುದೇ ಹೊರತು ಅವರು ಜಯಿಸುವಂತಾಗಲು ಅಲ್ಲ. ಆದ್ದರಿಂದ 'ಜಯಂತೀ'ಮುಹೂರ್ತವೂ ಯೋಗ್ಯವೇ. ಅಷ್ಟದಿಕ್ಕುಗಳಲ್ಲಿರುವ ದುಷ್ಟರ ವಧೆಗಾಗಿ 'ಅಷ್ಟಮೀ'ತಿಥಿಯೂ ಪ್ರಶಸ್ತವೇ ಆಗಿದೆ.

**ಪ್ರಥಾಂ ಯಶೋದಾಸುತ ಇತ್ಯುದಾರಾಂ**
**ಕರಿಷ್ಯಮಾಣೋ ಜನನೀಮಿವಾನ್ಯಾಮ್ ।**
**ಸ ದೇವಕೀಗರ್ಭಭವೋಽನುಗೃಹ್ಣನ್**
**ತತಾನ ರೋಹಿಣ್ಯುದಯಪ್ರಸಿದ್ಧಿಮ್ ॥ ೩೨॥**

**ಪ್ರಥಾಂ** = ಪ್ರಸಿದ್ಧಿಯನ್ನು, **ಯಶೋದಾ ಸುತ ಇತಿ** = ಯಶೋದೆಯ ಮಗ ಎಂದು, **ಉದಾರಾಂ** = ಶ್ರೇಷ್ಠವಾದ, **ಕರಿಷ್ಯಮಾಣಃ** = ಮಾಡುವವನಾಗಿ, **ಜನನೀಂ** = ತಾಯಿಯನ್ನು, **ಇವ** = ಅಂತೆ, **ಅನ್ಯಾಂ** = ಇನ್ನೊಬ್ಬಳನ್ನು, **ಸಃ** = ಅವನು, **ದೇವಕೀ** = ದೇವಕಿಯ, **ಗರ್ಭ** = ಗರ್ಭದಲ್ಲಿ, **ಭವಃ** = ಅವತರಿಸಿದ, **ಅನುಗೃಹ್ಣನ್** = ಅನುಗ್ರಹಿಸುತ್ತಾ, **ತತಾನ** = ಮಾಡಿದನು. **ರೋಹಿಣಿ** = ರೋಹಿಣಿಯಲ್ಲಿ, **ಉದಯ** = ಅವತಾರದ, **ಪ್ರಸಿದ್ಧಿಂ** = ಪ್ರಸಿದ್ಧಿಯನ್ನು.

ದೇವರು ಅವತರಿಸಿದ ಕಾಲ, ಮುಹೂರ್ತ, ತಿಥಿ ಇವುಗಳನ್ನು ವಿಮರ್ಶೆ ಮಾಡಿಯಾಯಿತು. ಇನ್ನು ರೋಹಿಣೀ ನಕ್ಷತ್ರದಲ್ಲಿ ಯಾಕೆ ಉದಯಿಸಿದ? ಎಂಬುದರ ವಿಚಾರ ಈ ಶ್ಲೋಕದಲ್ಲಿ –

ದೇವಕೀಯಶೋದೆಯರಂತೆ ರೋಹಿಣಿಯೂ ಕೂಡಾ 'ದೇವರು ನನ್ನಲ್ಲಿ ಬಂದ ಎಂಬ ಪ್ರಸಿದ್ಧಿಯು ಲೋಕದಲ್ಲಿ ಬರಲಿ' ಎಂದು ಪ್ರಾರ್ಥಿಸಿದಳು. ಅದಕ್ಕಾಗಿ ರೋಹಿಣೀ ನಕ್ಷತ್ರದಲ್ಲಿ ಅವತರಿಸಿದ. ಆಗ ಜನರು ದೇವರು ರೋಹಿಣಿಯಲ್ಲಿ (ನಕ್ಷತ್ರದಲ್ಲಿ) ಬಂದ ಎಂದು ಹೇಳಲು ಆರಂಭಿಸಿದರು. ಹಾಗಾದರೆ 'ರೋಹಿಣಿಯಲ್ಲಿ ಬಂದ' ಎಂಬುದರಿಂದ ಹೇಗೆ ರೋಹಿಣಿಯ ಮಗ ಎಂದು ಅರ್ಥವಾಗುವುದಿಲ್ಲವೋ ಹಾಗೆಯೇ ಯಶೋದೆಯ ಮಗ, ದೇವಕೀಸುತ ಎಂದು ಹೇಳುವಾಗಲೂ ಅರ್ಥ ಆಗಬಾರದು. ದೇವರು ಯಾರ ಮಗನೂ ಅಲ್ಲ. ಕೇವಲ ವ್ಯವಹಾರ ಅಷ್ಟೇ ಎಂಬ ಎಚ್ಚರ ನಮಗಿರಬೇಕು. ದೇವಕಿಯ

ಮಗ ಎಂದೇ ತಿಳಿದರೆ ನಮ್ಮನ್ನು ಜನ್ಮಜನ್ಮಗಳಲ್ಲಿಯೂ ಯಾರು ಯಾರಿಗೋ ಮಗಂದಿ-ರಾಗಿ ಹುಟ್ಟುವಂತೆ ಮಾಡಿ ಸಂಸಾರದಲ್ಲಿ ಸುತ್ತಿಸುತ್ತಾನೆ.

**ಯದಾ ಹರಿಃ ಪ್ರಾದುರಭೂತ್ ಕಲಾಭಿ-**
**ಸ್ತದಾ ಸಮಾಯವ್ಯಯವಾನ್ ಚ ಚಂದ್ರಃ ।**
**ಪ್ರಿಯಾಪ್ರಿಯಾಪ್ತ್ಯೇವ ನಿಜಾನ್ವಯೋತ್ಥ**
**ಮುಕುಂದವಕ್ತ್ರೇಂದುಕಲಾವಲೋಕಾತ್ ॥೩೩॥**

**ಯದಾ** = ಯಾವಾಗ, **ಹರಿಃ** = ದೇವರು, **ಪ್ರಾದುರಭೂತ್** = ಅವತರಿಸಿದನು, **ಕಲಾಭಿಃ** = ಅಂಶಗಳಿಂದ, **ತದಾ** = ಆಗ, **ಸಮ** = ಸಮಾನವಾದ, **ಆಯ** = ಲಾಭವು, **ವ್ಯಯ** = ವೆಚ್ಚವು, **ವಾನ್** = ಉಳ್ಳವನು, **ಚ** = ಕೂಡ, **ಚಂದ್ರಃ** = ಚಂದ್ರನು, **ಪ್ರಿಯ** = ಆನಂದದ, **ಅಪ್ರಿಯ** = ದುಃಖದ, **ಆಪ್ತ್ಯಾ ಇವ** = ಹೊಂದುವುದರಿಂದ ಎಂಬಂತೆ, **ನಿಜ** = ತನ್ನ, **ಅನ್ವಯ** = ವಂಶದಲ್ಲಿ, **ಉತ್ಥ** = ಅವತರಿಸಿದ, **ಮುಕುಂದ** = ದೇವರ, **ವಕ್ತ್ರ** = ಮುಖವೆಂಬ, **ಇಂದು** = ಚಂದ್ರನ, **ಅವಲೋಕಾತ್** = ದರ್ಶನದಿಂದ.

ದೇವರು ಅವತರಿಸಿದ ತಿಥಿ ಅಷ್ಟಮಿಯಾದ್ದರಿಂದ ಚಂದ್ರ ಅಷ್ಟಕಲೆಗಳುಳ್ಳವನಾಗಿದ್ದ. ಅರ್ಧಚಂದ್ರನಾಗಿದ್ದ. ಇದು ವಸ್ತುಸ್ಥಿತಿ. ಆದರೆ, ವಾದಿರಾಜರು ಇದನ್ನು ಬೇರೆ ರೀತಿ ಉತ್ಪ್ರೇಕ್ಷಿಸುತ್ತಾರೆ – ದೇವರು ಚಂದ್ರವಂಶದಲ್ಲಿ ಅವತರಿಸಿದ. ಇದರಿಂದ ಚಂದ್ರನಿಗೆ ಹೆಮ್ಮೆ ಎಣಿಸಿತು. ದೇವರ ವಂಶದ ಮೂಲಪುರುಷ ಎಂಬ ಪ್ರಶಂಸೆಗೆ ನಾನು ಪಾತ್ರನಾಗಿದ್ದೇನೆ ಎಂದು ಆನಂದ ಒಂದು ಕಡೆ. ದೇವರು ಅವತರಿಸುವ ತನಕ ಜನರೆಲ್ಲರೂ ಚಂದ್ರ ಬಹಳ ಚಂದ ಎಂದು ಅಭಿನಂದಿಸುತ್ತಿದ್ದರು.

ಆದರೆ ದೇವರ ಅವತಾರದ ಅನಂತರ ಈ ಮಗುವಿನ ಮುಖ ಚಂದ್ರನಿಗಿಂತಲೂ ಚಂದ ಎಂದು ಚಂದ್ರನನ್ನು ತಿರಸ್ಕರಿಸಲು ಆರಂಭಿಸಿದರು. ಇದರಿಂದ ಚಂದ್ರನಿಗೆ ಬಹಳ ವ್ಯಥೆಯಾಯಿತು. ಆದ್ದರಿಂದ ಏಳು ಕಲೆಗಳನ್ನು ಕಳಕೊಂಡ. ಈ ರೀತಿ ಲಾಭನಷ್ಟಸಮ-ವಾದ್ದರಿಂದ ತಾನು ಅರ್ಧನಾಗಿ ಗೋಚರಿಸಿದ.

ತನಗಿಂತ ದೇವರ ಮುಖ ಚಂದ ಎನ್ನುವ ವಿಷಯದಲ್ಲಿ ಚಂದ್ರನಿಗೆ ಬೇಸರ ಕಮ್ಮಿ. ದೇವರು ತನ್ನ ವಂಶದಲ್ಲಿ ಅವತರಿಸಿದ ಎಂಬ ವಿಷಯದಲ್ಲಿಯೇ ಹೆಚ್ಚು ತೃಪ್ತಿ. ಆದ್ದರಿಂದ ಅಷ್ಟ ಕಲೆಗಳುಳ್ಳವನಾದ. ಏಳು ಕಲೆಗಳನ್ನು ಕಳೆದುಕೊಂಡ. ದೇವರಿಂದಾಗಿ ನಮ್ಮ ಮಹತ್ವ ಹೋಯಿತು ಎಂದು ಬೇಸರಪಡಬಾರದು. ಮಹತ್ವ ಬಂತು ಎಂದು ಆನಂದಿಸಬೇಕು ಎಂಬುದು ಇಲ್ಲಿಯ ಸಂದೇಶ.

**ತದೈವ ಗಂಧರ್ವಗಣಾ ಜಗುಸ್ತಂ**
**ತಿಲೋತ್ತಮಾದ್ಯಾಃ ನನೃತುಸ್ತದೈವ।**
**ಸ್ವಗೀತನಾಟ್ಯೇನ ವಿಜೇಷ್ಯಮಾಣಂ**
**ತಮಾತ್ಮಸಾತ್ ಕರ್ತುಮಿವಾಶು ಬಾಲ್ಯೇ ॥ ೩೪ ॥**

**ತದಾ ಏವ** = ಆಗಲೇ, **ಗಂಧರ್ವಗಣಾಃ** = ಗಂಧರ್ವರ ಗಣಗಳು; **ಜಗುಃ** = ಹಾಡಿ-ದವು, **ತಂ** = ಅವನನ್ನು , **ತಿಲೋತ್ತಮಾದ್ಯಾಃ** = ತಿಲೋತ್ತಮೆಯರೇ ಮೊದಲಾದವರು, **ನನೃತುಃ** = ಕುಣಿದರು, **ತದಾ ಏವ** = ಆಗಲೇ, **ಸ್ವಗೀತನಾಟ್ಯೇನ** = ತನ್ನ ಹಾಡು ಮತ್ತು ನೃತ್ಯಗಳಿಂದ, **ವಿಜೇಷ್ಯಮಾಣಂ** = ಗೆಲ್ಲುವ, **ತಂ** = ಆ ದೇವರನ್ನು , **ಆತ್ಮಸಾತ್** = ಅಧೀನನನ್ನಾಗಿ, **ಕರ್ತುಮ್** = ಮಾಡಲು, **ಇವ** = ಅಂತೆ, **ಆಶು** = ಕೂಡಲೇ, **ಬಾಲ್ಯೇ** = ಬಾಲ್ಯದಲ್ಲಿ.

ಈ ಸಮಯದಲ್ಲಿ ಗಂಧರ್ವರು ಹಾಡಿದರು. ತಿಲೋತ್ತಮಾದಿ ಅಪ್ಸರಸ್ತ್ರೀಯರು ನರ್ತನ ಮಾಡಿದರು. ಕೃಷ್ಣನು ತನ್ನ ಕೊಳಲಿನ ನಾದದಿಂದ, ರಾಸಲೀಲೆಯ ನೃತ್ಯದಿಂದ ಇವರನ್ನೆಲ್ಲಾ ಸೋಲಿಸುವವನಿದ್ದಾನೆ. ಸ್ಪರ್ಧೆ ಇದ್ದಾಗ ತಾವು ಪರರು ಎಂಬ ಭಾವನೆ ಬರುವುದು ಸಹಜ. ತಮ್ಮಲ್ಲಿ ದೇವರಿಗೆ ಆ ಭಾವನೆ ಬಾರದಿರಲಿ ಎಂಬ ಭಾವನೆಯಿಂದ ಇವರೆಲ್ಲಾ ದೇವರ ಬಾಲ್ಯದಲ್ಲಿಯೇ ನೃತ್ಯಾದಿಗಳನ್ನು ಪ್ರದರ್ಶಿಸಿ ದೇವರನ್ನು ತಮ್ಮವನನ್ನಾಗಿ ಮಾಡುವಂತೆ ಇದೆ ಈ ದೃಶ್ಯ .

**ದಿಶೋ ಯಶೋಭಿಃ ಪರಿಪೂರಯಿಷ್ಯ-**
**ತ್ಯುದಗ್ರಚೇಷ್ಟಃ ಸ ಇತಿ ಪ್ರಹೃಷ್ಟಾಃ।**
**ರಸಾ ಪ್ರಸನ್ನಾ ಕಿಲ ರಂಜಿತಾಂ ಮಾಂ**
**ಕರಿಷ್ಯತಿ ಸ್ವಾಂಘ್ರಿತಲಶ್ರಿಯೇತಿ ॥ ೩೫ ॥**

**ದಿಶಃ** = ದಿಕ್ಕುಗಳನ್ನು , **ಯಶೋಭಿಃ** = ಕೀರ್ತಿಗಳಿಂದ, **ಪರಿಪೂರಯಿಷ್ಯತಿ** = ತುಂಬಿಸುತ್ತಾನೆ. **ಉದಗ್ರ** = ಉತ್ತಮವಾದ, **ಚೇಷ್ಟಃ** = ಕೆಲಸಗಳುಳ್ಳ, **ಸಃ** = ಅವನು, **ಇತಿ** = ಎಂದು, **ಪ್ರಹೃಷ್ಟಾಃ** = ಸಂತೋಷಗೊಂಡವು, **ರಸಾ** ಭೂಮಿಯು, **ಪ್ರಸನ್ನಾ** = ತೃಪ್ತಳು, **ಕಿಲ** = ಪ್ರಸಿದ್ಧ, **ರಂಜಿತಾಂ** = ಚಂದಳನ್ನಾಗಿ, **ಮಾಂ** = ನನ್ನನ್ನು , **ಕರಿಷ್ಯತಿ** = ಮಾಡುತ್ತಾನೆ, **ಸ್ವ** = ತನ್ನ , **ಅಂಘ್ರಿತಲ** = ಪಾದತಲದ, **ಶ್ರಿಯಾ** = ಕಾಂತಿಯಿಂದ, **ಇತಿ** = ಎಂದು.

ದೇವರು ತನ್ನ ಕೆಲಸಗಳಿಂದ ಸಂಪಾದಿಸಿದ ಕೀರ್ತಿಯನ್ನು ದಿಕ್ಕುಗಳಿಗೆ ಕೊಡುತ್ತಾನೆ

ಎಂದು ಅವುಗಳಿಗೆ ಆನಂದ. ತನ್ನ ಪಾದಸ್ಪರ್ಶದಿಂದ ಭೂಮಿಯನ್ನು ಅಲಂಕರಿಸುತ್ತಾನೆ ಎಂದು ಭೂಮಿಗೆ ಸಂತೋಷ. ಭೂಮಿಯಲ್ಲಿ ಸಂಚಾರ, ದಿಕ್ಕುಗಳಲ್ಲಿ ಕೀರ್ತಿ.

**ತದೈವ ದೇವಾ ವವೃಷುಃ ಪ್ರಸೂನೈಃ**
**ಹೃದಿ ಸ್ಮರಂತೋ ವಚಸಾ ಸ್ತುವಂತಃ ।**
**ನಗೇಂದ್ರಮೈಂದ್ರಂ ಭುವಿ ನೇಷ್ಯತೋಽಸ್ಯ**
**ಮನಃ ಸಮುದ್ಬೋಧಯಿತುಂ ಪುರೈವ ॥ ೩೬ ॥**

**ತದಾ ಏವ** = ಆಗಲೇ, **ದೇವಾಃ** = ದೇವತೆಗಳು, **ವವೃಷುಃ** = ವರ್ಷಣೆ ಮಾಡಿದರು, (ಸುರಿಸಿದರು), **ಪ್ರಸೂನೈಃ** = ಪುಷ್ಪಗಳಿಂದ, **ಹೃದಿ** = ಮನಸ್ಸಿನಲ್ಲಿ, **ಸ್ಮರಂತಃ** = ಎಣಿಸಿದವರಾಗಿ, **ವಚಸಾ** = ಮಾತಿನಿಂದ, **ಸ್ತುವಂತಃ** = ಹೊಗಳಿದವರಾಗಿ, **ನಗ** = ಮರಗಳಿಗೆ, **ಇಂದ್ರಂ** = ರಾಜನಾದ ಪಾರಿಜಾತವನ್ನು, **ಐಂದ್ರಂ** = ಇಂದ್ರಸಂಬಂಧಿ ಯಾದ, **ಭುವಿ** = ಭೂಮಿಯಲ್ಲಿ, **ನೇಷ್ಯತಃ** = ಒಯ್ಯತಕ್ಕ, **ಅಸ್ಯ** = ಕೃಷ್ಣನ, **ಮನಃ** = ಮನಸ್ಸನ್ನು, **ಸಮುದ್ಬೋಧಯಿತುಂ** = ಹುರಿದುಂಬಿಸಲು, **ಪುರಾ ಇವ**= ಮೊದಲೇ ಎಂಬಂತೆ.

ದೇವರ ಅವತಾರದ ಸಮಯದಲ್ಲಿ ದೇವತೆಗಳು ದೇವರನ್ನು ಹೃದಯದಲ್ಲಿ ಧ್ಯಾನಿಸುತ್ತಾ, ಮಾತಿನಿಂದ ಸ್ತುತಿಸುತ್ತಾ ಪುಷ್ಪವೃಷ್ಟಿಯನ್ನು ಮಾಡಿದರು. ಯಾಕೆಂದರೆ ಮುಂದೆ ಮಾಡುವ ಪಾರಿಜಾತಾಪಹಾರ ಎಂಬ ಕೆಲಸದ ಬಗ್ಗೆ ಸೂಚನೆ ಕೊಡಲು ತಮ್ಮಲ್ಲಿದ್ದ ಪುಷ್ಪಗಳನ್ನು ಸ್ವಲ್ಪ ತೋರಿಸಿದರೆ ದೇವರಿಗೆ ಅದರಲ್ಲಿ ಆಸೆ ಉಂಟಾಗಿ ಇನ್ನೂ ಬೇಕೆಂದು ತೋರಬೇಕು ಎಂಬ ಅಭಿಪ್ರಾಯದಿಂದ.

ತಮಗೆ ತಿಳಿದಿರುವ ಕೆಲವೇ ಶ್ಲೋಕಗಳಿಂದ ದೇವರನ್ನು ಭಕ್ತಿಯಿಂದ ಸ್ತುತಿಸಿದರೆ ದೇವರು ನಮ್ಮಿಂದ ಇನ್ನೂ ಕೇಳಬೇಕೆಂದು ಬಹಳವಾದ ಸ್ತೋತ್ರಗಳನ್ನು ತಾನೇ ಮಾಡಿಸುತ್ತಾನೆ. ಆದ್ದರಿಂದ ನಮಗೆ ತಿಳಿದಿರುವ ಸ್ವಲ್ಪ ಮಂತ್ರಗಳನ್ನಾದರೂ ಹೇಳಲು ನಾವು ಸಂಕೋಚ ಮಾಡಬಾರದು ಎಂಬ ಸಂದೇಶ ಇಲ್ಲಿ ಅಡಗಿದೆ.

**ಪುತ್ರತ್ವಾದಿಹ ವಾಸುದೇವಪದವೀ ಯದ್ಯಸ್ಯ ಶೌರೇಸ್ತದಾ**
**ನಃ ಪುತ್ರತ್ವಕೃತಾಽಸ್ತು ಸೇತಿ ವಸವೋ ದೇವಾಶ್ಚ ಹೃಷ್ಟಾ ಧ್ರುವಮ್ ।**
**ಯದ್ಯಸ್ಯಾನಕದುಂದುಭೀಷ್ವಶಿಶುತಾ ಸೋಽಸ್ಮಾಕಮೇವಂ ಶಿಶುಃ**
**ತರ್ಹೀತ್ಯಾನಕದುಂದುಭಿಧ್ವನಿರಭೂದ್ ವ್ಯೋಮ್ನಿ ಸ್ವಯಂಭೂದಯೇ ॥ ೩೭ ॥**

**ಪುತ್ರತ್ವಾತ್** = ಮಗನಾದ್ದರಿಂದ, **ಇಹ** = ಇಲ್ಲಿ, **ವಾಸುದೇವಪದವೀ** = ವಾಸುದೇವ ಎಂಬ ಹೆಸರು, **ಯದಿ** = ಒಂದು ವೇಳೆ, **ಅಸ್ಯ** = ಈ, **ಶೌರೇಃ** = ಶೂರರಾಜನ ಮಗನಾದ ವಸುದೇವನ, **ತದಾ** = ಆಗ, **ನಃ** = ನಮ್ಮ, **ಪುತ್ರತ್ವಕೃತಾ** = ಮಗನಾಗು-ವಿಕೆಯಿಂದ ಮಾಡಲ್ಪಟ್ಟದ್ದು, **ಅಸ್ತು** = ಆಗಲಿ, **ಸಾ** = ಅದು, **ಇತಿ** = ಎಂದು, **ವಸವಃ** = ವಸುಗಳು, **ದೇವಾಶ್ಚ** = ದೇವತೆಗಳು ಕೂಡಾ, **ಹೃಷ್ಟಾಃ** = ಸಂತೋಷಗೊಂಡರು, **ಧ್ರುವಂ** = ನಿಶ್ಚಯ, **ಯದಿ** = ಒಂದು ವೇಳೆ, **ಅಸ್ಯ** = ಕೃಷ್ಣನಿಗೆ, **ಆನಕದುಂದುಭಿಃ** = ಆನಕದುಂದುಭಿಯಾದ ವಸುದೇವನ, **ಇಷ್ಟ**= ಪ್ರಿಯವಾದ, **ಶಿಶುತಾ** = ಪುತ್ರತ್ವವು, **ಸಃ** = ಕೃಷ್ಣನು, **ಅಸ್ಮಾಕಂ** = ನಮ್ಮ, **ಏವಂ** = ಈ ರೀತಿಯಾಗಿ, **ಶಿಶುಃ** = ಮಗುವು, **ತರ್ಹಿ** = ಹಾಗಾದರೆ, **ಇತಿ** = ಆದ್ದರಿಂದ, **ಆನಕದುಂದುಭಿ** = ವಾದ್ಯಗಳ ನಗಾರಿಗಳ, **ಧ್ವನಿಃ** = ಶಬ್ದವು, **ಅಭೂತ್** = ಆಯಿತು, **ವ್ಯೋಮ್ನಿ** = ಆಕಾಶದಲ್ಲಿ, **ಸ್ವಯಂಭೂ** = ದೇವರ, **ಉದಯೇ**= ಅವತಾರಕಾಲದಲ್ಲಿ.

ಭೂಮಿಯಲ್ಲಿ ಅವತರಿಸಿದ ದೇವರಿಗೆ ವಾಸುದೇವ ಎಂಬ ಹೆಸರಿದೆ. ಇದರ ಬಗ್ಗೆ ದೇವತೆಗಳು ವಿಮರ್ಶೆ ಮಾಡುತ್ತಾರೆ – ಈ ದೇವರಿಗೆ ಸೃಷ್ಟಿ ಇಲ್ಲ. ಆದ್ದರಿಂದ ವಸುದೇವ-ನಿಂದ ಹುಟ್ಟಿದ್ದರಿಂದ ವಾಸುದೇವ ಎಂಬ ಹೆಸರು ಬರಲು ಸಾಧ್ಯವಿಲ್ಲ. ಹಾಗಾದರೆ, ವಸುದೇವನ ಸಂಬಂಧಿಯಾದ್ದರಿಂದ ವಸುದೇವನ ಪುತ್ರ. ಆದ್ದರಿಂದ ವಾಸುದೇವ ಎಂಬ ಹೆಸರು ಬರುವುದಾದರೆ ಅದು ಆ ದೇವಕಿಪತಿ ವಸುದೇವನಿಂದಲೇ ಬರಬೇಕಾಗಿಲ್ಲ. ನಮ್ಮಿಂದಲೂ ಬರಬಹುದು. ಯಾಕೆಂದರೆ, ನಾವು ಅಷ್ಟವಸುಗಳಿಂದ ಕೂಡಿದ ದೇವತೆಗಳು ಇದ್ದೇವೆ. ಆದ್ದರಿಂದ ನಾವು ವಸುದೇವರು. ನಮಗೂ ಸಂಬಂಧಪಟ್ಟದ್ದು ಈ ಮಗು. ಆದ್ದರಿಂದ ನಮ್ಮಿಂದಾಗಿ ಈ ಮಗು ವಾಸುದೇವ ಎಂದಾಯಿತು ಎಂದಾಗಲಿ.

ಈ ವಸುದೇವನಿಗೆ ಆನಕದುಂದುಭಿ ಎಂಬ ಹೆಸರು ಇದೆ. ಆನಕದುಂದುಭಿಯಾದ ವಸುದೇವನ ಶಿಶುವಾದ್ದರಿಂದ ವಾಸುದೇವ ಎಂಬ ಹೆಸರು ಎಂದು ಹೇಳಿದರೂ ಚಿಂತೆ ಇಲ್ಲ. ಯಾಕೆಂದರೆ, ನಾವೂ ಕೂಡಾ ಆನಕದುಂದುಭಿಗಳಾದ ವಸು-ದೇವರು ಎಂದು ತಿಳಿಸಲು ದೇವರು ಅವತರಿಸುವಾಗ ತಮಟೆ- ನಗಾರಿಗಳನ್ನು ಬಾರಿಸಿದರು.

ಒಟ್ಟಾರೆ ಅಭಿಪ್ರಾಯ ಈ ರೀತಿ ಇದೆ – ದೇವರು ಹುಟ್ಟುವುದಿಲ್ಲ. ಕಾಣಿಸಿಕೊಳ್ಳು-ವುದು ಮಾತ್ರ. ಇದನ್ನು ಪುರಾಣಗಳು **ವಸುದೇವಸುತೋ ನಾಯಂ ನಾಯಂ ಗರ್ಭೇಽವಸತ್ ಪ್ರಭುಃ** ದೇವರು ವಸುದೇವನ ಮಗನೂ ಅಲ್ಲ. ಗರ್ಭದಲ್ಲಿ ವಾಸ-ಮಾಡುವುದೂ ಇಲ್ಲ ಎಂದು ಇದನ್ನೇ ಶ್ರೀವಾದಿರಾಜರು ಚಮತ್ಕಾರವಾಗಿ ಇಲ್ಲಿ ವರ್ಣಿಸಿದ್ದಾರೆ. ಆದ್ದರಿಂದಲೇ ಈ ಶ್ಲೋಕದ ಕೊನೆಯಲ್ಲಿ ಸ್ವಯಂಭೂದಯೇ ಎಂಬ

ಶಬ್ದವನ್ನು ಬಳಸಿದ್ದಾರೆ. ದೇವರು ಸ್ವಯಂಭೂ. ತನ್ನಿಂದ ತಾನೇ ಕಾಣಿಸಿಕೊಳ್ಳುವವನು. ಬೆಳಗಿನ ಜಾವ ಸೂರ್ಯನ ಉದಯದಂತೆ.

ಶರೀರಕಾಂತ್ಯಾ ಜಲದಃ ಸ್ವಜೈತ್ರಂ
ನಿರೀಕ್ಷ್ಯ ಕೃಷ್ಣಂ ಜಲರಾಶಿತೀರೇ ।
ಜಗರ್ಜ ಶಕ್ತ್ಯಾ ರಹಿತಸ್ಯ ಪುಂಸೋ
ಜಲಾಂತಿಕೇಷ್ವೇವ ಹಿ ಗರ್ಜಿತಾನಿ ॥ ೩೮ ॥

**ಶರೀರಕಾಂತ್ಯಾ** = ದೇಹದ ಶೋಭೆಯಿಂದ, **ಜಲದಃ** = ಮೋಡವು, **ಸ್ವಜೈತ್ರಂ** = ತನ್ನನ್ನು ಸೋಲಿಸಿರುವ, **ನಿರೀಕ್ಷ್ಯ** = ನೋಡಿ, **ಕೃಷ್ಣಂ** = ಕೃಷ್ಣನನ್ನು, **ಜಲರಾಶಿತೀರೇ** = ಸಮುದ್ರದ ತೀರದಲ್ಲಿ, **ಜಗರ್ಜ** = ಗುಡುಗಿತು, **ಶಕ್ತ್ಯಾ** = ಶಕ್ತಿಯಿಂದ, **ರಹಿತಸ್ಯ** = ಶೂನ್ಯನಾದ, **ಪುಂಸಃ** = ವ್ಯಕ್ತಿಯ, **ಜಲಾಂತಿಕೇಷು ಏವ** = ಜಲದ ಸಮೀಪದಲ್ಲಿಯೇ, **ಹಿ** = ಪ್ರಸಿದ್ಧ, **ಗರ್ಜಿತಾನಿ** = ಗರ್ಜನೆಯು.

ಮೋಡದ ಹಾಗೂ ಕೃಷ್ಣನ ಕಾಂತಿ, ಬಣ್ಣ ಒಂದೇ ರೀತಿ. ಕೃಷ್ಣನ ಕಾಂತಿಯೇ ಹೆಚ್ಚು. ಹೀಗೆ ಮೋಡಕ್ಕೆ ಪ್ರತಿಸ್ಪರ್ಧಿ. ತನ್ನ ಕಾಂತಿಯಿಂದ ಕೃಷ್ಣನನ್ನು ಸೋಲಿಸಲು ಆಗದ ಮೋಡವು ಜಲರಾಶಿಯ ಬಳಿಯಲ್ಲಿ ತಾನು ಆರ್ಭಟಿಸಲು ಆರಂಭಿಸಿತು. ವಾದಿರಾಜರು ಇದನ್ನು ಉದಾಹರಣೆಯ ಮೂಲಕ ತಿಳಿಸುತ್ತಾರೆ – ಲೋಕದಲ್ಲಿಯೂ ಒಬ್ಬನನ್ನೇ ಸೋಲಿಸಲಾಗದವ ಮೂರ್ಖರ ಬಳಿ ಹೇಳಿ ತನ್ನ ಬಗ್ಗೆ ಜಂಭದ ಮಾತುಗಳನ್ನು ಆಡು-ತ್ತಾನೆ. ಆತನನ್ನು ಹೀಯಾಳಿಸುತ್ತಾನೆ. ಇಲ್ಲಿ ಜಲರಾಶಿ- ಜಡರಾಶಿ. ಅಂದರೆ, ಮೂರ್ಖರ ಸಮೂಹ ಎಂದು ಅರ್ಥೈಸಬೇಕು. ಜಡರಾಶಿ ಅಂದರೆ ಮೂರ್ಖರ ಗುಂಪು ಎಂದರ್ಥ. ಸಂಸ್ಕೃತದಲ್ಲಿ ಲ-ಡಗಳನ್ನು ಒಂದೇ ಜಾಗದಲ್ಲಿ ಪ್ರಯೋಗಿಸುವುದು.

ಸರಃ ಪ್ರಸನ್ನಂ ನಿಶಿ ಸಾರಸೌಘೈಃ
ಸ ಕಾಮಿನೀಭಿಃ ಸಹ ಸಂಪ್ರವಿಶ್ಯ ।
ಕರಿಷ್ಯತೀಶೋ ಮುಖಪದ್ಮಪುಂಜೈ
ರಲಂಕೃತಂ ಮಾಮಿತಿ ಶಂಸತೀವ ॥ ೩೯ ॥

**ಸರಃ** = ಕೊಳವು, **ಪ್ರಸನ್ನಂ** = ಶಾಂತವಾಗಿದೆ, **ನಿಶಿ** = ರಾತ್ರಿಯಲ್ಲಿ, **ಸಾರಸ** = ಕಮಲಗಳ, **ಓಘೈಃ** = ಗುಂಪುಗಳಿಂದ, **ಸಃ** = ಕೃಷ್ಣನು, **ಕಾಮಿನೀಭಿಃ** = ಗೋಪಿ-ಯರಿಂದ, **ಸಹ** = ಕೂಡಿಕೊಂಡು, **ಸಂಪ್ರವಿಶ್ಯ** = ಪ್ರವೇಶಿಸಿ, **ಕರಿಷ್ಯತಿ** = ಮಾಡುತ್ತಾನೆ. **ಈಶಃ** = ಕೃಷ್ಣನು, **ಮುಖಪದ್ಮ** = ಮುಖ ಎಂಬ ಕಮಲಗಳ, **ಪುಂಜೈಃ** =

ಗುಂಪುಗಳಿಂದ, **ಅಲಂಕೃತಂ** = ಅಲಂಕೃತವನ್ನಾಗಿ, **ಮಾಂ** = ನನ್ನನ್ನು, ಇತಿ = ಎಂದು, **ಶಂಸತಿ** = ಹೇಳುತ್ತದೆ. ಇವ = ಎಂಬಂತೆ.

ಈ ರಾತ್ರಿಯಲ್ಲಿ ಕಮಲಗಳಿಂದ ಕೂಡಿದ ಸರೋವರಗಳು ಬಹಳ ಪ್ರಸನ್ನಗಳಾಗಿದ್ದವು. ಯಾಕೆಂದರೆ, ಕೃಷ್ಣನು ತನ್ನ ಸ್ತ್ರೀಯರಿಂದ ಕೂಡಿಕೊಂಡು ಈ ಕೊಳದಲ್ಲಿ ಆಕಂಠ ಮುಳುಗುವಾಗ ಇವರ ಮುಖಕಮಲಗಳಿಂದ ಮತ್ತಷ್ಟು ಶೋಭೆ ಹೆಚ್ಚುವುದು ಎಂಬ ಅಭಿಪ್ರಾಯದಿಂದ.

ಸಾತ್ವಿಕರು ಯಾವಾಗಲೂ ನಮ್ಮ ಜೀವನಕ್ಕೆ ದೇವರಿಂದಾಗಿಯೇ ಅಲಂಕಾರ ಬರಬೇಕು ಎಂದು ಆಲೋಚಿಸುತ್ತಾರೆ. ಆಗಲೇ ಅವರಿಗೆ ನೆಮ್ಮದಿ.

**ನಭಃ ಪ್ರಸನ್ನೋಡುಗಣಂ ತದಾಸೀತ್**
**ವಿಭುತ್ವಧರ್ಮೇಣ ಪುರಾಽದ್ವಿತೀಯಮ್ ।**
**ವಿಲೋಕ್ಯ ಬಾಲಂ ಭುವಿ ತಾರಹಾರ-**
**ವಿಭೂಷಿತಸ್ವಾಂಗಮಿವ ಪ್ರಹರ್ಷಾತ್ ॥ ೪೦ ॥**

**ನಭಃ** = ಆಕಾಶವು, **ಪ್ರಸನ್ನ** = ಶೋಭಿಸುವ, **ಉಡು** = ನಕ್ಷತ್ರಗಳ, **ಗಣಂ** = ಗುಂಪುಳ್ಳ, **ತದಾ** = ಆಗ, **ಆಸೀತ್** = ಆಯಿತು, **ವಿಭುತ್ವಧರ್ಮೇಣ** = ವ್ಯಾಪ್ತಿಯ ಧರ್ಮದಿಂದ, **ಪುರಾ** = ಮೊದಲು, **ಅದ್ವಿತೀಯಂ** = ಸಾಟಿ ಇಲ್ಲದ ದೇವರನ್ನು, **ವಿಲೋಕ್ಯ** = ನೋಡಿ, **ಬಾಲಂ** = ಬಾಲಕನನ್ನಾಗಿ, **ಭುವಿ** = ಭೂಮಿಯಲ್ಲಿ, **ತಾರ** = ನಕ್ಷತ್ರಗಳ, **ಹಾರ** = ಮಾಲಿಕೆಯಿಂದ, **ವಿಭೂಷಿತ** = ಅಲಂಕೃತವಾದ, **ಸ್ವ** = ತನ್ನ, **ಅಂಗಂ ಇವ** = ಶರೀರದಂತೆ, **ಪ್ರಹರ್ಷಾತ್** = ಸಂತೋಷದಿಂದ.

ಆ ಸಮಯದಲ್ಲಿ ಆಕಾಶವು ನಿರ್ಮಲವಾಗಿತ್ತು. ನಕ್ಷತ್ರಗಳು ಚೆನ್ನಾಗಿ ಪ್ರಕಾಶಿಸು-ತ್ತಿದ್ದವು. ಇದನ್ನು ಶ್ರೀವಾದಿರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ – ಸರ್ವತ್ರ ವ್ಯಾಪ್ತಿಯ ವಿಷಯದಲ್ಲಿ ಮೊದಲು ದೇವರು ಅದ್ವಿತೀಯನಾಗಿದ್ದ. ದೇವರಷ್ಟು ವ್ಯಾಪ್ತಿ ಉಳ್ಳವರು ಯಾರೂ ಇಲ್ಲ. ಈ ವಿಷಯದಲ್ಲಿ ಆಕಾಶಕ್ಕೆ ಬಹಳ ಮತ್ಸರ ಇತ್ತು. ಆಕಾಶವೂ ವ್ಯಾಪ್ತವೇ. ಆದರೆ ಅದಕ್ಕಿಂತಲೂ ಹೆಚ್ಚು ವ್ಯಾಪ್ತ ದೇವರು. ಇಬ್ಬರು ಧನಿಕರೊಳಗೆ ಮತ್ಸರ ಇರುವಂತೆ. ಈಗ ಆ ದೇವರು ಅವ್ಯಾಪ್ತನಾಗಿ ಒಂದು ಮಗುವಾಗಿ ಚಿಕ್ಕ ಪ್ರದೇಶದಲ್ಲಿ ಇದ್ದಾನೆ. ಇದನ್ನು ಕಂಡು ಆಕಾಶ ಆನಂದದಿಂದ ತನ್ನ ಆಭರಣಗಳಾದ ನಕ್ಷತ್ರಗಳನ್ನು ತೊಟ್ಟುಕೊಂಡು ದೇವರ ಮುಂದೆ ತಾನು ಪ್ರತ್ಯಕ್ಷನಾದ ಎಂಬುದಾಗಿ.

**ಶಿಶುಂ ವಶೀಕರ್ತುಮಥೋ ನ ಭಾರಃ**
**ಇತೀವ ಬುದ್ಧ್ಯಾ ತುತುಷುಃ ಸ್ಮ ವೃದ್ಧಾಃ।**
**ಉಪೇಕ್ಷಯಿಷ್ಯಂತಿ ನ ಚೇತ್ಕೃತಾರ್ಥಾಃ**
**ಇತಿ ಸ್ವಯಂ ಪ್ರಾಜ್ವಲದಗ್ನಿರೇಷಾಮ್ ॥೪೧॥**

**ಶಿಶುಂ** = ಮಗುವನ್ನು, **ವಶೀಕರ್ತುಂ** = ವಶಪಡಿಸಲು, **ಅಥೋ** = ಅನಂತರ, **ನ** = ಇಲ್ಲ, **ಭಾರಃ** = ಕ್ಲೇಶವು, **ಇತಿ ಇವ** = ಈ ರೀತಿ ಎಂಬಂತೆ, **ಬುದ್ಧ್ಯಾ** = ಬುದ್ಧಿಯಿಂದ, **ತುತುಷುಃ** = ಸಂತೋಷಗೊಂಡರು, **ವೃದ್ಧಾಃ** = ಹಿರಿಯರು, **ಉಪೇಕ್ಷಯಿಷ್ಯಂತಿ** = ಕಡೆಗಣಿಸುತ್ತಾರೆ, **ನ ಚೇತ್** = ಇಲ್ಲದಿದ್ದರೆ, **ಕೃತಾರ್ಥಾಃ** = ಧನ್ಯರು, **ಇತಿ** = ಎಂದು, **ಸ್ವಯಂ** = ತಾನು, **ಪ್ರಾಜ್ವಲತ್** = ಉರಿಯಿತು, **ಅಗ್ನಿಃ** = ಬೆಂಕಿಯು, **ಏಷಾಂ** = ಈ ಹಿರಿಯರ.

ಅಗ್ನಿಗಳೂ ತಾವಾಗಿಯೇ ಸಂತೋಷದಿಂದ ಉರಿಯುತ್ತಿದ್ದವು. ಯಾಕೆಂದರೆ, ರಾಜರು ತಿಳಿಸುತ್ತಾರೆ – ಯಾಜ್ಞಿಕರು ದೇವರ ಪ್ರೀತಿಗಾಗಿ ನಿತ್ಯ ಅಗ್ನಿಯಲ್ಲಿ ಆರಾಧನೆ ಮಾಡು-ತ್ತಿದ್ದರು. ಅದಕ್ಕಾಗಿ ಅಗ್ನಿಗೆ ಗಾಳಿ ಹಾಕುವುದು, ತುಪ್ಪ ಹಾಕುವುದು, ಹವಿಸ್ಸು ಹಾಕುವುದು ಈ ರೀತಿ ನಾನಾ ವಿಧದ ಸೇವೆ ಮಾಡುತ್ತಿದ್ದರು. ಆದರೂ ಅಗ್ನಿ ಸರಿಯಾಗಿ ಉರಿಯುತ್ತಿರಲಿಲ್ಲ. ಈಗ ಆ ದೇವರು ಮಗುವಾಗಿ ಬಂದಿದ್ದಾನೆ. ಮಗುವನ್ನು ಒಲಿಸಿ-ಕೊಳ್ಳುವುದು ಸುಲಭ ಎಂಬ ಅಭಿಪ್ರಾಯದಿಂದ ಈ ಯಾಜ್ಞಿಕರು ತಮ್ಮ ಸೇವೆಯನ್ನು ಬಿಟ್ಟು ಮಗುವಿನ ಬಳಿಗೆ ನೇರವಾಗಿ ಹೋಗುತ್ತಾರೋ ಎಂಬ ಭಯದಿಂದ ತಾವಾಗಿಯೇ ಉರಿಯಲು ತೊಡಗಿದವು. ಅಗ್ನಿ ಉರಿದರೆ ಆಗ ಯಾಜ್ಞಿಕರು ತಮ್ಮನ್ನು ಬಿಡುವುದಿಲ್ಲ ಎಂಬ ಅಭಿಪ್ರಾಯದಿಂದ ಎಂಬುದಾಗಿ.

**ಪ್ರಸೂನವೃಂದಾನಿ ವಿಕಂಪಯಂಸ್ತ-**
**ದ್ಗೃಹಂ ಸ್ಪೃಶನ್ ಸಾರಸವಾರಿಸಂಗಃ।**
**ವವೌ ಮರುತ್ ಮಾಮಸುರಾದ್ವಿಯುಕ್ತಂ**
**ಕರಿಷ್ಯತೀತ್ಯರ್ಚನಧೀರಿವಾಸ್ಯ ॥ ೪೨ ॥**

**ಪ್ರಸೂನ** = ಪುಷ್ಪಗಳ, **ವೃಂದಾನಿ** = ಸಮೂಹಗಳನ್ನು, **ವಿಕಂಪಯನ್** = ಅಲುಗಾಡಿಸುತ್ತಾ, **ತದ್‌ಗೃಹಂ** = ಆ ಮನೆಯನ್ನು, **ಸ್ಪೃಶನ್** = ಮುಟ್ಟುತ್ತಾ, **ಸಾರಸ** = ಕೊಳದ, **ವಾರಿ** = ನೀರಿನ, **ಸಂಗಃ** = ಸಂಬಂಧವುಳ್ಳ, **ವವೌ** = ಬೀಸಿತು, **ಮರುತ್** = ಗಾಳಿಯು, **ಮಾಂ** = ನನ್ನನ್ನು, **ಅಸುರಾತ್** = ದೈತ್ಯರಿಂದ, **ವಿಯುಕ್ತಂ** = ಬೇರ್ಪಡಿ-

ಸುವಿಕೆಯನ್ನು, **ಕರಿಷ್ಯತಿ** = ಮಾಡುತ್ತಾನೆ, **ಇತಿ** = ಎಂದು, **ಅರ್ಚನ** = ಪೂಜೆಯ, **ಧೀ ಇವ** = ಬುದ್ಧಿಯಂತೆ, **ಅಸ್ಯ** = ಕೃಷ್ಣನ.

ಗಾಳಿಯು ಮಂದವಾಗಿ ಬೀಸುತ್ತಾ ಪುಷ್ಪಗಳನ್ನು ಅಲುಗಾಡಿಸಿ ಅವುಗಳ ಪರಿಮಳ-ವನ್ನು ಸ್ವೀಕರಿಸಿ ಹೊರಟಿತು. ಕೊಳದ ನೀರನ್ನು ಸ್ಪರ್ಶಿಸಿ ನೀರಿನ ತಂಪನ್ನೂ ಹಿಡಿದು-ಕೊಂಡಿತು. ಶ್ರೀಕೃಷ್ಣನ ಪೂಜೆಗಾಗಿ ಪ್ರತಿಮೆ ಯಾವುದು? ಮಥುರೆಯ ಕಾರಾಗೃಹ. ಪ್ರತಿಮೆಯಲ್ಲಿ ದೇವರು ಇರುವಂತೆ ಕಾರಾಗೃಹದಲ್ಲಿ ದೇವರಿದ್ದಾನೆ. ತಂಪಾದ, ಪರಿಮಳದ ಗಾಳಿಯು ನಿಧಾನವಾಗಿ ಕಾರಾಗೃಹವನ್ನು ಸ್ಪರ್ಶಿಸಿತು. ಅರ್ಚಕರು ತಾವು ಸ್ನಾನ ಮಾಡಿ, ನೀರನ್ನು ಹಾಗೂ ಪರಿಮಳದ ಹೂವನ್ನು ಹಿಡಿದುಕೊಂಡು ಪ್ರತಿಮಾಸ್ಪರ್ಶ ಮಾಡುವ ಮೂಲಕ ಪೂಜೆ ಮಾಡುವಂತೆ. ಯಾತಕ್ಕಾಗಿ ಗಾಳಿ ಪೂಜೆ ಮಾಡುತ್ತದೆ? ದೈತ್ಯರು ಸದಾ ಈ ಗಾಳಿಯನ್ನು ತಾವು ಶ್ವಾಸಕ್ಕಾಗಿ ಉಪಯೋಗಿಸುತ್ತಿದ್ದಾರೆ. ಆದರೆ ಗಾಳಿಗೆ ದೈತ್ಯರ ಸಂಪರ್ಕ ಇಷ್ಟ ಇಲ್ಲ. ಮಧುರೆಯಲ್ಲಿ ಅವತರಿಸಿದ ದೇವರು ಈ ದೈತ್ಯರನ್ನು ಕೊಂದು ಗಾಳಿಯನ್ನು ದೈತ್ಯರ ಸಂಪರ್ಕದಿಂದ ಬಿಡಿಸುತ್ತಾನೆ ಎಂಬ ಉದ್ದೇಶದಿಂದ.

ಮೊದಲು ಸಾಧನೆ. ಅನಂತರ ಫಲ ಎಂಬ ಸಂದೇಶ ಇಲ್ಲಿ ಸೇರಿದೆ.

**ಜಾತೇ ಹರೌ ಸ್ವರ್ಪಿತಪುಷ್ಪವರ್ಷೈ-**
**ರ್ಗೀರ್ಭಿಃ ಸ್ತುವದ್ಭಿಃ ಸುರಸಿದ್ಧಸಂಘೈಃ ।**
**ದೂರೇ ವಿಧೂತಾ ಇವ ವಿಘ್ನಭೀತ್ಯಾ**
**ಮೇಘಾಃ ದಿಗಂತಂ ಯಯುರಂಬರಾಂತಾತ್ ॥೪೩॥**

**ಜಾತೇ** = ಹುಟ್ಟುತ್ತಿರಲು, **ಹರೌ** = ದೇವರು, **ಸು** = ಭಕ್ತಿಯಿಂದ, **ಅರ್ಪಿತ** = ಅರ್ಪಿಸಲ್ಪಟ್ಟ, **ಪುಷ್ಪವರ್ಷೈಃ** = ಪುಷ್ಪಗಳ ಅಭಿಷೇಕವುಳ್ಳ, **ಗೀರ್ಭಿಃ** = ಮಾತುಗಳಿಂದ, **ಸ್ತುವದ್ಭಿಃ** = ಸ್ತುತಿಸುವ, **ಸುರಸಿದ್ಧಸಂಘೈಃ** = ದೇವತೆಗಳ ಸಿದ್ಧರ ಗುಂಪುಗಳಿಂದ, **ದೂರೇ** = ದೂರದಲ್ಲಿ, **ವಿಧೂತಾ ಇವ** = ಓಡಿಸಲ್ಪಟ್ಟಂತೆ, **ವಿಘ್ನಭೀತ್ಯಾ** = ವಿಘ್ನಗಳ ಭಯದಿಂದ, **ಮೇಘಾಃ** = ಮೋಡಗಳ, **ದಿಗಂತಂ** = ದಿಕ್ಕುಗಳ ಮೂರ್ತಿಗಳನ್ನು, **ಯಯುಃ** = ಹೊಂದಿದವು, **ಅಂಬರ** = ಆಕಾಶದ, **ಅಂತಾತ್** = ಮಧ್ಯದಿಂದ.

ಅವತಾರಸಮಯದಲ್ಲಿ ದೇವತೆಗಳು ದೇವರನ್ನು ಸ್ತುತಿಸುತ್ತಾ ಪುಷ್ಪವೃಷ್ಟಿಯನ್ನು ಮಾಡಿದರು. ಈ ಪುಷ್ಪಗಳು ನೇರವಾಗಿ ದೇವರ ಮೇಲೆ ಬೀಳಬೇಕು. ಆಕಾಶಮಧ್ಯದಲ್ಲಿ ಮೋಡಗಳು ಇದ್ದರೆ ತಡೆ ಉಂಟಾಗುತ್ತದೆ. ಅದಕ್ಕಾಗಿ ಕೋಲುಗಳಿಂದ ಮೋಡಗಳನ್ನು ದೂರ ಸರಿಸಿದರೆಂಬಂತೆ ಮೋಡಗಳು ದಿಗಂತದಲ್ಲಿ ಸೇರಿದವು.

ನೂರಾರು ವಿಘ್ನಗಳನ್ನು ಪರಿಹರಿಸಿಕೊಂಡು ದೇವರನ್ನು ಆರಾಧಿಸಬೇಕು ಎಂದು ಅಭಿಪ್ರಾಯ.

ಅಜನ್ಮನಸ್ತಸ್ಯ ಹಿ ಜನ್ಮಕಾಲೇ
ಚರಾಚರಂ ತುಷ್ಟಮಭೂತ್ಕಿಲೇದಮ್ ।
ತಥಾಹಿ ತುಷ್ಟಿರ್ಭುವಿ ಕಸ್ಯ ನ ಸ್ಯಾ-
ದದೃಷ್ಟಪೂರ್ವಸ್ಯ ನಿರೀಕ್ಷಣೇನ ॥ ೪೪ ॥

**ಅಜನ್ಮನಃ** = ಉತ್ಪತ್ತಿ ಇಲ್ಲದ, **ತಸ್ಯ** = ಕೃಷ್ಣನ, **ಜನ್ಮಕಾಲೇ** = ಉತ್ಪತ್ತಿಕಾಲದಲ್ಲಿ, **ಚರಾಚರಂ** = ಸ್ಥಾವರಜಂಗಮಪ್ರಪಂಚವು, **ತುಷ್ಟಂ** = ಸಂತೋಷಗೊಂಡದ್ದು, **ಅಭೂತ್** = ಆಯಿತು, **ಕಿಲ** = ಪ್ರಸಿದ್ಧ, **ಇದಂ** = ಈ, **ತಥಾ ಹಿ** = ಅದು ಹಾಗೆಯೇ, **ತುಷ್ಟಿಃ** = ನೆಮ್ಮದಿಯು, **ಭುವಿ** = ಭೂಮಿಯಲ್ಲಿ, **ಕಸ್ಯ** = ಯಾರಿಗೆ? **ನ ಸ್ಯಾತ್** = ಆಗುವುದಿಲ್ಲ, **ಅದೃಷ್ಟಪೂರ್ವಸ್ಯ** = ಈ ತನಕ ನೋಡದ್ದರ, **ನಿರೀಕ್ಷಣೇನ** = ನೋಡು-ವುದರಿಂದ.

ದೇವರಿಗೆ ಜನ್ಮ ಇಲ್ಲ ಎಂಬುದು ವೇದಪ್ರಸಿದ್ಧವಾದ ಮಾತು. ಅಂತಹ ದೇವರು ಈಗ ಹುಟ್ಟಿದ್ದಾನೆ. ಇದನ್ನು ಕಂಡ ಸಮಸ್ತಜಗತ್ತೂ ಸಂತೋಷಗೊಂಡಿತು. ಹೊಸತನ್ನು ಕಂಡಾಗ ಯಾರಿಗೆ ತಾನೇ ಆನಂದ ಆಗುವುದಿಲ್ಲ?

ಶರೀರಿಣಾಂ ಸ್ಥಾವರಜಂಗಮಾನಾಂ
ನಿರೀಕ್ಷಣೇನೈವ ವಿಮುಕ್ತಿದೋಽಹಮ್ ।
ಇತೀವ ವಿಖ್ಯಾಪಯಿತುಂ ಸ ದೃಷ್ಟೋ
ಜಹಾರ ಪಿತ್ರೋರ್ನಿಗಡಸ್ಯ ಬಂಧಮ್ ॥ ೪೫ ॥

**ಶರೀರಿಣಾಂ** = ಜೀವರಿಗೆ, **ಸ್ಥಾವರಜಂಗಮಾನಾಂ** = ಚರಾಚರರಿಗೆ, **ನಿರೀಕ್ಷಣೇನೈವ** = ದರ್ಶನದಿಂದಲೇ, **ವಿಮುಕ್ತಿದಃ** = ಮೋಕ್ಷವನ್ನು ಕೊಡುವವನು, **ಅಹಂ** = ನಾನು, **ಇತೀವ** = ಈ ರೀತಿ ಎಂಬಂತೆ, **ವಿಖ್ಯಾಪಯಿತುಂ** = ತಿಳಿಸಲು, **ಸಃ** = ಕೃಷ್ಣನು, **ದೃಷ್ಟಃ** = ನೋಡ- ಲ್ಪಟ್ಟವನಾಗಿ, **ಜಹಾರ** = ಬಿಡಿಸಿದನು, **ಪಿತ್ರೋಃ** = ತಂದೆ ತಾಯಿಯರ, **ನಿಗಡಸ್ಯ** = ಸೆರೆಮನೆಯ, **ಬಂಧಂ** = ಬಂಧನವನ್ನು.

'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಸಂಸಾರಬಂಧನದಿಂದ ಬಿಡುಗಡೆಗೆ ದೇವರ ದರ್ಶನ ಅಲ್ಲದೆ ಬೇರೆ ದಾರಿ ಇಲ್ಲ ಎಂದು ವೇದದ ಮಾತು. ಈ ಮಾತನ್ನು

ಕೃಷ್ಣನು ಸೆರೆಮನೆಯಲ್ಲಿ ಸತ್ಯ ಮಾಡಿದನು. ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ವಸು-ದೇವ-ದೇವಕಿಯರು ಸರಪಳಿಯ ಬಂಧನದಿಂದ ಬಿಡುಗಡೆಗೊಂಡರು.

**ಏತತ್ಪಿತೃತ್ವಪ್ರಥಯಾ ಭಯಂ ಸ್ಯಾತ್**
**ಪಾಪಾದಿತೀಡ್ಯಂ ಪಿತರೌ ಗುಣಾಢ್ಯಮ್ ।**
**ಜ್ಞಾನಾತ್ಮಕಸ್ತ್ವಂ ಪ್ರಕೃತೇರ್ವಿದೂರ-**
**ಸ್ತಾವಸ್ತುತಾಂ ತಾತ ಇತೀಶಮಸ್ಯ ॥ ೪೬ ॥**

**ಏತತ್** = ಈ ಕೃಷ್ಣನಿಗೆ, **ಪಿತೃತ್ವ** = ತಂದೆತಾಯಿಯಾದ, **ಪ್ರಥಯಾ** = ಪ್ರಸಿದ್ಧಿಯಿಂದ, **ಭಯಂ** = ಭಯವು, **ಸ್ಯಾತ್** = ಆದೀತು, **ಪಾಪಾತ್** = ಪಾಪದಿಂದ, **ಇತಿ** = ಈ ರೀತಿಯಾಗಿ, **ಈಡ್ಯಂ** = ಸ್ತುತ್ಯನಾದ, **ಪಿತರೌ** = ತಂದೆತಾಯಿಯರು, **ಗುಣಾಢ್ಯಂ** = ಗುಣಗಳಿಂದ ತುಂಬಿದ, **ಜ್ಞಾನಾತ್ಮಕಃ** = ಜ್ಞಾನರೂಪನು, **ತ್ವಂ** = ನೀನು, **ಪ್ರಕೃತೇಃ** = ಪ್ರಕೃತಿಗಿಂತ, **ವಿದೂರಃ** = ದೂರನು, **ತೌ** = ಆ, **ಅಸ್ತುತಾಂ** = ಸ್ತುತಿಸಿದರು, **ತಾತಃ** = ತಂದೆಯು, **ಇತಿ** = ಈ ರೀತಿಯಾಗಿ, **ಈಶಂ** = ಒಡೆಯನನ್ನು , **ಅಸ್ಯ** = ಈ ಜಗತ್ತಿಗೆ.

ದೇವರು ಅವತರಿಸಿದ ಕೂಡಲೇ ದೇವಕೀವಸುದೇವರು ದೇವರನ್ನು ಸ್ತುತಿಸಿದರು. 'ನೀನು ಜ್ಞಾನರೂಪಿಯು. ಪ್ರಕೃತಿಬಂಧನದಿಂದ ದೂರನು. ಜಗತ್ತಿಗೆ ತಂದೆಯು' ಎಂದು. ಈ ಎಲ್ಲಾ ಸ್ತುತಿಗಳನ್ನು ಸ್ವೀಕರಿಸುವ ಯೋಗ್ಯತೆಯುಳ್ಳವನು ದೇವರು ಎಂಬುದನ್ನು **'ಈಡ್ಯ'** ಎಂಬ ಶಬ್ದದಿಂದ ಹೇಳಿರುವರು.

ಇಲ್ಲಿ ಜ್ಞಾನಾತ್ಮಕ ಎಂದು ಹೇಳಿದ್ದರ ಅಭಿಪ್ರಾಯ ಹೀಗಿದೆ – ದೇವರಿಗೆ ಉತ್ಪತ್ತಿ ಇಲ್ಲ. ಆದ್ದರಿಂದ ತಂದೆತಾಯಿಯೂ ಇಲ್ಲ. ಈ ಜ್ಞಾನ ಕಂಸನಿಗೆ ಬರಲಿ. ಇಲ್ಲದಿದ್ದರೆ ಕಂಸನು, ಕೃಷ್ಣನ ತಂದೆತಾಯಿಯರು ಈ ವಸುದೇವ-ದೇವಕಿಯರು ಎಂದು ತಿಳಿದು ತಮ್ಮನ್ನು ಕೊಲ್ಲಲು ಬಂದಾನು ಎಂಬ ಭಯ ಎಂದು.

'ಪ್ರಕೃತೇಃ ವಿದೂರಃ' ಎಂದು ಹೇಳಿದ್ದು – ಕಂಸನ ಹಿಡಿತದಿಂದ ತಮ್ಮನ್ನು ಬಿಡಿಸಲಿ ಎಂಬ ಅಭಿಪ್ರಾಯದಿಂದ. 'ತಾತ' ಎಂಬ ವಿಶೇಷಣದಿಂದ ನಿನ್ನ ಅಧೀನದಲ್ಲಿ ನಮ್ಮನ್ನು ಇಟ್ಟುಕೋ. ತಂದೆಯ ಹಿಡಿತದಲ್ಲಿ ಮಕ್ಕಳು ಇರುವಂತೆ ಎಂದು ಈ ವಸುದೇವ-ದೇವಕಿಯರು ಪ್ರಾರ್ಥಿಸುತ್ತಾರೆ ಎಂದು ರಾಜರು ತಿಳಿಸುತ್ತಾರೆ.

ಯ ಏಷ ಪುತ್ರಂಜ್ಜಿತನಾರಕಸ್ಥಾನ್
ಜನಾನ್ ಸ್ವನಾಮಸ್ಮರಣೇನ ಪಾತಿ ।

ನೂರಾರು ವಿಘ್ನಗಳನ್ನು ಪರಿಹರಿಸಿಕೊಂಡು ದೇವರನ್ನು ಆರಾಧಿಸಬೇಕು ಎಂದು ಅಭಿಪ್ರಾಯ.

**ಅಜನ್ಮನಸ್ತಸ್ಯ ಹಿ ಜನ್ಮಕಾಲೇ**
**ಚರಾಚರಂ ತುಷ್ಟಮಭೂತ್ಕಿಲೇದಮ್ ।**
**ತಥಾಹಿ ತುಷ್ಟಿರ್ಭುವಿ ಕಸ್ಯ ನ ಸ್ಯಾ-**
**ದದೃಷ್ಟಪೂರ್ವಸ್ಯ ನಿರೀಕ್ಷಣೇನ ॥ ೪೪ ॥**

**ಅಜನ್ಮನಃ** = ಉತ್ಪತ್ತಿ ಇಲ್ಲದ, **ತಸ್ಯ** = ಕೃಷ್ಣನ, **ಜನ್ಮಕಾಲೇ** = ಉತ್ಪತ್ತಿಕಾಲದಲ್ಲಿ, **ಚರಾಚರಂ** = ಸ್ಥಾವರಜಂಗಮಪ್ರಪಂಚವು, **ತುಷ್ಟಂ** = ಸಂತೋಷಗೊಂಡದ್ದು, **ಅಭೂತ್** = ಆಯಿತು, **ಕಿಲ** = ಪ್ರಸಿದ್ಧ, **ಇದಂ** = ಈ, **ತಥಾ ಹಿ** = ಅದು ಹಾಗೆಯೇ, **ತುಷ್ಟಿಃ** = ನೆಮ್ಮದಿಯು, **ಭುವಿ** = ಭೂಮಿಯಲ್ಲಿ, **ಕಸ್ಯ** = ಯಾರಿಗೆ? **ನ ಸ್ಯಾತ್** = ಆಗುವುದಿಲ್ಲ, **ಅದೃಷ್ಟಪೂರ್ವಸ್ಯ** = ಈ ತನಕ ನೋಡದ್ದರ, **ನಿರೀಕ್ಷಣೇನ** = ನೋಡು-ವುದರಿಂದ.

ದೇವರಿಗೆ ಜನ್ಮ ಇಲ್ಲ ಎಂಬುದು ವೇದಪ್ರಸಿದ್ಧವಾದ ಮಾತು. ಅಂತಹ ದೇವರು ಈಗ ಹುಟ್ಟಿದ್ದಾನೆ. ಇದನ್ನು ಕಂಡ ಸಮಸ್ತಜಗತ್ತೂ ಸಂತೋಷಗೊಂಡಿತು. ಹೊಸತನ್ನು ಕಂಡಾಗ ಯಾರಿಗೆ ತಾನೇ ಆನಂದ ಆಗುವುದಿಲ್ಲ?

**ಶರೀರಿಣಾಂ ಸ್ಥಾವರಜಂಗಮಾನಾಂ**
**ನಿರೀಕ್ಷಣೇನೈವ ವಿಮುಕ್ತಿದೋಽಹಮ್ ।**
**ಇತೀವ ವಿಖ್ಯಾಪಯಿತುಂ ಸ ದೃಷ್ಟೋ**
**ಜಹಾರ ಪಿತ್ರೋರ್ನಿಗಡಸ್ಯ ಬಂಧಮ್ ॥ ೪೫ ॥**

**ಶರೀರಿಣಾಂ** = ಜೀವರಿಗೆ, **ಸ್ಥಾವರಜಂಗಮಾನಾಂ** = ಚರಾಚರರಿಗೆ, **ನಿರೀಕ್ಷಣೇನೈವ** = ದರ್ಶನದಿಂದಲೇ, **ವಿಮುಕ್ತಿದಃ** = ಮೋಕ್ಷವನ್ನು ಕೊಡುವವನು, **ಅಹಂ** = ನಾನು, **ಇತೀವ** = ಈ ರೀತಿ ಎಂಬಂತೆ, **ವಿಖ್ಯಾಪಯಿತುಂ** = ತಿಳಿಸಲು, **ಸಃ** = ಕೃಷ್ಣನು, **ದೃಷ್ಟಃ** = ನೋಡ- ಲ್ಪಟ್ಟವನಾಗಿ, **ಜಹಾರ** = ಬಿಡಿಸಿದನು, **ಪಿತ್ರೋಃ** = ತಂದೆ ತಾಯಿಯರ, **ನಿಗಡಸ್ಯ** = ಸೆರೆಮನೆಯ, **ಬಂಧಂ** = ಬಂಧನವನ್ನು.

'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಸಂಸಾರಬಂಧನದಿಂದ ಬಿಡುಗಡೆಗೆ ದೇವರ ದರ್ಶನ ಅಲ್ಲದೆ ಬೇರೆ ದಾರಿ ಇಲ್ಲ ಎಂದು ವೇದದ ಮಾತು. ಈ ಮಾತನ್ನು

ಕೃಷ್ಣನು ಸೆರೆಮನೆಯಲ್ಲಿ ಸತ್ಯ ಮಾಡಿದನು. ಶ್ರೀಕೃಷ್ಣನ ದರ್ಶನಮಾತ್ರದಿಂದಲೇ ವಸು-ದೇವ-ದೇವಕಿಯರು ಸರಪಳಿಯ ಬಂಧನದಿಂದ ಬಿಡುಗಡೆಗೊಂಡರು.

**ಏತತ್ಪಿತೃತ್ವಪ್ರಥಯಾ ಭಯಂ ಸ್ಯಾತ್**
**ಪಾಪಾದಿತೀಡ್ಯಂ ಪಿತರೌ ಗುಣಾಢ್ಯಮ್ ।**
**ಜ್ಞಾನಾತ್ಮಕಸ್ತ್ವಂ ಪ್ರಕೃತೇರ್ವಿದೂರ-**
**ಸ್ತಾವಸ್ತುತಾಂ ತಾತ ಇತೀಶಮಸ್ಯ ॥ ೪೬ ॥**

**ಏತತ್** = ಈ ಕೃಷ್ಣನಿಗೆ, **ಪಿತೃತ್ವ** = ತಂದೆತಾಯಿಯಾದ, **ಪ್ರಥಯಾ** = ಪ್ರಸಿದ್ಧಿಯಿಂದ, **ಭಯಂ** = ಭಯವು, **ಸ್ಯಾತ್** = ಆದೀತು, **ಪಾಪಾತ್** = ಪಾಪದಿಂದ, **ಇತಿ** = ಈ ರೀತಿಯಾಗಿ, **ಈಡ್ಯಂ** = ಸ್ತುತ್ಯನಾದ, **ಪಿತರೌ** = ತಂದೆತಾಯಿಯರು, **ಗುಣಾಢ್ಯಂ** = ಗುಣಗಳಿಂದ ತುಂಬಿದ, **ಜ್ಞಾನಾತ್ಮಕಃ** = ಜ್ಞಾನರೂಪನು, **ತ್ವಂ** = ನೀನು, **ಪ್ರಕೃತೇಃ** = ಪ್ರಕೃತಿಗಿಂತ, **ವಿದೂರಃ** = ದೂರನು, **ತೌ** = ಆ, **ಅಸ್ತುತಾಂ** = ಸ್ತುತಿಸಿದರು, **ತಾತಃ** = ತಂದೆಯು, **ಇತಿ** = ಈ ರೀತಿಯಾಗಿ, **ಈಶಂ** = ಒಡೆಯನನ್ನು, **ಅಸ್ಯ** = ಈ ಜಗತ್ತಿಗೆ.

ದೇವರು ಅವತರಿಸಿದ ಕೂಡಲೇ ದೇವಕೀವಸುದೇವರು ದೇವರನ್ನು ಸ್ತುತಿಸಿದರು. 'ನೀನು ಜ್ಞಾನರೂಪಿಯು. ಪ್ರಕೃತಿಬಂಧನದಿಂದ ದೂರನು. ಜಗತ್ತಿಗೆ ತಂದೆಯು' ಎಂದು. ಈ ಎಲ್ಲಾ ಸ್ತುತಿಗಳನ್ನು ಸ್ವೀಕರಿಸುವ ಯೋಗ್ಯತೆಯುಳ್ಳವನು ದೇವರು ಎಂಬುದನ್ನು '**ಈಡ್ಯ**' ಎಂಬ ಶಬ್ದದಿಂದ ಹೇಳಿರುವರು.

ಇಲ್ಲಿ ಜ್ಞಾನಾತ್ಮಕ ಎಂದು ಹೇಳಿದ್ದರ ಅಭಿಪ್ರಾಯ ಹೀಗಿದೆ – ದೇವರಿಗೆ ಉತ್ಪತ್ತಿ ಇಲ್ಲ. ಆದ್ದರಿಂದ ತಂದೆತಾಯಿಯೂ ಇಲ್ಲ. ಈ ಜ್ಞಾನ ಕಂಸನಿಗೆ ಬರಲಿ. ಇಲ್ಲದಿದ್ದರೆ ಕಂಸನು, ಕೃಷ್ಣನ ತಂದೆತಾಯಿಯರು ಈ ವಸುದೇವ-ದೇವಕಿಯರು ಎಂದು ತಿಳಿದು ತಮ್ಮನ್ನು ಕೊಲ್ಲಲು ಬಂದಾನು ಎಂಬ ಭಯ ಎಂದು.

'ಪ್ರಕೃತೇಃ ವಿದೂರಃ' ಎಂದು ಹೇಳಿದ್ದು – ಕಂಸನ ಹಿಡಿತದಿಂದ ತಮ್ಮನ್ನು ಬಿಡಿಸಲಿ ಎಂಬ ಅಭಿಪ್ರಾಯದಿಂದ. 'ತಾತ' ಎಂಬ ವಿಶೇಷಣದಿಂದ ನಿನ್ನ ಅಧೀನದಲ್ಲಿ ನಮ್ಮನ್ನು ಇಟ್ಟುಕೋ. ತಂದೆಯ ಹಿಡಿತದಲ್ಲಿ ಮಕ್ಕಳು ಇರುವಂತೆ ಎಂದು ಈ ವಸುದೇವ-ದೇವಕಿಯರು ಪ್ರಾರ್ಥಿಸುತ್ತಾರೆ ಎಂದು ರಾಜರು ತಿಳಿಸುತ್ತಾರೆ.

**ಯ ಏಷ ಪುತ್ರಂಜ್ಞಿತನಾರಕಸ್ಥಾನ್**
**ಜನಾನ್ ಸ್ವನಾಮಸ್ಮರಣೇನ ಪಾತಿ ।**

**ಸ ದೃಷ್ಟಿಗಃ ಸನ್ ವಸುದೇವಪತ್ನ್ಯಾಃ**
**ಕಥಂ ನ ಪುತ್ರಃ ಶತಪತ್ರನೇತ್ರಃ ॥ ೪೭ ॥**

**ಯಃ** = ಯಾರು, **ಏಷಃ** = ಇವನು, **ಪುತ್** = ಪುತ್ ಎಂದು, **ಸಂಜ್ಞಿತ** = ಹೆಸರುಳ್ಳ, **ನಾರಕ** = ನರಕದಲ್ಲಿ, **ಸ್ಥಾನ್** = ಇರುವ, **ಜನಾನ್** = ಜನರನ್ನು, **ಸ್ವ** = ತನ್ನ, **ನಾಮ** = ಹೆಸರಿನ, **ಸ್ಮರಣೇನ** = ಸ್ಮರಣೆಯಿಂದ, **ಪಾತಿ** = ರಕ್ಷಿಸುತ್ತಾನೆ. **ಸಃ** = ಅಂತಹವನು, **ದೃಷ್ಟಿಗಃ** = ಕಣ್ಣಿಗೆ ಕಾಣಿಸಿದವನು, **ಸನ್** = ಆಗಿ, **ವಸುದೇವ** = ವಸುದೇವನ, **ಪತ್ನ್ಯಾಃ** = ಹೆಂಡತಿಗೆ, **ಕಥಂ** = ಹೇಗೆ, **ನ ಪುತ್ರಃ** = ಮಗನಲ್ಲ, **ಶತಪತ್ರ** = ಕಮಲದಂತೆ, **ನೇತ್ರಃ** = ಕಣ್ಣುಳ್ಳವನು.

ಕೃಷ್ಣನು ಯಾರ ಮಗನೂ ಅಲ್ಲದಿದ್ದರೆ ಪುರಾಣಗಳಲ್ಲಿ ದೇವಕೀಪುತ್ರ ಎಂದು ಹೇಳಿದ್ದು ಹೇಗೆ? ಎಂಬುದನ್ನು ರಾಜರು ಅನೇಕ ರೀತಿಯಿಂದ ಅರ್ಥವನ್ನು ಕೂಡಿಸುತ್ತಾರೆ – ಪುತ್ರಶಬ್ದಕ್ಕೆ ಪುತ್ ಎಂಬ ನರಕದಿಂದ ರಕ್ಷಣೆ ಮಾಡುವವನು ಎಂದು ಅರ್ಥ. ಕೇವಲ ದೇವರ ನಾಮಸ್ಮರಣೆ ಮಾಡುವವರಿಗೆ ದೇವರು 'ಪುತ್' ಎಂಬ ನರಕದಿಂದ ರಕ್ಷಣೆಯನ್ನು ಕೊಟ್ಟು ದೇವಕೀಪುತ್ರ ಎಂದು ಖಂಡಿತವಾಗಿಯೂ ಕರೆಯಲ್ಪಡುತ್ತಾನೆ.

ರಾಜರು ಇಲ್ಲಿ 'ವಸುದೇವಪತ್ನ್ಯಾಃ ದೃಷ್ಟಿಗಃ' ಎಂದು ವಸುದೇವನ ಪತ್ನಿಗೆ ಕಾಣಿಸಿದವನು ಎಂದಿದ್ದಾರೆ. ದೇವಕಿ ಮಾತ್ರ ಕಂಡದ್ದಲ್ಲ. ವಸುದೇವನೂ ಕಂಡಿದ್ದಾನೆ. ಹೀಗಿರುವಾಗ ಈ ಮಾತು ಹೇಗೆ ಕೂಡುತ್ತದೆ? ಉತ್ತರ – ಪುತ್ರ ಎಂಬ ಶಬ್ದದ ಅರ್ಥವನ್ನು ಬಿಡಿಸುವಾಗ ಕೃಷ್ಣನು ದೇವಕಿಗೆ ಪುತ್ರನಾಗುವುದಾದರೆ ಮಾತಾ ಎಂಬ ಶಬ್ದದ ಅರ್ಥವನ್ನು ಬಿಡುಸುವಾಗಲೂ ಇವಳು ಮಾತೃ ಆಗಬಹುದು. ಮಾತಾ ಎಂದರೆ ಮಿನೋತಿ ಜಾನಾತಿ ಅಂದರೆ ತಿಳಿಯುತ್ತಾಳೆ. ಆದ್ದರಿಂದ ಮಾತಾ = ದೇವರನ್ನು ತಿಳಿಯುವವಳು ಎಂಬರ್ಥದಲ್ಲಿ ಮಾತಾ ಆಗಬಹುದು ಎಂದು ತಿಳಿಸಲು 'ದೇವಕಿಗೆ ಕಂಡವನು' ಎಂದು ಹೇಳಿದ್ದು.

**ಯದೀಯರೂಪಂ ಪ್ರಕಟೀಕರೋತಿ**
**ಪಿತಾ ಸ ತಸ್ಯೇತಿ ಹಿ ವೇದವಾದಃ ।**
**ತಥಾವಿಧಸ್ಯಾನಕದುಂದುಭೇಃ ತತ್**
**ಪಿತೃತ್ವಮಪ್ಯಸ್ತು ನ ತೇನ ಹಾನಿಃ ॥ ೪೮ ॥**

**ಯದೀಯರೂಪಂ** = ಯಾರು ದೇವರ ಸ್ವರೂಪವನ್ನು, **ಪ್ರಕಟೀಕರೋತಿ** = ತಿಳಿಸು-ತ್ತಾರೋ, **ಪಿತಾ** = ತಂದೆಯು, **ಸ** = ಅವನು, **ತಸ್ಯ** = ಅವನಿಗೆ, **ಇತಿ** = ಎಂದು,

**ವೇದವಾದಃ** = ವೇದದ ಮಾತು, **ತಥಾವಿಧಸ್ಯ** = ಈ ರೀತಿ ದೇವರನ್ನು ತೋರಿಸುವ, **ಆನಕದುಂದುಭೇಃ** = ವಸುದೇವನಿಗೆ, **ತತ್‌ಪಿತೃತ್ವಂ ಅಪಿ** = ಕೃಷ್ಣನಿಗೆ ತಂದೆ-ಯಾಗುವಿಕೆಯೂ, **ಅಸ್ತು** = ಇರಲಿ, **ನ** = ಇಲ್ಲ, **ತೇನ** = ಅದರಿಂದ, **ಹಾನಿಃ** = ಅನಿಷ್ಟವು.

ದೇವರನ್ನು ಯಾರು ಜನರಿಗೆ ತೋರಿಸುತ್ತಾರೋ ಅವರು ದೇವರ ತಂದೆ ಎಂದು ಋಗ್ವೇದ ಹೇಳುತ್ತದೆ : 'ಸ ಪಿತುಃ ಪಿತಾಸತ್' ಚತುರ್ಮುಖನು ದೇವರನ್ನು ಜನರಿಗೆ ತಿಳಿಸಿದ. ಆದ್ದರಿಂದ ಆತ ತನ್ನ ತಂದೆಯಾದ ದೇವರಿಗೂ ತಂದೆಯಾದ ಎಂದು. ಸದ್ಯ ಈಗ ವಸುದೇವನು ದೇವರನ್ನು ಜನರಿಗೆ ತೋರಿಸಿದ್ದರಿಂದ ದೇವರಿಗೆ ತಂದೆ ಆಗುವು-ದರಲ್ಲಿ ಏನೂ ತೊಂದರೆ ಇಲ್ಲ. ತಂದವನು ತಂದೆ ತಾನೆ? ರಾಜರು ವೇದದ ಅರ್ಥವನ್ನು ಸಾಮಾನ್ಯಜನರಿಗೂ ಅರ್ಥೈಸುವ ಸಾಮರ್ಥ್ಯ ಉಳ್ಳವರು ಎಂದು ಇದರಿಂದ ತಿಳಿಯುತ್ತದೆ.

**ಏತೇನೈವ ಪುರಾತ್ಮನಾಽಹಮಭವಂ ತ್ವದ್ದೃಷ್ಟಿಮಾರ್ಗೋಽಧುನಾ**
**ತೇನೈವಾಸಮಿತೀರಯನ್ ಜನಿಮಸೌ ಮೇನೇ ನ ಸೂನುಃ ಸ್ವಕಾಮ್ ।**
**ಮಾತಾ ತಂ ಕಿಲ ಮಾನಯಂತ್ಯಭಿನವಂ ವಿಶ್ವಂ ಯದಿತ್ಯಾದಿನಾ**
**ಪ್ರಾಜ್ಞೋಽಸೌ ವಿನತಃ ಪಿತಾ ಚ ವಿದಿತೋಽಸೀತ್ಯಾದಿಭಿಸ್ತಂ ಗೃಣನ್ ॥೪೯॥**

**ಏತೇನ ಏವ** = ಇದೇ ರೀತಿಯಾದ, **ಪುರಾ** = ಹಿಂದೆ, **ಆತ್ಮನಾ** = ಸ್ವರೂಪದಿಂದ, **ಅಹಂ** = ನಾನು, **ಅಭವಂ** = ಆಗಿದ್ದೆನು, **ತ್ವತ್** = ನಿನ್ನ, **ದೃಷ್ಟಿ** = ಕಣ್ಣಿಗೆ, **ಮಾರ್ಗಃ** = ಕಾಣುವವನು, **ಅಧುನಾ** = ಈಗ, **ತೇನ ಏವ** = ಅದೇ ರೂಪದಿಂದ, **ಆಸಂ** = ಆಗಿದ್ದೇನೆ, **ಇತಿ** = ಎಂದು, **ಈರಯನ್** = ಹೇಳುತ್ತಾ, **ಜನಿಂ** = ಉತ್ಪತ್ತಿಯನ್ನು, **ಅಸೌ** = ಈ, **ಮೇನೇ** = ತಿಳಿದನು, **ನ** = ಇಲ್ಲ, **ಸೂನುಃ** = ಮಗನು, **ಸ್ವಕಾಂ** = ತನ್ನ, **ಮಾತಾ** = ತಾಯಿಯು, **ತಂ** = ಅವನನ್ನು, **ಕಿಲ** = ಪ್ರಸಿದ್ಧ, **ಮಾನಯಂತೀ** = ಗೌರವಿಸು-ವವಳಾಗಿ, **ಅಭಿನವಂ** = ಚಂದದ, **ವಿಶ್ವಂ ಯತ್ ಇತ್ಯಾದಿನಾ** = ವಿಶ್ವಂ ಯತ್ ಇತ್ಯಾದಿ ಭಾಗವತಸ್ತುತಿಯಿಂದ, **ಪ್ರಾಜ್ಞಃ** = ಜ್ಞಾನಿಯಾದ, **ಅಸೌ** = ಈ, **ವಿನತಃ** = ವಿನೀತನಾದ, **ಪಿತಾ ಚ** = ತಂದೆಯು, **ವಿದಿತೋಽಸಿ ಇತ್ಯಾದಿಭಿಃ** = ವಿದಿತೋಽಸಿ ಇತ್ಯಾದಿ ಭಾಗವತಮಂತ್ರಗಳಿಂದ, **ತಂ** = ಕೃಷ್ಣನನ್ನು, **ಗೃಣನ್** = ಹೊಗಳುತ್ತಾ.

ದೇವರು, ವಸುದೇವ, ದೇವಕಿ ಇವರೆಲ್ಲರೂ ದೇವರಿಗೆ ಉತ್ಪತ್ತಿ ಇಲ್ಲ ಎಂಬುದನ್ನು ಈ ಶ್ಲೋಕದಿಂದ ತಿಳಿಸುತ್ತಾರೆ. ಮೊದಲು ದೇವರು ತಿಳಿಸುತ್ತಾನೆ – 'ನಾನು ಈ ಮೊದಲು ಇದೇ ಶರೀರದಿಂದ ನಿಮಗೆ ದರ್ಶನ ಕೊಟ್ಟಿದ್ದೆ. ನೀವು ಅದಿತಿಕಶ್ಯಪಾದಿರೂಪಗಳನ್ನು

ತಾಳಿದಾಗ ನಾನು ವಾಮನಾದಿರೂಪಗಳನ್ನು ತಾಳಿದ್ದೆ' ಎಂದು. ಇನ್ನು ದೇವಕಿ ತಿಳಿಸುತ್ತಾಳೆ – 'ಇಡೀ ಜಗತ್ತು ಪ್ರಲಯಕಾಲದಲ್ಲಿ ನಿನ್ನ ಉದರದಲ್ಲಿ ಇರುತ್ತದೆ. ನೀನು ಆದಿಪುರುಷ. ಹೀಗಿರುವಾಗ ನಿನಗೆ ಜನ್ಮಕೊಡುವವರು ಯಾರು? ಆದರೂ ನೀನು ವಿಡಂಬನೆಗಾಗಿ ನನ್ನ ಉದರವನ್ನು ಪ್ರವೇಶಿಸಿದ್ದಿ' ಎಂದು.

ವಸುದೇವನು ಹೇಳುತ್ತಾನೆ – 'ನೀನು ಪ್ರಕೃತಿಗಿಂತಲೂ ಪರ ಎಂಬುದಾಗಿ ತಿಳಿಯಲ್ಪಟ್ಟಿದ್ದಿ. ಜ್ಞಾನಾನಂದಮಯನಾದ ನೀನು ಎಲ್ಲರ ಜ್ಞಾನದೃಷ್ಟಿಗೆ ವಿಷಯನು. ಹುಟ್ಟು ಉಳ್ಳವರು ಪಾಂಚಭೌತಿಕದೇಹವುಳ್ಳವರು. ನಿನಗೆ ಅಂತಹ ದೇಹ ಇಲ್ಲ. ಆದ್ದರಿಂದ ಉತ್ಪತ್ತಿ ಇಲ್ಲ.' ಎಂದು. ಈ ರೀತಿಯಾಗಿ ಭಾಗವತಾದಿಪ್ರಮಾಣಗಳಿಂದ ದೇವರ ಉತ್ಪತ್ತಿಯನ್ನು ನಿರಾಕರಿಸುತ್ತಾರೆ ರಾಜರು.

**ಜಾನಾತಿ ಮಾತಾ ಪರಮಾತ್ಮಜಾತಂ**
**ನೂನಂ ಪಿತಾऽಪಿ ಕ್ವಚಿದೇವ ಲೋಕೇ।**
**ತಾಭ್ಯಾಮನಂಗೀಕೃತಕೃಷ್ಣಜನ್ಮ**
**ಕೋ ವಾ ಪುಮಾನ್ ಸಾಧಯಿತುಂ ಸಮರ್ಥಃ ॥ ೫೦ ॥**

**ಜಾನಾತಿ** = ತಿಳಿದಿದ್ದಾಳೆ, **ಮಾತಾ** = ತಾಯಿಯು, **ಪರಂ** = ಕೇವಲ, **ಆತ್ಮಜಾತಂ** = ತನ್ನ ಮಗನನ್ನು, **ನೂನಂ** = ನಿಶ್ಚಯ, **ಪಿತಾ ಅಪಿ** = ತಂದೆಯಾದರೂ, **ಕ್ವಚಿದೇವ** = ಕೆಲವೇ ಸಂದರ್ಭದಲ್ಲಿ, **ಲೋಕೇ** = ಜಗತ್ತಿನಲ್ಲಿ, **ತಾಭ್ಯಾಂ** = ಅವರಿಂದ, **ಅನಂಗೀಕೃತ** = ಒಪ್ಪದಿರುವ, **ಕೃಷ್ಣ** = ಕೃಷ್ಣನ, **ಜನ್ಮ** = ಜನ್ಮವನ್ನು, **ಕಃ ವಾ** = ಯಾರು ತಾನೇ, **ಪುಮಾನ್** = ಪುರುಷನು, **ಸಾಧಯಿತುಂ** = ಸಾಧಿಸಲು, **ಸಮರ್ಥಃ** = ಸಮರ್ಥನು.

ಲೋಕದಲ್ಲಿ ಒಂದು ಮಗುವನ್ನು ನೋಡಿ ಇದು ನನ್ನದು ಹೌದು ಎಂದು ಹೇಳಬೇಕಾದ ಮೊದಲ ಅಧಿಕಾರಿಗಳು ತಂದೆತಾಯಿಯರು. ತಂದೆತಾಯಿಯರೇ ಒಪ್ಪಿಲ್ಲ ಎಂದ ಮೇಲೆ ಮೂರನೇ ವ್ಯಕ್ತಿಗೆ ಏನು ಅಧಿಕಾರ ಇದು ನಿಮ್ಮ ಮಗು ಎಂದು ಹೇಳಲು? ಅದೇ ರೀತಿ ವಸುದೇವ-ದೇವಕಿಯರೇ ಒಪ್ಪುತ್ತಿಲ್ಲ 'ಇದು ನಮ್ಮ ಮಗು' ಎಂದು. ಹೀಗಿರುವಾಗ ನಮಗೇನು ಅಧಿಕಾರ ಕೃಷ್ಣನು ವಸುದೇವನ ಮಗ ಎಂದು ಹೇಳಲು?

• • • •

ಸಂದೇಶ

**ಬಿಭೇತಿ ಸರ್ವಃ ಪರುಷಾತ್ ನ ಶಾಂತಾತ್**

ಎಲ್ಲರೂ ಕ್ರೂರಿಗಳಿಗೆ ಹೆದರುತ್ತಾರೆ; ಶಾಂತರಿಗೆ ಅಲ್ಲ

**ಸ್ತುತಿಂ ಸ್ವಪಿತ್ರೋರವಧಾರ್ಯ ಯೋಽಸೌ**
**ಬಭೂವ ಪಶ್ಚಾತ್ ಶಿಶುವೇಷಧಾರೀ ।**
**ಅಸೂತ ತಂ ಕಾ ನು ತದಾ ಮೃಗಾಕ್ಷೀ**
**ಪುರಾ ಪುರಾಣಾಕೃತಿಮಪ್ರಮೇಯಮ್ ॥ ೫೧ ॥**

**ಸ್ತುತಿಂ** = ಸ್ತೋತ್ರವನ್ನು, **ಸ್ವಪಿತ್ರೋಃ** = ತನ್ನ ತಂದೆತಾಯಿಯರ, **ಅವಧಾರ್ಯ** = ಕೇಳಿ, **ಯಃ ಅಸೌ** = ಯಾವ ಕೃಷ್ಣನು, **ಬಭೂವ** = ಆದನು, **ಪಶ್ಚಾತ್** = ಅನಂತರ, **ಅಸೂತ** = ಹಡೆದಳು, **ತಂ** = ಅವನನ್ನು, **ಕಾ ನು** = ಯಾವ, **ತದಾ** = ಆಗ, **ಮೃಗಾಕ್ಷೀ** = ಮಹಿಳೆಯು, **ಪುರಾ** = ಮೊದಲು, **ಪುರಾಣ** = ಅನಾದಿಯಾದ, **ಆಕೃತಿಂ** = ಸ್ವರೂಪವುಳ್ಳ, **ಅಪ್ರಮೇಯಂ** = ತಿಳಿಯಲಸಾಧ್ಯನಾದ.

ಈ ದಂಪತಿಗಳ ಸ್ತೋತ್ರವನ್ನು ಕೇಳಿದ ಮೇಲೆ ದೇವರು ತಾನಾಗಿಯೇ ಮಗುವಿನ ರೂಪವನ್ನು ತಾಳಿದನು. ಆದ್ದರಿಂದ ಈ ದಂಪತಿಗಳಿಂದಾಗಿ ಮಗುವಾದದ್ದು ಅಲ್ಲ ಎಂದು ತಿಳಿಯುತ್ತದೆ. ಸ್ತುತಿಸುವಾಗ ಇರುವ ರೂಪವನ್ನೇ ಇವರು ಹಡೆದರು ಎನ್ನೋಣ ಎಂದರೆ ಆ ಆಕೃತಿ ಅನಾದಿಯಾದದ್ದು. ಆದ್ದರಿಂದ ಉತ್ಪತ್ತಿಯೇ ಕೂಡುವುದಿಲ್ಲ.

**ಯದೀಹ ಜಾತೋ ವಸುದೇವವೀರ್ಯಾತ್**
**ತದಾ ಕುತಸ್ತಸ್ಯ ವಿಭೂಷಣಾನಿ ।**
**ವರಾಂಬರಂ ಕೌಸ್ತುಭರತ್ನಮುದ್ಯತ್-**
**ಸುದರ್ಶನಂ ಶಂಖಗದಾದಿಜಾತಮ್ ॥ ೫೨ ॥**

**ಯದಿ** = ಒಂದು ವೇಳೆ, **ಇಹ** = ಇಲ್ಲಿ, **ಜಾತಃ** = ಹುಟ್ಟಿದನು, **ವಸುದೇವವೀರ್ಯಾತ್** = ವಸುದೇವನ ಧಾತುವಿನಿಂದ, **ತದಾ** = ಆಗ, **ಕುತಃ** = ಎಲ್ಲಿಂದ, **ತಸ್ಯ** = ಅವನಿಗೆ, **ವಿಭೂಷಣಾನಿ** = ಆಭರಣಗಳು, **ವರಾಂಬರಂ** = ಶ್ರೇಷ್ಠ ಬಟ್ಟೆಯು, **ಕೌಸ್ತುಭರತ್ನಂ** = ಕೌಸ್ತುಭರತ್ನವು, **ಉದ್ಯತ್** = ಶೋಭಿಸುವ, **ಸುದರ್ಶನಂ** = ಚಕ್ರವು, **ಶಂಖ** = ಶಂಖವು, **ಗದಾ** = ಗದೆಯು, **ಆದಿ** = ಮೊದಲಾದವುಗಳ, **ಜಾತಂ** = ಸಮೂಹವು.

ದೇವರ ಆಕೃತಿ ಅನಾದಿಯಾದರೂ ಅದನ್ನು ಹಡೆಯಬಹುದು ಎಂದು ಹೇಳುವ ಮೂರ್ಖರಿಗೆ ಉತ್ತರ ಈ ಶ್ಲೋಕದಲ್ಲಿ – ವಸುದೇವನ ದೇಹದ ಧಾತುವಿನಿಂದ ದೇವರು ಹುಟ್ಟಿದ್ದೇ ಆದರೆ, ದೇವರ ಮೈಯ್ಯಲ್ಲಿರುವ ಆಭರಣಗಳು, ಆಯುಧಗಳು ಇವುಗಳನ್ನು ಯಾರು ಹಡೆದರು? ಸುವರ್ಣಾದಿಗಳು ಮಾನವನ ದೇಹದ ಧಾತುವಿನ ವಿಕಾರವಾದದ್ದು ಎಲ್ಲಿಯೂ ಕಂಡಿಲ್ಲ ತಾನೇ? ಜ್ಞಾನಾನಂದಮಯದೇಹ ಧಾತುವಿನ ವಿಕಾರ ಎಂದು

ಹೇಳುವುದಾದರೆ ಆಭರಣಗಳನ್ನೂ ಹಾಗೆಯೇ ಒಪ್ಪಿಕೊಳ್ಳಬೇಕು. ಆಭರಣಗಳನ್ನು ಹಾಗೆ ಒಪ್ಪದಿದ್ದರೆ ದೇವರ ದೇಹವನ್ನೂ ಒಪ್ಪಬಾರದು. ಅರ್ಧಜರತೀಯ ಸಲ್ಲದು.

**ಅಹೋ ಪಿಶಾಚಾ ಅಪಿ ದೇಹಿದೇಹೇ**
**ಗತಾಗತಂ ಶಕ್ತಿಯುತಾ ಲಭಂತೇ ।**
**ಅನಂತಶಕ್ತೇಃ ಪರಮಸ್ಯ ನ ಸ್ಯಾತ್**
**ಕುತೋ ಬಹಿರ್ನಿರ್ಗಮ ಏವ ತರ್ಹಿ ॥ ೫೩ ॥**

**ಅಹೋ** = ಆಶ್ಚರ್ಯ, **ಪಿಶಾಚಾ ಅಪಿ** = ಪಿಶಾಚಿಗಳು ಕೂಡಾ, **ದೇಹಿ** = ಜೀವರ, **ದೇಹೇ** = ದೇಹದಲ್ಲಿ, **ಗತಾಗತಂ** = ಗಮನಾಗಮನವನ್ನು, **ಶಕ್ತಿಯುತಾಃ** = ಶಕ್ತಿಯುಳ್ಳವುಗಳಾಗಿ, **ಲಭಂತೇ** = ಹೊಂದುತ್ತವೆ, **ಅನಂತಶಕ್ತೇಃ** = ಬಹಳ ಶಕ್ತಿಯುಳ್ಳ, **ಪರಮಸ್ಯ** = ದೇವರಿಗೆ, **ನ ಸ್ಯಾತ್** = ಆಗುವುದಿಲ್ಲ, **ಕುತಃ** = ಯಾಕೆ? **ಬಹಿಃ** = ಹೊರಗೆ, **ನಿರ್ಗಮ ಏವ** = ಬರುವಿಕೆಯೇ, **ತರ್ಹಿ** = ಆ ಪಕ್ಷದಲ್ಲಿ.

ಲೋಕದಲ್ಲಿ ಕೆಲವರಿಗೆ ಪಿಶಾಚಿಯ ಆವೇಶ ಆಗುವುದಿದೆ. ಅನಂತರ ಮಂತ್ರಾದಿಗಳಿಂದ ಅವುಗಳ ಹೊರಹೋಗುವಿಕೆಯೂ ಆಗುತ್ತದೆ. ಅಲ್ಪಶಕ್ತಿಯುಳ್ಳ ಪಿಶಾಚಾದಿಗಳ ಗಮನಾಗಮನವು ದೇಹದಲ್ಲಿ ಆಗುತ್ತಿರುತ್ತೆ. ಅನಂತಶಕ್ತಿಯುಳ್ಳ ದೇವರಿಗೆ ಅದನ್ನು ಒಪ್ಪದಿರುವುದು ಮೂರ್ಖತನದ ಪರಮಾವಧಿ. ಪಿಶಾಚಾದಿಗಳ ಗಮನಾಗಮನವನ್ನು ಗರ್ಭವಾಸ, ಉತ್ಪತ್ತಿ ಎಂದು ಹೇಳುವುದಿಲ್ಲ ತಾನೇ? ಹಾಗಾದರೆ ದೇವರಿಗೂ ಗರ್ಭವಾಸ, ಉತ್ಪತ್ತಿಯನ್ನೂ ಹೇಳಬಾರದು.

**ಯದಾ ನೃಸಿಂಹಾಕೃತಿರಾವಿರಾಸೀತ್**
**ಪದಾಹತಸ್ತಂಭವರಾದ್ಧಿ ಪೂರ್ವಮ್ ।**
**ತದಾ ನು ಕಾ ಸ್ತ್ರೀ ಸುಷುವೇ ಮುಕುಂದಂ**
**ಸ ಕಸ್ಯ ವೀರ್ಯಾದಜನಿಷ್ಟ ಕಾಯಃ ॥೫೪॥**

**ಯದಾ** = ಯಾವಾಗ, **ನೃಸಿಂಹಾಕೃತಿಃ** = ನರಸಿಂಹರೂಪವು, **ಆವಿರಾಸೀತ್** = ಕಾಣಿಸಿಕೊಂಡಿತು, **ಪದ** = ಕಾಲಿನಿಂದ, **ಆಹತ** = ಹೊಡೆಯಲ್ಪಟ್ಟ, **ಸ್ತಂಭವರಾತ್** = ಶ್ರೇಷ್ಠಕಂಬದಿಂದ, **ಪೂರ್ವಂ** = ಮೊದಲು, **ತದಾ ನು** = ಆಗ, **ಕಾ** = ಯಾವ, **ಸ್ತ್ರೀ** = ಮಹಿಳೆಯು, **ಸುಷುವೇ** = ಹಡೆದಳು, **ಮುಕುಂದಂ** = ದೇವರನ್ನು, **ಸಃ** = ಆ, **ಕಸ್ಯ** = ಯಾರ, **ವೀರ್ಯಾತ್** = ಧಾತುವಿನಿಂದ, **ಅಜನಿಷ್ಟ** = ಹುಟ್ಟಿತು, **ಕಾಯಃ** = ದೇಹವು.

ದೇವರಿಗೆ ತಂದೆತಾಯಿ ಇಲ್ಲ. ಉತ್ಪತ್ತಿಯು ಇಲ್ಲ. ಬಹಿರಾಗಮ ಮಾತ್ರ ಎಂಬ ವಿಷಯದಲ್ಲಿ ನರಸಿಂಹಾವತಾರವೇ ಒಳ್ಳೆಯ ಉದಾಹರಣೆ. ಹಿರಣ್ಯಕಶಿಪುವಿನ ಪಾದದ ಸಂಯೋಗ ಕಂಬಕ್ಕೆ ಆದಾಗ ನರಸಿಂಹನು ಕಂಬದಿಂದ ಹೊರಬಂದನು. ಆಗ ಯಾರೂ ಕೂಡಾ ಕಂಬವು ನರಸಿಂಹನ ತಾಯಿ ಅಥವಾ ತಂದೆ ಎಂದು ಹೇಳಲಿಲ್ಲ. ಈ ನರಸಿಂಹ ರೂಪವು ಸಿಂಹದ ವೀರ್ಯದಿಂದಲೂ ಹುಟ್ಟಿದ್ದಲ್ಲ, ಮಾನವವೀರ್ಯದಿಂದಲೂ ಅಲ್ಲ. ಸಿಂಹದ ವೀರ್ಯದಿಂದ ಹುಟ್ಟಿದ್ದರೆ ಪೂರ್ತಿ ಸಿಂಹವೇ ಆಗಬೇಕಿತ್ತು. ಮಾನವ ವೀರ್ಯದಿಂದ ಹುಟ್ಟಿದ್ದರೆ ಪೂರ್ಣ ಮಾನವನೇ ಆಗಬೇಕಿತ್ತು. ಈ ರೂಪ ಮಾನವನೂ ಅಲ್ಲ, ಪ್ರಾಣಿಯೂ ಅಲ್ಲ. ಆದ್ದರಿಂದ ಯಾರೂ ಹಡೆಯಲಿಲ್ಲ. ಕೇವಲ ಕಂಬದಿಂದ ಹೊರಬಂದನು. ಹಾಗೆಯೇ ದೇವಕಿಯ ದೇಹದಿಂದಲೂ ಹೊರಬಂದನು.

ತಥೈವ ಮಾಯಾ ಹರಿಣೋಪದಿಷ್ಟಾ
ಬಭೂವ ನಂದಸ್ಯ ಕಲತ್ರರತ್ನೇ ।
ಹರಿಸ್ತುಗಿತ್ಯಾದಿವಿಮೋಹರಾಶೇಃ
ಭವಿಷ್ಯತೋಽಸ್ಯಾಮಿವ ಮೂಲಭೂತಾ ॥ ೫೫ ॥

**ತಥಾ ಏವ** = ಹಾಗೆಯೇ, **ಮಾಯಾ** = ಲಕ್ಷ್ಮಿಯು, **ಹರಿಣಾ** = ದೇವರಿಂದ, **ಉಪದಿಷ್ಟಾ** = ಆಜ್ಞಪ್ತಳಾಗಿ, **ಬಭೂವ** = ಅವತರಿಸಿದಳು, **ನಂದಸ್ಯ** = ನಂದಗೋಪನ, **ಕಲತ್ರರತ್ನೇ** = ಶ್ರೇಷ್ಠಪತ್ನಿಯಲ್ಲಿ, **ಹರಿಃ** = ದೇವರು, **ತುಕ್** = ಮಗನು, **ಇತ್ಯಾದಿ** = ಇವೇ ಮೊದಲಾದ, **ವಿಮೋಹ** = ಮೋಹಗಳ, **ರಾಶೇಃ** = ರಾಶಿಗೆ, **ಭವಿಷ್ಯತಃ** = ಮುಂದೆ ಉಂಟಾಗುವ, **ಅಸ್ಯಾಂ** = ಇವಳಲ್ಲಿ, **ಇವ** = ಅಂತೆ, **ಮೂಲಭೂತಾ** = ಮೊದಲಿನ ಕಾರಣಳಾಗಿ.

ಇದೇ ಸಮಯದಲ್ಲಿ ದೇವರ ಪತ್ನಿಯಾದ ಮಾಯಾ ದುರ್ಗಾರೂಪದಿಂದ ನಂದ-ಗೋಪನ ಪತ್ನಿಯಲ್ಲಿ ಅವತರಿಸಿದಳು. ಅವತರಿಸಲು ಕಾರಣ ದೇವರ ಆಜ್ಞೆ. ಆಜ್ಞೆಯ ಉದ್ದೇಶ ಈ ರೀತಿ ಇದೆ – ನಂದಗೋಪಾದಿಗಳು ದೇವರನ್ನು ಮಗುವಿನಂತೆ ನೋಡಿ-ಕೊಳ್ಳಬೇಕಾದರೆ ಅವರಿಗೆ ದೇವರೆಂಬ ಭಾವನೆ ಇರಕೂಡದು. ಈ ಭಾವನೆ ಬಾರದಂತೆ ಮಾಡುವ ಶಕ್ತಿಯು ಮಾಯಾಳಿಗೆ ದೇವರ ದಯೆಯಿಂದ ಇದೆ ಎಂದು.

ಯದೀಹ ವಾಸೋ ಮಮ ತರ್ಹಿ ಕಂಸಃ
ಸುಹೃದ್ವಧಕ್ಲೇಶವಿದೂರ ಏವ ।

**ಯಮಾತಿಥಿಃ ಸ್ಯಾದಿತಿ ವೀಕ್ಷ್ಯ ಕೃಷ್ಣಃ**
**ತತೋ ವ್ರಜಂ ಪ್ರತ್ಯಗಮತ್ ಸುಧೀಮಾನ್ ॥೫೬॥**

**ಯದಿ** = ಒಂದು ವೇಳೆ, **ಇಹ** = ಇಲ್ಲಿ, **ವಾಸಃ** = ವಾಸವು, **ಮಮ** = ನನಗೆ, **ತರ್ಹಿ** = ಆಗ, **ಕಂಸಃ** = ಕಂಸನು, **ಸುಹೃತ್** = ಮಿತ್ರರ, **ವಧ** = ನಾಶದ, **ಕ್ಲೇಶ** = ದುಃಖದಿಂದ, **ವಿದೂರ ಏವ** - ರಹಿತನಾಗಿಯೇ, **ಯಮ** = ಯಮನಿಗೆ, **ಅತಿಥಿಃ** = ಅತಿಥಿಯು, **ಸ್ಯಾತ್** = ಆಗುತ್ತಾನೆ, **ಇತಿ** = ಎಂದು, **ವೀಕ್ಷ್ಯ** = ಆಲೋಚಿಸಿ, **ಕೃಷ್ಣಃ** = ಕೃಷ್ಣನು, **ತತಃ** = ಆದ್ದರಿಂದ, **ವ್ರಜಂ** = ಗೋಕುಲವನ್ನು , **ಪ್ರತ್ಯಗಮತ್** = ಹೊರಟನು, **ಸುಧೀಮಾನ್** = ತುಂಬಾ ಬುದ್ಧಿವಂತನು.

ಅವತರಿಸಿದ ನಂತರ ದೇವರು ಕೂಡಲೇ ನಂದಗೋಕುಲವನ್ನು ಯಾಕೆ ಪ್ರವೇಶಿಸಿದ ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ಉತ್ತರ ಇದೆ – ಕೃಷ್ಣ ಇಲ್ಲೇ ಉಳಿದಿದ್ದರೆ ಕಂಸನು ಕೃಷ್ಣನನ್ನು ಕೊಲ್ಲಲು ಬರುವನು. ಬಂದ ಆತನನ್ನು ಸಂಹರಿಸಬೇಕಾಗುತ್ತದೆ. ಆಗ ಆತ ಅನಾಯಾಸ- ದಿಂದ ಸಾಯುವ ಪ್ರಸಂಗ ಬರುತ್ತದೆ. ಆದರೆ, ಆತ ಹಾಗೆ ಸಾಯಬಾರದು. ನರಳಿ ಸಾಯಬೇಕು. ತನ್ನ ಬಂಧುಗಳಾದ ಪೂತನಾದಿಗಳನ್ನು ಕಳಕೊಂಡ ದುಃಖದಿಂದ ತುಂಬಾ ಬಳಲಬೇಕು. ಆದಕ್ಕಾಗಿ ಕೃಷ್ಣ ನಂದಗೋಕುಲಕ್ಕೆ ಹೋದನು. ಆಗ ಕಂಸನು ಕೃಷ್ಣನನ್ನು ಕೊಲ್ಲಲು ಒಬ್ಬೊಬ್ಬರನ್ನೇ ಕಳುಹಿಸುತ್ತಾನೆ. ಅವರನ್ನೆಲ್ಲಾ ಕೃಷ್ಣ ಕೊಲ್ಲುತ್ತಾನೆ. ಇದರಿಂದ ಕಂಸನಿಗೆ ಬಹಳ ದುಃಖವಾಗುತ್ತದೆ.

'ಅನಾಯಾಸೇನ ಮರಣಂ ವಿನಾ ದೈನ್ಯೇನ ಜೀವನಮ್' ಎಂಬ ಮಾತು ದುಷ್ಟರ ವಿಷಯದಲ್ಲಿ ಸಲ್ಲದು ಎಂಬ ಸಂದೇಶ ಇಲ್ಲಿ ಅಡಗಿದೆ.

**ನ ಕಂಸಭೀತ್ಯಾಽಭಿಯಯೌ ವ್ರಜಂ ಸಃ**
**ಸ್ವಸಂಶ್ರಿತಾನಾಮಭಯಸ್ಯ ಕರ್ತಾ ।**
**ಸ್ವವಲ್ಲಭಾಂ ನಂದಕಲತ್ರಜಾತಾಂ**
**ಮನೋರಮಾಮೀಕ್ಷಿತುಮೇವ ಸೋಽಗಾತ್ ॥ ೫೭ ॥**

ನ = ಅಲ್ಲ, **ಕಂಸಭೀತ್ಯಾ** = ಕಂಸನ ಭಯದಿಂದ, **ಅಭಿಯಯೌ** = ಹೊರಟನು, ವ್ರಜಂ = ಗೋಕುಲವನ್ನು , **ಸಃ** = ಕೃಷ್ಣನು, **ಸ್ವ** = ತನ್ನನ್ನು , **ಸಂಶ್ರಿತಾನಾಂ** = ನಂಬಿದವರಿಗೆ, **ಅಭಯಸ್ಯ** = ಅಭಯಕ್ಕೆ, **ಕರ್ತಾ** = ಕಾರಣನು, **ಸ್ವವಲ್ಲಭಾಂ** = ತನ್ನ ಪತ್ನಿಯನ್ನು , **ನಂದ** = ನಂದಗೋಪನ, **ಕಲತ್ರ** = ಪತ್ನಿಯಲ್ಲಿ, **ಜಾತಾಂ** = ಹುಟ್ಟಿದ, **ಮನೋರಮಾಂ**

= ಚಂದದ, **ಈಕ್ಷಿತುಮೇವ** = ನೋಡುವ ಸಲುವಾಗಿಯೇ, **ಸಃ** = ಕೃಷ್ಣನು, **ಅಗಾತ್**= ಹೋದನು.

ಕೃಷ್ಣನು ಭಯದಿಂದ ಹೊರಟನು ಎಂಬ ಕುಹಕಕ್ಕೆ ರಾಜರ ಉತ್ತರ – ತನ್ನನ್ನು ನಂಬಿದ ಜನರ ಭಯವನ್ನು ಪರಿಹರಿಸುವ ಕೃಷ್ಣನಿಗೆ ಯಾರ ಭಯ? ಹಾಗಾದರೆ ಯಾಕೆ ಹೋದ? ಅಂದರೆ ಚಂದದ ತನ್ನ ಪತ್ನಿ ಲಕ್ಷ್ಮಿಯು ಅಲ್ಲಿ ಅವತರಿಸಿದ್ದಾಳೆ. ಅವಳ ಸೌಂದರ್ಯಕ್ಕೆ ಮಾರು ಹೋದ ಕೃಷ್ಣ ಅವಳನ್ನು ನೋಡಲು ಅಲ್ಲಿಗೆ ಹೋದ – ಎಂದು.

**ಕವಾಟಮುದ್ಘಾಟ್ಯ ಗೃಹಾಣಿ ವರ್ತ್ಮ**
**ದದುಃ ಕಿಲಾಸ್ಮೈ ಮಮ ಬುದ್ಧಿರಿತ್ಥಮ್ ।**
**ವನಸ್ಪತೀಶೋ ಬಹಿರಭ್ರಸಂಸ್ಥ-**
**ಸ್ತದೀಕ್ಷಣಾರ್ಥೀ ಸ್ವಯಮುದ್ಬಿಭೇದ ॥ ೫೮ ॥**

**ಕವಾಟಂ** = ಬಾಗಿಲನ್ನು, **ಉದ್ಘಾಟ್ಯ** = ತೆರೆದು, **ಗೃಹಾಣಿ** = ಮನೆಗಳು, **ವರ್ತ್ಮ** = ದಾರಿಯನ್ನು, **ದದುಃ ಕಿಲ** = ಕೊಟ್ಟವಷ್ಟೇ, **ಅಸ್ಮೈ** = ಕೃಷ್ಣನಿಗೆ, **ಮಮ** = ನನಗೆ, **ಬುದ್ಧಿಃ** = ಆಲೋಚನೆಯು, **ಇತ್ಥಂ** = ಈ ರೀತಿ, **ವನಸ್ಪತಿ** = ಮರಗಳಿಗೆ, **ಈಶಃ** = ಒಡೆಯನಾದ ಚಂದ್ರನು, **ಬಹಿಃ** = ಹೊರಗೆ, **ಅಭ್ರ** = ಆಕಾಶದಲ್ಲಿ, **ಸಂಸ್ಥಃ** = ಇರು-ವವನಾಗಿ, **ತತ್** = ಕೃಷ್ಣನ, **ಈಕ್ಷಣ** = ದರ್ಶನದ, **ಅರ್ಥೀ** = ಅಪೇಕ್ಷೆ ಉಳ್ಳವನಾಗಿ, **ಸ್ವಯಂ** = ತಾನು, **ಉದ್ಬಿಭೇದ** = ತೆರೆದನು.

ದೇವರು ಹೊರಟಾಗ ಸೆರೆಮನೆಗಳ ಬೀಗಗಳು ತಾವಾಗಿಯೇ ತೆರೆದುಕೊಂಡವು. ದೇವರಿಗೆ ದಾರಿ ಮಾಡಿಕೊಟ್ಟವು. ರಾಜರು ಇದನ್ನು ಈ ರೀತಿ ಉತ್ಪ್ರೇಕ್ಷಿಸುತ್ತಾರೆ – ಹೊರಗೆ ಆಕಾಶದಲ್ಲಿ ಚಂದ್ರ ಇದ್ದ. ಆತನಿಗೆ ತನ್ನ ವಂಶದಲ್ಲಿ ಅವತರಿಸಿದ ದೇವರನ್ನು ನೋಡುವ ಆಸೆಯಾಯಿತು. ಅದಕ್ಕಾಗಿ ಆತ ಈ ಮರದ ಬಾಗಿಲುಗಳನ್ನು ತಾನೇ ಒಡೆದ. ಚಂದ್ರನು ಮರಗಿಡಗಳಿಗೆ ಅಧಿಪತಿ. ಆದ್ದರಿಂದ ಆತನಿಗೆ ಈ ಸಾಮರ್ಥ್ಯ ಇದೆ.

**ಕರೇ ನಿಧಾಯಾದ್ಭುತಬಾಲಮೇನ-**
**ಮಭೂದ್ಬಹಿರ್ನಿಸ್ಸರತೋಽಸ್ಯ ಶೌರೇಃ ।**
**ನ ತದ್‌ಗೃಹದ್ವಾರಗಣೋಽಂತರಾಯಃ**
**ಕರಸ್ಥದೇವಸ್ಯ ಕುತೋಽಂತರಾಯಃ ॥ ೫೯ ॥**

**ಕರೇ** = ಕೈಯ್ಯಲ್ಲಿ, **ನಿಧಾಯ** = ಇಟ್ಟು, **ಅದ್ಭುತಬಾಲಂ** = ಆಶ್ಚರ್ಯದ ಬಾಲಕನಾದ, **ಏನಮ್** = ಕೃಷ್ಣನನ್ನು, **ಅಭೂತ್** = ಆಯಿತು, **ಬಹಿಃ** = ಹೊರಗೆ, **ನಿಸ್ಸರತಃ** = ಹೊರಟಿರುವ, **ಅಸ್ಯ** = ಈ, **ಶೌರೇಃ** = ವಸುದೇವನಿಗೆ, **ನ** = ಇಲ್ಲ, **ತತ್** = ಆ, **ಗೃಹ** = ಮನೆಯ, **ದ್ವಾರ** = ಬಾಗಿಲುಗಳ, **ಗಣಃ** = ಸಮೂಹವು, **ಅಂತರಾಯಃ** = ವಿಘ್ನವು, **ಕರಸ್ಥದೇವಸ್ಯ** = ಕೈಯ್ಯಲ್ಲಿ ದೇವರು ಉಳ್ಳವನಿಗೆ, **ಕುತಃ** = ಹೇಗೆ, **ಅಂತರಾಯಃ** = ವಿಘ್ನವು.

ದೇವರನ್ನು ಕೈಯ್ಯಲ್ಲಿ ಹಿಡಿದುಕೊಂಡು ಹೊರಟಿರುವ ವಸುದೇವನಿಗೆ ಯಾವ ಬಾಗಿಲುಗಳೂ ಅಡ್ಡಿಯಾಗಲಿಲ್ಲ. ದೇವರನ್ನು ಸದಾ ತನ್ನ ಜೊತೆಯಲ್ಲಿಯೇ ಇಟ್ಟುಕೊಳ್ಳು-ವವನಿಗೆ ಯಾವ ಕೆಲಸದಲ್ಲಿಯೂ ವಿಘ್ನಗಳು ಬರುವುದಿಲ್ಲ.

'ಶುಕ್ಲಾಂಬರಧರಂ ವಿಷ್ಣುಂ ... ಸರ್ವ ವಿಘ್ನೋಪಶಾಂತಯೇ' ಎಂಬ ಪುರಾಣದ ವಾಕ್ಯವು ವಿಘ್ನಪರಿಹರಿಸುವವ ವಿಷ್ಣುವೇ ಎಂದು ಹೇಳಿದೆ.

**ಅಗಣ್ಯಗೋಗೋಕುಲಗೋಪನಾಶ-**
**ಮಭೀಪ್ಸತಾ ಸ್ವೇನ ಕರಿಷ್ಯಮಾಣಮ್ ।**
**ಅಘಂ ಹಿ ಪೂರ್ವಂ ಪರಿಹರ್ತುಮೀಷತ್**
**ವವರ್ಷ ತಸ್ಮಿನ್ ಜಲದೋಽಧಿಮಾರ್ಗಮ್ ॥೬೦॥**

**ಅಗಣ್ಯ** = ಲೆಕ್ಕ ಇಲ್ಲದ, **ಗೋ** = ಆಕಳುಗಳು, **ಗೋಕುಲ** = ಗೋಕುಲವು, **ಗೋಪ** = ಗೊಲ್ಲರು ಇವರ, **ನಾಶಂ** = ನಾಶವನ್ನು, **ಅಭೀಪ್ಸತಾ** = ಇಚ್ಛಿಸುವ, **ಸ್ವೇನ** = ತನ್ನಿಂದ, **ಕರಿಷ್ಯಮಾಣಂ** = ಮಾಡುವ, **ಅಘಂ** = ಪಾಪವನ್ನು, **ಪೂರ್ವಂ** = ಮೊದಲು, **ಪರಿಹರ್ತುಂ** = ಪರಿಹರಿಸಲು, **ಈಷತ್** = ಸ್ವಲ್ಪ, **ವವರ್ಷ** = ಮಳೆಗರೆದನು, **ತಸ್ಮಿನ್** = ಕೃಷ್ಣನಲ್ಲಿ, **ಜಲದಃ** = ಮೋಡವು, **ಅಧಿಮಾರ್ಗಂ** = ದಾರಿಯಲ್ಲಿ.

ದಾರಿಯಲ್ಲಿ ಹೋಗುವಾಗ ತುಂತುರು ಮಳೆ ಬರುತ್ತಿತ್ತು. ಕಾರಣ, ಈ ರೀತಿ ಉತ್ಪ್ರೇಕ್ಷೆ – ಮುಂದೆ ಒಂದು ದಿನ ಮಳೆಯು ಕೃಷ್ಣನಿಗೆ ಪ್ರಿಯವಾದ ಗೋಕುಲಾದಿಗಳನ್ನು ನಾಶಮಾಡುವ ಪ್ರಸಂಗ ಇದೆ. ಆ ಪಾಪದ ಪರಿಹಾರಕ್ಕಾಗಿ ಈಗ ತುಂತುರು ಮಳೆಯು ದೇವರಿಗೆ ಪನ್ನೀರಿನ ಸೇವೆಯನ್ನು ಮಾಡುತ್ತದೋ ಎನ್ನುವಂತೆ ಇದೆ ಎಂದು.

ಮುಂದೆ ನಮ್ಮಿಂದ ಅನ್ಯಾಯ ನಿಶ್ಚಯವಾಗಿಯೂ ಆಗುತ್ತದೆ ಎಂದು ಗೊತ್ತಿದ್ದರೆ ಅಂತಹ ಸಂದರ್ಭದಲ್ಲಿ ಮೊದಲೇ ಕ್ಷಮಾಪಣೆಯನ್ನು ದೇವರಲ್ಲಿ ಬೇಡಬೇಕು. ಉದಾಹರಣೆಗೆ 'ಸಮುದ್ರವಸನೇ ದೇವಿ ... ಪಾದಸ್ಪರ್ಶಂ ಕ್ಷಮಸ್ವ ಮೇ' ನಾವು

ಭೂಮಿಯನ್ನು ಮೆಟ್ಟುವ ಮೂಲಕ ಅನ್ಯಾಯ ಮಾಡುತ್ತೇವೆಂದು ನಿಶ್ಚಯ ಇದೆ. ಆದ್ದರಿಂದ ನಿದ್ದೆಯಿಂದ ಎಚ್ಚೆತ್ತು ಬೆಳಿಗ್ಗೆ ಮೊದಲು ಹೇಳುವ ಮಂತ್ರವೇ ಇದು. 'ನಾನು ನಿನ್ನನ್ನು ಮೆಟ್ಟುತ್ತೇನೆ. ನನ್ನ ತಪ್ಪನ್ನು ಕ್ಷಮಿಸು' ಎಂದು ಕ್ಷಮಾಪಣೆಯನ್ನು ಕೇಳುವ ಸಂದೇಶವು ಇಲ್ಲಿದೆ.

**ಯದೇಷ ದೇವೇಶಿತುರಗ್ರಜತ್ವಂ**
**ಬಭಾರ ರೋಹಿಣ್ಯುದಯಾದ್ರಿಚಂದ್ರಃ ।**
**ಅಘಸ್ಯ ತಸ್ಯ ಪ್ರಶಮೇಚ್ಛಯೇವ**
**ಪಥಿ ವ್ರಜಂತಂ ಫಣಿಪಃ ಸಿಷೇವೇ ॥೬೧॥**

**ಯತ್** = ಯಾವ ಕಾರಣದಿಂದ, **ಏಷಃ** = ಈ ಶೇಷನು, **ದೇವೇಶಿತುಃ** = ದೇವರ, **ಅಗ್ರಜತ್ವಂ** = ಅಣ್ಣನಾಗುವಿಕೆಯನ್ನು, **ಬಭಾರ** = ಹೊಂದಿದನು, **ರೋಹಿಣಿ** = ರೋಹಿಣಿಯ, **ಉದಯಾದ್ರಿ** = ಉದಯಪರ್ವತದ, **ಚಂದ್ರಃ** = ಚಂದ್ರನಾಗಿ, **ಅಘಸ್ಯ** = ಪಾಪದ, **ತಸ್ಯ** = ಆ, **ಪ್ರಶಮೇಚ್ಛಯಾ** = ಪರಿಹರಿಸುವ ಇಚ್ಛೆಯಿಂದ, **ಇವ** = ಎಂಬಂತೆ, **ಪಥಿ** = ದಾರಿಯಲ್ಲಿ, **ವ್ರಜಂತಂ** = ಹೋಗುವ ದೇವರನ್ನು, **ಫಣಿಪಃ** = ಶೇಷನು, **ಸಿಷೇವೇ** = ಸೇವಿಸಿದನು.

ಶೇಷನು ಕೊಡೆಯ ರೂಪದಲ್ಲಿ ಕೃಷ್ಣನ ಸೇವೆ ಮಾಡಿದನು. ಈತನದ್ದೂ ಒಂದು ಅಪರಾಧ ಇದೆ. ತಾನು ರೋಹಿಣಿಯಲ್ಲಿ ಅವತರಿಸಿ ಕೃಷ್ಣನಿಗೆ ಅಣ್ಣನ ಸ್ಥಾನದಲ್ಲಿ ನಿಂತನು. ಇದರಿಂದ ಕೃಷ್ಣನು ಬಲರಾಮನಿಗೆ ನಮಸ್ಕಾರಾದಿಗಳನ್ನು ಲೋಕದೃಷ್ಟ್ಯನುಸಾರ ಮಾಡ-ಬೇಕಾಗುತ್ತದೆ. ಇದರಿಂದ ಬಲರಾಮನಿಗೆ ದೋಷ ಬರುತ್ತದೆ. ಅದರ ಪರಿಹಾರಕ್ಕಾಗಿ ಈ ರೀತಿಯ ಸೇವೆ.

ಉದಯಾದ್ರಿಚಂದ್ರಃ ಎಂದು ಬಲರಾಮನನ್ನು ಹೇಳಿದ್ದರ ಅಭಿಪ್ರಾಯ ಈ ರೀತಿ ಇದೆ – ಚಂದ್ರ ಇನ್ನೊಬ್ಬರಿಗೆ ಆನಂದದಾಯಕನಾದರೂ ತಾನು ಗ್ರಹಣದ ಕಾಲದಲ್ಲಿ ತಪಿಸುತ್ತಾನೆ. ಹಾಗೆಯೇ, ಬಲರಾಮನಿಂದ ನಮಗೆ ಕ್ಷೇಮವಿದ್ದರೂ ಸ್ವಯಂ ತಾನು ತುಂಬಾ ತಾಪಿಸಿ ಜನ್ಮಾಂತರದ ಹೆಚ್ಚಿನ ಪುಣ್ಯವನ್ನು ಕಳೆದುಕೊಳ್ಳುತ್ತಾನೆ.

**ವಿರಿಂಚವೈರಿಂಚಿಮುಖಾಮರಾಲಿಃ**
**ಪ್ರಬೋಧಯಂತೀವ ತದಾ ನನಾಮ ।**

**ಪುರಾಣಪುಂಸಃ ಪುರುಷೋತ್ತಮಸ್ಯ**
**ನಮಸ್ಕೃತಿಂ ಲೋಕವಿಡಂಬಕಸ್ಯ ॥ ೬೨ ॥**

**ವಿರಿಂಚಿ** = ಬ್ರಹ್ಮನು, **ವೈರಿಂಚಿ** = ರುದ್ರನು, **ಮುಖ** = ಮೊದಲಾದ, **ಅಮರ** = ದೇವತೆಗಳ, **ಆಲಿಃ** = ಸಮೂಹವು, **ಪ್ರಬೋಧಯಂತೀವ** = ತಿಳಿಸುತ್ತಾರೋ ಎಂಬಂತೆ, **ತದಾ** = ಆಗ, **ನನಾಮ** = ನಮಸ್ಕರಿಸಿತು. **ಪುರಾಣಪುಂಸಃ** = ಅನಾದಿಪುರುಷನಾದ, **ಪುರುಷೋತ್ತಮಸ್ಯ** = ಸರ್ವೋತ್ತಮನಾದ, **ನಮಸ್ಕೃತಿಂ** = ನಮಸ್ಕಾರವನ್ನು, **ಲೋಕ-ವಿಡಂಬಕಸ್ಯ**= ಲೋಕವನ್ನು ಅನುಕರಿಸುವ ಕೃಷ್ಣನಿಗೆ.

ದಾರಿಯಲ್ಲಿ ಬ್ರಹ್ಮಾದಿಗಳು ದೇವರನ್ನು ನಮಸ್ಕರಿಸುತ್ತಾ ಜೊತೆಯಲ್ಲಿ ಸಾಗಿದರು. ಯಾಕೆಂದರೆ, ಈ ಕೃಷ್ಣ ಇನ್ನು ಮುಂದೆ ಎಲ್ಲರಿಗೂ ಹಿರಿಯರಿಗೆ ನಮಸ್ಕರಿಸಬೇಕು. ಆದರೆ ನಮಸ್ಕಾರ ಹೇಗೆ ಮಾಡಬೇಕೆಂದು ಆತನಿಗೆ ಗೊತ್ತಿಲ್ಲ. ಕಾರಣ, ಆತನೇ ಎಲ್ಲರಿಗಿಂತ ಹಿರಿಯ. ಪುರಾಣಪುರುಷ. ಆದ್ದರಿಂದ ನಮಸ್ಕಾರವನ್ನು ಕಲಿಸುವ ಸಲುವಾಗಿಯೋ ಎಂಬಂತೆ.

**ಪುರಾ ಸ್ವಭರ್ತುಃ ಪ್ರತಿಬಂಧಕರ್ತುಃ**
**ವಿಶೋಷಣಂ ಬಂಧನಮರ್ಕಕನ್ಯಾ ।**
**ವಿಚಿಂತ್ಯ ಭೀತೇವ ದದೌ ಮುರಾರೇಃ**
**ಪ್ರವಾಹಮಾರಾತ್ ಪರಿಹೃತ್ಯ ಮಾರ್ಗಮ್ ॥೬೩॥**

**ಪುರಾ** = ತ್ರೇತಾಯುಗದಲ್ಲಿ, **ಸ್ವಭರ್ತುಃ** = ತನ್ನ ಪತಿಯಾದ ಸಮುದ್ರದ, **ಪ್ರತಿಬಂಧಕರ್ತುಃ** = ವಿಘ್ನವನ್ನು ಮಾಡುವ, **ವಿಶೋಷಣಂ** = ಒಣಗಿಸುವಿಕೆಯನ್ನು, **ಬಂಧನಂ** = ಕಟ್ಟುವಿಕೆಯನ್ನು, **ಅರ್ಕಕನ್ಯಾ** = ಸೂರ್ಯಪುತ್ರಿಯಾದ ಯಮುನೆಯು, **ವಿಚಿಂತ್ಯ** = ಆಲೋಚಿಸಿ, **ಭೀತಾ ಇವ** = ಹೆದರಿದವಳಂತೆ, **ದದೌ** = ಕೊಟ್ಟಳು, **ಮುರಾರೇಃ** = ಕೃಷ್ಣನಿಗೆ, **ಪ್ರವಾಹಂ** = ಪ್ರವಾಹವನ್ನು, **ಆರಾತ್** = ದೂರದಲ್ಲಿ, **ಪರಿಹೃತ್ಯ** = ಕಮ್ಮಿಮಾಡಿ, **ಮಾರ್ಗಂ** = ದಾರಿಯನ್ನು.

ಯಮುನೆಯಲ್ಲಿ ಪ್ರವಾಹವು ಬಹಳ ಇತ್ತು. ಆದರೂ ದಾರಿಯಾಯಿತು. ದಾಟಲು ಸುಲಭವಾಯಿತು. ಇವಳ ಪತಿಯಾದ ವರುಣನು ಶ್ರೀರಾಮನಿಗೆ ಲಂಕೆಗೆ ಹೋಗಲು ದಾರಿ ಕೊಡದ ಕಾರಣ ರಾಮನಿಂದ ಒಣಗಿಹೋದ. ಹಾಗೆಯೇ ಸೇತುವೆಯ ಮೂಲಕ ಬದ್ಧನೂ ಆದ. ಇದು ಇವಳಿಗೆ ನೆನಪಿತ್ತು. ಆದ್ದರಿಂದ ಆ ಗತಿಯೇ ತನಗೂ ಆದೀತು ಎಂಬ ಭಯದಿಂದ ಕೂಡಲೇ ತನ್ನ ಪ್ರವಾಹವನ್ನು ಕಡಿಮೆ ಮಾಡಿ ದಾರಿಕೊಟ್ಟಳು.

ದೇವರು ಒಬ್ಬ ಭಕ್ತನಿಗೆ ಕೊಟ್ಟ ಶಿಕ್ಷೆಯಿಂದ ಇತರ ಭಕ್ತರೂ ಪಾಠ ಕಲಿಯುತ್ತಾರೆ. ತಮಗೆ ದುಷ್ಟರಂತೆ ಪ್ರತ್ಯೇಕ ಶಿಕ್ಷೆ ಬೇಕಿಲ್ಲ. ಇದು ಸಜ್ಜನರ ಲಕ್ಷಣ.

**ಭವಪ್ರವಾಹೋऽಪಿ ತವೈವಮೇವೇ-**
**ತ್ಯುದೀರಯಂತೀವ ಯಮಸ್ವಸಾ ಸಾ ।**
**ಕರಸ್ಥಕೃಷ್ಣಾಯ ದಿದೇಶ ದೂರೇ**
**ಪ್ರವಾಹಮಾಧಾಯ ಪದಾರ್ಹಪದ್ಯಾಮ್ ॥ ೬೪ ॥**

**ಭವ** = ಸಂಸಾರವೆಂಬ, **ಪ್ರವಾಹೋऽಪಿ** = ಪ್ರವಾಹವು ಕೂಡಾ, **ತವ** = ನಿನಗೆ, **ಏವಮೇವ** = ಇಷ್ಟೇ, **ಇತಿ** = ಎಂದು, **ಉದೀರಯಂತೀವ** = ಹೇಳುವವಳಂತೆ, **ಯಮ** = ಯಮನಿಗೆ, **ಸ್ವಸಾ** = ತಂಗಿಯಾದ, **ಸಾ** = ಆ ಯಮುನೆಯು, **ಕರಸ್ಥಕೃಷ್ಣಾಯ** = ಕೈಯ್ಯಲ್ಲಿರುವ ಕೃಷ್ಣನಿಗೆ, **ದಿದೇಶ** = ಕೊಟ್ಟಳು, **ದೂರೇ** = ದೂರದಲ್ಲಿ, **ಪ್ರವಾಹಂ** = ಪ್ರವಾಹವನ್ನು, **ಆಧಾಯ** = ತಡೆದು, **ಪದ** = ನಡಿಗೆಗೆ, **ಅರ್ಹ** = ಯೋಗ್ಯವಾದ, **ಪದ್ಯಾಂ** = ದಾರಿಯನ್ನು.

ಹೇ ವಸುದೇವ! ಸಂಸಾರಪ್ರವಾಹವೂ ನಿನಗೆ ದಾಟಲು ಯೋಗ್ಯವಾಗುತ್ತದೆ. ಕಾರಣ, ನಿನ್ನ ಕೈಯ್ಯಲ್ಲಿ ದೇವರಿದ್ದಾನೆ. ಈ ಅಭಿಪ್ರಾಯದಿಂದಲೋ ಎಂಬಂತೆ ಯಮುನೆಯು ತನ್ನ ಪ್ರವಾಹವನ್ನು ಕಡಿಮೆ ಮಾಡಿದಳು. ವಸುದೇವನು ಕಾಲುಗಳಿಂದಲೇ, ಇನ್ನೊಬ್ಬರ ಅಪೇಕ್ಷೆಯಿಲ್ಲದೆಯೇ ದಾಟಿದನು. ದೇವರ ಭಕ್ತರಿಗೆ ಸಂಸಾರ ದಾಟುವುದು ಬಹಳ ಸುಲಭ ಎಂದು ಅಭಿಪ್ರಾಯ.

**ವಿಭೂಷಣೇಷು ಪ್ರತಿಬಿಂಬಿತಾಹಿಃ**
**ಪ್ರಹೃಷ್ಟಪಾಣಿದ್ವಯರೋಮಪತ್ರಃ ।**
**ಸ ಕೃಷ್ಣವಾಹೋ ವಿನತಾಂಗಜಾತಃ**
**ಪಿತಾ ಗರುತ್ಮಾನಿವ ವೇಗತೋऽಗಾತ್ ॥೬೫॥**

**ವಿಭೂಷಣೇಷು** = ಆಭರಣಗಳಲ್ಲಿ, **ಪ್ರತಿಬಿಂಬಿತ** = ಪ್ರತಿಫಲಿಸಲ್ಪಟ್ಟ, **ಅಹಿಃ** = ಶೇಷನುಳ್ಳ, **ಪ್ರಹೃಷ್ಟ** = ಸಂತೋಷದಿಂದ, **ಪಾಣಿದ್ವಯ** = ಎರಡೂ ಕೈಗಳ, **ರೋಮ** = ಎದ್ದಿರುವ ರೋಮಗಳೆಂಬ, **ಪತ್ರಃ** = ರೆಕ್ಕೆಗಳುಳ್ಳ, **ಸಃ** = ಆ, **ಕೃಷ್ಣವಾಹಃ** = ಕೃಷ್ಣನನ್ನು ಹೊತ್ತಿರುವ, **ವಿನತ** = ವಿನತೆಯ, **ಅಂಗ** = ಅವಯವದಿಂದ, **ಜಾತಃ** = ಹುಟ್ಟಿದ, **ವಿನತ** = ಬಗ್ಗಿದ, **ಅಂಗ** = ಅವಯವಗಳ, **ಜಾತಃ** = ಸಮೂಹವುಳ್ಳ, **ಪಿತಾ** =

ವಸುದೇವನು, **ಗರುತ್ಮಾನಿವ** = ಗರುಡನಂತೆ, **ವೇಗತಃ** = ವೇಗದಿಂದ, **ಅಗಾತ್** = ಹೊರಟನು.

ವಸುದೇವನು ಗರುಡನಂತೆ ದೇವರನ್ನು ಹೊತ್ತುಕೊಂಡು ಹೋಗುತ್ತಿದ್ದಾನೆ. ಗರುಡನು ಸರ್ಪಭೂಷಣನು. ಈತನ ಎಡಕೈಯ ಕಡಗವು ಅನಂತ ಎಂಬ ಸರ್ಪವು. ಯಜ್ಞೋಪವೀತವು ವಾಸುಕಿಯು. ಕಟಿಸೂತ್ರವು ತಕ್ಷಕನು. ಹಾರವು ಕಾರ್ಕೋಟಕವು ಇತ್ಯಾದಿ. ಎರಡು ರೆಕ್ಕೆಗಳಿಂದ ಕೂಡಿದವನು. ಕೃಷ್ಣನನ್ನು ಹೊರುವವನು. ವಿನತೆಯ ಅಂಗದಿಂದ (ಗರ್ಭದಿಂದ) ಜಾತನು. ಈ ಎಲ್ಲಾ ಸಾಮ್ಯ ಕೆಲವು ಶಬ್ದಗಳಿಂದ ಕೆಲವು ಅರ್ಥಗಳಿಂದ ವಸುದೇವನಿಗೂ ಇದೆ. ಹೇಗೆಂದರೆ – ವಸುದೇವನ ತಲೆಯ ಮೇಲೆ ಶೇಷನು ಹೆಡೆ ಅರಳಿಸಿದ್ದಾನಷ್ಟೆ. ಈ ಶೇಷನ ಪ್ರತಿಬಿಂಬವು ವಸುದೇವನು ಧರಿಸಿದ ಆಭರಣಗಳಲ್ಲಿ ಮೂಡಿದೆ. ಆಗ ವಸುದೇವನೂ ಸರ್ಪಭೂಷಣನಂತೆ ತೋರಿದನು. ದೇವರ ಸ್ಪರ್ಶದಿಂದ ಆತನು ರೋಮಾಂಚಗೊಂಡಿದ್ದಾನೆ. ಆ ರೋಮಗಳ ಸಾಲುಗಳೇ ರೆಕ್ಕೆಗಳಂತೆ ತೋರುತ್ತಿವೆ. ವಸುದೇವನು ಕೃಷ್ಣನನ್ನು ಹೊತ್ತದ್ದು ಸ್ಪಷ್ಟ. ವಸುದೇವನೂ ವಿನತಾಂಗಜಾತ. ಇಲ್ಲಿ ಶಬ್ದಸಾಮ್ಯ . ವಿನತವಾದ = ಬಗ್ಗಿದ, ಅಂಗ= ಅವಯವಗಳ, ಜಾತ = ಸಮೂಹ ಉಳ್ಳವನು. ಅಂದರೆ ವಿನೀತನಾಗಿದ್ದಾನೆ ಎಂದರ್ಥ.

**ಗರ್ಜದ್ವಾರ್ವಹದುಂದುಭಿಃ ಪರಿಪಠತ್ ಗಂಧರ್ವಬಂದಿಧ್ವನಿಃ**
**ಹಸ್ತಾಬ್ಜೇ ಧ್ವಜಚಿಹ್ನಿತೇ ಸ ನಿವಸನ್ ಸತ್‌ಪುಷ್ಪಕಶ್ರೀಮುಷಿ ।**
**ಸ್ವರ್ಮುಕ್ತಾಮಲಮಾಲ್ಯಚಾಮರಗಣಃ ಛತ್ರಾಯಿತಾಹೀಶ್ವರಃ**
**ಶಕ್ರಾದ್ಯೈಃ ಪರಿವಾರಿತಃ ಪಥಿ ಯಯೌ ರಾಜಾಧಿರಾಜಪ್ರಭಃ ॥ ೬೬ ॥**

**ಗರ್ಜತ್** = ಗುಡುಗುವ, **ವಾರ್ವಹ** = ಮೋಡಗಳೆಂಬ, **ದುಂದುಭಿಃ** = ವಾದ್ಯವುಳ್ಳ, **ಪರಿಪಠತ್** = ಸ್ತುತಿಸುವ, **ಗಂಧರ್ವ** = ಗಂಧರ್ವರೆಂಬ, **ಬಂದಿ** = ಹೊಗಳುಭಟರ, **ಧ್ವನಿಃ** = ಶಬ್ದವುಳ್ಳ, **ಹಸ್ತಾಬ್ಜೇ** = ಕರಕಮಲದಲ್ಲಿ, **ಧ್ವಜಚಿಹ್ನಿತೇ** = ಧ್ವಜದಿಂದ ಕೂಡಿದ, **ಸಃ** = ಆ ಕೃಷ್ಣನು, **ನಿವಸನ್** = ಇರುವವನಾಗಿ, **ಸತ್** = ಒಳ್ಳೆಯ, **ಪುಷ್ಪಕ** = ಪುಷ್ಪಕವಿಮಾನದ, **ಶ್ರೀ** = ಕಾಂತಿಯನ್ನು , **ಮುಷಿ** = ಮೀರಿಸುವ, **ಸ್ವ** = ಸ್ವರ್ಗದಿಂದ, **ಮುಕ್ತ** = ವರ್ಷಿಸಲ್ಪಟ್ಟ, **ಅಮಲ** = ಸ್ವಚ್ಛವಾದ, **ಮಾಲ್ಯ** = ಮಾಲಿಕೆಗಳೆಂಬ, **ಚಾಮರ** = ಚಾಮರಗಳ, **ಗಣಃ** = ಸಮೂಹವುಳ್ಳ, **ಛತ್ರಾಯಿತ** = ಛತ್ರದಂತೆ ಮಾಡಲ್ಪಟ್ಟ, **ಅಹೀಶ್ವರಃ** = ಶೇಷನುಳ್ಳ, **ಶಕ್ರಾದ್ಯೈಃ** = ಇಂದ್ರನೇ ಮೊದಲಾದವರಿಂದ, **ಪರಿವಾರಿತಃ** = ಕೂಡಿದ, **ಪಥಿ** = ದಾರಿಯಲ್ಲಿ, **ಯಯೌ** = ಹೊರಟನು, **ರಾಜಾಧಿರಾಜ** = ಚಕ್ರ-ವರ್ತಿಯಂತೆ, **ಪ್ರಭಃ** = ಕಾಂತಿಯುಳ್ಳವನಾಗಿ.

ದೇವರು ರಾತ್ರಿಯಲ್ಲಿ ಕಳ್ಳನಂತೆ ಹೋಗಲಿಲ್ಲ, ಬದಲಾಗಿ ರಾಜನಂತೆ ಹೋದನು ಎಂದು ರಾಜರು ತಿಳಿಸುತ್ತಾರೆ. – ರಾಜರುಗಳ ಮೆರವಣಿಗೆಯಲ್ಲಿ ವಾದ್ಯಗಳು, ಜೈಕಾರಗಳು, ರಾಜನಿಗೆ ರಥ-ಚಾಮರಗಳು, ಛತ್ರ , ಪರಿವಾರಗಳು ಇರುತ್ತವೆ. ಕೃಷ್ಣನಿಗೂ ಇವೆಲ್ಲವೂ ಇತ್ತು. ಆಕಾಶದಲ್ಲಿ ಆ ಸಮಯದಲ್ಲಿ ಉಂಟಾಗುವ ಗುಡುಗುಗಳೇ ವಾದ್ಯಗಳು. ಗಂಧರ್ವರ ಹಾಡುಗಳೇ ಜೈಕಾರಗಳು. ವಸುದೇವನ ಕೈಗಳೇ ರಥಗಳು. ರಥಗಳಿಗೆ ಧ್ವಜ ಇರುತ್ತವೆ. ಅಲಂಕಾರಕ್ಕಾಗಿ ಕಮಲಗಳು ಇರುತ್ತವೆ. ಕೈಗಳು ಕಮಲದಂತೆ ಇವೆ. ಕೈಗಳಲ್ಲಿ ಧ್ವಜದ ರೇಖೆಗಳು ಇವೆ. ಈ ಕೈಗಳಲ್ಲಿ ದೇವರು ಇರುವುದರಿಂದ ರಾಜರುಗಳ ರಥಕ್ಕಿಂತಲೂ ಕೈಗಳೆಂಬ ರಥಗಳು ಶ್ರೇಷ್ಠವಾದವುಗಳು. ದೇವತೆಗಳು ಸ್ವರ್ಗದಿಂದ ಪುಷ್ಪವೃಷ್ಟಿಯನ್ನು ಮಾಡುತ್ತಿದ್ದರು. ಶೇಷನ ಹೆಡೆಗಳು ಅಡ್ಡ ಇರುವುದರಿಂದ ಆ ಪುಷ್ಪಗಳು ಹೆಡೆಗಳ ಆಚೆ ಈಚೆ ಬೀಳುತ್ತಿದ್ದವು. ಚಾಮರಗಳು ರಾಜನ ಮಗ್ಗುಲುಗಳಲ್ಲಿ ಇರುವುದು ತಾನೇ. ಆದ್ದರಿಂದ ಬೀಳುತ್ತಿರುವ ಈ ಪುಷ್ಪಗಳು ಚಾಮರಗಳಂತೆ ತೋರುತ್ತಿದ್ದವು. ಶೇಷನ ಹೆಡೆಗಳು ಛತ್ರಗಳಂತೆ ತೋರುತ್ತಿದ್ದವು. ಇಂದ್ರಾದಿ ದೇವತೆಗಳೇ ಪರಿವಾರ. ಈ ರೀತಿಯಾಗಿ 'ರಾಜಾಧಿರಾಜ' ಎಂದೇ ವೇದಪ್ರತಿಪಾದ್ಯನಾದ ಕೃಷ್ಣನು ಹೊರಟನು.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋಽಯಮಾದ್ಯೋ ಮುದಾಮ್॥**

॥ ಇತಿ ಶ್ರೀಮತ್ಕವಿಕುಲತಿಲಕ ಶ್ರೀಮತ್‌ವಾದಿರಾಜತೀರ್ಥ
ಪೂಜ್ಯಚರಣವಿರಚಿತೇ ಶ್ರೀರುಕ್ಮಿಣೀಶವಿಜಯೇ ಪ್ರಥಮಃ ಸರ್ಗಃ ॥

**ರೋಮ್ಣಾಂ** = ರೋಮಗಳಿಗೆ, **ಹರ್ಷಣ** = ನೆಮ್ಮದಿಯನ್ನು, **ಕಾರಿಣಿ** = ಮಾಡುವ, **ಶ್ರವಣತಃ** = ಕೇಳುವುದರಿಂದ, **ಪಾಪ** = ಪಾಪಗಳ, **ಓಘ** = ಸಮೂಹವನ್ನು, **ವಿಧ್ವಂಸಿನಿ** = ನಾಶಮಾಡುವ, **ಪ್ರೇಮ್ಣಾ** = ಭಕ್ತಿಯಿಂದ, **ಚಿಂತಯತಾಂ** = ಧ್ಯಾನಿಸುವವರಿಗೆ, **ವಿಚಿತ್ರ** = ನಾನಾರೀತಿಯ, **ವಿಮಲ** = ನಿರ್ಮಲವಾದ, **ಶ್ಲಾಘ್ಯ** = ಸ್ತುತ್ಯವಾದ, **ಅರ್ಥ** = ಅರ್ಥವನ್ನು, **ಸಂದಾಯಿನಿ** = ಕೊಡುವ, **ಸಂಜಾತೇ** = ಉದಿಸುತ್ತಿರಲು, **ಭುವಿ** = ಭೂಮಿಯಲ್ಲಿ, **ರುಗ್ಮಿಣೀಶವಿಜಯೇ** = ರುಗ್ಮಿಣಿಯ ಪತಿಯಾದ ಕೃಷ್ಣನ ವಿಜಯವು (ರುಗ್ಮಿಣೀಶವಿಜಯವು), **ಸತ್** = ಒಳ್ಳೆಯ, **ವಾದಿರಾಜ** = ವಾದಿರಾಜರಿಂದ, **ಉದಿತೇ** = ಹೇಳಲ್ಪಟ್ಟ, **ಸಂಜಾತಃ** = ಉಂಟಾಯಿತು, **ಸುರಮಂಡಲೀಷು** = ದೇವತೆಗಳ

ಸಮೂಹಗಳಲ್ಲಿ, **ಮಹಿತಃ** = ಪೂಜ್ಯವಾದ, **ಸರ್ಗಃ** = ಸರ್ಗವು, **ಅಯಂ** = ಇದು, **ಆದ್ಯಃ** = ಮೊದಲನೆಯ, **ಮುದಾಂ** = ಆನಂದಗಳ.

ಈ ರುಗ್ಮಿಣೀಶವಿಜಯದ ಮೊದಲಿನ ಸರ್ಗವು ಮುಗಿಯಿತು. ಶ್ರೀವಾದಿರಾಜರು ಹೇಳಿದ್ದು – ಈ ಗ್ರಂಥವು ರೋಮಾಂಚಕಾರಿ. ಶ್ರವಣದಿಂದ ಪಾಪವನ್ನು ಪರಿಹರಿಸುತ್ತದೆ. ಭಕ್ತಿಯಿಂದ ಚಿಂತಿಸುವವರಿಗೆ ನಾನಾ ರೀತಿಯ ಒಳ್ಳೆಯ, ಯೋಗ್ಯವಾದ ಅರ್ಥವನ್ನು ಕೊಡುತ್ತದೆ. ಶ್ರೀಕೃಷ್ಣಾವತಾರದ ಒಂದು ಘಟ್ಟದಿಂದ ದೇವತೆಗಳಿಗೆ ಮೊದಲಿನ ಆನಂದ ಆಯಿತು. ಹಾಗೆಯೇ, ಈ ಸರ್ಗವೂ ದೇವತೆಗಳ ಸಮೂಹದಿಂದ ಆದ್ರತವಾಯಿತು.

* * * * *

## ॥ಅಥ ದ್ವಿತೀಯಃ ಸರ್ಗಃ॥

**ತತೋ ಯಶೋದಾಂ ಸ್ವಕುಲಸ್ಯ ಪುಣ್ಯ-**
**ಲಸದ್ಯಶೋದಾಂ ಹಿ ಕರಿಷ್ಯಮಾಣಃ।**
**ಸ ಗೋಕುಲಂ ಗೋಕುಲಗೋಪಪುಂಜ-**
**ವಿಭೂಷಿತಂ ಪ್ರಾವಿಶದಬ್ಜನೇತ್ರಃ ॥ ೧ ॥**

**ತತಃ** = ಅನಂತರ, **ಯಶೋದಾಂ** = ಯಶೋದೆಯನ್ನು, **ಸ್ವಕುಲಸ್ಯ** = ತನ್ನ ವಂಶಕ್ಕೆ, **ಪುಣ್ಯ** = ಪುಣ್ಯವನ್ನು, **ಲಸತ್** = ಶೋಭಿಸುವ, **ಯಶಃ** = ಕೀರ್ತಿಯನ್ನು, **ದಾಂ** = ಕೊಡುವವಳನ್ನಾಗಿ, **ಕರಿಷ್ಯಮಾಣಃ** = ಮಾಡುವವನಾಗಿ, **ಸಃ** = ಕೃಷ್ಣನು, **ಗೋಕುಲಂ** = ಗೋಕುಲವನ್ನು, **ಗೋ** = ಆಕಳುಗಳ, **ಕುಲ** = ಗುಂಪಿನಿಂದ, **ಗೋಪ** = ಗೊಲ್ಲರ, **ಪುಂಜ** = ಗುಂಪಿನಿಂದ, **ವಿಭೂಷಿತಂ** = ಅಲಂಕೃತವಾದ, **ಪ್ರಾವಿಶತ್** = ಪ್ರವೇಶಿ-ಸಿದನು, **ಅಬ್ಜ** = ಕಮಲದಂತೆ, **ನೇತ್ರಃ** = ಕಣ್ಣುಗಳುಳ್ಳವನು.

ಕೃಷ್ಣನು ಗೋಕುಲವನ್ನು ಪ್ರವೇಶಿಸಿದನು. ಕಾರಣವನ್ನು ರಾಜರು ಈ ರೀತಿ ತಿಳಿಸುತ್ತಾರೆ – ಅಲ್ಲಿ ಯಶೋದೆ ಇದ್ದಾಳೆ. ಯಶೋದಾ ಎಂದರೆ ಕೀರ್ತಿಯನ್ನು ಕೊಡುವವಳು ಎಂದರ್ಥ. ಒಬ್ಬ ವ್ಯಕ್ತಿ ತನ್ನ ವಂಶಕ್ಕೆ ಕೀರ್ತಿಯನ್ನು ಯಾವಾಗ ಕೊಡುವುದು ಅಂದರೆ ದೇವರ ಶುಶ್ರೂಷೆ ಮಾಡಿದಾಗ. ಆದ್ದರಿಂದ ಇವಳ ಹೆಸರನ್ನು ಸಾರ್ಥಕ ಪಡಿಸಲು ದೇವರು ಗೋಕುಲವನ್ನು ಪ್ರವೇಶಿಸಿದನು. ಅಲ್ಲಿ ಮೊದಲೇ ಗೋಪರು, ಗೋವುಗಳಿಂದ ಅಲಂಕಾರ ಆಗಿತ್ತು. 'ಅಲಂಕಾರಪ್ರಿಯೋ ವಿಷ್ಣುಃ' ಎಂಬ ಮಾತಿನಂತೆ ದೇವರು ಅಲ್ಲಿಗೆ ಹೋದನು. ತನ್ನ ಭಕ್ತರಿಗೆ ಇಟ್ಟಿರುವ ಹೆಸರನ್ನು ಸಾರ್ಥಕಗೊಳಿಸುವ ಜವಾಬ್ದಾರಿಯನ್ನು ದೇವರು ಹೊತ್ತಿರುತ್ತಾನೆ ಎಂದು ಇದರಿಂದ ತಿಳಿಯುತ್ತದೆ.

**ವಿಕೀರ್ಣಪುಷ್ಪಾಂಬುದಲಂಬಿಚಂದ್ರ-**
**ಮಹಃ ಪತಾಕಾ ನವವಾರಿಸಿಕ್ತಾ।**
**ಫಣೇಂದ್ರಕಂಠೋದರರತ್ನಕಾಂತಿ-**
**ವಿಚಿತ್ರಿತಾ ಸಾ ಗೃಹವೀಥಿಕಾಽಽಸೀತ್ ॥ ೨ ॥**

**ವಿಕೀರ್ಣ** = ಚೆಲ್ಲಲ್ಪಟ್ಟ, **ಪುಷ್ಪ** = ಪುಷ್ಪಗಳುಳ್ಳ, **ಅಂಬುದ** = ಮೋಡಗಳಿಂದ, **ಲಂಬಿ** = ಹೊರ ಸೂಸುವ, **ಚಂದ್ರ** = ಚಂದ್ರನ, **ಮಹಃ** = ಕಾಂತಿ ಎಂಬ, **ಪತಾಕಾ** = ಧ್ವಜ-ಗಳುಳ್ಳ, **ನವ** = ಹೊಸತಾದ, **ವಾರಿ** = ಮಳೆಯ ಹನಿಗಳಿಂದ, **ಸಿಕ್ತಾ** = ಸಿಂಪಡಿಸಲ್ಪಟ್ಟ, **ಫಣೇಂದ್ರ** = ಶೇಷನ, **ಕಂಠ** = ಕುತ್ತಿಗೆ, **ಉದರ** = ಹೊಟ್ಟೆ, **ರತ್ನ** = ಹೆಡೆಯ ರತ್ನಗಳ

ಕೆಂಪಾದ, **ಕಾಂತಿ** = ಪ್ರಕಾಶಗಳಿಂದ, **ವಿಚಿತ್ರಿತಾ** = ಮಿಶ್ರವಾದ, **ಸಾ** = ಆ, **ಗೃಹ** = ನಂದಗೋಪನ ಮನೆಯ, **ವೀಥಿಕಾ** = ಬೀದಿಯು, **ಆಸೀತ್** = ಆಯಿತು.

ನಂದಗೋಪನ ಮನೆಯ ದಾರಿಯು ದೇವತೆಗಳು ಮಳೆಗರೆದ ಪುಷ್ಪಗಳಿಂದ ತುಂಬಿತ್ತು. ಚಂದ್ರನ ಬಿಳಿಯಾದ ಕಿರಣಗಳು ಮೋಡಗಳ ಮೂಲಕ ಹಾದು ಭೂಮಿಗೆ ಬಂದಾಗ ಬಿಳಿಯಾದ ಧ್ವಜದಿಂದ ಕೂಡಿದಂತೆ ಇತ್ತು. ತುಂತುರು ಹನಿಗಳಿಂದ ಸಿಂಪಡಿಸಲ್ಪಟ್ಟಿತ್ತು. ಶೇಷನ ಕಂಠ, ಉದರ, ಹಾಗೆಯೇ ತಲೆಯಲ್ಲಿರುವ ರತ್ನಗಳ ಕಪ್ಪು, ಬಿಳಿ, ಕೆಂಪು ಕಾಂತಿಗಳಿಂದ ಮಿಶ್ರಣವಾಗಿತ್ತು. ಈ ರೀತಿಯಾಗಿ ನಂದಗೋಪನ ಮನೆಯ ದಾರಿಯು ಇತರ ಮನೆಗಳ ದಾರಿಗಿಂತ ವಿಲಕ್ಷಣವಾಗಿತ್ತು.

**ಫಣಾವಲೀತೋರಣಭಾಗ್ ವಿಮಾನ-**
**ವಿತಾನಯುಕ್ತೋರಗರಾಜಮೌಲೇಃ ।**
**ಪತತ್ ಪಯೋಬಿಂದುಸಿತಾಕ್ಷತಾ ಸಾ**
**ಸ್ಥಲೀ ನಿಶೀಥೇಽಪಿ ವಿಭೂಷಿತೇವ ॥೩॥**

**ಫಣ** = ಹೆಡೆಗಳ, **ಆವಲಿ** = ಸಮೂಹ ಎಂಬ, **ತೋರಣ** = ತೋರಣಗಳನ್ನು, **ಭಾಕ್** = ಹೊಂದಿದ, **ವಿಮಾನ** = ದೇವತೆಗಳ ವಿಮಾನಗಳೆಂಬ, **ವಿತಾನ** = ಮೇಲ್ಕಟ್ಟಿನಿಂದ, **ಯುಕ್ತಾ** = ಕೂಡಿದ, **ಉರಗರಾಜ** = ಶೇಷನ, **ಮೌಲೇಃ** = ತಲೆಗಳಿಂದ, **ಪತತ್** = ಬೀಳುತ್ತಿರುವ, **ಪಯಃ** = ನೀರಿನ, **ಬಿಂದು** = ಹನಿಗಳೆಂಬ, **ಸಿತ** = ಬೆಳ್ಳಗಾದ, **ಅಕ್ಷತಾ** = ಅಕ್ಷತೆಗಳುಳ್ಳ, **ಸಾ** = ಆ, **ಸ್ಥಲೀ** = ಸ್ಥಳವು, **ನಿಶೀಥೇಽಪಿ** = ರಾತ್ರಿಯಲ್ಲಿಯೂ, **ವಿಭೂಷಿತಾ ಇವ** = ಶೃಂಗಾರಗೊಂಡಂತೆ.

ಶೇಷನ ಅಧೋಮುಖವಾದ ಹೆಡೆಗಳೇ ತೋರಣಗಳಂತೆ ತೋರುತ್ತಿತ್ತು. ತೋರಣದಲ್ಲಿಯೂ ಮಾವಿನ ಎಲೆಗಳು ಕೆಳಮುಖವಾಗಿ ಇರುತ್ತವೆ. ಕೃಷ್ಣನ ದರ್ಶನಕ್ಕಾಗಿ ಬಂದಿರುವ ದೇವತೆಗಳ ವಿಮಾನಗಳು ಮೇಲ್ಕಟ್ಟಿನಂತೆ ಇವೆ. ಶೇಷನ ತಲೆಯ ಕಿರೀಟದಿಂದ ಕೆಳಗೆ ಬೀಳುತ್ತಿರುವ ನೀರಿನ ಹನಿಗಳೇ ಅಕ್ಷತೆಗಳಂತೆ ಇವೆ. ಈ ರೀತಿ ರಾತ್ರಿಯಲ್ಲಿಯೂ ಆ ದಾರಿಯು ಅಲಂಕೃತವಾಗಿತ್ತು.

**ವಿಮುಕ್ತವರ್ಗಾಧಿಪತಿಂ ಪತಿಂ ಶ್ರೀಃ**
**ಶಿಶುಂ ತಮಾಲೋಕ್ಯ ಸುಲಜ್ಜಿತೇವ ।**
**ಇಯೇಷ ದೋಷಾಂತರ ಏವ ಗಂತುಂ -**
**ಸ್ವಯಂ ಗೃಹೀತಾರ್ಭಕರಮ್ಯರೂಪಾ ॥ ೪ ॥**

**ವಿಮುಕ್ತ** = ಮುಕ್ತರ, **ವರ್ಗ** = ಸಮೂಹದ, **ಅಧಿಪತಿಂ** = ಒಡೆಯನಾದ, **ಪತಿಂ** = ತನ್ನ ಪತಿಯಾದ, **ಶ್ರೀಃ** = ಲಕ್ಷ್ಮಿಯು, **ಶಿಶುಂ** = ಮಗುವನ್ನಾಗಿ, **ತಂ** = ಕೃಷ್ಣನನ್ನು, **ಆಲೋಕ್ಯ** = ನೋಡಿ, **ಸುಲಜ್ಜಿತಾ ಇವ** = ನಾಚಿದವಳಂತೆ, **ಇಯೇಷ** = ಇಚ್ಛಿಸಿದಳು, **ದೋಷಾಂತರೇ ಏವ** = ರಾತ್ರಿಯಲ್ಲಿಯೇ, **ಗಂತುಂ** = ಹೊರಡಲು, **ಸ್ವಯಂ** = ತಾನು, **ಗೃಹೀತ** = ಸ್ವೀಕರಿಸಲ್ಪಟ್ಟ, **ಅರ್ಭಕ** = ಮಗುವಿನ, **ರಮ್ಯ** = ಚಂದದ, **ರೂಪಾ** = ಆಕಾರವುಳ್ಳವಳಾಗಿ.

ಎಲ್ಲಾ ಮುಕ್ತರಿಗೂ ಅಧಿಪತಿಯು ತನ್ನ ಗಂಡನು. ಆತನು ಈಗ ಶಿಶುರೂಪನಾಗಿದ್ದಾನೆ. ಬಾಲಕನಂತೆ ಇದ್ದಾನೆ. ಇದನ್ನು ಕಂಡು ಪತ್ನಿಯು ನಾಚುವುದು ಲೋಕದ ವಾಡಿಕೆ. ನಾಚಿದ ಮಹಿಳೆಯರು ಹಗಲಲ್ಲಿ ತಿರುಗಾಡುವುದಿಲ್ಲ. ರಾತ್ರಿಯಲ್ಲೇ ಸರಿ. ಆದ್ದರಿಂದ ನಂದಗೋಕುಲದಲ್ಲಿ ಅವತರಿಸಿದ ದುರ್ಗೆಯು ರಾತ್ರಿಯಲ್ಲೇ ಮಥುರೆಗೆ ಹೊರಟಳು. ತಾನು ಶಿಶುರೂಪ ಏಕೆ ತಾಳಿದಳು ಅಂದರೆ ಪತ್ನಿಯಾದವಳು ಯಾವಾಗಲೂ ಪತಿಯ ಮಾರ್ಗದಲ್ಲಿರಬೇಕು ಎಂಬುದನ್ನು ತಿಳಿಸಲು.

> **ಹರೇಃ ಪ್ರಿಯಾ ತದ್ಭಗಿನೀತ್ವಮದ್ಯ**
> **ಹ್ಯುಪೇಯುಷೀ ತತ್ರ ನ ಸಾ ಸ್ಥಿರಾऽऽಸೀತ್ ।**
> **ಮನೋಜ್ಞಮೂರ್ತ್ಯಂತರತಸ್ತದೀಯ-**
> **ವಿಶಾಲವಕ್ಷಃಸ್ಥಲಮೇತ್ಯ ತೃಪ್ತಾ ॥ ೫ ॥**

**ಹರೇಃ** = ದೇವರ, **ಪ್ರಿಯಾ** = ಪತ್ನಿಯು, **ತತ್** = ಕೃಷ್ಣನ, **ಭಗಿನೀತ್ವಂ** = ಸಹೋದರಿತ್ವವನ್ನು, **ಅದ್ಯ** = ಈಗ, **ಉಪೇಯುಷೀ** = ಹೊಂದಿದವಳಾಗಿ, **ತತ್ರ** = ಗೋಕುಲದಲ್ಲಿ, **ನ** = ಇಲ್ಲ, **ಸಾ** = ಅವಳು, **ಸ್ಥಿರಾ** = ಇರುವವಳು, **ಆಸೀತ್** = ಆದಳು, **ಮನೋಜ್ಞ** = ಚಂದದ, **ಮೂರ್ತ್ಯಂತರತಃ** = ಬೇರೆ ರೂಪದಿಂದ, **ತದೀಯ** = ಕೃಷ್ಣನ, **ವಿಶಾಲವಕ್ಷಃಸ್ಥಲಂ** = ವಿಶಾಲವಾದ ಹೃದಯವನ್ನು, **ಏತ್ಯ** = ಹೊಂದಿ, **ತೃಪ್ತಾ** = ತೃಪ್ತಳಾದಳು.

ಅವತಾರಕಾಲದಲ್ಲಿ ದೇವರ ತಂಗಿಯಾದವಳು ದೇವರ ಪತ್ನಿ. ತಂಗಿಯ ರೂಪದಿಂದ ದೇವರ ಜೊತೆಗೆ ವಿಹಾರವು ಲೋಕತಃ ನಿಷಿದ್ಧ. ಆದ್ದರಿಂದ ಇಲ್ಲಿ ಇದ್ದೂ ಪ್ರಯೋಜನ ಇಲ್ಲವಾದ್ದರಿಂದ ಹೊರಟುಹೋದಳು. ಕೇವಲ ತಂಗಿಯ ರೂಪದಿಂದ ಮಾತ್ರ ದೇವರಿಂದ ವಿಯೋಗ. ಸರ್ವಥಾ ವಿಯೋಗ ಇಲ್ಲ. ಏಕೆಂದರೆ, ಇದೇ ಲಕ್ಷ್ಮಿಯು ಶ್ರೀವತ್ಸರೂಪದಿಂದ ಸದಾ ಆತನ ವಕ್ಷಃಸ್ಥಳದಲ್ಲಿ ವಿರಾಜಮಾನಳಾಗಿದ್ದಾಳೆ.

**ಮುಕುಂದಸೇವಾರ್ಹಫಲಂ ಸ್ಮ ತಾವ-**
**ದ್ವಹನ್ನಿವಾಥಾನಕದುಂದುಭಿಸ್ತಾಮ್ ।**
**ಶಿಶುಸ್ವರೂಪಾಂ ಕಮಲಾಂ ಸ್ವಹಸ್ತೇ**
**ಸ ಬಿಭ್ರದಭ್ಯಾಗಮದಾತ್ಮವಾಸಮ್ ॥ ೬ ॥**

**ಮುಕುಂದ** = ದೇವರ, **ಸೇವಾ** = ಸೇವೆಗೆ, **ಅರ್ಹ** = ಯೋಗ್ಯವಾದ, **ಫಲಂ** = ಫಲ-ವನ್ನು, **ತಾವತ್** = ಆಗ, **ವಹನ್ನಿವ** = ಪಡೆದವನಂತೆ, **ಆನಕದುಂದುಭಿಃ** = ವಸು-ದೇವನು, **ತಾಂ** = ಆ, **ಶಿಶುಸ್ವರೂಪಾಂ** = ಮಗುವಿನ ರೂಪವುಳ್ಳ, **ಕಮಲಾಂ** = ದುರ್ಗೆಯನ್ನು, **ಸ್ವಹಸ್ತೇ** = ತನ್ನ ಕೈಯ್ಯಲ್ಲಿ, **ಸಃ** = ಆ, **ಬಿಭ್ರತ್** = ಹೊತ್ತವನಾಗಿ, **ಅಭ್ಯಾಗಮತ್ ಸ್ಮ** = ಹೊರಟನು, **ಆತ್ಮ- ವಾಸಂ** = ತನ್ನ ಊರನ್ನು.

ಈ ರೀತಿಯಾಗಿ ವಸುದೇವನು ಬಹಳವಾಗಿ ದೇವರ ಸೇವೆಯನ್ನು ಮಾಡಿದನು. ಇದಕ್ಕೆ ನಿಜವಾದ ಫಲ ಮುಕ್ತಿ. ಅವಾಂತರಫಲ ಈ ಲೋಕದಲ್ಲಿ ಸಂಪತ್ತು. ಈ ವಿಷಯ-ದಲ್ಲಿ 'ಸರ್ವೇಽಪಿ ಪುರುಷಾರ್ಥಾಃ ಸ್ಯುಃ ಜ್ಞಾನಾದೇವ ನ ಸಂಶಯಃ' ಎಂಬ ಮಾತು ಪ್ರಮಾಣ. ಸಂಪತ್ತಿಗೆ ಅಭಿಮಾನಿನಿಯಾದ ದುರ್ಗೆಯನ್ನು ತಾನು ಕೈಯ್ಯಲ್ಲಿ ಹಿಡಿದು-ಕೊಂಡು ವಸುದೇವನು ಮಥುರೆಗೆ ಹೋದನು. ದೇವರ ಸೇವೆಯನ್ನು ಶ್ರದ್ಧೆಯಿಂದ ಮಾಡಿದರೆ ತತ್‌ಕ್ಷಣ ಫಲ ಎಂಬುದಕ್ಕೆ ವಸುದೇವನು ಸಾಕ್ಷಿಯಾದನು.

**ಸುತಂ ಯಶೋದಾಶಯನೇ ನಿಧಾಯ**
**ವಿರಿಂಚಪೂರ್ವಾಮರಮುಖ್ಯತಾತಮ್ ।**
**ವಿವೇಶ ಕಂಸಸ್ಯ ಗೃಹಂ ಸ ಶೌರಿಃ**
**ಪ್ರಗೃಹ್ಯ ತನ್ಮೃತ್ಯುಮಿವಾಂಬಿಕಾಂ ತಾಮ್ ॥ ೭ ॥**

**ಸುತಂ** = ಮಗುವನ್ನು(ಮಗನನ್ನು), **ಯಶೋದಾಶಯನೇ** = ಯಶೋದೆಯ ಹಾಸಿಗೆಯಲ್ಲಿ, **ನಿಧಾಯ** = ಇಟ್ಟು, **ವಿರಿಂಚ** = ಬ್ರಹ್ಮನೇ, **ಪೂರ್ವ** = ಮೊದಲಾದ, **ಅಮರ** = ದೇವತೆಗಳ, **ಮುಖ್ಯ** = ಮೊದಲಿನ, **ತಾತಂ** = ತಂದೆಯಾದ, **ವಿವೇಶ** = ಪ್ರವೇಶಿಸಿದನು, **ಕಂಸಸ್ಯ** = ಕಂಸನ, **ಗೃಹಂ** = ಮನೆಯನ್ನು, **ಸಃ** = ಆ, **ಶೌರಿಃ** = ಶೂರನ ಮಗನಾದ ವಸುದೇವನು, **ಪ್ರಗೃಹ್ಯ** = ಹಿಡಿದು, **ತತ್** = ಕಂಸನಿಗೆ, **ಮೃತ್ಯು-ಮಿವ** = ಮೃತ್ಯುವಿನಂತೆ, **ಅಂಬಿಕಾಂ** = ದುರ್ಗೆಯನ್ನು, **ತಾಂ** = ಆ.

ಬ್ರಹ್ಮಾದಿಗಳಿಗೂ ತಂದೆಯಾದ ಕೃಷ್ಣನನ್ನು ಯಶೋದೆಯ ಹಾಸಿಗೆಯಲ್ಲಿ ವಸು-ದೇವನು ಇಟ್ಟನು. ದುರ್ಗೆಯನ್ನು ಹಿಡಿದುಕೊಂಡು ಕಂಸನ ಮನೆಗೆ ನಡೆದನು. ಕಂಸನ

ಮನೆಗೆ ದುರ್ಗೆಯು ಮೃತ್ಯುರೂಪದಿಂದ ಪ್ರವೇಶಿಸಿದಳು. ದೇವರನ್ನು ಕಳೆದುಕೊಂಡ ರಾಜ್ಯಕ್ಕೆ ಮೃತ್ಯುವೇ ಗತಿ.

• • • •

**ಸಂದೇಶ**

**ಗೋಬ್ರಾಹ್ಮಣರಕ್ಷಕಸ್ಯ ಕ್ವ ಕೃಷ್ಣದೋರ್ದಂಡಧೃತಸ್ಯ ಕಂಪಃ**

ಕೃಷ್ಣಾನುಗ್ರಹಪಾತ್ರರಾದ ಗೋಬ್ರಾಹ್ಮಣರಕ್ಷಕರಿಗೆ ಯಾರ ಭಯವೂ ಇಲ್ಲ

---

**ಪ್ರಭಾತಕಾಲೇ ಖಲಮಭ್ರಗಾ ಸಾ**
**ಪ್ರಬೋಧ್ಯ ಬಂಧಾತ್ಪಿತರೌ ವಿಯೋಜ್ಯ ।**
**ಹರೇರ್ವಿಯೋಗೋದಿತಚಿತ್ತಚಿಂತಾಂ -**
**ಬಿಭೇದ ಮಾತುಃ ಶಯನೀಯಸಂಸ್ಥಾ ॥ ೮ ॥**

**ಪ್ರಭಾತಕಾಲೇ** = ಬೆಳಗಿನ ಕಾಲದಲ್ಲಿ, **ಖಲಂ** = ದುಷ್ಟನನ್ನು, **ಅಭ್ರಗಾ** = ಆಕಾಶದಲ್ಲಿರುವ, **ಸಾ** = ಆ ದುರ್ಗೆಯು, **ಪ್ರಬೋಧ್ಯ** = ಎಚ್ಚರಿಸಿ, **ಬಂಧಾತ್** = ಸೆರೆಯಿಂದ, **ಪಿತರೌ** = ತಂದೆ ತಾಯಂದಿರನ್ನು, **ವಿಯೋಜ್ಯ** = ಬಿಡಿಸಿ, **ಹರೇಃ** = ದೇವರ, **ವಿಯೋಗ** = ವಿರಹದಿಂದ, **ಉದಿತ** = ಉಂಟಾದ, **ಚಿತ್ತ** = ಮನಸ್ಸಿನ, **ಚಿಂತಾಂ** = ದುಃಖವನ್ನು, **ಬಿಭೇದ** = ಕಳೆದಳು, **ಮಾತುಃ** = ದೇವಕಿಯ, **ಶಯನೀಯ** = ಹಾಸಿಗೆಯಲ್ಲಿ, **ಸಂಸ್ಥಾ** = ಇರುವವಳಾಗಿ.

ಮರುದಿನ ಬೆಳಿಗ್ಗೆ ಕಂಸನನ್ನು ದುರ್ಗೆಯು – 'ನಿನ್ನ ಮೃತ್ಯುವು ಬೇರೆ ಕಡೆ ಇದ್ದಾನೆ' ಎಂದು ಎಚ್ಚರಿಸಿದಳು. ಇದನ್ನು ತಿಳಿದ ಕಂಸನು ವಸುದೇವನನ್ನು ಸೆರೆಮನೆಯಿಂದ ಬಿಡಿಸಿದನು. ಈ ದುರ್ಗೆಯು ಯಾರಿಗೂ ತಿಳಿಯದಂತೆ, ಈ ದಂಪತಿಗಳಿಗೆ ಮಾತ್ರ ತಿಳಿಯುವಂತೆ, ದೇವಕಿಯ ಚಾಪೆಯಲ್ಲೇ ಮಲಗಿದಳು. ಯಾಕೆಂದರೆ, ಈ ದಂಪತಿಗಳಿಗೆ ದೇವರ ವಿಯೋಗದಿಂದ ಉಂಟಾದ ದುಃಖವನ್ನು ಕಳೆಯುವುದಕ್ಕೋಸ್ಕರ.

ದೇವರ ಬಗ್ಗೆ ಸಹಜವಾಗಿ ಕಾಳಜಿ ಇರುವವರಿಗೆ ಲಕ್ಷ್ಮಿಯು ಶಾಂತಿಯ ರೂಪದಲ್ಲಿ ಬಂದು ನೆಲೆಸುತ್ತಾಳೆ. ಹಾಗೆಯೇ, ಸರ್ವರೀತಿಯ ಬಂಧನಗಳನ್ನೂ ಬಿಡಿಸುತ್ತಾಳೆ. ದುಷ್ಟರೂ ಅನುಕೂಲವಾಗುವಂತೆ ಮಾಡುತ್ತಾಳೆ.

• • • •

**ಸಂದೇಶ**

**ಪ್ರಿಯೇಷು ನೂತ್ನೇಷು ಹಿ ಕಸ್ಯ ತೃಪ್ತಿಃ**

ಹೊಸದಾದ ವಸ್ತು ನಮಗೆ ಇಷ್ಟವಾದರೆ ಅದನ್ನು ಎಷ್ಟು ಸೇವಿಸಿದರೂ ನಮಗೆ ತೃಪ್ತಿ ಇರುವುದಿಲ್ಲ

**ಸ್ನಾತ್ವಾ ಪೂರ್ವಪಯೋನಿಧೌ ಅಚಲಸತ್ಪೀಠಾಧಿರೂಢಃ ಕರೈಃ**
**ಪದ್ಮಾನಿ ಪ್ರತಿಗೃಹ್ಯ ಸಾಂದ್ರತಿಮಿರಾಣ್ಯುನ್ಮೂಲ್ಯ ರಾಗಾವೃತಃ।**
**ಸಿಂಜತ್ಪಕ್ಷಿಗಣಾತ್ ನಿಶಮ್ಯ ಪರಮಂ ಕೃಷ್ಣಾವತಾರಂ ರವಿಃ**
**ತತ್ಪೂಜಾರ್ಥಮಿವೋದಿತೋ ವ್ರಜಗೃಹದ್ವಾರೇಷು ತಾನ್**
**ಪ್ರಾಹಿಣೋತ್ ॥ ೯ ॥**

**ಸ್ನಾತ್ವಾ** = ಸ್ನಾನ ಮಾಡಿ, **ಪೂರ್ವ** = ಪೂರ್ವದಿಕ್ಕಿನ, **ಪಯೋನಿಧೌ** = ಸಮುದ್ರದಲ್ಲಿ, **ಅಚಲ** = ಪರ್ವತವೆಂಬ, **ಸತ್ ಪೀಠ** = ಒಳ್ಳೆಯ ಮಣೆಯಲ್ಲಿ, **ಅಧಿರೂಢಃ** = ಇರುವ, **ಕರೈಃ** = ಕಿರಣಗಳಿಂದ, **ಪದ್ಮಾನಿ** = ಕಮಲಗಳನ್ನು, **ಪ್ರತಿಗೃಹ್ಯ** = ಸ್ವೀಕರಿಸಿ, **ಸಾಂದ್ರತಿಮಿರಾಣಿ** = ದಟ್ಟವಾದ ಕತ್ತಲೆಗಳನ್ನು, **ಉನ್ಮೂಲ್ಯ** = ನಾಶ ಮಾಡಿ, **ರಾಗ** = ಭಕ್ತಿಯಿಂದ, **ಆವೃತಃ** = ಕೂಡಿದ, **ಸಿಂಜತ್** = ಶಬ್ದಮಾಡುವ, **ಪಕ್ಷಿಗಣಾತ್** = ಪಕ್ಷಿಗಳ ಸಮೂಹದಿಂದ, **ನಿಶಮ್ಯ** = ಕೇಳಿ, **ಪರಮಂ** = ಶ್ರೇಷ್ಠವಾದ, **ಕೃಷ್ಣಾವತಾರಂ** = ಕೃಷ್ಣಾವತಾರವನ್ನು, **ರವಿಃ** = ಸೂರ್ಯನು, **ತತ್** = ಕೃಷ್ಣನ, **ಪೂಜಾರ್ಥಂ** = ಪೂಜೆಗೋಸ್ಕರ, **ಇವ** = ಎಂಬಂತೆ, **ಉದಿತಃ** = ಉದಿಸಿದವನಾಗಿ, **ವ್ರಜ** = ಗೋಕುಲದ, **ಗೃಹ** = ಮನೆಗಳ, **ದ್ವಾರೇಷು** = ಬಾಗಿಲುಗಳಲ್ಲಿ, **ತಾನ್** = ಕಿರಣಗಳನ್ನು, **ಪ್ರಾಹಿಣೋತ್** = ಕಳುಹಿಸಿದನು.

ಮರುದಿನ ಸೂರ್ಯೋದಯ ಆಯಿತು. ಇದನ್ನು ರಾಜರು ತನ್ನದೇ ಶೈಲಿಯಲ್ಲಿ ವರ್ಣಿಸುತ್ತಾರೆ – ಸೂರ್ಯನು ಸಮುದ್ರದಿಂದ ಮೇಲೆ ಬಂದಂತೆ ತೋರುತ್ತದೆ. ಎತ್ತರದಲ್ಲಿ ಇರುವುದರಿಂದ ಪೀಠದಲ್ಲಿ ಕುಳಿತಂತೆ ತೋರುತ್ತದೆ. ಸೂರ್ಯಕಿರಣಗಳಿಂದ ಕಮಲಗಳು ಅರಳಿದವು. ಕತ್ತಲೆ ಅಳಿಯಿತು. ಕೆಂಪುಬಣ್ಣದಿಂದ ಯುಕ್ತನು. ಪಕ್ಷಿಗಳ ಚಿಲಿಪಿಲಿ ಆರಂಭವಾಯಿತು. ನಂದಗೋಪನ ಮನೆಯ ಬಾಗಿಲಿಗೆ ಕಿರಣಗಳು ಬಂದವು.

ಕೃಷ್ಣಾವತಾರ ರಾತ್ರಿಯಲ್ಲಿ ಆಗಿದ್ದರಿಂದ ಸೂರ್ಯನಿಗೆ ಗೊತ್ತಿರಲಿಲ್ಲ. ಪಕ್ಷಿಗಳ ಧ್ವನಿಯಿಂದ ಸೂರ್ಯನಿಗೆ ತಿಳಿಯಿತು. ಈ ವಿಷಯದಲ್ಲಿ ಒಂದು ವೇದ ಮಂತ್ರ ಇದೆ – ಸರ್ವೇ ವೇದಾಃ ಸರ್ವೇ ಘೋಷಾಃ ಏಕೈವ ವ್ಯಾಹೃತಿಃ' ಎಲ್ಲಾ ಶಬ್ದಗಳೂ ಒಬ್ಬನೇ ದೇವನನ್ನು ಹೇಳುತ್ತವೆ ಎಂದು. ಇದನ್ನೇ ದಾಸರು – 'ಪಕ್ಷಿಜಾತಗಳೆಲ್ಲಾ ಚಿಲಿಪಿಲಿಗುಟ್ಟುತ್ತಾ ಸೂಕ್ಷ್ಮದಲ್ಲಿ ನಿನ್ನ ಸ್ತುತಿಸುವವು. ರಂಗನಾಯಕ' ಎಂದು. ಇದನ್ನು ತಿಳಿದ ಸೂರ್ಯನು ದೇವರ ಪೂಜೆಗಾಗಿ ಸಮುದ್ರದಲ್ಲಿ ಸ್ನಾನ ಮಾಡಿಕೊಂಡು ಬಂದನು. ಪೂಜೆಗೆ ಆಸನದಲ್ಲಿ ಕೂಡಬೇಕು. ಆಸನ ಅಚಲವಾಗಿರಬೇಕು. ಯಾಕೆಂದರೆ, ಮನಸ್ಸಿನ ಸ್ಥಿರತೆಗೋಸ್ಕರ ಶ್ರೀವ್ಯಾಸರ ಬ್ರಹ್ಮಸೂತ್ರದಲ್ಲಿ ಅಚಲತ್ವಂ ಚಾಪೇಕ್ಷ್ಯ, ಆಸೀನಃ ಸಂಭವಾತ್ ಎಂಬ

ಎರಡು ಸೂತ್ರಗಳು ಮನಸ್ಸಿನ ಸ್ಥಿರತೆಯನ್ನೂ ಆಸನವನ್ನೂ ಹೇಳುತ್ತವೆ. ಅದನ್ನೇ ರಾಜರು ಇಲ್ಲಿ ತಿಳಿಸುತ್ತಾರೆ. ಪೂಜೆಗೆ ಪುಷ್ಪಗಳು ಬೇಕು. ಅದನ್ನು ಕರದಿಂದ ತರಬೇಕು. ಕಿರಣಗಳೇ ಕರಗಳು. ಸೂರ್ಯನು ತನ್ನ ಕಿರಣಗಳೆಂಬ ಕೈಗಳಿಂದ ಕಮಲವನ್ನು ಅರಳಿಸಿದನು. ಮೊಗ್ಗು ಪುಷ್ಪ ದೇವರಿಗೆ ಕೂಡದು. ಸೂರ್ಯನ ಕಿರಣಗಳಿಂದ ಕಮಲ ಅರಳುತ್ತದೆಯಷ್ಟೆ. ಅರ್ಚಕರು ತಾವು ಅಜ್ಞಾನ ಉಳ್ಳವರಾಗಿರುವುದಿಲ್ಲ. (ಪರಂತು) ಇನ್ನೊಬ್ಬರ ಅಜ್ಞಾನವನ್ನು ಕಳೆಯುತ್ತಾರೆ. ಅಜ್ಞಾನ ಎಂದರೂ ಕತ್ತಲೆ ಎಂದರೂ ಒಂದೇ. ಸೂರ್ಯನು ತಾನು ಕತ್ತಲೆ ಉಳ್ಳವನಲ್ಲ. ಇನ್ನೊಬ್ಬರ ಕತ್ತಲೆಯನ್ನು ತೆಗೆಯುತ್ತಾನೆ. ಸೂರ್ಯನು ಉದಿಸುವಾಗ ರಾಗದಿಂದ ಕೆಂಪುಬಣ್ಣವೆಂಬ ಅನುರಾಗವುಳ್ಳವನಾಗುತ್ತಾನೆ. ನಂದಗೋಕುಲದಲ್ಲಿ ಯಾವ ಮನೆಯಲ್ಲಿ ಕೃಷ್ಣ ಇದ್ದಾನೆ ಎಂದು ಗೊತ್ತಿಲ್ಲ. ಆದಕ್ಕಾಗಿ ಎಲ್ಲ ಮನೆಗಳಿಗೂ ತನ್ನ ಕಿರಣ ಎಂಬ ಕೈಗಳನ್ನು ಕಳುಹಿಸಿದ್ದಾನೆ.

**ಸುಮೇರುಸಂಸ್ಥೈಃ ಅಮರ್ತ್ಯೈರುಪಾಯಾತ್**
**ಸಮುದ್ಧೃತಂ ವಿಷ್ಣುಪದಾರ್ಚನಾಯ ।**
**ಸಮುದ್ರವಾಪೀಸ್ಥಸಹಸ್ರಪತ್ರ-**
**ಮಿವೋದಿತೋ ಭಾತಿ ಸಹಸ್ರರಶ್ಮಿಃ ॥ ೧೦ ॥**

**ಸುಮೇರು** = ಮೇರುಪರ್ವತದಲ್ಲಿ, **ಸಂಸ್ಥೈಃ** = ಇರುವ, **ಅಮರ್ತ್ಯೈಃ** = ದೇವತೆಗಳಿಂದ, **ಉಪಾಯಾತ್** = ಉಪಾಯದಿಂದ, **ಸಮುದ್ಧೃತಂ** = ಎತ್ತಲ್ಪಟ್ಟ, **ವಿಷ್ಣು** = ದೇವರ, **ಪದ** = ಚರಣಗಳ, **ಅರ್ಚನಾಯ** = ಪೂಜೆಗೋಸ್ಕರ, **ಸಮುದ್ರ** = ಸಮುದ್ರವೆಂಬ, **ವಾಪೀ** = ಬಾವಿಯಲ್ಲಿ, **ಸ್ಥ** = ಇರುವ, **ಸಹಸ್ರಪತ್ರಮಿವ** = ಕಮಲವೆಂಬಂತೆ, **ಉದಿತಃ** = ಉದಿಸಿದ, **ಭಾತಿ** = ಶೋಭಿಸುತ್ತಾನೆ, **ಸಹಸ್ರ** = ಸಾವಿರಾರು, **ರಶ್ಮಿಃ** = ಕಿರಣವುಳ್ಳ ಸೂರ್ಯನು.

ಈ ಶ್ಲೋಕದಲ್ಲಿ ದೇವತೆಗಳನ್ನೇ ಅರ್ಚಕರನ್ನಾಗಿ ತಿಳಿಸುತ್ತಾರೆ. ಮೇರುಪರ್ವತದಲ್ಲಿ ದೇವತೆಗಳ ವಾಸ. ಆದ್ದರಿಂದ ಮೇರುಪರ್ವತವೇ ಆಸನ. ಸಮುದ್ರವೇ ಬಾವಿ. ಸೂರ್ಯನೇ ಕಮಲ. ಸೂರ್ಯನಿಗೆ ಸಹಸ್ರರಶ್ಮಿ ಎಂದು ಹೆಸರು. ಕಮಲಪತ್ರಕ್ಕೆ ಸಹಸ್ರಪತ್ರ ಎಂದು ಹೆಸರು. ವಿಷ್ಣುಪದದ ಅರ್ಚನೆಗೋಸ್ಕರ ಪುಷ್ಪವನ್ನು ಕಿತ್ತಿದ್ದು. ವಿಷ್ಣು ಪದ ಎಂದು ದೇವರಿಗೂ ಆಕಾಶಕ್ಕೂ ಹೆಸರು. ಆಕಾಶದ ಅರ್ಚನೆ ಎಂದರೆ ಬೆಳಗಿಸುವುದು. ದೇವರಿಗೆ ಪೂಜೆ. ದೇವತೆಗಳು ಬಹಳ ಉಪಾಯದಿಂದ ಕಿತ್ತರು. ಯಾಕೆಂದರೆ, ಕಮಲ ಮೃದು ಸೂರ್ಯ ಉಷ್ಣ.

**ದಿವಿ ದ್ಯುರತ್ನೇಽಭ್ಯುದಿತೇಽಂಬುಜಾನಿ**
**ಭುವಿ ಪ್ರಸೇದುರ್ಭುವನೋದಯಾನಿ ।**
**ಇಹ ಪ್ರಜಾತೇ ಯದುವಂಶರತ್ನೇ**
**ಸುರಾನನಾಬ್ಜಾನಿ ಚ ನಾಕಲೋಕೇ ॥ ೧೧ ॥**

**ದಿವಿ** = ಆಕಾಶದಲ್ಲಿ, **ದ್ಯುರತ್ನೇ** = ಸೂರ್ಯನು, **ಅಭ್ಯುದಿತೇ** = ಉದಿಸುತ್ತಿರಲು, **ಅಂಬುಜಾನಿ** = ಕಮಲಗಳು, **ಭುವಿ** = ಭೂಮಿಯಲ್ಲಿ, **ಪ್ರಸೇದುಃ** = ಅರಳಿದವು, **ಭುವನೋದಯಾನಿ** = ಜಲಕ್ಕೆ ಶೋಭೆಯನ್ನು ಕೊಡುವ, **ಇಹ** = ಇಲ್ಲಿ, **ಪ್ರಜಾತೇ** = ಉದಿಸುತ್ತಿರಲು, **ಯದುವಂಶರತ್ನೇ** = ಯದುವಂಶಕ್ಕೆ ರತ್ನದಂತಿರುವ ಕೃಷ್ಣನು, **ಸುರಾನನ** = ದೇವತೆಗಳ ಮುಖವೆಂಬ, **ಅಬ್ಜಾನಿ ಚ** = ಕಮಲಗಳು, **ನಾಕಲೋಕೇ** = ಸ್ವರ್ಗದಲ್ಲಿ.

ಆಕಾಶದಲ್ಲಿ ಸೂರ್ಯನೆಂಬ ರತ್ನ ಉದಿಸಿತು. ಇದರಿಂದಾಗಿ ನೀರಿಗೆ ಶೋಭೆಯನ್ನು ಕೊಡುವ ಕಮಲಗಳು ಭೂಮಿಯಲ್ಲಿ ಅರಳಿದವು. ಭೂಮಿಯಲ್ಲಿ ಯದುವಂಶಕ್ಕೇ ರತ್ನದಂತಿರುವ ಕೃಷ್ಣನು ಉದಿಸುತ್ತಿರಲು ಆಕಾಶದಲ್ಲಿ ದೇವತೆಗಳ ಮುಖಕಮಲಗಳು ಅರಳಿದವು. ಮೇಲಿನ ಲೋಕ ಹಾಗೂ ಭೂಲೋಕದವರು ಪರಸ್ಪರ ಹೊಂದಾಣಿಕೆಯಿಂದ ಇರಬೇಕು ಎಂಬ ಸಂದೇಶವನ್ನು ಈ ಶ್ಲೋಕದಿಂದ ತಿಳಿಸುತ್ತಾರೆ. ಈ ಸಂದೇಶವನ್ನು ಕೃಷ್ಣ ಮಾಡಿ ತೋರಿಸಿದ. ತನ್ನ ಅವತಾರಸಮಾಪ್ತಿಕಾಲದಲ್ಲಿ 'ಪರಸ್ಪರಂ ಭಾವಯಂತಃ ಶ್ರೇಯಃ ಪರಂ ಅವಾಪ್ಸ್ಯಥ' ಎಂಬ ಗೀತೆಯ ಮೂಲಕ ಆಡಿ ತೋರಿಸಿದ.

**ತರುವ್ರಜೇ ಪಕ್ಷಿಗಣಾಶ್ಚರಂತೋ**
**ಜಗುರ್ನಿರೀಕ್ಷ್ಯೋದಯಮುಷ್ಣರಶ್ಮೇಃ ।**
**ವ್ರಜೇ ಚ ದುಷ್ಟೋಷ್ಣಲಸನ್ಮರೀಚೇಃ**
**ಸಮಾಗತಾ ಮಾಗಧಬಂದಿಸೂತಾಃ ॥ ೧೨ ॥**

**ತರು** = ಮರಗಳ, **ವ್ರಜೇ** = ಸಮೂಹದಲ್ಲಿ, **ಪಕ್ಷಿಗಣಾಃ** = ಪಕ್ಷಿಗಳ ಗುಂಪು, **ಚರಂತಃ** = ಸಂಚರಿಸುವ, **ಜಗುಃ** = ಹಾಡಿದವು, **ನಿರೀಕ್ಷ್ಯ** = ನೋಡಿ, **ಉದಯಂ** = ಉದಯವನ್ನು, **ಉಷ್ಣರಶ್ಮೇಃ** = ಸೂರ್ಯನ, **ವ್ರಜೇ ಚ** = ಗೋಕುಲದಲ್ಲಿ, **ದುಷ್ಟ** = ದುಷ್ಟರಿಗೆ, **ಉಷ್ಣ** = ಬಿಸಿಯಾದ, **ಲಸತ್** = ಶೋಭಿಸುವ, **ಮರೀಚೇಃ** = ಕಾಂತಿಯುಳ್ಳ ಕೃಷ್ಣನ, **ಸಮಾಗತಾಃ** = ಬಂದರು, **ಮಾಗಧ** = ತಾವೇ (ಸ್ತುತಿ)ರಚಿಸಿ ಹಾಡುವವರು, **ಬಂದಿ** = ಪರರು ರಚಿಸಿದ್ದನ್ನು ಹಾಡುವವರು, **ಸೂತಾಃ** = ಗದ್ಯಪದ್ಯರೂಪಸ್ತುತಿಗಳನ್ನು ಹೇಳುವವರು.

ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯನ ಉದಯವನ್ನು ಕಂಡು ಪಕ್ಷಿಗಳು ಮರಗಳ ಸಮೂಹಗಳಲ್ಲಿ ಶಬ್ದ ಮಾಡಲು ತೊಡಗಿದವು. (ಹೇಗೆ ರಾತ್ರಿಯ ಕಳ್ಳರಿಗೆ ಸೂರ್ಯನ ಉದಯವು ಸಹಿಸಲಸಾಧ್ಯವೋ ಹಾಗೆ) ದುಷ್ಟರಿಗೆ ಸಹಿಸಲು ಅಸಾಧ್ಯವಾದ ಕಿರಣಗಳುಳ್ಳ ಕೃಷ್ಣ(ಸೂರ್ಯ)ನ ಉದಯವನ್ನು ಕಂಡು ಸ್ತುತಿಪಾಠಕರು ಹೊಗಳಲು ಆರಂಭಿಸಿದರು.

ತದಾ ಸ್ವವಂಶ್ಯೈಃ ಸಹ ರಾಜಹಂಸ್ಯೋ
ಜನೈಃ ವ್ಯದೃಶ್ಯಂತ ಶನೈಶ್ಚರಂತ್ಯಃ।
ಬೃಹನ್ನಿತಂಬಸ್ತನಭಾರಭೀರು-
ತನುಸ್ಫುರನ್ಮಧ್ಯಯುತಾಶ್ಚ ಗೋಪ್ಯಃ ॥ ೧೩ ॥

**ತದಾ** = ಆಗ, **ಸ್ವವಂಶ್ಯೈಃ** = ತಮ್ಮ ಪರಿವಾರದಿಂದ, **ಸಹ** = ಕೂಡಿಕೊಂಡು, **ರಾಜಹಂಸ್ಯಃ** = ಹಂಸಪಕ್ಷಿಗಳು, **ಜನೈಃ** = ಜನರಿಂದ, **ವ್ಯದೃಶ್ಯಂತ** = ಕಾಣಲ್ಪಟ್ಟವು, **ಶನೈಃ** = ಮೆಲ್ಲಗೆ, **ಚರಂತ್ಯಃ** = ಸಂಚರಿಸುವ, **ಬೃಹತ್** = ದೊಡ್ಡದಾದ, **ನಿತಂಬ** = ಪೃಷ್ಠದ, **ಸ್ತನ** = ಸ್ತನಗಳ, **ಭಾರ** = ಭಾರದಿಂದ, **ಭೀರು** = ಹೆದರಿದ, **ತನು** = ಕೃಶವಾದ, **ಸ್ಫುರತ್** = ಶೋಭಿಸುತ್ತಿರುವ, **ಮಧ್ಯ** = ಕಟಿಪ್ರದೇಶದಿಂದ, **ಯುತಾಃ ಚ** = ಕೂಡಿದವರಾದ, **ಗೋಪ್ಯಃ** = ಗೋಪಿಯರು (ಕೂಡ).

ಈ ಕಾಲದಲ್ಲಿ ಹೆಣ್ಣು ಹಂಸಪಕ್ಷಿಗಳು ತಮ್ಮ ಪರಿವಾರದವರಿಂದ ಕೂಡಿಕೊಂಡು ಹೋಗುತ್ತಿರುವುದನ್ನು ಜನರು ಕಂಡರು. ಅದೇ ರೀತಿ ಗೋಪಿಯರು ಯಶೋದೆಯ ಮನೆಗೆ ಬರುವುದನ್ನೂ ಕಂಡರು. ಈ ಸ್ತ್ರೀಯರು ಕೃಶವಾದ ಸೊಂಟದ ಭಾಗವುಳ್ಳವರು. ಇದು ಉತ್ತಮಸ್ತ್ರೀಯರ ಲಕ್ಷಣಗಳಲ್ಲಿ ಒಂದು. ಕಟಿಪ್ರದೇಶವು ಕೃಶವಾಗಲು ಕಾರಣವನ್ನು ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ. 'ಮೇಲೆ ಎದೆಯಲ್ಲಿ ದೊಡ್ಡದಾದ ಸ್ತನಗಳು, ಹಿಂದೆ ನಿತಂಬ ಪ್ರದೇಶವೂ ದೊಡ್ಡದು. ಈ ಎರಡರ ಭಾರದಿಂದ ಭಯಗೊಂಡು ಮಧ್ಯ(ಕಟಿ)-ಪ್ರದೇಶವು ಕೃಶವಾಗಿದೆ' ಎಂದು. ಇದರಿಂದ ಸ್ತ್ರೀಯರ ಎದೆ ಮತ್ತು ಪೃಷ್ಠದ ಲಕ್ಷಣಗಳನ್ನು ಹೇಳಿದಂತಾಯಿತು.

ಕೃಷ್ಣಂ ಸ್ವಕಾಂತಮಧುನೈವ ವಶಂ ವಿಧಾತು-
ಮುತ್ಕಾನ್ವಿತಾ ಇವ ಮನೋಹರಕೋಮಲಾಂಗ್ಯಃ ।
ವ್ಯಾಲೋಲಹಾರಸರಕುಂಡಲಕುಂತಲೋದ್ಯತ್
ಚೇಲಾಂತನೂಪುರರುಚಃ ಪಥಿ ತಾ ವಿರೇಜುಃ ॥ ೧೪ ॥

**ಕೃಷ್ಣಂ** = ಕೃಷ್ಣನನ್ನು , **ಸ್ವಕಾಂತಂ** = ತಮ್ಮ ಪತಿಯಾದ, **ಅಧುನೈವ** = ಈಗಲೇ, **ವಶಂ** =

ವಶವನ್ನಾಗಿ, **ವಿಧಾತುಂ** = ಮಾಡಲು, **ಉತ್ಕ** = ಉತ್ಸಾಹದಿಂದ, **ಅನ್ವಿತಾಃ** = ಕೂಡಿದ, **ಇವ** = ಅಂತೆ, **ಮನೋಹರ** = ಚಂದದ, **ಕೋಮಲ** = ಮೃದುವಾದ, **ಅಂಗ್ಯಃ** = ಅವಯವವುಳ್ಳ, **ವ್ಯಾಲೋಲ** = ಚಂಚಲವಾದ, **ಹಾರ** =ಮುತ್ತುಗಳ, **ಸರ** = ಸರಗಳು, **ಕುಂಡಲ** = ಕರ್ಣಾಭರಣಗಳು, **ಕುಂತಲ** = ತಲೆ ಕೂದಲು, **ಉದ್ಯತ್** = ಶೋಭಿಸುವ, **ಚೇಲ** = ಬಟ್ಟೆಯ, **ಅಂತ** = ತುದಿಯು, **ನೂಪುರ** = ಕಾಲ್ಗೆಜ್ಜೆಯು - ಇವುಗಳ, **ರುಚಃ** = ಪ್ರಕಾಶವುಳ್ಳ, **ಪಥಿ** = ದಾರಿಯಲ್ಲಿ, **ತಾಃ** = ಗೋಪಿಯರು, **ವಿರೇಜುಃ** = ಶೋಭಿಸಿ-ದರು.

**ಈ ಗೋಪಿಯರು ಬರುವಾಗ ಅವರ ಕಂಠದ ಆಭರಣಗಳು, ಕರ್ಣಾಭರಣಗಳು, ಮುಂಗುರುಳು, ಸೀರೆಯ ಸೆರಗು, ಕಾಲಗೆಜ್ಜೆ ಇವುಗಳು ಬಹಳ ಅಲುಗಾಡುತ್ತಿದ್ದವು. ಎಷ್ಟೆಂದರೆ, ಸ್ಥಿರಚಿತ್ತನಾದ ಕೃಷ್ಣನೂ ಇವರ ಅಧೀನನಾಗುತ್ತಾನೋ ಎಂಬಂತಿತ್ತು. ಅಷ್ಟು ಉತ್ಸಾಹ ಈ ಸ್ತ್ರೀಯರಲ್ಲಿ ಇತ್ತು. ಅಂತಹ ಸೌಂದರ್ಯವೂ ಇತ್ತು. ಇಂತಹ ಸ್ತ್ರೀಯರಿಂದ ಆ ದಾರಿಗೇ ಒಂದು ಶೋಭೆ.**

**ಸಹಸ್ರಶೋ ಗೋಗಣಮುಷ್ಣದೀಪ್ತಿಃ**
**ಸಮರ್ಪಯಾಮಾಸ ಪದೇ ಮುರಾರೇಃ।**
**ಸುವರ್ಣಭಾಸ್ಸಂವಲಿತಾಂಶ್ಚ ನಂದಃ**
**ಸ್ವಗೋಗಣಾನ್ ವಿಪ್ರಕುಲಾಯ ದತ್ತಾನ್ ॥ ೧೫ ॥**

**ಸಹಸ್ರಶಃ** = ಬಹಳ, **ಗೋಗಣಂ** = ಕಿರಣಗಳ ಸಮೂಹವನ್ನು, **ಉಷ್ಣದೀಪ್ತಿಃ** = ಸೂರ್ಯನು, **ಸಮರ್ಪಯಾಮಾಸ** = ಅರ್ಪಿಸಿದನು. **ಪದೇ** = ಚರಣದಲ್ಲಿ, **ಮುರಾರೇಃ** = ಕೃಷ್ಣನ, **ಸುವರ್ಣ** = ಚಿನ್ನದ, **ಭಾಃ** = ಕಾಂತಿಯಿಂದ, **ಸಂವಲಿತಾನ್** = ಕೂಡಿದ, **ನಂದಃ** = ನಂದನು, **ಸ್ವಗೋಗಣಾನ್** = ತನ್ನ ಆಕಳುಗಳ ಗುಂಪನ್ನು, **ವಿಪ್ರಕುಲಾಯ** = ಬ್ರಾಹ್ಮಣಸಮೂಹಕ್ಕೆ, **ದತ್ತಾನ್**= ಕೊಟ್ಟದ್ದನ್ನು.

ಸೂರ್ಯನು ಸಾವಿರಾರು ಕಿರಣಗಳನ್ನು ವಿಷ್ಣುಪದದಲ್ಲಿ (ಆಕಾಶದಲ್ಲಿ) ಅರ್ಪಿಸಿ-ದನು. ಆಕಾಶಕ್ಕೆ 'ವಿಷ್ಣುಪದ' ಎಂದು ಹೆಸರಿದೆ. ತ್ರಿವಿಕ್ರಮಾವತಾರಕಾಲದಲ್ಲಿ ದೇವರ ಪಾದವು ಇಡೀ ಆಕಾಶದಲ್ಲಿ ವ್ಯಾಪಿಸಿತ್ತು. ಆದ್ದರಿಂದ ನಂದಗೋಪನೂ ಚಿನ್ನದಿಂದ ಅಲಂಕೃತಗಳಾದ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಿ ಆ ಕರ್ಮವನ್ನು ವಿಷ್ಣುಪದ-ದಲ್ಲಿ ಅರ್ಪಿಸಿದನು. ಅಂದರೆ ಕೃಷ್ಣಾರ್ಪಣ ಬಿಟ್ಟನು. ವೈಷ್ಣವರು ತಾವು ಮಾಡಿದ ಎಲ್ಲಾ ಕರ್ಮಗಳನ್ನೂ ಕೃಷ್ಣಾರ್ಪಣ ಬಿಡುವುದು ಸ್ವಾಭಾವಿಕ.

**ಸ ನಂದಗೋಪಃ ಪ್ರದದೌ ದ್ವಿಜೇಭ್ಯೋ**
**ಬಹೂನಿ ಗೋರೂಪಧನಾನಿ ವಿಷ್ಣೋಃ ।**
**ತಟೇಷು ಗೋಭಿಃ ಸಹ ಸಂಚರಿಷ್ಣೋಃ**
**ಸಹಸ್ರಶಸ್ತಾ ಇವ ಸಾಧಯಿಷ್ಯನ್ ॥ ೧೬ ॥**

**ಸಃ** = ಆ, **ನಂದಗೋಪಃ** = ನಂದಗೋಪನು, **ಪ್ರದದೌ** = ಕೊಟ್ಟನು, **ದ್ವಿಜೇಭ್ಯಃ** = ಬ್ರಾಹ್ಮಣರಿಗೆ, **ಬಹೂನಿ** = ಬಹಳ, **ಗೋರೂಪಧನಾನಿ** = ಗೋರೂಪವಾದ ಸಂಪತ್ತನ್ನು, **ವಿಷ್ಣೋಃ** = ದೇವರಿಗೆ, **ತಟೇಷು** = ತೀರಗಳಲ್ಲಿ, **ಗೋಭಿಃ** = ಆಕಳುಗಳಿಂದ, **ಸಹ** = ಕೂಡಿಕೊಂಡು, **ಸಂಚರಿಷ್ಣೋಃ** = ಸಂಚರಿಸುವ, **ಸಹಸ್ರಶಃ** = ಸಾವಿರಾರು, **ತಾಃ** = ಅವುಗಳನ್ನು , **ಇವ** = ಅಂತೆ, **ಸಾಧಯಿಷ್ಯನ್**= ಮಾಡುವವನಾಗಿ.

ನಂದನು ಕೃಷ್ಣಾವತಾರಕಾಲದಲ್ಲಿ ಬ್ರಾಹ್ಮಣರಿಗೆ ಬಹಳ ಆಕಳುಗಳನ್ನು ದಾನ ಮಾಡಿದನು. ಯಾಕೆಂದರೆ, ಕೃಷ್ಣನು ಮುಂದೆ ಆಕಳು ಮೇಯಿಸಲಿದ್ದಾನೆ. ಆಗ ಹಟ್ಟಿಯಲ್ಲಿ ಆಕಳುಗಳು ಸಾವಿರಪಟ್ಟು ಹೆಚ್ಚಾಗಲಿ ಎಂದು. ಸತ್ಪಾತ್ರದಲ್ಲಿ ದಾನ ಮಾಡಿದರೆ ಅದು ಅನೇಕ ಪಟ್ಟು ಫಲಿಸುತ್ತದೆ ಎಂದು ಶಾಸ್ತ್ರದ ಮಾತು. 'ದಾನಂ ಧ್ರುವಂ ಫಲತಿ ಪಾತ್ರ-**ಗುಣಾನುಕೂಲ್ಯಾತ್**' ಎಂದು.

**ವಿಪ್ರರ್ಷಿದೇವಪಿತೃಬಂದಿಸುಹೃಜ್ಜನೇಭ್ಯೋ**
**ವಿತ್ತಾನ್ಯದಾತ್ ಕಿಲ ಸುತುಷ್ಟಮನಾಃ ಸ ನಂದಃ ।**
**ಇತ್ಥಂ ಮತಿರ್ಮಮ ವಿಭೋಃ ಪಿತೃತಾಂ ಸ್ವಸಂಸ್ಥಾಂ**
**ಉದ್ವೀಕ್ಷ್ಯ ತಾನ್ ಪ್ರಹಸತೋಽಭಿಮುಖೀಚಿಕೀರ್ಷುಃ॥ ೧೭**

**ವಿಪ್ರ** = ಬ್ರಾಹ್ಮಣರು, **ಋಷಿ** = ಋಷಿಗಳು, **ದೇವ** = ದೇವತೆಗಳು, **ಪಿತೃ** = ಪಿತೃಗಳು, **ಬಂದಿ** = ಹೊಗಳು ಭಟರು, **ಸುಹೃತ್** = ಮಿತ್ರರಾದ, **ಜನೇಭ್ಯಃ** = ಜನರಿಗೆ, **ವಿತ್ತಾನಿ** = ದಕ್ಷಿಣೆಯನ್ನು, **ಅದಾತ್ ಕಿಲ** = ಕೊಟ್ಟನಷ್ಟೆ. **ಸುತುಷ್ಟಮನಾಃ** = ಸಂತೋಷಗೊಂಡ ಮನಸ್ಸುಳ್ಳವನಾಗಿ, **ಸಃ ನಂದಃ** = ಆ ನಂದನು, **ಇತ್ಥಂ** = ಈ ರೀತಿಯಾಗಿ, **ಮತಿಃ** = ಬುದ್ಧಿ, **ಮಮ** = ನನಗೆ, **ವಿಭೋಃ** = ದೇವರ, **ಪಿತೃತಾಂ** = ತಂದೆತನವನ್ನು , **ಸ್ವಸಂಸ್ಥಾಂ** = ತನ್ನಲ್ಲಿರುವ, **ಉದ್ವೀಕ್ಷ್ಯ** = ನೋಡಿ, **ತಾನ್** = ಅವರನ್ನು , **ಪ್ರಹಸತಃ** = ನಗುವ, **ಅಭಿಮುಖೀ** = ತನ್ನವರನ್ನಾಗಿ, **ಚಿಕೀರ್ಷುಃ** = ಮಾಡುವ ಇಚ್ಛೆಯುಳ್ಳವನಾಗಿ.

ಪುತ್ರಜನನದ ಆನಂದದಿಂದ ನಂದನು ಬ್ರಾಹ್ಮಣರು, ಋಷಿಗಳು, ದೇವತೆಗಳು, ಪಿತೃಗಳು, ಹೊಗಳುಭಟರು, ಬಂಧುಗಳಿಗೆ ಬಹಳ ದಾನ ಮಾಡಿದ. ರಾಜರು ಕಾರಣವನ್ನು

ತಿಳಿಸುತ್ತಾರೆ – ಕೃಷ್ಣನಿಗೆ ತಂದೆಯ ಸ್ಥಾನದಲ್ಲಿರುವ ನಂದನನ್ನು ನೋಡಿ ಇವರೆಲ್ಲಾ ಅಪಹಾಸ್ಯ ಮಾಡಬಾರದು ಎಂಬ ಸಲುವಾಗಿ ಅವರನ್ನು ತನ್ನೊಳಗೆ ಹಾಕಿಕೊಳ್ಳಲು (ತನ್ನವರಂತೆ ಮಾಡಿಕೊಳ್ಳಲು) ಎಂದು. ಲೋಕದಲ್ಲಿಯೂ ಕೂಡಾ ದುಡ್ಡುಕೊಟ್ಟರೆ ಅಪ-ಹಾಸ್ಯ ಮಾಡುವುದನ್ನು ನಿಲ್ಲಿಸುತ್ತಾರೆ.

ಧ್ವಜಪ್ರಭೈರೂರ್ಧ್ವಮುಖೈರ್ಮಯೂಖೈಃ
ಅಧೋಮುಖೈಃ ತೋರಣಸಮ್ಮಿತೈಶ್ಚ ।
ವಿಭೂಷಿತಾ ದ್ಯೌಃ ವ್ರಜಭೂಶ್ಚ ಚಿತ್ರ-
ಧ್ವಜೈಃ ಸ್ಫುರತ್ತೋರಣಸಂಚಯೈಶ್ಚ ॥ ೧೮ ॥

**ಧ್ವಜಪ್ರಭೈಃ** = ಧ್ವಜದಂತಿರುವ, **ಊರ್ಧ್ವಮುಖೈಃ** = ಮೇಲ್ಮುಖವಾದ, **ಮಯೂಖೈಃ** = ಕಿರಣಗಳಿಂದ, **ಅಧೋಮುಖೈಃ** = ಕೆಳಮುಖವಾದ, **ತೋರಣಸಮ್ಮಿತೈಶ್ಚ** = ತೋರಣ-ದಂತಿರುವ, **ವಿಭೂಷಿತಾ** = ಅಲಂಕೃತವಾಯಿತು, **ದ್ಯೌಃ** = ಸ್ವರ್ಗವು, **ವ್ರಜಭೂಶ್ಚ** = ನಂದಗೋಕುಲವೂ, **ಚಿತ್ರಧ್ವಜೈಃ** = ನಾನಾ ಬಣ್ಣದ ಧ್ವಜಗಳಿಂದ, **ಸ್ಫುರತ್** = ಶೋಭಿ-ಸುವ, **ತೋರಣ** = ತೋರಣಗಳ, **ಸಂಚಯೈಃ ಚ** = ಗುಂಪುಗಳಿಂದಲೂ.

ಆಕಾಶದಲ್ಲಿ ಸೂರ್ಯನ ಕಿರಣಗಳು ಕೆಲವು ಮೇಲ್ಮುಖವಾಗಿಯೂ ಕೆಲವು ಕೆಳ-ಮುಖವಾಗಿಯೂ ಇದ್ದವು. ಇದು ಆಕಾಶದಲ್ಲಿ ಧ್ವಜ ಹಾಗೂ ತೋರಣಗಳಂತೆ ತೋರು-ತ್ತಿದ್ದವು. ನಂದಗೋಕುಲದಲ್ಲಿಯೂ ಧ್ವಜಗಳೂ ತೋರಣಗಳೂ ಶೋಭಿಸುತ್ತಿದ್ದವು. ದೇವರು ಇರುವ ದೇಶವು ಎಷ್ಟು ಕೆಳಗಿದ್ದರೂ ಅದು ಎತ್ತರದ ಲೋಕದ ಹೋಲಿಕೆಯನ್ನು ಹೊಂದುತ್ತದೆ.

ಲಸತ್ಪತಾಕಧ್ವಜಕುಂಭತೋರಣೈಃ
ವಿಭಾಸಿತಾನಿ ವ್ರಜಮಂದಿರಾಣಿ ತೇ ।
ಪ್ರವೇಕ್ಷ್ಯತೀಮಾನಿ ಸ ಬಾಲಲೀಲಯಾ
ವಿಭುರ್ಬತೇತೀವ ವಿತೇನುರಂಜಸಾ ॥ ೧೯ ॥

**ಲಸತ್** = ಶೋಭಿಸುವ, **ಪತಾಕ** = ಪತಾಕೆಗಳು, **ಧ್ವಜ** = ಧ್ವಜಗಳು, **ಕುಂಭ** = ಪೂರ್ಣಕುಂಭಗಳು, **ತೋರಣೈಃ** = ತೋರಣಗಳಿಂದ, **ವಿಭಾಸಿತಾನಿ** = ಬೆಳಗಿದ್ದನ್ನಾಗಿ, **ವ್ರಜಮಂದಿರಾಣಿ** = ಗೋಕುಲದ ಮನೆಗಳನ್ನು, **ತೇ** = ಆ ಗೋಪರು, **ಪ್ರವೇಕ್ಷ್ಯತಿ** = ಪ್ರವೇಶಿಸುತ್ತಾನೆ. **ಇಮಾನಿ** = ಈ, **ಸಃ** = ಆ, **ಬಾಲಲೀಲಯಾ** = ಬಾಲಲೀಲೆಗಳಿಂದ, **ವಿಭುಃ** = ಕೃಷ್ಣನು, **ಬತ** = ಆಶ್ಚರ್ಯ, **ಇತಿ ಇವ** = ಎಂಬಂತೆ, **ವಿತೇನುಃ** = ಮಾಡಿದರು, **ಅಂಜಸಾ** = ಚೆನ್ನಾಗಿ.

ಗೋಕುಲದಲ್ಲಿ ಎಲ್ಲರ ಮನೆಗಳೂ ಧ್ವಜ, ಪೂರ್ಣಕುಂಭ, ತೋರಣಗಳು ಇವುಗಳಿಂದ ಶೋಭಿಸುತ್ತಿದ್ದವು. ಯಾಕೆಂದರೆ, ಕೃಷ್ಣನು ತನ್ನ ಬಾಲಲೀಲೆಗಳಿಂದ ಈ ಮನೆಗಳನ್ನೆಲ್ಲಾ ಪ್ರವೇಶಿಸುತ್ತಾನೆ ಎಂಬ ಅಭಿಪ್ರಾಯದಿಂದ ಎಂಬಂತಿತ್ತು. ಕೃಷ್ಣನು ತನ್ನ ಲೀಲೆಗಳನ್ನು ತೋರಿಸಲು ಸ್ವಲ್ಪ ತಡ ಇದ್ದರೂ ಗೋಪರು ಈಗಲೇ ಸಿದ್ಧರಾಗಿದ್ದರು. ದೇವರ ಸಾಕ್ಷಾತ್ಕಾರ ದೇವರ ಇಚ್ಛೆಗೆ ಬಂದಾಗ ಆಗಲಿ. ನಾವು ಮಾತ್ರ ಈಗಲೇ ಸಾಧನಾನುಷ್ಠಾನ ಮಾಡಿ ಸಿದ್ಧರಿರಬೇಕು. ಇಂದಿನ ದಿನ ಸುದಿನ. ನಾಳೆಗೆ ಎಂದರೆ ಅದು ಕಠಿನ ಎಂಬ ದಾಸರ ಹಾಡು ಈ ವಿಷಯದಲ್ಲಿ ಪ್ರಮಾಣವಾಗಿದೆ.

**ಸ ಪಾಲಯಿಷ್ಯನ್ ಸದಯಾವಲೋಕೈಃ**
**ಇಮಾನ್ ಕೃತಾರ್ಥಾನ್ ರಚಯಿಷ್ಯತೀತಿ ।**
**ಹೃದೇವ ವತ್ಸವ್ರಜಗೋವೃಷಾದೀನ್**
**ಅಲಂ ಪ್ರಚಕ್ರುಃ ಸಹರಿದ್ರತೈಲೈಃ ॥ ೨೦ ॥**

**ಸಃ** = ಕೃಷ್ಣನು, **ಪಾಲಯಿಷ್ಯನ್** = ರಕ್ಷಿಸುವವನಾಗಿ, **ಸದಯಾವಲೋಕೈಃ** = ದಯಾಪೂರ್ಣವಾದ ನೋಟದಿಂದ, **ಇಮಾನ್** = ಈ ಪ್ರಾಣಿಗಳನ್ನು, **ಕೃತಾರ್ಥಾನ್** = ಧನ್ಯಗಳನ್ನಾಗಿ, **ರಚಯಿಷ್ಯತಿ** = ಮಾಡುತ್ತಾನೆ, **ಇತಿ** = ಎಂದು, **ಹೃದಾ ಇವ** = ಅಭಿಪ್ರಾಯದಂತೆ, **ವತ್ಸ** = ಕರುಗಳ, **ವ್ರಜ** = ಸಮೂಹಗಳನ್ನು, **ಗೋ** = ಆಕಳುಗಳನ್ನು, **ವೃಷಾದೀನ್** = ಎತ್ತುಗಳು ಮೊದಲಾದವುಗಳನ್ನು, **ಅಲಂ** = ಚೆನ್ನಾಗಿ, **ಪ್ರಚಕ್ರುಃ** = ಸಿಂಗರಿಸಿದರು, **ಸಹರಿದ್ರತೈಲೈಃ** = ಅರಸಿನದಿಂದ ಕೂಡಿದ ಎಣ್ಣೆಗಳಿಂದ.

ಈ ಗೋಪರು ತಮ್ಮ ಮನೆಯಲ್ಲಿರುವ ಸಾಧುಪ್ರಾಣಿಗಳನ್ನು ಎಣ್ಣೆ, ಅರಿಶಿನ, ಪುಷ್ಪಾದಿಗಳಿಂದ ಅಲಂಕರಿಸಿದರು. ಯಾಕೆಂದರೆ, ಕೃಷ್ಣ ಈ ಪ್ರಾಣಿಗಳನ್ನು ರಕ್ಷಿಸುತ್ತಾನೆ. ತನ್ನ ಕೃಪೆಯನ್ನು ಅವುಗಳ ಮೇಲೆ ಬೀರುತ್ತಾನೆ. ಅವುಗಳನ್ನು ಧನ್ಯಗಳನ್ನಾಗಿ ಮಾಡುತ್ತಾನೆ. ದೇವರ ದಯಾಪಾತ್ರರು ಚೆನ್ನಾಗಿ ಅಲಂಕೃತರಾಗಿರಬೇಕು ಎಂದು.

**ಇತ್ಥಂ ತ್ವಮತ್ರ ಶಿಶುಭಾವಮುಪೇತ್ಯ ಸಾಕ-**
**ಮಸ್ಮಾಭಿರೀಶ ವಿಹರೇತಿ ವದನ್ನಿವಾಸ್ಮೈ ।**
**ದಧ್ನಾ ಘೃತೇನ ಪಯಸಾ ನವನೀತಜಾತೈಃ**
**ಸ್ನಿಗ್ಧಸ್ತದೈತ್ಯ ವಿಜಹಾರ ಕುಮಾರವರ್ಗಃ ॥ ೨೧ ॥**

**ಇತ್ಥಂ** = ಈ ರೀತಿಯಾಗಿ, **ತ್ವಂ** = ನೀನು, **ಅತ್ರ** = ಇಲ್ಲಿ, **ಶಿಶುಭಾವಂ** = ಬಾಲ್ಯವನ್ನು, **ಉಪೇತ್ಯ** = ಹೊಂದಿ, **ಸಾಕಂ** = ಕೂಡಿ, **ಅಸ್ಮಾಭಿಃ** = ನಮ್ಮಿಂದ, **ಈಶ** = ಒಡೆಯನೇ,

**ವಿಹರ** = ಕ್ರೀಡಿಸು, **ಇತಿ** = ಎಂದು, **ವದನ್ನಿವ** = ಹೇಳುವವರಂತೆ, **ಅಸ್ಮೈ** = ಕೃಷ್ಣನಿಗೆ, **ದಧ್ನಾ** = ಮೊಸರಿನಿಂದ, **ಘೃತೇನ** = ತುಪ್ಪದಿಂದ, **ಪಯಸಾ** = ಹಾಲಿನಿಂದ, **ನವನೀತ** = ಬೆಣ್ಣೆಯ, **ಜಾತೈಃ** = ಸಮೂಹದಿಂದ, **ಸ್ನಿಗ್ಧಃ** = ಪ್ರೀತಿಯಿಂದ ಕೂಡಿದ, **ತದಾ** = ಆಗ, **ಏತ್ಯ** = ಬಂದು, **ವಿಜಹಾರ** = ಕ್ರೀಡಿಸಿತು, **ಕುಮಾರವರ್ಗಃ** = ಮಕ್ಕಳ ಗುಂಪು.

ಗೋಪಬಾಲಕರು ತಮ್ಮ ಮನೆಯಲ್ಲಿರುವ ಸಾತ್ವಿಕಪದಾರ್ಥಗಳಾದ ಗವ್ಯಗಳನ್ನು ತಮ್ಮ ಕೈಯ್ಯಲ್ಲಿ ಹಿಡಿದುಕೊಂಡು ದೇವರ ಮನೆಗೆ ಬಂದರು. ಅಲ್ಲೇ ಬಹಳ ಆಡಿದರು. ಬಾಲರೂಪಿಯಾದ ಭಗವಂತನು ಈ ಬಾಲಕರ ಜೊತೆಗೆ ಇದೇ ರೀತಿ ಆಡಬೇಕು ಎಂದು. ಊರಿಗೆ ಹಿರಿಯರಾದವರ ಮಕ್ಕಳು ತಮ್ಮ ಜೊತೆಗೆ ಆಟಕ್ಕೆ ಬರಬೇಕೆಂದು ಇತರ ಮಕ್ಕಳು ಅವರ ಮನೆಯ ಮುಂದೆ ಚೆಂಡು ಇತ್ಯಾದಿ ಆಟದ ಸಾಮಾನುಗಳನ್ನು ಹಿಡಿದುಕೊಂಡು ಬರುವುದು ಸ್ವಾಭಾವಿಕ.

**ವಿಧೌ ಪ್ರಶಾಂತೇಽಭ್ಯುದಿತೇ ಜನೋಽಯಮ್**
**ಅಭುಂಕ್ತ ಭೋಗಾನ್ ಪುನರುಷ್ಣಭಾನೌ ।**
**ಕರೋತಿ ಧರ್ಮಾಂಶ್ಚಕಿತಸ್ತಥಾ ತದ್**
**ಬಿಭೇತಿ ಸರ್ವಃ ಪರುಷಾನ್ನ ಶಾಂತಾತ್ ॥ ೨೨ ॥**

**ವಿಧೌ** = ಚಂದ್ರನು, **ಪ್ರಶಾಂತೇ** = ಶಾಂತನಾದ, **ಅಭ್ಯುದಿತೇ** = ಉದಿಸುತ್ತಿರಲು, **ಜನಃ** = ಜನರು, **ಅಯಂ** = ಈ, **ಅಭುಂಕ್ತ** = ಅನುಭವಿಸಿತು, **ಭೋಗಾನ್** = ಸುಖಗಳನ್ನು, **ಪುನಃ** = ಮತ್ತು, **ಉಷ್ಣಭಾನೌ** = ಸೂರ್ಯನು, **ಕರೋತಿ** = ಮಾಡುತ್ತಾನೆ. **ಧರ್ಮಾನ್** = ಪುಣ್ಯಕೆಲಸಗಳನ್ನು, **ಚಕಿತಃ** = ಭಯಗೊಂಡು, **ತಥಾ** = ಹಾಗೆ, **ತತ್** = ಅದು, **ಬಿಭೇತಿ** = ಹೆದರುತ್ತದೆ, **ಸರ್ವ** = ಎಲ್ಲಾ ಜನವೂ, **ಪರುಷಾತ್** = ಜೋರಿನವರಿಂದ, **ನ** = ಅಲ್ಲ, **ಶಾಂತಾತ್**= ಸಾಧುವಿನಿಂದ.

ಶಾಂತನಾದ ಚಂದ್ರನು ಉದಿಸುವಾಗ ಜನರು ನಿರ್ಭೀತಿಯಿಂದ ನಾನಾರೀತಿಯ ಭೋಗಗಳನ್ನು ಅನುಭವಿಸುತ್ತಾರೆ. ಆದರೆ ತೀಕ್ಷ್ಣನಾದ ಸೂರ್ಯನು ಉದಿಸುತ್ತಿರುವಾಗ ಎಲ್ಲರೂ ವಿಲಾಸಜೀವನವನ್ನು ನಿಲ್ಲಿಸಿ, ಸ್ನಾನ ಜಪಾದಿಗಳಲ್ಲಿ ಧರ್ಮಮಾರ್ಗದಲ್ಲಿ ತೊಡಗುತ್ತಾರೆ.

ರಾಜರು ತಿಳಿಸುತ್ತಾರೆ – ಎಲ್ಲರೂ ಕ್ರೂರಿಗಳಿಗೆ ಹೆದರುತ್ತಾರೆ; ಶಾಂತರಿಗೆ ಅಲ್ಲ ಎಂದು. ಇಲ್ಲಿ ಒಂದು ಸಂದೇಶ ಇದೆ – ರಾತ್ರಿ ಭೋಗಕಾಲ; ಹಗಲು ಯೋಗಕಾಲ.

ನಭಃ ಸ್ಪೃಶನ್ ಉನ್ಮುಖದೀಪ್ತಿವೃಂದೈಃ
ಅಸೌ ಕ್ರಮೇಣೋರ್ಧ್ವಮಿಯಾಯ ಭಾಸ್ವಾನ್ ।
ತಥಾಹಿ ತದ್ವಿಷ್ಣುಪದಾನುಷಕ್ತ-
ಕರಃ ಕಥಂ ನೋರ್ಧ್ವಮುಪೈತಿ ಲೋಕಃ ॥ ೨೩ ॥

**ನಭಃ** = ಆಕಾಶವನ್ನು, **ಸ್ಪೃಶನ್** = ಮುಟ್ಟುವ, **ಉನ್ಮುಖ** = ಮೇಲ್ಮುಖವಾದ, **ದೀಪ್ತಿವೃಂದೈಃ** = ಕಿರಣಗಳ ಗುಂಪುಗಳಿಂದ, **ಅಸೌ** = ಈ, **ಕ್ರಮೇಣ** = ಕ್ರಮದಿಂದ, **ಊರ್ಧ್ವಮ್** = ಮೇಲೆ, **ಇಯಾಯ** = ಬಂದನು, **ಭಾಸ್ವಾನ್** = ಸೂರ್ಯನು, **ತಥಾಹಿ** = ಹಾಗೆ, **ತತ್** = ಅದು, **ವಿಷ್ಣುಪದ** = ವಿಷ್ಣುಪಾದದಲ್ಲಿ(ಆಕಾಶದಲ್ಲಿ), **ಅನುಷಕ್ತ** = ಸಂಬದ್ಧವಾದ, **ಕರಃ** = ಕೈಗಳುಳ್ಳ, **ಕಥಂ** = ಹೇಗೆ, **ನ** = ಇಲ್ಲ, **ಊರ್ಧ್ವಮ್** = ಎತ್ತರವನ್ನು, **ಉಪೈತಿ** = ಹೊಂದುವುದು, **ಲೋಕಃ** = ಜನವು.

ಸೂರ್ಯನು ತನ್ನ ಮೇಲ್ಮುಖವಾದ ಕಿರಣ(ಕರ)ಗಳಿಂದ ಆಕಾಶ(ವಿಷ್ಣುಪದ)ವನ್ನು ಹಿಡಿದವನಾಗಿ ಕ್ರಮೇಣ ಮೇಲೆ ಮೇಲೆ ಹೋದನು. ಇದು ಸಹಜ. ಕರಗಳಿಂದ ವಿಷ್ಣು-ಪದವನ್ನು ಹಿಡಿದವನು ಖಂಡಿತವಾಗಿಯೂ ಮೇಲೇರಲೇ ಬೇಕು ಹೊರತು ಕೆಳಗೆ ಇಳಿಯಬಾರದು.

ಸೋಮಾನ್ವಯೇ ಜಾತಮಿನೋ ನಿರೀಕ್ಷ್ಯ
ರಾಮಾನುಜಂ ಮನ್ಯುಮಿವಾದಧಾನಃ ।
ರಾಗಂ ಪರಿತ್ಯಜ್ಯ ಬಭೂವ ತೀಕ್ಷ್ಣಃ
ಶ್ರೇಯೋಽನುಜಸ್ಯಾಪಿ ನ ವೈ ಸಹಂತೇ ॥ ೨೪ ॥

**ಸೋಮ** = ಚಂದ್ರನ, **ಅನ್ವಯೇ** = ವಂಶದಲ್ಲಿ, **ಜಾತಂ** = ಹುಟ್ಟಿದ, **ಇನಃ** = ಸೂರ್ಯನು, **ನಿರೀಕ್ಷ್ಯ** = ನೋಡಿ, **ರಾಮ** = ಬಲರಾಮನ, **ಅನುಜಂ** = ತಮ್ಮನಾದ ಕೃಷ್ಣನನ್ನು, **ಮನ್ಯುಂ** = ಸಿಟ್ಟನ್ನು, **ಇವ** = ಅಂತೆ, **ಆದಧಾನಃ** = ಹೊಂದಿದವನಾಗಿ, **ರಾಗಂ** = ಕೆಂಪುಬಣ್ಣವನ್ನೂ, ಶಾಂತತೆಯನ್ನೂ, **ಪರಿತ್ಯಜ್ಯ** = ಬಿಟ್ಟು, **ಬಭೂವ** = ಆದನು, **ತೀಕ್ಷ್ಣಃ** = ಕ್ರೂರಿಯು, **ಶ್ರೇಯಃ** = ಒಳಿತನ್ನು, **ಅನುಜಸ್ಯ ಅಪಿ** = ತಮ್ಮನ-ದ್ದಾದರೂ, **ನ ವೈ ಸಹಂತೇ** = ಸಹಿಸುವುದಿಲ್ಲ.

ಸೂರ್ಯಚಂದ್ರರು ಅಣ್ಣತಮ್ಮಂದಿರು ಎಂದು ಕವಿಕಲ್ಪನೆ. ಕೃಷ್ಣನು ತಮ್ಮನ ವಂಶದಲ್ಲಿ ಅವತರಿಸಿದ್ದಾನೆ ಎಂದು ತಿಳಿದ ಸೂರ್ಯನು ಆರಂಭದಲ್ಲಿದ್ದ ಸೌಮ್ಯತೆಯನ್ನು ತ್ಯಜಿಸಿ ಈಗ ಕ್ರೂರಿಯಾಗಿದ್ದಾನೆ. ಆರಂಭದಲ್ಲಿ ಆತನಿಗೆ ಈ ವಿಷಯ ತಿಳಿದಿರಲಿಲ್ಲ. ಜಗತ್ತಿನಲ್ಲಿ ಕೆಲವೆಡೆ

ಈಗಲೂ ಇದೆ – ತಮ್ಮನ ಕೀರ್ತಿಯನ್ನು ಅಣ್ಣನು ಸಹಿಸದೇ ಇರುವುದು. ಒಟ್ಟಾರೆ ಅಭಿಪ್ರಾಯ – ''ಮಧ್ಯಾಹ್ನ ಆಯಿತು'' ಎಂದು.

**ಗ್ಲಾನಂ^೧ ವಿಧತ್ತೇ ನ ಸುಖಂ ಜನಾನಾಂ**
**ಛಾಯಾಶ್ರಿತಾನಾಮಪಿ ತಿಗ್ಮರೋಚಿಃ* ।**
**ಕ್ರೂರೋऽಪಿ ಮರ್ತ್ಯಃ ಸ್ವಕಲತ್ರಸಾಂದ್ರ-**
**ಸಂಬಂಧಭಾಜಾಂ ನ ಹಿ ತಾಪದಾಯೀ ॥ ೨೫ ॥**

**ಗ್ಲಾನಂ** = ದುಃಖವನ್ನು, **ವಿಧತ್ತೇ** = ಮಾಡುತ್ತಾನೆ, **ನ** = ಇಲ್ಲ, **ಸುಖಂ** = ಸುಖ-ಗಳನ್ನು, **ಜನಾನಾಂ** = ಜನರ, **ಛಾಯಾಶ್ರಿತಾನಾಂ** = ನೆರಳನ್ನು ಆಶ್ರಯಿಸಿದವರ, **ಅಪಿ** = ಕೂಡಾ, **ತಿಗ್ಮ** = ತೀಕ್ಷ್ಣವಾದ, **ರೋಚಿಃ** = ಕಿರಣಗಳುಳ್ಳ ಸೂರ್ಯನು, **ಕ್ರೂರೋऽ-ಪಿ** = ದುಷ್ಟನಾದರೂ, **ಮರ್ತ್ಯಃ** = ಮಾನವನು, **ಸ್ವಕಲತ್ರ** = ತನ್ನ ಪತ್ನಿಯ, **ಸಾಂದ್ರ** = ನಿರಂತರವಾದ, **ಸಂಬಂಧ** = ಸಂಬಂಧವನ್ನು, **ಭಾಜಾಂ** = ಹೊಂದುವವರಿಗೆ, **ನ ಹಿ** = ಅಲ್ಲವಷ್ಟೇ, **ತಾಪದಾಯೀ** = ದುಃಖವನ್ನು ಕೊಡುವವನು.

ಸೂರ್ಯನು ಎಷ್ಟು ಉರಿಯುತ್ತಿದ್ದರೂ ಛಾಯಾಳನ್ನು (ನೆರಳು - ಸೂರ್ಯನ ಪತ್ನಿಯ ಹೆಸರು ಛಾಯಾ) ಆಶ್ರಯಿಸಿದವರಿಗೆ ತಾಪವನ್ನು ಉಂಟು ಮಾಡುವುದಿಲ್ಲ. ಲೋಕದಲ್ಲಿಯೂ ಈ ರೀತಿಯೇ ಇರುವುದು – ಕೆಲವರು ಬಹಳ ಕೋಪಿಗಳಾಗಿರುತ್ತಾರೆ. ಇವರ ಕೋಪದಿಂದ ನಾವು ಪಾರಾಗಬೇಕಾದರೆ ಇವರ ಪತ್ನಿಯನ್ನು ಆಶ್ರಯಿಸಬೇಕು.

**ಯತೋ ಹಿ ಗೋರೂಪಧರಾಂ ಧರಿತ್ರೀಂ**
**ಸ ಪಾಲಯಿಷ್ಯನ್ ಹರಿರಾವಿರಾಸೀತ್ ।**
**ಸಹಾನುಕೂಲೈಃ ಅಮರೈಃ ಸ್ವಕೀಯೈಃ**
**ತತಃ ಸ ಗೋಪಾಲಕವಂಶಜೋऽಭೂತ್ ॥ ೨೬ ॥**

**ಯತಃ** = ಯಾವಕಾರಣದಿಂದ, **ಗೋ** = ಆಕಳಿನ, **ರೂಪ** = ಆಕಾರವನ್ನು, **ಧರಾಂ** = ಧರಿಸಿರುವ, **ಧರಿತ್ರೀಂ** = ಭೂಮಿಯನ್ನು, **ಸಃ** = ಆ, **ಪಾಲಯಿಷ್ಯನ್** = ರಕ್ಷಿಸು-ವವನಾಗಿ, **ಹರಿಃ** = ದೇವರು, **ಆವಿರಾಸೀತ್** = ಅವತರಿಸಿದನು, **ಸಹ** = ಕೂಡಿ-ಕೊಂಡು, **ಅನುಕೂಲೈಃ** = ಅನುಕೂಲರಾದ, **ಅಮರೈಃ** = ದೇವತೆಗಳಿಂದ, **ಸ್ವಕೀಯೈಃ** = ತನ್ನವರಾದ, **ತತಃ** = ಆದ್ದರಿಂದ, **ಸಃ** = ದೇವರು, **ಗೋಪಾಲಕ** = ಗೊಲ್ಲರ, **ವಂಶಜಃ** = ವಂಶದಲ್ಲಿ ಹುಟ್ಟಿದವನು, **ಅಭೂತ್** = ಆದನು.

---

^೧ ಮ್ಲಾನಂ; * ಭಾನುಃ – ಪಾ.

ದೇವರು ದನ ಮೇಯಿಸುವವರ ಕುಲದಲ್ಲಿ ಅವತರಿಸಲು ಕಾರಣ – ಭೂದೇವಿಯು ತಾನು ಆಕಳಿನ ರೂಪದಿಂದ ದೇವರನ್ನು ಪ್ರಾರ್ಥಿಸಿದ್ದಳು. ಆದ್ದರಿಂದ ದೇವರು ಆ ಆಕಳನ್ನು ಕಾಯುವ ಸಲುವಾಗಿ ಗೋಪಾಲಕರ ಕುಲದಲ್ಲಿ ಕಾಣಿಸಿಕೊಂಡನು. ತನ್ನ ಜೊತೆಗೆ ಪರಿವಾರ ದೇವತೆಗಳನ್ನೂ ಕರೆತಂದನು. ಪ್ರಾರ್ಥಿಸುವವರ ಅಪೇಕ್ಷೆಗೆ ಅನುಗುಣವಾಗಿ ದೇವರ ಅವತಾರ.

●●●●

**ಸಂದೇಶ**

'ಶ್ರೇಯೋಽನುಜಸ್ಯಾಪಿ ನ ವೈ ಸಹಂತಿ'

ಲೋಕದಲ್ಲಿ ಕೆಲವರು ತಮ್ಮನ ಅಭಿವೃದ್ಧಿಯನ್ನೂ ಸಹಿಸುವುದಿಲ್ಲ

---

**ಅಜನ್ಮನಸ್ತಸ್ಯ ಹಿ ಜಾತಕರ್ಮ**
**ವಿಧಾಯ ವಿಪ್ರಾ ವಿದಧುರ್ವಿಧಿಜ್ಞಾಃ ।**
**ಮಧೋಃ ಕುಲೇಽಜಾತಮಪಿ ಸ್ವಮಂತ್ರ-**
**ಮಧುಶ್ರಿಯಾ ಮಾಧವಮಾದಿದೇವಮ್ ॥ ೨೭ ॥**

**ಅಜನ್ಮನಃ** = ಉತ್ಪತ್ತಿ ಇಲ್ಲದ, **ತಸ್ಯ** = ಆ ಕೃಷ್ಣನಿಗೆ, **ಹಿ ಜಾತಕರ್ಮ** = ಉತ್ಪತ್ತಿಯ ನಂತರ ಮಾಡುವ ಕರ್ಮಗಳನ್ನು, **ವಿಧಾಯ** = ಮಾಡಿ, **ವಿಪ್ರಾಃ** = ಬ್ರಾಹ್ಮಣರು, **ವಿದಧುಃ** = ಮಾಡಿದರು. **ವಿಧಿಜ್ಞಾಃ** = ನಿಯಮಗಳನ್ನು ತಿಳಿದಿರುವ, **ಮಧೋಃ** = ಮಧುನಾಮಕ ಯಾದವನ, **ಕುಲೇ** = ವಂಶದಲ್ಲಿ, **ಅಜಾತಮ್ ಅಪಿ** = ಹುಟ್ಟದಿ-ದ್ದರೂ, **ಸ್ವ** = ತಮ್ಮ, **ಮಂತ್ರ** = ಜಾತಕರ್ಮಕ್ಕೆ ಸಂಬಂಧಪಟ್ಟ ಮಂತ್ರಗಳ, **ಮಧು** = ಆ ಕರ್ಮಕ್ಕೆ ಉಪಯುಕ್ತವಾದ ಜೇನಿನ, **ಶ್ರಿಯಾ** = ಕಾಂತಿಯಿಂದ, **ಮಾಧವಂ** = ಮಾಧವನನ್ನಾಗಿ, **ಆದಿದೇವಂ** = ಆರಂಭದ ದೇವನಾದ ಕೃಷ್ಣನನ್ನು.

ತಿಳಿದ ಪುರೋಹಿತರು ಶ್ರೀಕೃಷ್ಣನಿಗೆ ಜಾತಕರ್ಮವನ್ನು ಮಾಡಿದರು. ಹುಟ್ಟಿದ ಮಗು-ವಿಗೆ ಆಯುಷ್ಯಾದಿಗಳ ವೃದ್ಧಿಗೆ ಮಾಡಬೇಕಾದ ಕರ್ಮ. ದೇವರು ಹುಟ್ಟಲೇ ಇಲ್ಲ. ಆದರೂ ಮಧು ಎಂಬ ಯಾದವನ ವಂಶದಲ್ಲಿ ಬಂದಿರುವ ದೇವರಿಗೆ ಈ ಕರ್ಮವನ್ನು ಮಾಡಿ, ದೇವರನ್ನು ಮಾಧವನನ್ನಾಗಿ ಮಾಡಿದರು. ಜಾತಕರ್ಮಕ್ಕೆ ಬೇಕಾದ ವೇದಮಂತ್ರ-ಗಳಿಂದ ಪ್ರತಿಪಾದ್ಯ, ಆದ್ದರಿಂದ ಮಾಧವ. ಮಾಯಾಃ ಅಂದರೆ ವಿದ್ಯೆಗೆ ಧವಃ = ಅಧಿಪತಿ. ಈ ರೀತಿ ಮಾಧವನಾದ. ಹಾಗೆಯೇ ಜಾತಕರ್ಮಕ್ಕೆ ಮಧು = ಜೇನು ಬೇಕು. ದೇವರ ಈ ಕ್ರಿಯೆಗೆ ಉಪಯೋಗಿಸಿದ ಮಧು. ಆದ್ದರಿಂದ ದೇವರಿಗೂ ಈ ಮಧುವಿಗೂ ಸಂಬಂಧ ಇದೆ. ಆದ್ದರಿಂದ 'ಮಾಧವ' ಎಂಬುದಾಗಿ ರಾಜರು ತಿಳಿಸುತ್ತಾರೆ.

**ತತಃ ಸ ಕೃಷ್ಣಃ ಕೃತಜಾತಕರ್ಮಾ**
**ಪ್ರಚಕ್ರಮೇಽಂಬಾಸ್ತನಪಾನಕರ್ಮ ।**
**ಸ್ವವೀಕ್ಷಣೇನೈವ ಮುಹುಃ ಸ್ರುತಂ ತತ್**
**ಪಯೋ ಮುಧಾ ಸ್ಯಾದಿತಿ ಚಿಂತಯೇವ ॥ ೨೮ ॥**

**ತತಃ** = ಅನಂತರ, **ಸಃ** = ಆ, **ಕೃಷ್ಣಃ** = ಕೃಷ್ಣನು, **ಕೃತ** = ಮಾಡಲ್ಪಟ್ಟ, **ಜಾತಕರ್ಮಾ** = ಜಾತಕರ್ಮವುಳ್ಳ, **ಪ್ರಚಕ್ರಮೇ** = ಆರಂಭಿಸಿದನು. **ಅಂಬಾ** = ತಾಯಿಯ, **ಸ್ತನ** = ಸ್ತನದ ಹಾಲಿನ, **ಪಾನ** = ಕುಡಿಯುವಿಕೆಯ, **ಕರ್ಮ** = ಕೆಲಸವನ್ನು, **ಸ್ವ** = ತನ್ನ, **ವೀಕ್ಷಣೇನೈವ** = ದರ್ಶನದಿಂದಲೇ, **ಮುಹುಃ** = ಪುನಃ ಪುನಃ, **ಸ್ರುತಂ** = ಹರಿಯುವ, **ತತ್ ಪಯಃ** = ಆ ಹಾಲು, **ಮುಧಾ** = ವ್ಯರ್ಥವು, **ಸ್ಯಾತ್** = ಆದೀತು, **ಇತಿ** = ಎಂದು, **ಚಿಂತಯಾ ಇವ** = ಆಲೋಚನೆಯಂತೆ.

ಈ ಜಾತಕರ್ಮದ ಅನಂತರ ಕೃಷ್ಣನು ಯಶೋದೆಯ ಎದೆಹಾಲು ಕುಡಿಯಲು ಆರಂಭಿಸಿದನು. ದೇವರಿಗೆ ಹಸಿವಾಗಿದೆ. ಅದಕ್ಕಾಗಿ ಅಲ್ಲ. ದೇವರಿಗೆ ಹಸಿವೆಯೇ ಇಲ್ಲ. ಹಾಗಾದರೆ ಯಾಕೆ? ಅಂದರೆ – ಯಶೋದೆಯು ಈ ಮಗುವನ್ನು ನೋಡಿದಾಗೆಲ್ಲಾ ಸುತವಾತ್ಸಲ್ಯದಿಂದ ಅವಳ ಎದೆ ಹಾಲು ಹೊರಹರಿದು ಚೆಲ್ಲಿ ಹೋಗಿ ವ್ಯರ್ಥವಾಗುವ ಪ್ರಸಂಗ ಇದೆ. ಹಾಗಾಗಬಾರದು ಎಂದು.

**ಪುರಾ ಜನನ್ಯಾಃ ಸ್ತನಪಾನಜಾತ-**
**ಸುಖಾನಭಿಜ್ಞೋಽಜನಿರೇಷ ಕೃಷ್ಣಃ ।**
**ಪಪೌ ಸ್ತನಕ್ಷೀರಮತೃಪ್ತಕಲ್ಪಃ**
**ಪ್ರಿಯೇಷು ನೂತ್ನೇಷು ಹಿ ಕಸ್ಯ ತೃಪ್ತಿಃ ॥ ೨೯ ॥**

**ಪುರಾ** = ಮೊದಲು, ಜನನ್ಯಾಃ = ತಾಯಿಯ, ಸ್ತನ = ಸ್ತನ್ಯದ, ಪಾನ = ಕುಡಿಯುವಿಕೆಯಿಂದ, **ಜಾತ** = ಉಂಟಾಗುವ, **ಸುಖ** = ಸುಖವನ್ನು, **ಅನಭಿಜ್ಞಃ** = ತಿಳಿಯದಿರುವ, **ಅಜನಿಃ** = ಉತ್ಪತ್ತಿ ಇಲ್ಲದ, **ಏಷ** = ಈ, **ಕೃಷ್ಣಃ** = ಕೃಷ್ಣನು, **ಪಪೌ** = ಕುಡಿದನು, **ಸ್ತನ** = ಸ್ತನದ, **ಕ್ಷೀರಂ** = ಹಾಲನ್ನು, **ಅತೃಪ್ತಕಲ್ಪಃ** = ತೃಪ್ತಿಯಿಲ್ಲದವನಂತೆ, **ಪ್ರಿಯೇಷು** = ಇಷ್ಟವಾದದ್ದರಲ್ಲಿ, **ನೂತ್ನೇಷು** = ಹೊಸವಸ್ತುವಿನಲ್ಲಿ, **ಕಸ್ಯ** = ಯಾರಿಗೆ, **ತೃಪ್ತಿಃ** = ತೃಪ್ತಿಯು ಆಗುತ್ತದೆ.

ಕೃಷ್ಣನಿಗೆ ಸ್ತನ್ಯಪಾನ ಮಾಡಲು ಬಹಳ ಉತ್ಸಾಹ ಇತ್ತು. ಉತ್ಸಾಹಕ್ಕೆ ಕಾರಣ – ಈ ಎದೆ ಹಾಲು ಕೃಷ್ಣನಿಗೆ ಹೊಸತು. ಹೊಸತಿಗೆ ಕಾರಣ – ಈ ತನಕ ಈತನು ಹುಟ್ಟದೇ

ಇರುವುದು. ಹುಟ್ಟಿದ ಮಕ್ಕಳಿಗೆ ಸ್ತನ್ಯಪಾನದ ಅಗತ್ಯ. ಈತನು ಅಜ. ಇಷ್ಟವಾದ ಹೊಸತನ್ನು ಎಷ್ಟು ಅನುಭವಿಸಿದರೂ ಸಾಕು ಎಂದೆನಿಸುವುದಿಲ್ಲ.

● ● ● ●

**ಸಂದೇಶ**

**ನಿಂದಾಂ ಮುಕುಂದಸ್ಯ ಸಕೃನ್ನಿಶಮ್ಯ ಮಂದಃ ಪತೇತ್**

ದೇವರ ನಿಂದೆಯನ್ನು ಒಮ್ಮೆ ಕೇಳಿಸಕೊಂಡರೂ ನರಕಕ್ಕೆ ಬೀಳುತ್ತಾರೆ

---

**ಬಹೂನಿ ಪುಣ್ಯಾನಿ ಸ ನಂದಪತ್ನ್ಯಾಃ ಹೃದಿ -**
**ಸ್ಥಿರೀಕರ್ತುಮುರೋಜದುಗ್ಧಮ್ ।**
**ಪಪೌ ಪ್ರದೇಶಾರ್ಥಿತಯೇವ ಶೌರಿಃ**
**ನ ಚೇತ್ಸುತೃಪ್ತಸ್ಯ ಕುತಸ್ತದಿಚ್ಛಾ ॥ ೩೦ ॥**

**ಬಹೂನಿ** = ಬಹಳ, **ಪುಣ್ಯಾನಿ** = ಪುಣ್ಯಗಳನ್ನು, **ಸಃ** = ಆ, **ಶೌರಿಃ** = ಕೃಷ್ಣನು, **ನಂದಪತ್ನ್ಯಾಃ** = ನಂದನ ಪತ್ನಿಯಾದ ಯಶೋದೆಗೆ, **ಹೃದಿ** = ಹೃದಯದಲ್ಲಿ, **ಸ್ಥಿರೀಕರ್ತುಂ** = ದೃಢವಾಗಿ ಇಡಲು, **ಉರ** = ಎದೆಯಲ್ಲಿ, **ಜ** = ಹುಟ್ಟಿದ, **ದುಗ್ಧಂ** = ಹಾಲನ್ನು, **ಪಪೌ** = ಕುಡಿದನು, **ಪ್ರದೇಶಾರ್ಥಿತಯಾ ಇವ** = ಅವಕಾಶವನ್ನು ಅಪೇಕ್ಷಿಸುವವನಂತೆ, **ನ ಚೇತ್** = ಇಲ್ಲದಿದ್ದರೆ, **ಸುತೃಪ್ತಸ್ಯ** = ತೃಪ್ತನಾದವನಿಗೆ, **ಕುತಃ** = ಏಕೆ? **ತದಿಚ್ಛಾ**= ಹಾಲು ಕುಡಿಯುವ ಇಚ್ಛೆಯು.

ಸ್ತನ್ಯಪಾನಕ್ಕೆ ಇನ್ನೊಂದು ಕಾರಣ – ಈ ಕೃಷ್ಣನನ್ನು ಲಾಲಿಸಿ ಯಶೋದೆ ಬಹಳ ಪುಣ್ಯವನ್ನು ಗಳಿಸುತ್ತಾಳೆ. ಅದನ್ನು ಇಡಲು ಹೊರಗೆ ಎಲ್ಲಿಯೂ ಜಾಗ ಇಲ್ಲ. ಅವಳು ಮರಣ ಹೊಂದಿದ ಅನಂತರ ಒಯ್ಯಬೇಕಾದರೆ ಅವಳಲ್ಲಿಯೇ ಇಡಬೇಕು ಎಂದು ಆಲೋಚಿಸಿ ಅವಳ ಎದೆಯಿಂದ ಹಾಲು ತೆಗೆದು ಅಲ್ಲೇ ಇಟ್ಟ.

**ವಿಭುರ್ಯಶೋದಾಂಕಗತೋಽಪಿಬತ್ ಸಃ**
**ಸ್ತನಂ ಪ್ರಗೃಹ್ಯಾನ್ಯಮುರೋಜದುಗ್ಧಮ್ ।**
**ದೃಶಾಽಮೃತಂ ದಾನಫಲಂ ತದೈವ**
**ದಿಶನ್ನಿವಾಂಬಾನನಮೀಕ್ಷಮಾಣಃ ॥ ೩೧ ॥**

**ವಿಭುಃ** = ಸಮರ್ಥನಾದ, **ಯಶೋದಾ** = ಯಶೋದೆಯ, **ಅಂಕ** = ತೊಡೆಯಲ್ಲಿ, **ಗತಃ** = ಇರುವ, **ಅಪಿಬತ್** = ಕುಡಿದನು, **ಸಃ** = ಆ ಕೃಷ್ಣನು, **ಸ್ತನಂ** = ಸ್ತನವನ್ನು, **ಪ್ರಗೃಹ್ಯ** = ಹಿಡಿದುಕೊಂಡು, **ಅನ್ಯಂ** = ಇನ್ನೊಂದು, **ಉರೋಜದುಗ್ಧಂ** = ಎದೆಯಲ್ಲಿ ಉಂಟಾದ ಹಾಲನ್ನು, **ದೃಶಾ** = ನೋಡುವಿಕೆಯಿಂದ, **ಅಮೃತಂ** = ಅಮೃತವನ್ನು,

**ದಾನಫಲಂ** = ಸ್ತನ್ಯದ ದಾನದ ಫಲವನ್ನಾಗಿ, **ತದ್ವೈವ** = ಆಗಲೇ, **ದಿಶನ್ನಿವ** = ಕೊಡುವವನಂತೆ, **ಅಂಬ** = ತಾಯಿಯ, **ಆನನಂ** = ಮುಖವನ್ನು, **ಈಕ್ಷಮಾಣಃ** = ನೋಡುವವನಾಗಿ.

ಕೃಷ್ಣನು ಯಶೋದೆಯ ತೊಡೆಯೇರಿ ಒಂದು ಸ್ತನದ ಹಾಲನ್ನು ಕುಡಿಯುತ್ತಿದ್ದನು. ಮಕ್ಕಳ ಸ್ವಭಾವದಂತೆ ಕೈಯಿಂದ ಅವಳ ಇನ್ನೊಂದು ಸ್ತನವನ್ನು ಹಿಡಿದುಕೊಂಡು ಅವಳನ್ನು ನೋಡುತ್ತಿದ್ದನು. ತನಗೆ ಹಾಲುಣಿಸುವ ಯಶೋದೆಗೆ ದಾನದ ಫಲವಾಗಿ ತನ್ನ ಕೈತುಂಬಾ ಅಮೃತವನ್ನು (ಅಮೃತ ಎಂದರೆ ಹಾಲು, ಮೋಕ್ಷ ಎಂಬ ಎರಡರ್ಥ ಇದೆ) ಅವಳಿಗೆ ಕೊಡುವಂತೆ ಈ ದೃಶ್ಯ ಇತ್ತು. ಅವಳನ್ನು ನೋಡುತ್ತಿರುವುದರಿಂದ ಈ ಗತಿ ಕೊಡು-ವಂತಿದೆ. ತುಂಬ ಪುಣ್ಯವನ್ನು ಅಥವಾ ಪಾಪವನ್ನು ಸಂಪಾದಿಸಿದರೆ ಈ ಜನ್ಮದಲ್ಲೇ ಅದರ ಫಲ ಎಂದು ಶಾಸ್ತ್ರದಲ್ಲಿ ಇದೆ. '**ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೇ**' ಎಂದು.

**ಪೂರ್ಣಸ್ಯಾಪೂರ್ಣತಾಂ ಮತ್ವಾ ಗೋಪೀ ಗೋಪೀನಮಂದಿರಾ ।**
**ಕ್ಷೀರಸ್ಯತೀತಿ ಕ್ಷಣಶಃ ಕ್ಷೀರಂ ಪಾಯಯತಿ ಪ್ರಭುಮ್ ॥ ೩೨ ॥**

**ಪೂರ್ಣಸ್ಯ** = ಪೂರ್ಣನಾದ ಕೃಷ್ಣನಿಗೆ, **ಅಪೂರ್ಣತಾಂ** = ಅಪೂರ್ಣತೆಯನ್ನು, **ಮತ್ವಾ** = ತಿಳಿದು, **ಗೋಪೀ** = ಯಶೋದೆಯು, **ಗೋಪೀನಮಂದಿರಾ** = ಆಕಳುಗಳಿಂದ ತುಂಬಿದ ಮನೆಯುಳ್ಳವಳಾಗಿ, **ಕ್ಷೀರಸ್ಯತಿ** = ಕೃಷ್ಣನು ಹಾಲಿನ ಅಪೇಕ್ಷೆಯುಳ್ಳವನು, **ಇತಿ** = ಎಂದು, **ಕ್ಷಣಶಃ** = ಪುನಃಪುನಃ, **ಕ್ಷೀರಂ** = ಹಾಲನ್ನು, **ಪಾಯಯತಿ** = ಕುಡಿಸುತ್ತಿದ್ದಳು, **ಪ್ರಭುಮ್**= ಕೃಷ್ಣನನ್ನು.

ಯಶೋದೆಯು ಹಟ್ಟಿ ತುಂಬಾ ಹಸುಗಳುಳ್ಳವಳು. ಕೃಷ್ಣನಿಗೆ ಹಸಿವಾಗಿದೆ ಎಂಬ ಭಾವನೆಯಿಂದ ಪ್ರತಿಕ್ಷಣವೂ ಹಾಲುಣಿಸುತ್ತಿದ್ದಳು. ದೇವರಿಗೆ ಹಸಿವಾಗಿದೆ ಎಂಬ ಭಾವನೆ ಸರಿಯಲ್ಲ. ತನ್ನ ಮನೆಯಲ್ಲಿ ತುಂಬಾ ಹಾಲಿದೆ. ಆದ್ದರಿಂದ ದೇವರಿಗೆ ಕುಡಿಸುವುದು ಎಂಬ ತಿಳಿವಳಿಕೆ ಸರಿ.

**ತತಃ ಕದಾಚಿತ್ ಪಥಿ ಪೂತನಾಖ್ಯಾ**
**ಸ್ವಮಾಯಯಾ ರೂಪಮವಾಪ್ಯ ರಮ್ಯಮ್ ।**
**ತಮಂಕಮಾರೋಪ್ಯ ವಿಷಾನುಷಕ್ತ-**
**ಕುಚಂ ಮುದಾಽಪಾಯಯದಂಬುಜಾಕ್ಷಮ್ ॥ ೩೩ ॥**

**ತತಃ** = ಅನಂತರ, **ಕದಾಚಿತ್** = ಒಮ್ಮೆ, **ಪಥಿ** = ದಾರಿಯಲ್ಲಿ, **ಪೂತನಾ** = ಪೂತನಾ

ಎಂಬ, **ಆಖ್ಯಾ** = ಹೆಸರುಳ್ಳವಳು, **ಸ್ವಮಾಯಯಾ** = ತನ್ನ ಮಾಯೆಯಿಂದ, **ರೂಪಮ್** = ರೂಪವನ್ನು, **ಅವಾಪ್ಯ** = ಹೊಂದಿ, **ರಮ್ಯಂ** = ಚಂದದ, **ತಂ** = ಕೃಷ್ಣನನ್ನು, **ಅಂಕಂ** = ತೊಡೆಯನ್ನು, **ಆರೋಪ್ಯ** = ಏರಿಸಿ, **ವಿಷಾನುಷಕ್ತ** = ವಿಷದಿಂದ ಕೂಡಿದ, **ಕುಚಂ** = ಸ್ತನವನ್ನು, **ಮುದಾ** = ಆನಂದದಿಂದ, **ಅಪಾಯಯತ್** = ಕುಡಿಸಿದಳು, **ಅಂಬುಜ** = ಕಮಲದಂತೆ, **ಅಕ್ಷಂ** = ಕಣ್ಣುಳ್ಳ ಕೃಷ್ಣನನ್ನು.

ಒಂದು ದಿನ ಪೂತನಾ ಎಂಬ ರಾಕ್ಷಸಿಯು ಬಂದಳು. ಬರುವಾಗ ಒಳ್ಳೆಯ ವೇಷ ತೊಟ್ಟು ಬಂದಳು. ಕೃಷ್ಣನನ್ನು ತೊಡೆಯ ಮೇಲೆ ಮಲಗಿಸಿಕೊಂಡಳು. ವಿಷಪೂರಿತ ಸ್ತನ್ಯವನ್ನು ಕುಡಿಸಲು ಆರಂಭಿಸಿದಳು.

**ಪರಿಸ್ಫುರತ್ ನೂಪುರಕಂಕಣೋಜ್ಜ್ವಲಾ**
**ಲಸನ್ನಿತಂಬಾರ್ಪಿತರತ್ನಮೇಖಲಾ ।**
**ದೃಗಂತಸಂಸ್ತಂಭಿತಮಾನಿಮಂಡಲಾ**
**ತದೋರ್ವಶೀವಾಸ್ತಿ ವಿಲೋಲಕುಂಡಲಾ ॥೩೪॥**

**ಪರಿಸ್ಫುರತ್** = ಶೋಭಿಸುವ, **ನೂಪುರ** = ಕಾಲ್ಗೆಜ್ಜೆಯು, **ಕಂಕಣ** = ಬಳೆಗಳು ಇವು-ಗಳಿಂದ, **ಉಜ್ಜ್ವಲಾ** = ಶೋಭಿಸುವ, **ನಿತಂಬ** = ಕಟಿಪ್ರದೇಶದಲ್ಲಿ, **ಅರ್ಪಿತ** = ಇಟ್ಟಿ-ರುವ, **ರತ್ನಮೇಖಲಾ** = ರತ್ನಗಳ ಉಡಿದಾರವುಳ್ಳ, **ದೃಗಂತ** = ಕಡೆಗಣ್ಣಿನಿಂದ, **ಸಂಸ್ತಂಭಿತ** = ಸ್ತಬ್ಧರನ್ನಾಗಿ ಮಾಡಿದ, **ಮಾನಿ** = ಪುರುಷರ, **ಮಂಡಲಾ** = ಸಮೂಹ-ವುಳ್ಳ, **ತದಾ**= ಆಗ, **ಊರ್ವಶೀವ** = ಊರ್ವಶಿಯಂತೆ, **ಅಸ್ತಿ** = ಇದ್ದಾಳೆ, **ವಿಲೋಲ** = ಚಂಚಲವಾದ, **ಕುಂಡಲಾ** = ಕರ್ಣಾಭರಣವುಳ್ಳ.

ಈ ಪೂತನಾ ಕಾಲುಗೆಜ್ಜೆ, ಬಳೆ ಇವುಗಳಿಂದ ಶೋಭಿಸುತ್ತಿದ್ದಳು. ಸೊಂಟದಲ್ಲಿ ಪಟ್ಟಿಯು ಹೊಳೆಯುತ್ತಿತ್ತು. ತನ್ನ ಕಡೆಗಣ್ಣನೋಟದಿಂದ ಎಲ್ಲಾ ಹುಡುಗರನ್ನೂ ಸ್ತಬ್ಧ-ಗೊಳಿಸಬಲ್ಲಳು. ಕಿವಿಯಲ್ಲಿ ಅಲುಗಾಡುವ ಆಭರಣಗಳು. ಇವುಗಳಿಂದಾಗಿ ಪೂತನಾ ಊರ್ವಶಿಯಂತೆ ಕಾಣುತ್ತಿದ್ದಳು.

ಈ ಪೂತನಾಳಲ್ಲಿ ಊರ್ವಶಿಯ ಆವೇಶ ಇದೆ. ಆಕೆ ಶಾಪಗ್ರಸ್ತಳಾಗಿ ಈ ರಾಕ್ಷಸಿಯಲ್ಲಿ ಸೇರಬೇಕಾಯಿತು. ಆದ್ದರಿಂದ ರಾಜರು ಕೊಟ್ಟ ಹೋಲಿಕೆ ಶಾಸ್ತ್ರೀಯವೇ ಆಗಿದೆ.

**ಸ ಪೂತನೋಚ್ಚಸ್ತನಕುಂಭಚುಂಬಿ-**
**ಮುಖಾರವಿಂದೋ ಹರಿರಾಬಭಾಸೇ ।**

**ವಿಷಂ ಬಹಿಷ್ಠಂ ಪ್ರಮದಾಂತರಂಗೇ**
**ಸುಪೂರಯನ್ ತನ್ಮುಖವರ್ತ್ಮನೇವ ॥ ೩೫ ॥**

**ಸಃ** = ಆ, **ಪೂತನಾ** = ಪೂತನಿಯ, **ಉಚ್ಚ** = ಎತ್ತರದ, **ಸ್ತನ** = ಸ್ತನಗಳೆಂಬ, **ಕುಂಭ** = ಕಲಶಗಳನ್ನು, **ಚುಂಬಿ** = ಮುತ್ತಿಡುವ, **ಮುಖ** = ಮುಖವೆಂಬ, **ಅರವಿಂದಃ** = ಕಮಲವುಳ್ಳ, **ಹರಿಃ** = ಕೃಷ್ಣನು, **ಆಬಭಾಸೇ** = ಶೋಭಿಸಿದನು, **ವಿಷಂ** = ವಿಷವನ್ನು, **ಬಹಿಷ್ಠಂ** = ಹೊರಗಿರುವ, **ಪ್ರಮದಾ** = ಈ ಪೂತನಿಯ, **ಅಂತರಂಗೇ** = ಹೃದಯ-ದಲ್ಲಿ, **ಸುಪೂರಯನ್** = ತುಂಬಿಸುವವನಾಗಿ, **ತತ್** = ಆ ಸ್ತನದ, **ಮುಖವರ್ತ್ಮನಾ** = ರಂಧ್ರದದಾರಿಯಿಂದ, **ಇವ** = ಎಂಬಂತೆ.

ಪೂತನಿಯ ಎತ್ತರವಾದ ಸ್ತನಗಳು ಕುಂಭದಂತೆ ಇದ್ದವು. ಅದರಲ್ಲಿ ದೇವರು ತನ್ನ ಬಾಯಿಯನ್ನು ಇಟ್ಟಿದ್ದಾನೆ. ಈ ದೃಶ್ಯವು, ಪೂತನಿಯ ಸ್ತನದ ಹೊರಬದಿಯಲ್ಲಿರುವ ವಿಷವನ್ನು ಆ ಸ್ತನದ ಹಾಲು ಹೊರಬರುವ ರಂಧ್ರದ ಮೂಲಕ ಒಳಗೆ ಕಳುಹಿಸು-ತ್ತಿದ್ದಾನೋ ಎಂಬಂತೆ ಇತ್ತು.

**ರಮಾಧರೋಷ್ಠಾಮೃತಪಾನಜಾತ-**
**ಮಹಾನುಭಾವೇನ ನ ಪೂತನಾಯಾಃ।**
**ಉರೋಜಸಂಗ್ಯಾರ್ತಿಕರೋ ಗರೋಽಸೌ**
**ಬಭೂವ ಬಾಲಸ್ಯ ಬಲಾನುಜಸ್ಯ ॥ ೩೬ ॥**

**ರಮಾ** = ಲಕ್ಷ್ಮಿಯ, **ಅಧರೋಷ್ಠ** = ಕೆಳತುಟಿಯ, **ಅಮೃತ** = ಅಮೃತದ, **ಪಾನ** = ಪಾನದಿಂದ, **ಜಾತ** = ಉಂಟಾದ, **ಮಹಾನುಭಾವೇನ** = ಮಹಾನುಭಾವದಿಂದ, **ನ** ಇಲ್ಲ, **ಪೂತನಾಯಾಃ** = ಪೂತನಿಯ, **ಉರೋಜ** = ಸ್ತನದ, **ಸಂಗೀ** = ಸಂಬಂಧವುಳ್ಳ, **ಆರ್ತಿಕರಃ** = ದುಃಖವನ್ನು ಮಾಡತಕ್ಕದ್ದು, **ಗರಃ** = ವಿಷವು, **ಅಸೌ** = ಈ, **ಬಭೂವ** = ಆಯಿತು, **ಬಾಲಸ್ಯ** = ಮಗುವಿಗೆ, **ಬಲಾನುಜಸ್ಯ**= ಬಲರಾಮನ ತಮ್ಮನಾದ.

ದೇವರಿಗೆ ವಿಷವು ಮಾರಕ ಅಲ್ಲ. ಯಾಕೆಂದರೆ, ನಿತ್ಯವೂ ರಮೆಯ ತುಟಿಯ ಅಮೃತರಸವನ್ನು ಆಸ್ವಾದಿಸುವವನು. ರಮಾ ಮುಖದ ಅಮೃತದ ಮುಂದೆ ಯಾವ ವಿಷವೂ ನಿಲ್ಲುವುದಿಲ್ಲ. ಹಾಗೆಯೇ ಈ ದೇವರು ಬಲರಾಮನ ತಮ್ಮ. ಬಲರಾಮ ಶೇಷನ ಅವತಾರ. ವಿಷಜಂತುಗಳಿಗೆಲ್ಲಾ ನಾಯಕ. ಹೀಗಿರುವಾಗ, ಯಾವ ವಿಷದ ಆಟವೂ ದೇವರ ಮುಂದೆ ನಡೆಯುವುದಿಲ್ಲ.

ವಿಷವನ್ನು ತಡೆಗಟ್ಟುವ ವಿಷಯದಲ್ಲಿ ದೇವರು ಸ್ವಯಂ ಸಮರ್ಥನಾದರೂ

**ಲೋಕದ ಜನರಿಗೆ ವಿಷದ ಬಾಧೆ ಬಂದಾಗ ಶೇಷನ ಮೂಲಕ, ರಮಾ ಮೂಲಕ ದೇವರ ಚಿಂತನೆ ಮಾಡಿ ವಿಷವನ್ನು ಪರಿಹರಿಸಿಕೊಳ್ಳಬೇಕು ಎಂದು ರಾಜರ ಅಭಿಪ್ರಾಯವು.**

**ಮರಿಷ್ಯತೋ ಭೋಜಪತೇರ್ನ ಜನ್ಮ**
**ತಮಃ ಶ್ರಮಾರ್ಹಸ್ಯ ಭವಿಷ್ಯತೀಹ।**
**ಇತೀವ ಧಾತ್ರೀಮವಧೀತ್ ಸ ತಸ್ಯ**
**ವ್ರತೀಂದ್ರವೃಂದಾರ್ಚಿತಪಾದಪೀಠಃ ॥ ೩೭ ॥**

**ಮರಿಷ್ಯತಃ** = ಸಾಯುವ, **ಭೋಜಪತೇಃ** = ಕಂಸನಿಗೆ, **ನ** = ಇಲ್ಲ, **ಜನ್ಮ** = ಜನ್ಮವು, **ತಮಃ** = ನರಕವೆಂಬ, **ಶ್ರಮ** = ದುಃಖಕ್ಕೆ, **ಅರ್ಹಸ್ಯ** = ಯೋಗ್ಯನಾದ, **ಭವಿಷ್ಯತಿ** = ಆಗುತ್ತದೆ, **ಇಹ** = ಇಲ್ಲಿ, **ಇತಿ ಇವ** = ಎಂಬಂತೆ, **ಧಾತ್ರೀಂ** = ಸಾಕುತಾಯಿಯನ್ನು, **ಅವಧೀತ್** = ಕೊಂದನು, **ಸಃ** = ಕೃಷ್ಣನು, **ತಸ್ಯ** = ಕಂಸನ, **ವ್ರತೀಂದ್ರ** = ಯತಿಶ್ರೇಷ್ಠರ, **ವೃಂದ** = ಸಮೂಹದಿಂದ, **ಅರ್ಚಿತ** = ಪೂಜಿಸಲ್ಪಟ್ಟ, **ಪಾದಪೀಠಃ**= ಪಾದಗಳುಳ್ಳ.

**ಈ ಪೂತನಾ ಕಂಸನ ಸಾಕುತಾಯಿ. ಕಂಸನು ಈಗ ಬೆಳೆದಿದ್ದಾನೆ. ಕೃಷ್ಣನಿಂದಾಗಿ ಸತ್ತು ನರಕವನ್ನು ಹೊಂದುತ್ತಾನೆ. ಆದ್ದರಿಂದ ಪುನಃ ಹುಟ್ಟುವುದಿಲ್ಲ. ಆದ್ದರಿಂದಲೇ ಈಕೆಗೂ ಇಲ್ಲಿ ಕೆಲಸವಿಲ್ಲ. ಈ ಅಭಿಪ್ರಾಯದಿಂದಲೇ ಕೃಷ್ಣನು ಅವಳನ್ನು ಕೊಂದನು. ಇದರಿಂದ ಕೃಷ್ಣನಿಗೆ ಸ್ತ್ರೀಹತ್ಯಾದೋಷ ಬರುವುದಿಲ್ಲ. ಏಕೆಂದರೆ, ಧರ್ಮಶಾಸ್ತ್ರಕಾರರು ಸಮಸ್ತ ಋಷಿಗಳೂ ಈತನ ಪಾದಾರ್ಚಕರು. ಯಾವ ಕರ್ಮಕ್ಕೆ ಏನು ಫಲ? ಎಂದು ತೀರ್ಮಾನಿಸುವವರು ಈ ಋಷಿಗಳು. ಈ ಋಷಿಗಳನ್ನೂ ಮೀರಿದ ದೇವರಿಗೆ ಇದು ಯಾವುದೂ ಅಂಟುವುದಿಲ್ಲ ಎಂದು ತಿಳಿಸಲು 'ವ್ರತೀಂದ್ರ ..' ಎಂಬ ವಿಶೇಷಣವನ್ನು ಕೊಟ್ಟಿದ್ದು.**

**ವ್ರಜಸ್ಥಬಾಲಗ್ರಹಪೀಡಿತಾ ಸಾ**
**ವಿಷಪ್ರದಾನಸ್ಯ ಫಲಂ ಪ್ರಪೇದೇ।**
**ತಥಾಹಿ ಕೃತ್ಯಾ ಮಹತಿ ಪ್ರಯುಕ್ತಾ**
**ಸ್ವಕೀಯಮೃತ್ಯುತ್ವಮುಪೈತಿ ಪೃಥ್ವ್ಯಾಮ್ ॥೩೮॥**

**ವ್ರಜ** = ಗೋಕುಲದಲ್ಲಿ, **ಸ್ಥ** = ಇರುವ, **ಬಾಲ** = ಕೃಷ್ಣನೆಂಬ, **ಗ್ರಹ** = ಭೂತದಿಂದ, **ಪೀಡಿತಾ** = ಪೀಡಿತಳಾದ, **ಸಾ** = ಆ ಪೂತನಿಯು, **ವಿಷಪ್ರದಾನಸ್ಯ** = ವಿಷವನ್ನು ಕೊಟ್ಟದ್ದಕ್ಕೆ, **ಫಲಂ** = ಫಲವನ್ನು, **ಪ್ರಪೇದೇ** = ಹೊಂದಿದಳು, **ತಥಾಹಿ** = ಇದು ಸರಿಯೇ, **ಕೃತ್ಯಾ** = ಮಾಟವು, **ಮಹತಿ** = ದೊಡ್ಡವರಲ್ಲಿ, **ಪ್ರಯುಕ್ತಾ** = ಪ್ರಯೋಗಿ-

ಸಲ್ಪಟ್ಟದ್ದು, **ಸ್ವಕೀಯಮೃತ್ಯುತ್ವಂ** = ತನಗೇ ಮರಣವನ್ನು, **ಉಪೈತಿ** = ಹೊಂದಿಸುತ್ತದೆ, **ಪೃಥ್ವ್ಯಾಮ್**= ಭೂಮಿಯಲ್ಲಿ.

ಪೂತನಿಗೆ ಗ್ರಹಚಾರ ಸರಿ ಇರಲಿಲ್ಲ. ಗ್ರಹ ಯಾವುದು? ಅಂದರೆ ನಂದಗೋಕುಲದ ಕೃಷ್ಣನೆಂಬ ಬಾಲಗ್ರಹ. ಈ ಬಾಲಗ್ರಹದ ಪೀಡೆಯಿಂದಾಗಿ ಪೂತನಿಯು ಸತ್ತಳು. ವಿಷ ಉಂಡದ್ದು ದೇವರು. ಸತ್ತದ್ದು ಪೂತನಾ. ಇದು ಹೇಗೆ ಎಂದರೆ, ಮೇಲೆ ನೋಡಿ ಉಗುಳಿದಂತೆ. ಉಗುಳಿದ್ದು ಆಕಾಶಕ್ಕೆ, ಅದು ಬಿದ್ದದ್ದು ತನ್ನ ಮುಖದ ಮೇಲೆಯೇ. ನಮಗಿಂತ ದೊಡ್ಡವರಿಗೆ ನಾವು ಮಾಟ ಮಂತ್ರ ಮಾಡಿದರೆ ಅದರ ಬಾಧಕ ನಮಗೇ ಹೊರತು ದೊಡ್ಡವರಿಗಲ್ಲ. ಈ ವಿಷಯದಲ್ಲಿ ಪೂತನಿಯು ಒಳ್ಳೆಯ ಉದಾಹರಣೆ. ನಮ್ಮ ಜೀವನದಲ್ಲಿ ಇಂತಹ ವಾಮಾಚಾರಗಳು ಅಂಟದಂತೆ ನಾವು ಸದಾ ದೇವರ ಚಿಂತನೆಯ ಮೂಲಕ ಎತ್ತರದಲ್ಲಿ ಇರಬೇಕು.

• • • •

**ಸಂದೇಶ**

**ನಿಂದಾಂ ಮುಕುಂದಸ್ಯ ಸಕೃನ್ನಿಶಮ್ಯ ಮಂದಃ ಪತೇತ್**

ದೇವರ ನಿಂದೆಯನ್ನು ಒಮ್ಮೆ ಕೇಳಿಸಕೊಂಡರೂ ನರಕಕ್ಕೆ ಬೀಳುತ್ತಾರೆ

---

**ಅಪಿ ಪ್ರದತ್ತೇ ಗರಲೇ ಶಿಶುಂ ತಮ್**
**ಅಭೀತಮಾಲೋಕ್ಯ ಭುಜಂಗಸಂಘಾನ್ ।**
**ವಿಭೀಷಯಂತೀ ಸಮಗಾದಧಃ ಸಾ**
**ನ ಚೇತ್ ವಿಪರ್ಯಸ್ತಮೃತಿಃ ಕಥಂ ಸ್ಯಾತ್ ॥ ೩೯ ॥**

**ಅಪಿ** = ಕೂಡ, **ಪ್ರದತ್ತೇ** = ಕೊಡಲ್ಪಟ್ಟರೂ, **ಗರತೀ** = ವಿಷವು, **ಶಿಶುಂ** = ಮಗುವನ್ನು, **ತಮ್** = ಆ, **ಅಭೀತಂ** = ಭಯ ಇಲ್ಲದ್ದನ್ನು, **ಆಲೋಕ್ಯ** = ನೋಡಿ, **ಭುಜಂಗ** = ಹಾವುಗಳ, **ಸಂಘಾನ್** = ಗುಂಪುಗಳನ್ನು, **ವಿಭೀಷಯಂತೀ** = ಹೆದರಿಸುವವಳಾಗಿ, **ಸಮಗಾತ್** =ಹೊರಟಳು, **ಅಧಃ** = ಕೆಳಗೆ, **ಸಾ** = ಆ ಪೂತನಿಯು, **ನ ಚೇತ್** = ಇಲ್ಲ-ದಿದ್ದರೆ, **ವಿಪರ್ಯಸ್ತ** = ವ್ಯತ್ಯಸ್ತವಾದ, **ಮೃತಿಃ** = ಮರಣವು, **ಕಥಂ** = ಹೇಗೆ, **ಸ್ಯಾತ್**= ಆದೀತು?

ದೇವರನ್ನು ಕೊಲ್ಲುವ ಸಲುವಾಗಿ ಪೂತನಿಯು ಕೆಳಗಿನ ಪಾತಾಳಲೋಕದಿಂದ ವಿಷವನ್ನು ತಂದಿದ್ದಳು. ಈ ವಿಷದಿಂದ ದೇವರು ಸಾಯಲಿಲ್ಲ. ಹಾಗಾದರೆ ಸರ್ಪಗಳು ಕಲಬೆರಕೆಯ ವಿಷವನ್ನು ಕೊಟ್ಟಿದ್ದಾವೋ ಎಂದು ಅವುಗಳನ್ನು ಗದರಿಸಲು ಈಕೆ ಕೆಳಗಿನ ಲೋಕಕ್ಕೆ ಹೋದಳು. ಇಲ್ಲದಿದ್ದರೆ ವಿಷ ಉಂಡವರು ಸಾಯದೇ ಕೊಟ್ಟವರು ಸಾಯಲು

ಸಾಧ್ಯವೇ ಇಲ್ಲ. ದೇವರಿಗೆ ನಿಷಿದ್ಧ ಆಹಾರವನ್ನು ಕೊಡುವವರು ಊರ್ಧ್ವಲೋಕಕ್ಕೆ ಹೋಗದೇ ಅಧೋಲೋಕಕ್ಕೆ ಹೋಗುವರು ಎಂದು ತಾತ್ಪರ್ಯ.

ಉತ್ತುಂಗ ಹಸ್ತಚರಣಾಯತ ಶೈಲಶೃಂಗಾಂ
ವಿಸ್ತಾರಿತಾನನ ವಿನಿರ್ಗತ ದೀರ್ಘದಂಷ್ಟ್ರಾಮ್ ।
ಶುಷ್ಯತ್ತಟಾಕ ಸದೃಶೋದರ ಘೋರರೂಪಾಂ
ತರ್ಕೇऽತಿಕರ್ಕಶರವೋಜ್ವಲತಾಟಕಾಂ ತಾಮ್ ॥ ೪೦ ॥

**ಉತ್ತುಂಗ** = ಎತ್ತಿದ, **ಹಸ್ತ** = ಕೈಗಳು, **ಚರಣ** = ಕಾಲುಗಳೆಂಬ, **ಆಯತ** = ದೊಡ್ಡದಾದ, **ಶೈಲ** = ಬೆಟ್ಟಗಳ, **ಶೃಂಗಾಂ** = ಶಿಖರಗಳುಳ್ಳ, **ವಿಸ್ತಾರಿತ** = ತೆರೆದ, **ಆನನ** = ಮುಖದಿಂದ, **ವಿನಿರ್ಗತ** = ಹೊರಬಂದ, **ದೀರ್ಘ** = ಉದ್ದವಾದ, **ದಂಷ್ಟ್ರಾಂ** = ಕೋರೆಹಲ್ಲುಗಳುಳ್ಳ, **ಶುಷ್ಯತ್** = ಒಣಗಿದ, **ತಟಾಕ** = ಕೊಳಕ್ಕೆ, **ಸದೃಶ** = ಸಮಾನ-ವಾದ, **ಉದರ** = ಹೊಟ್ಟೆಯಿಂದಾಗಿ, **ಘೋರ** = ಭಯಂಕರವಾದ, **ರೂಪಾಂ** = ಆಕಾರವುಳ್ಳ, **ತರ್ಕೇ** = ತಿಳಿಯುತ್ತೇನೆ, **ಅತಿಕರ್ಕಶ** = ಬಹಳ ಕರ್ಕಶವಾದ, **ರವ** = ಶಬ್ದದಿಂದ, **ಉಜ್ವಲ** = ಉರಿಯುವ, **ತಾಟಕಾಂ** = ತಾಟಕಿಯನ್ನಾಗಿ, **ತಾಂ** = ಆ ಪೂತನಿಯನ್ನು.

ಪೂತನಿಯು ಸತ್ತು ಬಿದ್ದಿದ್ದಾಳೆ. ಅವಳದ್ದು ಪರ್ವತದಂತಹ ದೊಡ್ಡ ದೇಹ. ಉದ್ದುದ್ದದ ಕೈಕಾಲುಗಳು ಪರ್ವತದ ಶಿಖರಗಳಂತಿದ್ದವು. ತೆರೆದ ಬಾಯಿಯಿಂದ ಎರಡು ಕೋರೆ ಹಲ್ಲುಗಳು ಹೊರಗೆ ಬಂದಿದ್ದವು. ಹೊಟ್ಟೆಯು ಪಾಳುಬಿದ್ದ ಕೊಳದಂತಿತ್ತು. ಸಾಯುವಾಗ ಕರ್ಕಶವಾಗಿ ಅರಚಿದಳು. ಇವಳ ಈ ಸ್ವರೂಪ ನೋಡಿದಾಗ ರಾಮಾ-ಯಣದ ತಾಟಕಿಯಂತೆ ಇದ್ದಳು ಎಂದು ರಾಜರು ಹೇಳುತ್ತಾರೆ. ರಾಜರು ಹೇಳಿದ್ದು ಸರಿ-ಯಾಗಿಯೇ ಇದೆ. ರಾಮಾಯಣದ ತಾಟಕಿಯೇ ಈಗ ಪೂತನಿಯಾಗಿ ಬಂದಿದ್ದಾಳೆ.

ಮುಕುಂದವಿದ್ವೇಷವಿಷಾನುಷಂಗಾದ್
ವಿಯೋಜಿತಾಂಗೀ ಕಿಲ ಪೂತನೈಕಾ ।
ಪಪಾತ ಧನ್ಯಾ ಲಲನಾಗ್ರಗಣ್ಯಾ
ಜಗಾಮ ಚಾನ್ಯಾऽಮರಲೋಕಲೋಕಮ್ ॥೪೧॥

**ಮುಕುಂದ** = ಕೃಷ್ಣನಲ್ಲಿ, **ವಿದ್ವೇಷ** = ದ್ವೇಷವೆಂಬ, **ವಿಷ** = ವಿಷದ, **ಅನುಷಂಗಾತ್** = ಸಂಪರ್ಕದಿಂದ, **ವಿಯೋಜಿತ** = ಬೇರೆಯಾದ, **ಅಂಗೀ** = ಶರೀರವುಳ್ಳ, **ಕಿಲ** = ಪ್ರಸಿದ್ಧ, **ಪೂತನಾ** = ಪೂತನಿಯು, **ಏಕಾ** = ಒಬ್ಬಳು, **ಪಪಾತ** = ಬಿದ್ದಳು, **ಧನ್ಯಾ** = ಕೃತಕೃತ್ಯ-

ಳಾದ, **ಲಲನಾ** = ನಾರಿಯರಲ್ಲಿ, **ಅಗ್ರಗಣ್ಯಾ** = ಮೊದಲಿಗಳಾದ, **ಜಗಾಮ** = ಹೋದಳು, **ಅನ್ಯಾ** = ಇನ್ನೊಬ್ಬಳು,. **ಅಮರ** = ದೇವತೆಗಳ, **ಲೋಕ** = ಗುಂಪಿನ, **ಲೋಕಂ** = ಲೋಕವನ್ನು.

ಪುರಾಣಗಳಲ್ಲಿ ಪೂತನಾ ಮೋಕ್ಷಕ್ಕೆ ಹೋದಳು ಎಂದು ಇದೆ. ಆದರೆ ಶಾಸ್ತ್ರದ ನಿಯಮ ಸಜ್ಜನರಿಗೆ ಮಾತ್ರ ಮೋಕ್ಷ ಎಂದು. ಹೀಗಿರುವಾಗ ಪೂತನಿಯ ಮೋಕ್ಷೋಕ್ತಿ-ಯನ್ನು ಕೂಡಿಸುವ ಬಗೆಯನ್ನು ರಾಜರು ಕೆಲವು ಶ್ಲೋಕಗಳಲ್ಲಿ ತಿಳಿಸುತ್ತಾರೆ. ಪೂತನಿಯ ಶರೀರದಲ್ಲಿ ಎರಡು ಚೇತನರು ಇದ್ದಾರೆ. ಇವರಲ್ಲಿ ದುಷ್ಟಚೇತನವು ದೇವರ ದ್ವೇಷ ಎಂಬ ವಿಷವನ್ನು ಕುಡಿದು ನರಕಕ್ಕೆ ಹೋಯಿತು. ಇನ್ನೊಂದು ಊರ್ವಶೀ ಎಂಬ ಸಜ್ಜೀವ ದೇವರ ಪ್ರೀತಿ ಎಂಬ ಅಮೃತವನ್ನು ಕುಡಿದು ದೇವತೆಗಳ ಲೋಕವನ್ನು ಸೇರಿತು. ಆದ್ದರಿಂದ ಪೂತನಿಗೆ ಮೋಕ್ಷವಾಯಿತು ಅಂದರೆ, ಪೂತನಾ ಶರೀರದಲ್ಲಿರುವ ಸಜ್ಜೀವಳಾದ ಊರ್ವಶಿಗೆ ಮೋಕ್ಷವಾಯಿತು ಎಂದು ತಿಳಿಯಬೇಕು.

**ಯದಿ ಪ್ರಭುಃ ವಿದ್ವಿಷತೋಽಪಿ ಶೌರಿಃ**
**ಪ್ರಸಾದಕೃತ್ ತರ್ಹಿ ಕುತಃ ಸುರಾರೀನ್ ।**
**ವಿಜಿತ್ಯ ಭಕ್ತಾಯ ತದೀಯಭಾಗ್ಯಂ**
**ಪ್ರಯಚ್ಛತಿ ಸ್ವೈರಮಿಹಾವತೀರ್ಯ ॥ ೪೨ ॥**

**ಯದಿ** = ಒಂದು ವೇಳೆ, **ಪ್ರಭುಃ** = ಸಮರ್ಥನಾದ, **ವಿದ್ವಿಷತೋಽಪಿ** = ದ್ವೇಷಿಸು-ವವರಿಗೂ, **ಶೌರಿಃ** = ಕೃಷ್ಣನು, **ಪ್ರಸಾದಕೃತ್** = ಅನುಗ್ರಾಹಕನು, **ತರ್ಹಿ** = ಆ ಪಕ್ಷದಲ್ಲಿ, **ಕುತಃ** = ಯಾಕೆ, **ಸುರಾರೀನ್** = ದೇವತೆಗಳ ಶತ್ರುಗಳನ್ನು, **ವಿಜಿತ್ಯ** = ಗೆದ್ದು, **ಭಕ್ತಾಯ** = ಭಕ್ತರಿಗೆ, **ತದೀಯ** = ದೈತ್ಯರ, **ಭಾಗ್ಯಂ** = ಸಂಪತ್ತನ್ನು, **ಪ್ರಯಚ್ಛತಿ** = ಕೊಡುತ್ತಾನೆ, **ಸ್ವೈರಂ** = ಯಥೇಚ್ಛವಾಗಿ, **ಇಹ** = ಈ ಭೂಮಿಯಲ್ಲಿ, **ಅವತೀರ್ಯ** = ಅವತರಿಸಿ.

ದುಷ್ಟರಿಗೆ ಮೋಕ್ಷ ಇಲ್ಲ ಎಂಬ ವಿಷಯವನ್ನು ರಾಜರು ಅನೇಕ ಯುಕ್ತಿಗಳಿಂದ ತಿಳಿಸುತ್ತಾರೆ – ಮೋಕ್ಷ ಆಗಬೇಕಾದರೆ ದೇವರ ಪ್ರಸಾದ ಆಗಬೇಕು. ದೈತ್ಯರಿಗೂ ಮೋಕ್ಷ ಕೊಡುತ್ತಾನೆಂದರೆ, ಅವರ ಮೇಲೂ ಪ್ರಸನ್ನನಾಗುತ್ತಾನೆ ಎಂದರ್ಥ. ಅವರಲ್ಲಿಯೂ ಪ್ರಸನ್ನನಾಗುವುದಾದರೆ ತಾನು ಅವತಾರ ಮಾಡುವುದು ಯಾಕೆ? ದೈತ್ಯರನ್ನು ಕೊಂದು ಅವರ ಸಂಪತ್ತನ್ನು ತನ್ನ ಭಕ್ತರಿಗೆ ಕೊಡುವುದು ಯಾಕೆ? ರಾವಣನನ್ನು ಕೊಂದು ವಿಭೀಷಣನಿಗೆ, ಕೌರವನನ್ನು ಕೊಂದು ಧರ್ಮಜನಿಗೆ, ನರಕನನ್ನು ಕೊಂದು ಭಗದತ್ತನಿಗೆ,

ಜರಾಸಂಧನನ್ನು ಕೊಂದು ಸಹದೇವನಿಗೆ ಕೊಟ್ಟಂತೆ. ಆದ್ದರಿಂದ ದೈತ್ಯರಲ್ಲಿ ಎಂದೂ ದೇವರು ಪ್ರಸನ್ನನಾಗುವುದಿಲ್ಲ. ಅವರಿಗೆ ಮೋಕ್ಷವನ್ನು ಕೊಡುವುದಿಲ್ಲ.

**ದ್ವಿಷಾಂ ಹರಿರ್ಯಚ್ಛತಿ ಯರ್ಹಿ ಮೋಕ್ಷಂ**
**ನ ತರ್ಹಿ ಕಸ್ಮಾದಪವರ್ಗಮಾರ್ಗಃ।**
**ಅರಿಷ್ಟವಾತಾಸುರವತ್ಸಕೇಶಿ-**
**ವಿನಾಶಕಾಲೇ ವಿವೃತಃ ಶುಕೇನ ॥ ೪೩ ॥**

**ದ್ವಿಷಾಂ** = ದ್ವೇಷಿಗಳಿಗೆ, **ಹರಿಃ** = ದೇವರು, **ಯಚ್ಛತಿ** = ಕೊಡುತ್ತಾನೆ, **ಯರ್ಹಿ** = ಒಂದು ವೇಳೆ, **ಮೋಕ್ಷಂ** = ಮೋಕ್ಷವನ್ನು, **ನ** = ಇಲ್ಲ, **ತರ್ಹಿ** = ಆ ಪಕ್ಷದಲ್ಲಿ, **ಕಸ್ಮಾತ್** = ಯಾಕೆ, **ಅಪವರ್ಗ** = ಮೋಕ್ಷದ, **ಮಾರ್ಗಃ** = ದಾರಿಯು, **ಅರಿಷ್ಟ** = ಅರಿಷ್ಟಾಸುರನ, **ವಾತ** = ತೃಣಾವರ್ತನ, **ವತ್ಸ** = ವತ್ಸಾಸುರನ, **ಕೇಶಿ** = ಕೇಶಿಯ, **ವಿನಾಶ** = ನಾಶದ, **ಕಾಲೇ** = ಸಮಯದಲ್ಲಿ, **ವಿವೃತಃ** = ಹೇಳಿದ್ದು, **ಶುಕೇನ** = ಶುಕರಿಂದ.

ಶುಕರು ಭಾಗವತದಲ್ಲಿ ಅರಿಷ್ಟಾದಿ ಅಸುರರು ಸತ್ತು ಮೋಕ್ಷಕ್ಕೆ ಹೋದರು ಎಂದು ಹೇಳಲಿಲ್ಲ. ಒಂದು ವೇಳೆ ದುಷ್ಟರಿಗೂ ದೇವರು ಮೋಕ್ಷವನ್ನು ಕೊಡುವುದಾದರೆ ಅರಿಷ್ಟಾದಿ ದುಷ್ಟರನ್ನು ಕೃಷ್ಣನು ಕೊಂದು ಮೋಕ್ಷಕ್ಕೆ ಕಳುಹಿಸಿದ ಎಂದು ಹೇಳಬೇಕಿತ್ತು. ಆದ್ದರಿಂದ ದುಷ್ಟರಿಗೆ ಮೋಕ್ಷ ಇಲ್ಲ ಎಂದೇ ತೀರ್ಮಾನ. ಈ ರೀತಿ ಬೇರೆ ಎಲ್ಲಿಯೂ ಹೇಳದೇ ಪೂತನಾ, ಕಂಸ, ಶಿಶುಪಾಲ ಇತ್ಯಾದಿ ಕೆಲವರಿಗೆ ಮಾತ್ರ ಮೋಕ್ಷವಾಯಿತು ಎಂದು ಹೇಳಬೇಕಾದರೆ ಇವರಲ್ಲಿ ಜೀವದ್ವಯಾವೇಶ ಇದೆ ಎಂದು ತಿಳಿಯುತ್ತದೆ.

**ಪತಂತ್ಯಧೋಽನಾದೃತ ಕೃಷ್ಣಪಾದಾ**
**ನ ಚೇದ್ಯಮಸ್ಯಾಲಯಮೇಷ್ಯಸಿ ತ್ವಮ್ ।**
**ಸ ನೈಋತಂ ಧಾಮ ಜಗಾಮ ದೈತ್ಯಃ**
**ಇತೀರಿತಾ ದುರ್ಗತಿರೇವ ತೇಷಾಮ್ ॥ ೪೪ ॥**

**ಪತಂತಿ** = ಬೀಳುತ್ತಾರೆ, **ಅಧಃ** = ಕೆಳಗೆ, **ಅನಾದೃತ** = ತಿರಸ್ಕರಿಸಲ್ಪಟ್ಟ, **ಕೃಷ್ಣ** = ಕೃಷ್ಣನ, **ಪಾದಾಃ** = ಚರಣಗಳುಳ್ಳವರು, **ನ ಚೇತ್** = ಇಲ್ಲದಿದ್ದರೆ, **ಯಮಸ್ಯ** = ಯಮನ, **ಆಲಯಂ** = ಮನೆಯನ್ನು, **ಏಷ್ಯಸಿ** = ಹೊಂದುತ್ತಿ, **ತ್ವಂ** = ನೀನು, **ಸಃ** = ಅವನು, **ನೈಋತಂ** = ಸುಖರಹಿತವಾದ, **ಧಾಮ** = ಆಶ್ರಯವನ್ನು, **ಜಗಾಮ** = ಹೊಂದಿದನು, **ದೈತ್ಯ** = ದೈತ್ಯನು, **ಇತಿ** = ಈ ರೀತಿಯಾಗಿ, **ಈರಿತಾ** = ಹೇಳಲ್ಪಟ್ಟಿದೆ, **ದುರ್ಗತಿರೇವ** = ಕೆಟ್ಟ ಲೋಕವೇ, **ತೇಷಾಮ್** = ಅವರಿಗೆ.

ಭಾಗವತದಲ್ಲಿ ಶುಕಾಚಾರ್ಯರು ದೈತ್ಯರಿಗೆ ಮೋಕ್ಷವನ್ನು ಹೇಳಿಲ್ಲ ಎಂದು ಅಷ್ಟೇ ಅಲ್ಲ, ಸ್ವತಃ ಕೃಷ್ಣನೇ ಅವರಿಗೆ ನರಕಪ್ರಾಪ್ತಿಯನ್ನು ಹೇಳಿದ್ದಾನೆ. ಕೃಷ್ಣನು ಕಂಸನ ಮನೆಗೆ ಹೋಗುವ ದಾರಿಯಲ್ಲಿ ಆನೆ ಹಾಗೂ ಮಾವುತರು ತಡೆಯುವುದಕ್ಕಾಗಿ ಇದ್ದರು. ಆಗ ಅಲ್ಲಿಗೆ ಬಂದ ಕೃಷ್ಣನು ಮಾವುತನನ್ನು 'ನನಗೆ ಮುಂದೆ ಹೋಗಲು ದಾರಿ ಬಿಡು. ಇಲ್ಲವಾದರೆ ನಿನ್ನನ್ನು ಯಮಾಲಯಕ್ಕೆ ಕಳುಹಿಸುವೆ' ಎಂದು ಹೇಳಿದನು. 'ನನ್ನ ಲೋಕಕ್ಕೆ ಕಳುಹಿಸುವೆ' ಎಂದು ಹೇಳಲಿಲ್ಲ. ಕೃಷ್ಣನು ದಾರಿ ಬಿಡದಿರುವ ಮಾವುತನನ್ನು ಕೊಂದು ರಾಕ್ಷಸರ ಲೋಕಕ್ಕೆ ಅಂದರೆ ನರಕಕ್ಕೆ ಕಳುಹಿಸಿದನು. ಇದರಿಂದ ತಿಳಿಯುವುದು ದೈತ್ಯರಿಗೆ ನರಕವೇ ಹೊರತು ಮೋಕ್ಷ ಅಲ್ಲ ಎಂದು.

ವಿದ್ವೇಷಮೂಲಸ್ಮರಣೇನ ತುಷ್ಟಿಃ
ಇತ್ಯಪ್ಯವದ್ಯಂ ನ ಜಹಾತಿ ಪಕ್ಷಃ।
ಹಿಂಸಾರ್ಥಮಾಲಿಂಗಯತಃ ತರಕ್ಷೋಃ
ಕಿಂ ಚೇಷ್ಟಯಾ ತುಷ್ಯತಿ ಕಾಮಧೇನುಃ ॥೪೫॥

**ವಿದ್ವೇಷಮೂಲ** = ದ್ವೇಷದ ಮೂಲಕ, **ಸ್ಮರಣೇನ** = ಸ್ಮರಣೆಯಿಂದ, **ತುಷ್ಟಿಃ** = ಸಂತೋಷವು, **ಇತ್ಯಪಿ** = ಎಂಬುದೂ, **ಅವದ್ಯಂ** = ದೋಷವನ್ನು, **ನ ಜಹಾತಿ** = ಬಿಡುವುದಿಲ್ಲ. **ಪಕ್ಷಃ** = ಪಕ್ಷವು, **ಹಿಂಸಾರ್ಥಂ** = ಹಿಂಸೆಗೋಸ್ಕರ, **ಆಲಿಂಗಯತಃ** = ಆಲಂಗಿಸುವ, **ತರಕ್ಷೋಃ** = ಹುಲಿಯ, **ಕಿಂ** = ಏನು? **ಚೇಷ್ಟಯಾ** = ಕ್ರಿಯೆಯಿಂದ, **ತುಷ್ಯತಿ** = ಸಂತೋಷಪಡುತ್ತದೆ, **ಕಾಮಧೇನುಃ**= ಆಕಳು.

ದೇವರನ್ನು ದ್ವೇಷಿಸುವುದರಿಂದ ಮೋಕ್ಷ ಆಗುವುದು ಬೇಡ. ದ್ವೇಷದ ಮೂಲಕ ಸ್ಮರಣೆಯಿಂದ ದೇವರು ತುಷ್ಟನಾಗಿ ಮೋಕ್ಷ ಕೊಡಲಿ. ದ್ವೇಷ ಎಂದರೆ ದೋಷಚಿಂತನೆ. ದೋಷಚಿಂತನೆ ಮಾಡಬೇಕಾದರೆ ದೇವರ ಸ್ಮರಣೆ ಬೇಕು. ನಿರಂತರ ದ್ವೇಷಿಸಬೇಕಾದರೆ ನಿರಂತರ ಸ್ಮರಣೆ ಬೇಕು. ಈ ಸ್ಮರಣೆಯಿಂದ ತುಷ್ಟನಾಗಿ ದೇವರು ಮೋಕ್ಷವನ್ನು ಕೊಡಲಿ ಎಂಬ ವಾದವೂ ಸರಿಯಲ್ಲ. ಒಂದು ಹುಲಿ ಆಕಳನ್ನು ತಿನ್ನುವ ಸಲುವಾಗಿ ಅದರ ಬೆನ್ನ ಮೇಲೆ ಏರಿದೆ. ನೋಡುವವರಿಗೆ ಹುಲಿಯು ಆಕಳನ್ನು ಆಲಂಗಿಸಿದಂತೆ ತೋರುತ್ತದೆ. ಹುಲಿಯ ಈ ಆಲಿಂಗನದಿಂದ ಆಕಳು ಸಂತೋಷಪಡುವುದಿಲ್ಲ. ಯಾಕೆಂದರೆ, ಇದು ಹಿಂಸಾಪೂರ್ವವಾದ ಆಲಿಂಗನ. ಅದೇ ರೀತಿ ದ್ವೇಷಪೂರ್ವಕವಾದ ನಿರಂತರ ಸ್ಮರಣೆ-ಯಿಂದಲೂ ದೇವರು ತೃಪ್ತನಾಗುವುದಿಲ್ಲ.

**ನ ಚೇತ್ ಗವಾಂ ವಿಪ್ರಶಿಖಾಮಣೀನಾಂ**
**ಹತಿಶ್ಚ ಪುಣ್ಯಾಯ ಭವೇದ್ಧಿ ಮೂಢಾಃ।**
**ತದಂಗಸಂಸ್ಪರ್ಶನದರ್ಶನಾದ್ಯೈಃ**
**ತದೀಯನಾಮಗ್ರಹಣಾದಿಭಿರ್ವಾ ॥ ೪೬ ॥**

**ನ ಚೇತ್** = ಇಲ್ಲದಿದ್ದರೆ, **ಗವಾಂ** = ಆಕಳುಗಳ, **ವಿಪ್ರ** = ಬ್ರಾಹ್ಮಣರ, **ಶಿಖಾಮಣೀನಾಂ** = ಶ್ರೇಷ್ಠರ, **ಹತಿಶ್ಚ** = ಹತ್ಯೆಯೂ, **ಪುಣ್ಯಾಯ** = ಪುಣ್ಯಕ್ಕೋಸ್ಕರ, **ಭವೇತ್ ಹಿ** = ಆಗಬೇಕಷ್ಟೆ, **ಮೂಢಾಃ** = ಮೂರ್ಖರೇ, **ತತ್** = ಆ ವಸ್ತುಗಳ, **ಅಂಗ** = ದೇಹದ, **ಸಂಸ್ಪರ್ಶನ** = ಸ್ಪರ್ಶವು, **ದರ್ಶನ** = ನೋಡುವಿಕೆಯು, **ಆದ್ಯೈಃ** = ಮೊದಲಾದ್ದರಿಂದ, **ತದೀಯ** = ಆ ವಸ್ತುಗಳ, **ನಾಮ** = ಹೆಸರಿನ, **ಗ್ರಹಣ** = ಹೇಳುವಿಕೆಯೇ, **ಆದಿಭಿಃ** = ಮೊದಲಾದ್ದರಿಂದ, **ವಾ**= ಆಗಲಿ.

ದ್ವೇಷಮೂಲಕವಾದರೂ ಸ್ಮರಣೆ ಮಾಡಿದ್ದರಿಂದ ಪುಣ್ಯ ಬರುತ್ತದೆ. ದೇವರ ತುಷ್ಟಿಯಾಗುತ್ತದೆ, ಮೋಕ್ಷವಾಗುತ್ತದೆ ಎಂದು ಹೇಳುವವರು ಮೂರ್ಖರು. ಇಲ್ಲದಿದ್ದರೆ ಗೋಹತ್ಯಾ , ಬ್ರಹ್ಮಹತ್ಯಾದಿಗಳಿಂದಲೂ ಪುಣ್ಯ ಬರುತ್ತದೆ ಎಂದು ಹೇಳಬೇಕು. ಏಕೆಂದರೆ, ಸಹಜವಾಗಿ ಆಕಳು ಮೊದಲಾದ ಪವಿತ್ರವಸ್ತುಗಳ ದರ್ಶನ, ಸ್ಪರ್ಶನ, ಅವುಗಳ ನಾಮೋಚ್ಚಾರಣ (ಹೆಸರುಹೇಳುವಿಕೆಯಿಂದ) ಪುಣ್ಯ ಬರುತ್ತದೆ. ಒಬ್ಬ ಕಟುಕನು ಗೋವುಗಳನ್ನು ಕೊಲ್ಲುವ ಸಲುವಾಗಿ ಸ್ಪರ್ಶಾದಿಗಳನ್ನು ಮಾಡುತ್ತಾನೆ. ಆಗ ಈತನಿಗೂ ಪುಣ್ಯ ಬಂತು ಎಂದು ಹೇಳಬೇಕಾಗುತ್ತದೆ. ಹಾಗೆ ಹೇಳಿದವರನ್ನು ಮೂರ್ಖರು ಎನ್ನುತ್ತಾರೆ. ಆದುದರಿಂದ ಈ ಕೊಲ್ಲುವ ಉದ್ದೇಶದಿಂದ ಮಾಡಿದ ದರ್ಶನಾದಿಗಳು ಹೇಗೆ ಪಾಪಕ್ಕೆ ಕಾರಣವೋ ಹಾಗೆಯೇ ದ್ವೇಷದ ಮೂಲಕ ಮಾಡಿದ ಹರಿಸ್ಮರಣೆಯೂ ಪಾಪಕಾರಕವಾಗಿ ದೇವರ ವಿಕೋಪಕ್ಕೇ ಕಾರಣವಾಗುತ್ತದೆ.

**ದೋಷಂ ದುರಂತಂ ಕ್ವ ಚ ವರ್ಣಯದ್ಭಿಃ**
**ದ್ವೇಷಂ ಹರೇಃ ಕ್ವಾಪಿ ತಮೋನಿದಾನಮ್ ।**
**ಈಶಾಪ್ತಿವಿಘ್ನಂ ಕ್ವ ಚ ನಿರ್ಣಯದ್ಭಿಃ**
**ಏತನ್ಮತಂ ವಿಪ್ರತಿಷಿದ್ಧಮಾರ್ಯೈಃ ॥ ೪೭ ॥**

**ದೋಷಂ** = ದೋಷವನ್ನಾಗಿ, **ದುರಂತಂ** = ದುಃಖದಲ್ಲಿ ಕೊನೆಗೊಳ್ಳುವ, **ಕ್ವ ಚ** = ಕೆಲವು ಕಡೆ, **ವರ್ಣಯದ್ಭಿಃ** = ವರ್ಣಿಸುವ, **ದ್ವೇಷಂ** = ದ್ವೇಷವನ್ನು , **ಹರೇಃ** = ದೇವರ, **ಕ್ವಾಪಿ** = ಕೆಲವು ಕಡೆ, **ತಮಃ** = ತಮಸ್ಸಿಗೆ, **ನಿದಾನಮ್** =ಕಾರಣವನ್ನಾಗಿ, **ಈಶ** =

ದೇವರನ್ನು, **ಆಪ್ತಿ** = ಹೊಂದುವಿಕೆಗೆ, **ವಿಘ್ನಂ** = ಬಾಧಕವನ್ನಾಗಿ, **ಕ್ವ ಚ** = ಕೆಲವು ಕಡೆ, **ನಿರ್ಣಯದ್ಭಿಃ** = ನಿರ್ಣಯಿಸುವ, **ಏತತ್** = ಈ, **ಮತಂ** = ಅಭಿಪ್ರಾಯವು, **ವಿಪ್ರತಿಷಿದ್ಧಮ್** = ಖಂಡಿಸಲ್ಪಟ್ಟಿದೆ, **ಆರ್ಯೈಃ**= ಹಿರಿಯರಿಂದ.

ಭಾಗವತಾದಿ ಪುರಾಣಗಳಲ್ಲಿ, ದೇವರಲ್ಲಿ ಮಾಡುವ ದ್ವೇಷವು ದುಸ್ಸಹವಾದ ದೋಷವು, ತಮಸ್ಸಿಗೆ ಕಾರಣವು. ದೇವರನ್ನು ಹೊಂದಲು ಪ್ರತಿಬಂಧಕವು ಎಂಬುದಾಗಿ ಶಾಸ್ತ್ರಕಾರರು ತೀರ್ಮಾನಿಸಿದ್ದಾರೆ.

**ಅದ್ವೈತಿನಃ ತಾರ್ಕಿಕಮಾನಿನೋ ವಾ**
**ರಾದ್ಧಾಂತಮಧ್ಯೇ ಪರವಾದಿನಾಂ ವಾ ।**
**ಜ್ಞಾನಂ ವಿನಾ ಯನ್ನ ಹಿ ಬಂಧಮೋಕ್ಷಃ**
**ತೇನೇದಮಾತ್ಮೀಯವಚೋ ವಿರುದ್ಧಮ್ ॥ ೪೮ ॥**

**ಅದ್ವೈತಿನಃ** = ಐಕ್ಯವಾದಿಗಳ, **ತಾರ್ಕಿಕಮಾನಿನಃ** = ತಾರ್ಕಿಕರ, **ರಾದ್ಧಾಂತ** = ಸಿದ್ಧಾಂತದ, **ಮಧ್ಯೇ** = ಮಧ್ಯದಲ್ಲಿ, **ಪರ** = ಬೇರೆ, **ವಾದಿನಾಂ** = ವಾದಿಗಳ, **ಜ್ಞಾನಂ** = ಜ್ಞಾನವನ್ನು, **ವಿನಾ** = ಹೊರತಾಗಿ, **ಯತ್** = ಯಾವ ಕಾರಣದಿಂದ, **ನಹಿ** = ಇಲ್ಲ-ವಷ್ಟೇ, **ಬಂಧಮೋಕ್ಷಃ** = ಸಂಸಾರದಿಂದ ಬಿಡುಗಡೆಯು, **ತೇನ** = ಆದ್ದರಿಂದ, **ಇದಂ** = ದ್ವೇಷದಿಂದ ಮೋಕ್ಷ ಎಂಬ ಮಾತು, **ಆತ್ಮ** = ತಮ್ಮ, **ವಚಃ** = ಮಾತಿಗೆ, **ವಿರುದ್ಧಂ**= ವಿರುದ್ಧವು.

ಈ ಮೊದಲೇ ತಿಳಿಸಿದಂತೆ ಪುರಾಣಗಳಲ್ಲಿ ದ್ವೇಷದಿಂದ ಪೂತನಾದಿಗಳು ಮೋಕ್ಷಕ್ಕೆ ಹೋದರು ಎಂದಿದೆ. ಈ ಪುರಾಣಗಳನ್ನು ಅರ್ಥೈಸಲು ಅಸಮರ್ಥರಾದ ಅದ್ವೈತಿಗಳೇ ಮೊದಲಾದವರು ಈ ವಾಕ್ಯಗಳಿಗೆ ಹಾಗೆಯೇ ಅರ್ಥವನ್ನು ಮಾಡಿದರು. ಆದರೆ ತಮ್ಮ ತಮ್ಮ ಸಿದ್ಧಾಂತಗಳನ್ನು ಮಂಡಿಸುವಾಗ ಜ್ಞಾನದಿಂದಲೇ ಮೋಕ್ಷ ಎಂದರು. ತಥಾ ಚ ತಾವು ತಮ್ಮ ಮಾತಿಗೆ ತಾವೇ ವಿರುದ್ಧವಾಗಿ ಮಾತನಾಡಿದರು. ಆದ್ದರಿಂದ ಪುರಾಣಗಳ ವಾಕ್ಯಗಳಿಗೆ ದ್ವೇಷದಿಂದ ಮೋಕ್ಷ ಎಂಬ ಅರ್ಥ ಸರಿಯಲ್ಲ ಎಂದಾಯಿತು.

**ಜ್ಞಾನಾನ್ಯಮಾರ್ಗಪ್ರತಿಷೇಧಕರ್ತ್ರ್ಯಾ**
**ಶ್ರುತ್ಯಾ ಚ ನಿರ್ಣಾಯಕಸೂತ್ರಕರ್ತ್ರಾ ।**
**ಕಿಮೇಷ ಮಾರ್ಗಃ ಸುಲಭೋ ನ ದೃಷ್ಟಃ**
**ಕಿಂ ವಾ ತಪಸ್ಯಾವ್ರತಕರ್ಶಿತಾಂಗೈಃ ॥೪೯॥**

**ಜ್ಞಾನ** = ಜ್ಞಾನಕ್ಕಿಂತ, **ಅನ್ಯ** = ಬೇರೆ, **ಮಾರ್ಗ** = ದಾರಿಯನ್ನು, **ಪ್ರತಿಷೇಧಕರ್ತ್ರ್ಯ** = ನಿಷೇಧಿಸುವ, **ಶ್ರುತ್ಯಾ ಚ** = ಶ್ರುತಿಯಿಂದ, **ನಿರ್ಣಾಯಕ** = ವೇದಾರ್ಥವನ್ನು ನಿರ್ಣಯಿಸುವ, **ಸೂತ್ರ** = ಬ್ರಹ್ಮಸೂತ್ರಗಳನ್ನು, **ಕರ್ತ್ರಾ** = ಮಾಡಿದ ವ್ಯಾಸರಿಂದ, **ಕಿಂ** = ಏನು, **ಏಷಃ** = ಈ, **ಮಾರ್ಗಃ** = ದಾರಿಯು, **ಸುಲಭಃ** = ಸುಲಭವಾದದ್ದು, **ನ ದೃಷ್ಟಃ** = ನೋಡಲ್ಪಡಲಿಲ್ಲ, **ಕಿಂ ವಾ** = ಏನು ಪ್ರಯೋಜನ, **ತಪಸ್ಯಾ** = ತಪಸ್ಸು, **ವ್ರತ** = ವ್ರತಗಳು ಇವುಗಳಿಂದ, **ಕರ್ಶಿತ** = ಕೃಶವಾದ, **ಅಂಗೈಃ**= ಶರೀರದಿಂದ.

'ತಮೇವ ವಿದ್ವಾನ್ ಅಮೃತ ಇಹ ಭವತಿ'ದೇವರನ್ನು ಈ ರೀತಿ ತಿಳಿದವನು ಮುಕ್ತನಾಗುವನು ಎಂಬ ಶ್ರುತಿಯು, ವಿದ್ಯೈವ ನಿರ್ಧಾರಣಾತ್ ಎಂಬ ಸೂತ್ರವನ್ನು ನಿರ್ಣಾಯಕವನ್ನಾಗಿ ಮಾಡಿದ ವ್ಯಾಸರು, ಹಾಗೆಯೇ ನಾನಾ ರೀತಿಯ ವ್ರತಾದಿಗಳನ್ನು ಮಾಡಿ ದೇವರ ಪ್ರೀತಿಯನ್ನು ಗಳಿಸಲೋಸುಗ ದೇಹವನ್ನು ದಂಡಿಸಿದ ಋಷಿಗಳಾಗಲಿ ದ್ವೇಷರೂಪಮಾರ್ಗವನ್ನು ಮೋಕ್ಷಕ್ಕೆ ಸಾಧನವಾಗಿ ಹೇಳಲೇ ಇಲ್ಲ. ಈ ಒಂದು ಮಾರ್ಗ ಇರುವುದೇ ಆಗಿದ್ದರೆ ಈ ಮಾರ್ಗವನ್ನು ಅವಶ್ಯ ಹೇಳಬೇಕಿತ್ತು. ಯಾಕೆಂದರೆ ಪ್ರೀತಿಯ ಮಾರ್ಗಕ್ಕಿಂತ ದ್ವೇಷದ ಮಾರ್ಗ ಸುಲಭ. ಸುಲಭದ ಮಾರ್ಗ ಸರ್ವಜ್ಞರಾದ ಅವರಿಗೆ ತಿಳಿಯಲೇ ಇಲ್ಲವೆ? ಇವರು ಸರ್ವಜ್ಞರಾದರೂ ಹೇಳಲಿಲ್ಲ. ಆದ್ದರಿಂದ ಆ ಮಾರ್ಗ ಇಲ್ಲ ಎಂದರ್ಥ.

**ಅವೈಷ್ಣವಾನಾಂ ಯತನೈರ್ನ ಮೋಕ್ಷಃ**
**ಪತಂತ್ಯಧಸ್ತಾಮಸವೃತ್ತಯಸ್ತೇ।**
**ಏತತ್ಸಮಾನಾರ್ಥಕಭಾರತೋಕ್ತಿ-**
**ವ್ರಾತಾಮತಂ ತನ್ನ ಮತಂ ಶುಕಸ್ಯ ॥ ೫೦ ॥**

**ಅವೈಷ್ಣವಾನಾಂ** = ತಾಮಸರಿಗೆ, **ಯತನೈಃ** = ಪ್ರಯತ್ನಗಳಿಂದ, **ನ ಮೋಕ್ಷಃ** = ಮೋಕ್ಷ ಇಲ್ಲ, **ಪತಂತಿ** = ಬೀಳುತ್ತಾರೆ, **ಅಧಃ** = ಕೆಳಗೆ, **ತಾಮಸ** = ಕೆಟ್ಟ, **ವೃತ್ತಯಃ** = ಕೆಲಸಗಳುಳ್ಳ, **ತೇ** = ಅವರು, **ಏತತ್** = ಇದಕ್ಕೆ, **ಸಮಾನ** = ಸಮಾನವಾದ, **ಅರ್ಥಕ** = ಅರ್ಥವನ್ನು ಕೊಡುವ, **ಭಾರತ** = ಮಹಾಭಾರತದ, **ಉಕ್ತಿ** = ಮಾತುಗಳ, **ವ್ರಾತ** = ಸಮೂಹಕ್ಕೆ, **ಅಮತಂ** = ವಿರುದ್ಧವಾದ, **ತತ್** = ದ್ವೇಷಿಗಳಿಗೆ ಮೋಕ್ಷಕಥನವು, **ನ ಮತಂ** = ವಿಚಾರವಲ್ಲ, **ಶುಕಸ್ಯ**= ಶುಕರದ್ದು.

ಅವೈಷ್ಣವರಿಗೆ ಮೋಕ್ಷ ಇಲ್ಲ. ಪ್ರಯತ್ನ ಮಾಡಿದರೂ ಕೆಳಗೆ ಬೀಳುತ್ತಾರೆ ಎಂಬ ಮಾತು ಮಹಾಭಾರತದಲ್ಲಿ ಬಹಳ ಇದೆ. 'ವೈಕುಂಠನಾಮ ಲೋಕಂ ವೈ ದಿವ್ಯಂ ನಿತ್ಯಂ

ಸನಾತನಮ್ । ಅವೈಷ್ಣವಾನಾಮಪ್ರಾಪ್ಯಂ ಮಹಾಯತ್ನವತಾಮಪಿ' 'ವೈಕುಂಠ ಎಂಬ ಲೋಕವು ಅನಾದಿನಿತ್ಯವಾದದ್ದು. ಅವೈಷ್ಣವರು ಎಷ್ಟು ಪ್ರಯತ್ನ ಮಾಡಿದರೂ ಹೊಂದಲು ಸಾಧ್ಯವಾದದ್ದು' ಇತ್ಯಾದಿ. ಆದ್ದರಿಂದ ಇಂತಹ ಮಾತುಗಳಿಗೆ ವಿರುದ್ಧವಾದ ದ್ವೇಷಿಗಳಿಗೂ ಮೋಕ್ಷ ಎಂಬ ಮಾತನ್ನು ಶುಕಾಚಾರ್ಯರು ಖಂಡಿತವಾಗಿಯೂ ಹೇಳುವುದಿಲ್ಲ. ಹಾಗೇನಾದರೂ ಹೇಳಿದ್ದು ಕಂಡು ಬಂದರೆ ಅದಕ್ಕೆ ಹಿಂದೆ ಹೇಳಿದಂತೆ ಬೇರೆ ಅರ್ಥ ಮಾಡಬೇಕು.

ನಿಂದಾಂ ಮುಕುಂದಸ್ಯ ಸಕೃತ್ ನಿಶಮ್ಯ
ಮಂದಃ ಪತೇತ್ ಕಿಂ ಪುನರಚ್ಯುತಂ ತಮ್ ।
ನಿಂದನ್ನಿತಿ ಹ್ಯಾಲಪತಃ ಶುಕಸ್ಯ
ಕಿಂ ದ್ವೇಷತೋ ಮುಕ್ತಿರಿತಿ ಸ್ಮ ಹೃದ್ಯಮ್ ॥೫೧॥

ನಿಂದಾಂ = ನಿಂದೆಯನ್ನು, ಮುಕುಂದಸ್ಯ = ದೇವರ, ಸಕೃತ್ = ಒಮ್ಮೆ, ನಿಶಮ್ಯ = ಕೇಳಿ, ಮಂದಃ = ಮೂರ್ಖನು, ಪತೇತ್ = ಬೀಳುತ್ತಾನೆ, ಕಿಂ ಪುನಃ = ಏನು ಹೇಳುವುದು?, ಅಚ್ಯುತಂ = ದೋಷರಹಿತನಾದ, ತಂ = ಆ ದೇವರನ್ನು, ನಿಂದನ್ = ಬೈಯ್ಯುವವನು, ಇತಿ = ಎಂದು, ಆಲಪತಃ = ಹೇಳತಕ್ಕ, ಶುಕಸ್ಯ = ಶುಕರಿಗೆ, ಕಿಂ = ಏನು, ದ್ವೇಷತಃ = ದ್ವೇಷದಿಂದ, ಮುಕ್ತಿಃ = ಮೋಕ್ಷವು, ಇತಿ ಸ್ಮ = ಎಂಬುದು, ಹೃದ್ಯಮ್ = ಅಭಿಪ್ರೇತವು.

ದೇವರನ್ನು ಬೈಯುವ ಶಬ್ದಗಳನ್ನು ಕೇಳಿಸಿಕೊಳ್ಳುವವನೂ ನರಕಕ್ಕೆ ಹೋಗುತ್ತಾನೆ. ಸ್ವಯಂ ದೇವರನ್ನು ಬೈಯುವವನು ನರಕಕ್ಕೆ ಹೋಗುತ್ತಾನೆ ಎಂಬುದು ಏನು ಹೇಳತಕ್ಕದ್ದು? ದೇವರನ್ನಾಗಲೀ ದೇವರ ಭಕ್ತರನ್ನಾಗಲೀ ಯಾರಾದರೂ ಬೈಯುತ್ತಿದ್ದರೆ ಸಾಧ್ಯವಾದರೆ ನಾವು ಅದನ್ನು ಪ್ರತಿಭಟಿಸಬೇಕು. ಇಲ್ಲವಾದರೆ ಆ ಜಾಗದಿಂದ ಎದ್ದು ಹೊರಡಬೇಕು. ಅಲ್ಲೇ ನಿಂತರೆ ನರಕಕ್ಕೆ ಹೋಗುತ್ತಾರೆ ಎಂದು ಭಾಗವತದಲ್ಲಿ ಶುಕಾಚಾರ್ಯರು ಹೇಳಿದ್ದಾರೆ. ಆದ್ದರಿಂದ ದ್ವೇಷದಿಂದ ಮುಕ್ತಿ ಎಂಬ ಮಾತು ಎಳ್ಳಷ್ಟೂ ಸರಿಯಲ್ಲ.

ಆಪೋಽಬ್ರುವನ್ನಿತಿ ಸನಾತನವೇದವಾಕ್ಯಾತ್
ಕಿಂ ವಕ್ತೃತಾ ಜಡಜಲಸ್ಯ ತಥಾ ಶುಕೋಕ್ತೌ ।
ಕಂಸಾದಿಮೋಕ್ಷವಚನಾನ್ಯಪಿ ಯುಕ್ತಿಯುಕ್ತ-
ಮಾನಾಂತರೋದಿತಮನೋಮಧುರಾರ್ಥಭಾಂಜಿ ॥ ೫೨ ॥

**ಆಪಃ** =ನೀರು, **ಅಬ್ರುವನ್** = ಮಾತನಾಡಿತು, **ಇತಿ** = ಎಂದು, **ಸನಾತನ** = ನಿತ್ಯವಾದ, **ವೇದ** = ವೇದದ, **ವಾಕ್ಯಾತ್** = ವಾಕ್ಯದಿಂದ, **ಕಿಂ** = ಇದೆಯೇನು? **ವಕ್ತೃತಾ** = ಮಾತು, **ಜಡಜಲಸ್ಯ** = ಜಡವಾದ ನೀರಿಗೆ, **ತಥಾ** = ಹಾಗೆಯೇ, **ಶುಕ** = ಶುಕಾಚಾರ್ಯರ, **ಉಕ್ತೌ** = ವಾಕ್ಯದಲ್ಲಿ, **ಕಂಸಾದಿ** = ಕಂಸಾದಿಗಳಿಗೆ, **ಮೋಕ್ಷ** = ಮೋಕ್ಷದ, **ವಚನಾನಿ ಅಪಿ** = ಮಾತುಗಳು ಕೂಡಾ, **ಯುಕ್ತಿ** = ಯುಕ್ತಿಗಳಿಂದ, **ಯುಕ್ತ** = ಕೂಡಿದ, **ಮಾನಾಂತರ** = ಬೇರೆ ಪ್ರಮಾಣಗಳಲ್ಲಿ, **ಉದಿತ** = ಹೇಳಿದ, **ಮನೋ-ಮಧುರ** = ಮನಸ್ಸಿಗೆ ನೆಮ್ಮದಿಯನ್ನು ಕೊಡುವ, **ಅರ್ಥ** = ಅರ್ಥಗಳನ್ನು, **ಭಾಂಜಿ**= ಹೊಂದುತ್ತವೆ.

ದುಷ್ಟರಿಗೆ ಮೋಕ್ಷವು ಖಂಡಿತವಾಗಿಯೂ ಇಲ್ಲ ಎಂದು ಹೇಳುವುದಾದರೆ **'ಯಾತುಧಾನ್ಯಪಿ ಸಾ ಸ್ವರ್ಗಂ ಅವಾಪ'** ಎಂಬ ಭಾಗವತದ ಶ್ಲೋಕಕ್ಕೆ ಏನು ಗತಿ? ಎಂಬ ಪ್ರಶ್ನೆಗೆ ಉತ್ತರ ಈ ಶ್ಲೋಕದಲ್ಲಿದೆ. ವೇದದಲ್ಲಿ 'ಆಪ ಅಬ್ರುವನ್, ತೇಜ ಐಕ್ಷತ' 'ನೀರು ಮಾತಾಡಿತು, ಬೆಳಕು ನೋಡಿತು' ಇತ್ಯಾದಿ ಮಾತುಗಳು ಇವೆ. ಈ ಮಾತುಗಳಿಗೆ ಹೀಗೇ ಅರ್ಥ ಮಾಡಿದರೆ ಪ್ರತ್ಯಕ್ಷಾದಿಪ್ರಮಾಣಗಳ ವಿರೋಧ ಬರುತ್ತದೆ. ಹೇಗೆಂದರೆ, ಜಡವಸ್ತುಗಳಿಗೆ ಮಾತುಗಾರಿಕೆ, ನೋಡುವಿಕೆ ಇತ್ಯಾದಿಗಳು ಇಲ್ಲ. ಆದ್ದರಿಂದ ವೇದಕ್ಕೆ 'ನೀರಿನ ಅಭಿಮಾನಿ ದೇವತೆ ಮಾತನಾಡಿದನು' ಎಂದು ಅರ್ಥ ಮಾಡುತ್ತೇವೆ. ವಿರೋಧವನ್ನು ಪರಿಹರಿಸುತ್ತೇವೆ. ಅದೇ ರೀತಿ 'ಪೂತನಾದಿಗಳಿಗೆ ಉತ್ತಮ ಲೋಕವಾಯಿತು' ಎಂಬ ಭಾಗವತದ ವಾಕ್ಯಗಳಿಗೆ ಹಿಂದೆ ಹೇಳಿದಂತೆ ಅನೇಕ ಪ್ರಮಾಣಗಳ ವಿರೋಧ ಬರುವುದರಿಂದ ಬೇರೆ ಅರ್ಥ ಮಾಡಬೇಕು. ಪೂತನಾದಿಗಳ ಶರೀರದಲ್ಲಿ ಎರಡು ಜೀವರು ಇದ್ದಾರೆ. ಅದರಲ್ಲಿ ಸಜ್ಜೀವರಿಗೆ ಒಳ್ಳೆಯದಾಯಿತು ಎಂಬ ಅರ್ಥದಲ್ಲಿ ಪೂತನಾದಿಗಳಿಗೆ ಸದ್ಗತಿಯಾಯಿತು ಎಂದು ಹೇಳಿದ್ದು. ಈ ಅರ್ಥವು ಗರುಡಪುರಾಣದಲ್ಲಿ ಇದೆ. ವ್ಯಾಸರು ಹೇಳಿದ್ದೂ ಇದನ್ನೇ.

**ಯಥಾ ಗ್ರಹಾವಿಷ್ಟಕಲೇವರೇ ದ್ವೌ**
**ಕೃತಾಭಿಮಾನಾವಿಹ ಚೇತನೌ ಸ್ತಃ।**
**ತಥೈವ ಕಂಸಾದಿಶರೀರಸಂಸ್ಥೌ**
**ಶುಭಾಶುಭೌ ದ್ವೌ ಸುಖದುಃಖಭಾಜೌ ॥೫೩॥**

**ಯಥಾ** = ಹೇಗೆ, **ಗ್ರಹ** = ಪಿಶಾಚಿಗಳಿಂದ, **ಆವಿಷ್ಟ** = ಪ್ರವಿಷ್ಟಗಳಾದ, **ಕಲೇವರೇ** = ಶರೀರದಲ್ಲಿ, **ದ್ವೌ** = ಎರಡು, **ಕೃತ** = ಮಾಡಲ್ಪಟ್ಟ, **ಅಭಿಮಾನೌ** = ಅಭಿಮಾನವುಳ್ಳ, **ಇಹ** = ಈ, **ಚೇತನೌ** = ಚೇತನಗಳು, **ಸ್ತಃ** = ಇದ್ದಾವೆ, **ತಥೈವ** = ಹಾಗೆಯೇ, **ಕಂಸಾದಿ**

= ಕಂಸನೇ ಮೊದಲಾದ, **ಶರೀರ** = ದೇಹದಲ್ಲಿ, **ಸಂಸ್ಥೌ** = ಇದ್ದಾರೆ, **ಶುಭಾಶುಭೌ** = ಒಳ್ಳೆಯ ಹಾಗೂ ಕೆಟ್ಟ, **ದ್ವೌ** = ಇಬ್ಬರು, **ಸುಖ** = ಸುಖವನ್ನು, **ದುಃಖ** = ದುಃಖ-ವನ್ನು, **ಭಾಜೌ** = ಅನುಭವಿಸುವ.

ಒಂದು ಶರೀರದಲ್ಲಿ ಜೀವದ್ವಯರ ಪ್ರವೇಶವು ಸಂಭಾವಿತ ಎನ್ನುವುದಕ್ಕೆ ಒಂದು ಉದಾಹರಣೆ – ಪಿಶಾಚಿಗಳಿಂದ ಆವಿಷ್ಟರಾಗುವ ಕೆಲವು ವ್ಯಕ್ತಿಗಳು ಇರುತ್ತಾರೆ. ಅಂತಹ ಶರೀರದಲ್ಲಿ ಪಿಶಾಚಿಯೂ ಆ ವ್ಯಕ್ತಿಯೂ ಇಬ್ಬರು ಸುಖದುಃಖಗಳನ್ನು ಅನುಭವಿಸುತ್ತಾರೆ. ಅದೇ ರೀತಿ ಪೂತನಾದಿ ಶರೀರಗಳಲ್ಲಿಯೂ ಎರಡು ಜೀವರು ಅನುಭವಿಸುತ್ತಿದ್ದರು.

**ದ್ವಿಷಂತಮೇಕಂ ದಿತಿಜಂ ವಿಹಾಯ**
**ಹರಿಪ್ರಿಯಸ್ಯಾಸುರತಾ ಕಥಂ ಸ್ಯಾತ್ ।**
**ಕ್ವಚಿದ್ದ್ವಿಷಂತೋಽಪಿ ಕಿಮರ್ಜುನೇಂದ್ರ-**
**ಪುರೋಗಮಾ ದೈತ್ಯತಯಾ ನಿರುಕ್ತಾಃ ॥೫೪॥**

**ದ್ವಿಷಂತಂ** = ದ್ವೇಷಿಸುವ, **ಏಕಂ** = ಒಬ್ಬ, **ದಿತಿಜಂ** = ದೈತ್ಯನನ್ನು, **ವಿಹಾಯ** = ಬಿಟ್ಟು, **ಹರಿಪ್ರಿಯಸ್ಯ** = ಭಗವದ್ಭಕ್ತನಿಗೆ, **ಅಸುರತಾ** = ರಾಕ್ಷಸತ್ವವು, **ಕಥಂ** = ಹೇಗೆ, **ಸ್ಯಾತ್** = ಆದೀತು? **ಕ್ವಚಿತ್** = ಒಮ್ಮೊಮ್ಮೆ, **ದ್ವಿಷಂತಃ ಅಪಿ** = ದ್ವೇಷಿಸಿದರೂ, **ಕಿಂ** = ಏನು? **ಅರ್ಜುನ** = ಅರ್ಜುನನು, **ಇಂದ್ರ** = ಇಂದ್ರನು, **ಪುರೋಗಮಾಃ** = ಮೊದಲಾದವರು, **ದೈತ್ಯತಯಾ** = ದೈತ್ಯ ಎಂಬುದಾಗಿ, **ರಾಕ್ಷಸತ್ವೇನ** = ಅಸುರತನದಿಂದ, **ನಿರುಕ್ತಾಃ** = ಹೇಳಲ್ಪಟ್ಟರು.

ರಾಜರು ಯುಕ್ತಿಯಿಂದ ಜೀವದ್ವಯವನ್ನು ಸಮರ್ಥಿಸುತ್ತಾರೆ – ಶಿಶುಪಾಲನ ಶರೀರವನ್ನು ನೋಡಿ ಎಲ್ಲರೂ ಈತನು ಅಸುರನು ಎನ್ನುತ್ತಾರೆ. ಇದಕ್ಕೆ ಕಾರಣವನ್ನು ವಿಮರ್ಶೆ ಮಾಡಬೇಕು. ಸ್ವಭಾವತಃ ಅಸುರನಾದ್ದರಿಂದ ಎಂದು ಹೇಳಲು ಆಗುವುದಿಲ್ಲ. ಯಾಕೆಂದರೆ, ಆ ಶರೀರದಲ್ಲಿ ಜಯ ಎಂಬ ಚೇತನ ಮಾತ್ರ ಇರುವುದಾದರೆ ಆತನು ಒಮ್ಮೊಮ್ಮೆ ದೇವರನ್ನು ಪ್ರೀತಿಸುತ್ತಾನೆ. ಅಸುರಸ್ವಭಾವದವರು ದೇವರನ್ನು ಎಂದೂ ಪ್ರೀತಿಸುವುದಿಲ್ಲ. ಉದಾಹರಣೆಗೆ – ದುರ್ಯೋಧನ, ಜರಾಸಂಧ. ಇನ್ನು ಅಸುರ-ಯೋನಿಯಲ್ಲಿ ಹುಟ್ಟಿದ್ದರಿಂದ ಎಂದೂ ಹೇಳಲಾಗದು. ಯಾಕೆಂದರೆ, ಶಿಶುಪಾಲನು ಕ್ಷತ್ರಿಯಯೋನಿಯಲ್ಲಿ ಹುಟ್ಟಿದವನು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಅಸುರರಂತೆ ದ್ವೇಷ ಮಾಡುತ್ತಾರೆ. ಆದ್ದರಿಂದ ಅಸುರರು ಎಂದೂ ಹೇಳಲಾಗದು. ಯಾಕೆಂದರೆ, ಹಾಗೆ ಹೇಳುವುದಾದರೆ ಅರ್ಜುನಾದಿಗಳೂ ಒಮ್ಮೊಮ್ಮೆ ಅಸುರರಂತೆ

ದೇವರನ್ನು ದ್ವೇಷಿಸುತ್ತಾರೆ. ಆದ್ದರಿಂದ ಅವರನ್ನೂ ಅಸುರರು ಎಂದು ಹೇಳಬೇಕಾದೀತು. ಆದರೆ ಯಾರೂ ಹೇಳುವುದಿಲ್ಲ. ಶಿಶುಪಾಲನನ್ನು ದೈತ್ಯ ಎಂದು ಹೇಳುತ್ತಾರೆ. ಇದರಿಂದ ಸಿದ್ಧವಾಗುತ್ತದೆ – ಅಲ್ಲಿ ಅಸುರ ಸ್ವಭಾವದ ಇನ್ನೊಂದು ಚೇತನ ಇದೆ ಎಂದು.

**ನ ಚೋಗ್ರಶಾಪಾತ್ ಅಸುರತ್ವಮೇಷಾಂ**
**ವಿಹಾಯ ದುಷ್ಟಂ ಕಮಪಿ ಸ್ವನಿಷ್ಠಮ್ ।**
**ಯತೋऽಭಿಶಪ್ತೇऽಪಿ ನೃಪೇ ತದೇತತ್**
**ಅಭೂತ್ ಪುರಾ ಕಿಂಕರದೈತ್ಯಯೋಗಾತ್ ॥ ೫೫ ॥**

**ನ ಚ** = ಅಲ್ಲ, **ಉಗ್ರಶಾಪಾತ್** = ಕ್ರೂರವಾದ ಶಾಪದಿಂದ, **ಅಸುರತ್ವಂ** = ದೈತ್ಯತನವು, **ಏಷಾಂ** = ಶಿಶುಪಾಲಾದಿಗಳಿಗೆ, **ವಿಹಾಯ** = ಬಿಟ್ಟು, **ದುಷ್ಟಂ** = ದುಷ್ಟನನ್ನು , **ಕಂ ಅಪಿ** = ಯಾರೋ ಒಬ್ಬ, **ಸ್ವನಿಷ್ಠಂ** = ತನ್ನಲ್ಲಿರುವ, **ಯತಃ** = ಯಾವ ಕಾರಣದಿಂದ, **ಅಭಿಶಪ್ತೇऽಪಿ** = ಶಪಿಸಲ್ಪಟ್ಟ, **ನೃಪೇ** = ಕಲ್ಮಾಷಪಾದರಾಜನಲ್ಲಿ, **ತತ್** = ಆ, **ಏತತ್** = ಅಸುರತ್ವವು, **ಅಭೂತ್** = ಆಯಿತು, **ಪುರಾ** = ಹಿಂದೆ, **ಕಿಂಕರ** = ಕಿಂಕರ ಎಂಬ, **ದೈತ್ಯ** = ದೈತ್ಯನ, **ಯೋಗಾತ್**= ಸಂಬಂಧದಿಂದ.

ಒಂದು ಪ್ರಶ್ನೆ – ಶಿಶುಪಾಲನ ದೇಹದಲ್ಲಿ ಜಯನೆಂಬ ಚೇತನ ಮಾತ್ರ ಇರುವುದು. ಅಸುರ ಎಂದು ಕರೆಯುವುದು ಯಾಕೆಂದರೆ, ಸನಕಾದಿಗಳ ಶಾಪ – 'ನೀವು ಅಸುರರಾಗಿ' ಎಂದು. ಆದ್ದರಿಂದ ಶಿಶುಪಾಲನ ದೇಹದಲ್ಲಿ ಇನ್ನೊಂದು ದುಷ್ಟಚೇತನವನ್ನು ಒಪ್ಪುವುದು ಬೇಡ ಎಂದು.

ಉತ್ತರ – ಈ ಪ್ರಶ್ನೆ ಸರಿಯಲ್ಲ. ಯಾರ ಶಾಪವಿದ್ದರೂ ಸಜ್ಜೀವರೇ ಅಸುರರಾಗುವು-ದಿಲ್ಲ. 'ಅಸುರರಾಗಿ' ಎಂದು ಶಪಿಸಿದರೂ ಅಸುರರ ಜೊತೆಗಿರಿ ಎಂದೇ ಅರ್ಥ. ಯಾಕೆಂದರೆ, ಶಕ್ತಿ ಎಂಬ ಋಷಿಯು ಕಲ್ಮಾಷಪಾದರಾಜನಿಗೆ 'ನೀನು ದೈತ್ಯನಾಗು' ಎಂದು ಶಪಿಸಿದರು. ಆದರೆ ಆತನು ಸ್ವಯಂ ದೈತ್ಯನಾಗುವುದಿಲ್ಲ. ಕಿಂಕರ ಎಂಬ ದೈತ್ಯನ ಸಹವಾಸ ಬಂತು. ಸಮಸ್ತ ವೈದಿಕಸಾಹಿತ್ಯದಲ್ಲಿ ಎಲ್ಲಿಯೂ ಕೂಡಾ ಶಾಪಾದಿಗಳಿಂದ ಸ್ವಭಾವ ಬದಲಾದ ಘಟನೆಗಳು ಇಲ್ಲ. ಆದರೆ ಜಯನೇ ಶಾಪದಿಂದ ಅಸುರನಾದ ಎಂದು ಹೇಳ-ಲಾಗದು.

ತಥೈವ ಚೈದ್ಯೇ ಜಯನಾಮಕಃ ಸನ್
ತಥಾ ಪರಸ್ಮಿನ್ ವಿಜಯಾಭಿಧಾನಃ ।

**ನಿರಂತರದ್ವೇಷಫಲಸ್ಯ ಮೂಲಂ**
**ಬಲೇನ ರಕ್ಷೋಽಪಿ ಹಿ ತರ್ಹಿ ಸಿದ್ಧ್ಯೇತ್ ॥೫೬॥**

**ತಥೈವ** = ಹಾಗೆಯೇ, **ಚೈದ್ಯೇ** = ಶಿಶುಪಾಲನಲ್ಲಿ, **ಜಯನಾಮಕಃ** = ಜಯ ಎಂಬು-ವನು, **ಸನ್** = ಇದ್ದವನಾಗಿ, **ತಥಾ** = ಹಾಗೆಯೇ, **ಪರಸ್ಮಿನ್** = ಇನ್ನೊಬ್ಬನಲ್ಲಿ, **ವಿಜಯ** = ವಿಜಯ ಎಂದು, **ಅಭಿಧಾನಃ** = ಹೆಸರುಳ್ಳವನಾಗಿ, **ನಿರಂತರ** = ಸತತ, **ದ್ವೇಷ** = ದ್ವೇಷದ, **ಫಲಸ್ಯ** = ಕಾರ್ಯಕ್ಕೆ, **ಮೂಲಂ** = ಕಾರಣವಾದ, **ಬಲೇನ** = ಸಾಮರ್ಥ್ಯ-ದಿಂದ, **ರಕ್ಷೋಽಪಿ** = ರಾಕ್ಷಸನೂ, **ಹಿ** = ಪ್ರಸಿದ್ಧ, **ತರ್ಹಿ** = ಹಾಗಿದ್ದರೆ, **ಸಿದ್ಧ್ಯೇತ್**= ಸಿದ್ಧನಾಗುತ್ತಾನೆ.

ಶಿಶುಪಾಲದಂತವಕ್ರರ ಶರೀರದಲ್ಲಿ ಜಯ-ವಿಜಯರು ಶಾಪವಶಾತ್ ಇದ್ದಾರೆ ಎಂದು ನೀವೂ ಒಪ್ಪಿದ್ದೀರಿ. ಅವರು ಸಜ್ಜನರೆಂದೂ ತಿಳಿದಿದ್ದೀರಿ. ಆದರೂ ಆ ಶರೀರದಿಂದ ದೇವರ ದ್ವೇಷ ನಡೆಯುತ್ತಾ ಇದೆ. ಇದಕ್ಕೆ ಕಾರಣ ಬೇಕು. ಕಾರಣ ಇಲ್ಲದೆ ಕಾರ್ಯ ಆಗುವುದಿಲ್ಲ. ದ್ವೇಷ ಎಂಬ ಕಾರ್ಯ ಆಗುತ್ತಿದೆ. ಅದಕ್ಕೆ ಅನುಗುಣವಾದ ಕಾರಣವನ್ನು ಒಪ್ಪಿಕೊಳ್ಳಲೇ ಬೇಕು. ಆಗ ಆ ಶರೀರದಲ್ಲಿ ದೈತ್ಯರನ್ನು ಒಪ್ಪಿಕೊಳ್ಳಲೇಬೇಕು ಎಂದು ರಾಜರು ಪರ-ರಿಂದಲೇ ಜೀವದ್ವಯವನ್ನು ಒಪ್ಪಿಸುತ್ತಿದ್ದಾರೆ.

● ● ● ●

**ಸಂದೇಶ**

**'ವಿನಾಶಕಾಲೇ ವಿಪರೀತಬುದ್ಧಿಃ'**

ವಿನಾಶಕಾಲದಲ್ಲಿ ಬುದ್ಧಿಯು ವಿವೇಚನೆಯನ್ನು ಕಳೆದುಕೊಳ್ಳುತ್ತದೆ

---

**ಯದೀಹ ಚೈದ್ಯೇ ದಿತಿಜೋ ನ ವೈರಾತ್**
**ನ ತರ್ಹಿ ಮೋಕ್ಷಃ ಪರಿಚರ್ಯಯೈವ ।**
**ಯದಾ ತು ಸೇವಾವಿಧುರೋಽಪರೋಽಸ್ತಿ**
**ತದಾ ಬಲಾತ್ ಸಿದ್ಧ್ಯತಿ ಜೀವಯುಗ್ಮಮ್ ॥ ೫೭ ॥**

**ಯದಿ** = ಒಂದು ವೇಳೆ, **ಇಹ** = ಈ, **ಚೈದ್ಯೇ** = ಶಿಶುಪಾಲನಲ್ಲಿ, **ದಿತಿಜಃ** = ದೈತ್ಯನು, **ನ** = ಅಲ್ಲ, **ವೈರಾತ್** = ದ್ವೇಷದಿಂದ, **ನ** = ಅಲ್ಲ, **ತರ್ಹಿ** = ಹಾಗಿದ್ದರೆ, **ಮೋಕ್ಷಃ** = ಮೋಕ್ಷವು, **ಪರಿಚರ್ಯಯಾ ಏವ** = ಸೇವೆಯಿಂದಲೇ, **ಯದಾ** = ಒಂದು ವೇಳೆ, **ಸೇವಾ** = ಸೇವೆಯಿಂದ, **ವಿಧುರಃ** = ರಹಿತನಾದ, **ಅಪರಃ** = ಇನ್ನೊಬ್ಬನು, **ಅಸ್ತಿ** = ಇದ್ದಾನೆ, **ತದಾ** = ಆಗ, **ಬಲಾತ್** = ಅನಿವಾರ್ಯವಾಗಿ, **ಸಿದ್ಧ್ಯತಿ** = ಸಿದ್ಧವಾಗುತ್ತದೆ, **ಜೀವ** = ಜೀವರ, **ಯುಗ್ಮಂ** = ದ್ವಯವು.

ಶಿಶುಪಾಲನ ದೇಹದಲ್ಲಿ ಇರುವವನು ದೈತ್ಯನೋ? ದೈತ್ಯನ ಸಂಪರ್ಕ ಇರುವ ಜಯನೋ? ದೈತ್ಯನ ಸಂಪರ್ಕ ಇರುವವನು ಎಂದು ಹೇಳಿದರೆ, ಈ ಮಾತು ಕೂಡುತ್ತದೆ, ದೇವರು ದ್ವೇಷರೂಪ ಸಾಧನೆ ಮಾಡಿದವನಿಗೆ ಮೋಕ್ಷ ಕೊಡುವುದಿಲ್ಲ. ಸೇವೆ ಮಾಡಿದವನಿಗೆ ಮಾತ್ರ. ಸೇವೆ ಮಾಡಿದವನು ಅಸುರನ ಸಂಪರ್ಕಕ್ಕೆ ಒಳಗಾಗಿದ್ದರೂ ತನ್ನಿಮಿತ್ತಕವಾಗಿ ದ್ವೇಷ ಮಾಡಿದರೂ ದೇವರು ಅದನ್ನು ಪರಿಗಣಿಸದೆ ಮೋಕ್ಷವನ್ನು ಕೊಡುತ್ತಾನೆ. ಈ ಮಾತು ಶಿಶುಪಾಲನಿಗೆ ಸರಿಯಾಗಿ ಕೂಡುತ್ತದೆ. ಆಗ ಜಯನ ಜೊತೆ ಒಬ್ಬ ಅಸುರ ಇದ್ದಾನೆ ಎಂದು ಒಪ್ಪಲೇ ಬೇಕು. ದೈತ್ಯನೇ ಆದರೆ ಶಿಶುಪಾಲನಿಗೆ ಮೋಕ್ಷ ಹೇಗೆ ಕೊಟ್ಟ? ಎಂಬ ಪ್ರಶ್ನೆಗೆ ಉತ್ತರ ಇಲ್ಲ ಎಂದಾಗುತ್ತದೆ. ಇದರಿಂದ ಜೀವದ್ವಯಾವೇಶ ಸಿದ್ಧವಾಗುತ್ತದೆ.

> ವಿದ್ವೇಷಿಜೀವಕೃತಸಂಗಮಪಿ ಸ್ವಭಕ್ತಂ
> 
> ಕೃಷ್ಣೋ ವ್ಯಮೋಚಯದಹೋ ಕರುಣಾಂಬುರಾಶಿಃ।
> 
> ಕಿಂ ನಾಮ ತದ್ರಹಿತಭಕ್ತಜನಾನಿತಿ ಸ್ಮ
> 
> ಕೈಮುತ್ಯಮೂಹಯತ ಸತ್ಯವತೀಸುತೋಕ್ತ್ಯಾ ॥ ೫೮ ॥

**ವಿದ್ವೇಷಿ** = ದ್ವೇಷಿಸುವ, **ಜೀವ** = ಜೀವನ ಜೊತೆ, **ಕೃತ** = ಮಾಡಿದ, **ಸಂಗಮಪಿ** = ಸಂಪರ್ಕವುಳ್ಳವನಾದರೂ, **ಸ್ವಭಕ್ತಂ** = ತನ್ನ ಭಕ್ತನನ್ನು, **ಕೃಷ್ಣಃ** = ಕೃಷ್ಣನು, **ವ್ಯಮೋ-ಚಯತ್** = ಬಿಡಿಸಿದನು, **ಅಹೋ** = ಆಶ್ಚರ್ಯವು, **ಕರುಣಾ** = ದಯೆಯೆಂಬ, **ಅಂಬು** = ನೀರಿನ, **ರಾಶಿ** = ಸಮೂಹವುಳ್ಳ, **ಕಿಂ ನಾಮ** = ಏನು ಹೇಳತಕ್ಕದ್ದು, **ತತ್** = ಆ ಸಂಗದಿಂದ, **ರಹಿತ** = ರಹಿತರಾದ, **ಭಕ್ತಜನಾನ್** = ಭಕ್ತಜನರನ್ನು, **ಇತಿ** = ಎಂದು, **ಕೈಮುತ್ಯಂ** = ತರ್ಕವನ್ನು, **ಊಹಯತ** = ತಿಳಿಯಿರಿ, **ಸತ್ಯವತೀಸುತ** = ವ್ಯಾಸರ, **ಉಕ್ತ್ಯಾ** = ಮಾತಿನಿಂದ.

ಹಾಗಾದರೆ ಭಾಗವತದ ಕೈಮುತ್ಯಕ್ಕೆ ಗತಿ ಏನು? ಕೈಮುತ್ಯ ಎಂದರೆ ಏನು? ರಾಕ್ಷಸಿ-ಯಾದ ಪೂತನಿಯೇ ಮೋಕ್ಷಕ್ಕೆ ಹೋದ ಮೇಲೆ ಕೃಷ್ಣನಿಗೆ ಹಾಲುಣಿಸಿದ ಆಕಳುಗಳು ಮೋಕ್ಷಕ್ಕೆ ಹೋದವು ಎಂದು ಏನು ಹೇಳತಕ್ಕದ್ದು ಎಂದು. ಇದಕ್ಕೆ ಈ ರೀತಿ ಅರ್ಥ ಮಾಡಬೇಕು – ದೇವರು ಕರುಣಾಸಾಗರ. ತನ್ನ ಭಕ್ತರು ದುಷ್ಟರ ಜೊತೆಗೆ ಸೇರಿ ಪ್ರಾರಬ್ಧವಶಾತ್ ತನ್ನನ್ನು ದ್ವೇಷಿಸಿದರೂ ಅದನ್ನು ಲೆಕ್ಕಿಸದೆ ಸಹಜವಾದ ಪ್ರೀತಿಯನ್ನು ನೋಡಿ ಮೋಕ್ಷವನ್ನು ಕೊಡುತ್ತಾನೆ. ಹೀಗಿರುವಾಗ ದುಷ್ಟಸಂಗರಹಿತರಾದ ಭಕ್ತರಿಗೆ ಮುಕ್ತಿಯನ್ನು ಕೊಡುತ್ತಾನೆ ಎಂದು ಏನು ಹೇಳತಕ್ಕದ್ದು ಎಂದು. ಅಂದರೆ ಭಕ್ತರಿಗೆ ಮೋಕ್ಷವನ್ನು ಕೊಟ್ಟೇ ಕೊಡುತ್ತಾನೆ ಎಂದು ಅರ್ಥ ಮಾಡಬೇಕು ಎಂದು ಶ್ರೀವ್ಯಾಸರೇ ಹೇಳಿದ್ದಾರೆ.

ದ್ವೇಷಾಭಿವೃದ್ಧಿಂ ದ್ವಿಷತಾಂ ವಿಧಾತುಂ
ವ್ಯಾಸಶ್ಚ ನ ಸ್ಪಷ್ಟಮಿದಂ ಪ್ರಮೇಯಮ್ ।
ಊಚೇ ನ ಚೇತ್ ಭಕ್ತಜನೈರಗಮ್ಯಂ
ಪಾಪೈರಸಾಧ್ಯಂ ತಮ ಆಪ್ನುಯಾತ್ ಕಃ ॥ ೫೯ ॥

**ದ್ವೇಷಾಭಿವೃದ್ಧಿಂ** = ದ್ವೇಷದ ಹೆಚ್ಚಳವನ್ನು, **ದ್ವಿಷತಾ** = ದೈತ್ಯರಿಗೆ, **ವಿಧಾತುಂ** = ಮಾಡಲು, **ವ್ಯಾಸಶ್ಚ** = ವ್ಯಾಸರಾದರೂ, **ನ** = ಇಲ್ಲ, **ಸ್ಪಷ್ಟಂ** = ಸಂಶಯ ಇಲ್ಲದೆ, **ಇದಂ** = ಈ, **ಪ್ರಮೇಯಂ** = ವಿಷಯವನ್ನು, **ಊಚೇ** = ಹೇಳಿದರು, **ನ ಚೇತ್** = ಇಲ್ಲದಿದ್ದರೆ, **ಭಕ್ತಜನೈಃ** = ಭಕ್ತಜನರಿಂದ, **ಆಗಮ್ಯಂ** = ಹೊಂದಲು ಅಯೋಗ್ಯವಾದ, **ಪಾಪೈಃ** = ದ್ವೇಷಾತಿರಿಕ್ತ ಪಾಪಗಳಿಂದ ಹೊಂದಲು ಅಸಾಧ್ಯವಾದ, **ತಮಃ** = ಅಂಧಃ-ತಮಸ್ಸನ್ನು, **ಆಪ್ನುಯಾತ್** = ಹೊಂದುತ್ತಾನೆ, **ಕಃ**= ಯಾರು?

ದ್ವೇಷಿಗಳಿಗೆ ಮೋಕ್ಷ ಇಲ್ಲ, ಸ್ನೇಹಿಗಳಿಗೆ ಮಾತ್ರ ಎಂಬ ಮಾತವನ್ನು ವ್ಯಾಸರು ಸ್ಪಷ್ಟವಾಗಿ ಏಕೆ ಹೇಳಿಲ್ಲ? ಎಂದರೆ, ಸ್ಪಷ್ಟವಾಗಿ ಹೇಳಿದರೆ ದ್ವೇಷಿಗಳು ದೇವರನ್ನು ದ್ವೇಷಿಸುವುದಿಲ್ಲ. ದ್ವೇಷಿಸದಿದ್ದರೆ ನಿತ್ಯ ನರಕಕ್ಕೆ ಹೋಗುವುದಿಲ್ಲ. ದ್ವೇಷ ಹೊರತು ಬೇರೆ ಯಾವ ಪಾಪದಿಂದಲೂ ನಿತ್ಯನರಕ ಆಗುವುದಿಲ್ಲ. ಭಕ್ತರೂ ನಿತ್ಯನರಕಕ್ಕೆ ಹೋಗುವುದಿಲ್ಲ. ಹಾಗಾದರೆ, ಮತ್ತೆ ಯಾರಿಗೆ ನಿತ್ಯನರಕ? ದ್ವೇಷಿಗಳು ನಿತ್ಯನರಕಕ್ಕೆ ಹೋಗಬೇಕು. ಅದಕ್ಕಾಗಿ ದ್ವೇಷಿಸಬೇಕು. ವ್ಯಾಸರು ಅಸ್ಪಷ್ಟವಾಗಿ ಹೇಳಿದರೆ ದೈತ್ಯರು ವಿಪರೀತವಾಗಿಯೇ ತಿಳಿಯುತ್ತಾರೆ. ದ್ವೇಷದಿಂದಲೂ ಮೋಕ್ಷವನ್ನು ಸಾಧಿಸಬಹುದು ಎಂದು.

ಆನಂದತೀರ್ಥಮತಮುಜ್ಝಿತದೋಷಜಾತಂ
ಸ್ವಾನಂದದಾಯಿ ಶಿಥಿಲೀಕೃತಮತ್ತಮಾಯಿ ।
ಮಾನೌಘಶೋಭಿ ಮಮ ದುರ್ಜನಪುಂಜತೋಽಭೀಃ
ಯೇನೇದೃಶೀ ಮತಿರಭೂತ್ ಕವಿತೋಲ್ಲಸದ್ಭ್ಯಃ ॥ ೬೦ ॥

**ಆನಂದತೀರ್ಥಮತಂ** = ಆನಂದತೀರ್ಥರ ಸಿದ್ಧಾಂತವು, **ಉಜ್ಝಿತ** = ರಹಿತವಾದ, **ದೋಷ** = ದೋಷಗಳ, **ಜಾತಂ** = ಸಮೂಹವುಳ್ಳದ್ದು, **ಸ್ವಾನಂದ** = ಮೋಕ್ಷಸುಖ-ವನ್ನು, **ದಾಯಿ** = ಕೊಡತಕ್ಕದ್ದು, **ಶಿಥಲೀಕೃತ** = ಖಂಡಿಸಲ್ಪಟ್ಟ, **ಮತ್ತ** = ಮದಭರಿತ-ವಾದ, **ಮಾಯಿ** = ಅದ್ವೈತಮತವುಳ್ಳ, **ಮಾನ** = ಪ್ರಮಾಣಗಳ, **ಓಘ** = ಸಮೂಹ-ದಿಂದ, **ಶೋಭಿ** = ಶೋಭಿಸುವ, **ಮಮ** = ನನಗೆ, **ದುರ್ಜನ** = ಕೆಟ್ಟಜನರ, **ಪುಂಜತಃ** = ಸಮೂಹದಿಂದ, **ಅಭೀಃ** = ಭಯರಹಿತವಾದ, **ಯೇನ** = ಯಾವ ಮತದಿಂದ, **ಈದೃಶೀ**

= ಇಂತಹ, **ಮತಿಃ** = ಬುದ್ಧಿಯು, **ಅಭೂತ್** = ಆಯಿತು, **ಕವಿತಾ** = ಕವಿತ್ವಕ್ಕೆ, **ಉಲ್ಲಸತ್** = ಶೋಭಿಸುವ, **ಭೂಃ** = ಆಶ್ರಯವಾದ.

ಈ ರೀತಿ ಪುರಾಣಪ್ರಪಂಚದಲ್ಲಿ ಬಂದಿರುವ ಗೊಂದಲವನ್ನು ಪರಿಹರಿಸುವ ಶಕ್ತಿ ಇರುವುದು ಮಧ್ವಮತವನ್ನು ಅನುಸರಿಸಿದವರಿಗೆ ಮಾತ್ರ. ಆದ್ದರಿಂದ ರಾಜರು ಭಕ್ತಿಯಿಂದ ಮಧ್ವಮತವನ್ನು ಹೊಗಳುತ್ತಾರೆ. ಆನಂದತೀರ್ಥರ ಮತದಲ್ಲಿ ಯಾವ ದೋಷವೂ ಇಲ್ಲ. ಮೋಕ್ಷವನ್ನು ಕೊಡತಕ್ಕದ್ದು. ಇತರ ಎಲ್ಲಾ ಮತಗಳನ್ನೂ ದುರ್ಬಲಗೊಳಿಸತಕ್ಕದ್ದು. ಅನೇಕ ಪ್ರಮಾಣಗಳಿಂದ ಕೂಡಿದ್ದು. ನನಗೆ ಇಂತಹ ಕವಿತ್ವ ಬಂದದ್ದು ಈ ಮತದಿಂದಲೇ. ಈ ಮತದ ಅಧ್ಯಯನದಿಂದಾಗಿಯೇ ಇತರ ಎಲ್ಲಾ ಮತಗಳನ್ನೂ ಸೋಲಿಸುವ ಧೈರ್ಯ ಬಂದದ್ದು. ಆದ್ದರಿಂದ ನಿತ್ಯಸುಖವನ್ನು ಬಯಸುವವನು ಈ ಮತವನ್ನೇ ಆಶ್ರಯಿಸಬೇಕು ಎಂಬ ಸಂದೇಶ ಈ ಶ್ಲೋಕದಿಂದ ಸಿಗುತ್ತದೆ.

**ತತಃ ಶುಭೌತ್ಥಾನಿಕಕರ್ಮ ಕರ್ತುಮ್**
**ಇಯೇಷ ನಂದಃ ಪುರುಷೋತ್ತಮಸ್ಯ ।**
**ಗೃಹಾದ್ ಬಹಿರ್ದೈತ್ಯಚಮೂಂ ಜಿಘಾಂಸು-**
**ರಮಂಸ್ತ ತತ್ಸ್ವಾಚರಣಾನುರೂಪಮ್ ॥ ೬೧ ॥**

**ತತಃ** = ಅನಂತರ, **ಶುಭ** = ಒಳ್ಳೆಯ, **ಔತ್ಥಾನಿಕ** = ಮಗುವಿಗೆ ಸೂರ್ಯದರ್ಶನವೆಂಬ, **ಕರ್ಮ** = ಕೆಲಸ(ಸಂಸ್ಕಾರ)ವನ್ನು, **ಕರ್ತುಂ** = ಮಾಡಲು, **ಇಯೇಷ** = ಇಚ್ಛಿಸಿದನು, **ನಂದಃ** = ನಂದನು, **ಪುರುಷೋತ್ತಮಸ್ಯ** = ದೇವರಿಗೆ, **ಗೃಹಾತ್** = ಮನೆಯಿಂದ, **ಬಹಿಃ** = ಹೊರಗೆ, **ದೈತ್ಯ** = ರಾಕ್ಷಸರ, **ಚಮೂಂ** = ಸಮೂಹವನ್ನು, **ಜಿಘಾಂಸುಃ** = ಕೊಲ್ಲುವ ಇಚ್ಛೆಯುಳ್ಳ, **ಅಮಂಸ್ತ** = ತಿಳಿದನು, **ತತ್** = ಅದನ್ನು, **ಸ್ವ** = ತನ್ನ ಆಚರಣೆಗೆ, **ಅನುರೂಪಂ** = ಯೋಗ್ಯ- ವಾಗಿ.

ಒಂದು ದಿನ ನಂದನು ಕೃಷ್ಣನಿಗೆ ಔತ್ಥಾನಿಕಕರ್ಮವನ್ನು ಮಾಡಲು ಇಚ್ಛಿಸಿದನು. ಅಂದರೆ ಮಗು ಹುಟ್ಟಿದ ಹನ್ನೆರಡನೆಯ ದಿನದಲ್ಲೋ ಹದಿನೈದನೆಯ ದಿನದಲ್ಲೋ ಮೂರನೆಯ ತಿಂಗಳಿಗೋ ಮಗುವಿಗೆ ಸೂರ್ಯದರ್ಶನ ಮಾಡಿಸಲು ಮನೆಯಿಂದ ಹೊರಗೆ ಕರೆದುಕೊಂಡು ಹೋಗುವುದು. ಇದಕ್ಕೆ ಕೃಷ್ಣನ ಸಮ್ಮತಿಯೂ ಇತ್ತು. ಯಾಕೆಂದರೆ, ಪೂತನಿಯನ್ನು ಮನೆಯೊಳಗೇ ಕೊಂದದ್ದಾಯಿತು. ಇನ್ನುಳಿದ ದೈತ್ಯರು ಮನೆಯೊಳಗೆ ಬರುವುದು ಬೇಡ. ಮನೆಯ ಹೊರಗಿನಿಂದಲೇ ಕೊಲ್ಲಬೇಕು ಎಂದು. ಹೊರಗೆ ಕೊಲ್ಲ ಬೇಕಾದರೆ ಹೊರಗೆ ಹೋಗಬೇಕು ತಾನೇ? ಇದರಿಂದ ಸಂದೇಶ –

ದೇವರ ಬಳಿಯಲ್ಲಿದ್ದು ನಾವೇನಾದರೂ ಇಚ್ಛಿಸಿದರೆ ದೇವರು ಅದನ್ನು ಹಾಗೆಯೇ ಮಾಡುತ್ತಾನೆ. ತನ್ನ ಅಭಿಪ್ರಾಯವನ್ನೂ ಅದಕ್ಕೆ ಸೇರಿಸುತ್ತಾನೆ ಎಂದು.

**ನಿಜಂ ಸಮಾಹೂಯ ಸ ಬಂಧುವರ್ಗಂ**
**ಪಿತಾ ಸುತಂ ಶ್ರೀಪತಿಮಭ್ಯಷಿಂಚತ್ ।**
**ತದಾಪ್ರಭೃತ್ಯುದ್ಧತದೈತ್ಯವರ್ಗ-**
**ವಿಘಾತದೀಕ್ಷಾಮಿವ ತಸ್ಯ ಬಧ್ನನ್ ॥ ೬೨ ॥**

**ನಿಜಂ** = ತನ್ನ, **ಸಮಾಹೂಯ** = ಕರೆದು, **ಬಂಧುವರ್ಗಂ** = ಬಂಧುಗಳ ಗುಂಪನ್ನು, **ಪಿತಾ** = ತಂದೆಯು, **ಸುತಂ** = ಮಗನಾದ, **ಶ್ರೀಪತಿಂ** = ಕೃಷ್ಣನನ್ನು, **ಅಭ್ಯಷಿಂಚತ್** = ಅಭಿ- ಷೇಕಿಸಿದನು, **ತದಾ ಪ್ರಭೃತಿ** = ಅನಂತರ, **ಉದ್ಧತ** = ಕೊಬ್ಬಿದ, **ದೈತ್ಯ** = ದೈತ್ಯರ, **ವರ್ಗ** = ಸಮೂಹದ, **ವಿಘಾತ** = ನಾಶದ, **ದೀಕ್ಷಾಂ** = ದೀಕ್ಷೆಯನ್ನು, **ತಸ್ಯ** = ಕೃಷ್ಣನಿಗೆ, **ಇವ** = ಅಂತೆ, **ಬಧ್ನನ್**= ಕಟ್ಟುವವನಾಗಿ.

ನಂದನು ತನ್ನೆಲ್ಲಾ ಬಂಧುಗಳನ್ನು ಆ ದಿನ ಕರೆದನು. ಶ್ರೀಕೃಷ್ಣನನ್ನು ಅವರ ಸಮ್ಮುಖದಲ್ಲಿ ಸ್ನಾನ ಮಾಡಿಸಿದನು. ಈ ದೃಶ್ಯವು ಕೊಬ್ಬಿದ ದೈತ್ಯರ ನಾಶವಿಷಯದಲ್ಲಿ ಕೃಷ್ಣನಿಗೆ ದೀಕ್ಷೆ ಕೊಡುವಂತಿತ್ತು.

**ಯದಾ ಸುಹೃತ್ಸಂಚಯಮರ್ಚಯಂತೀ**
**ಸುತಂ ನ ಸಸ್ಮಾರ ಮುದಾ ಯಶೋದಾ ।**
**ತದೈವ ಮಾಯೀ ಶಕಟಾಸುರಸ್ತಂ**
**ನಿಹಂತುಕಾಮೋಽಭಿಸಸಾರ ಶೂರಃ ॥ ೬೩ ॥**

**ಯದಾ** = ಯಾವಾಗ, **ಸುಹೃತ್** = ಮಿತ್ರರ, **ಸಂಚಯಂ** = ಸಮೂಹವನ್ನು, **ಅರ್ಚಯಂತೀ** = ಸತ್ಕರಿಸುವ, **ಸುತಂ** = ಮಗನನ್ನು, **ನ ಸಸ್ಮಾರ** = ಮರೆತಳು, **ಮುದಾ** = ಸಂತೋಷದಿಂದ, **ಯಶೋದಾ** = ಯಶೋದೆಯು, **ತದೈವ** = ಆಗಲೇ, **ಮಾಯೀ** = ಕಪಟಿಯಾದ, **ಶಕಟಾಸುರಃ** = ಶಕಟಾಸುರನು, **ತಂ** = ಕೃಷ್ಣನನ್ನು, **ನಿಹಂತು** = ಕೊಲ್ಲಲು, **ಕಾಮಃ** = ಇಚ್ಛಿಸಿದವನಾಗಿ, **ಅಭಿಸಸಾರ** = ಬಂದನು, **ಶೂರಃ** = ಪರಾಕ್ರಮಿಯಾದ.

ಈ ಸಂದರ್ಭದಲ್ಲಿ ಯಶೋದೆಯು ಬಂದಿರುವ ಅಭ್ಯಾಗತರನ್ನು ಆದರಿಸುವ ಕೆಲಸದಲ್ಲಿ ತಲ್ಲೀನಳಾಗಿದ್ದಳು. ದೇವರನ್ನು ಮರೆತಿದ್ದಳು. ಆ ಸಮಯದಲ್ಲಿಯೇ ಶಕಟನೆಂಬ ಅಸುರನು ದೇವರನ್ನು ಮೋಸದಿಂದ ಕೊಲ್ಲುವ ಸಲುವಾಗಿ ಕೃಷ್ಣನ ಬಳಿಯಿರುವ ಬಂಡಿ-

ಯಲ್ಲಿ ಸೇರಿಕೊಂಡನು. ದೇವರನ್ನು ಮರೆತು ನಾವು ಕಾರ್ಯಪ್ರವೃತ್ತರಾದರೆ ತೊಂದರೆಗಳು ಬರುತ್ತದೆ.

**ಮರಿಷ್ಯಮಾಣಃ ಸಕಲಂ ಸ್ವಭಾಗ್ಯಮ್**
**ಅನೇನ ಕಂಸಃ ಸಹ ನೇಷ್ಯತೀತಿ ।**
**ಭಿಯೇವ ಪೂರ್ವಂ ಶಕಟಂ ಮುರಾರಿಃ**
**ಬಭಂಜ ಪಾದೇನ ಸುಕೋಮಲೇನ ॥ ೬೪ ॥**

**ಮರಿಷ್ಯಮಾಣಃ** = ಸಾಯಲಿರುವ, **ಸಕಲಂ** = ಎಲ್ಲವನ್ನೂ, **ಸ್ವಭಾಗ್ಯಂ** = ತನ್ನ ಸಂಪತ್ತನ್ನೂ, **ಅನೇನ** = **ಕಂಸಃ** = ಕಂಸನು, **ಸಹ** = ಜೊತೆಗೆ, **ನೇಷ್ಯತಿ** = ಒಯ್ಯುತ್ತಾನೆ, **ಇತಿ** = ಎಂದು, **ಭಿಯಾ ಇವ** = ಭಯದಿಂದ ಎಂಬಂತೆ, **ಪೂರ್ವಂ** = ಮೊದಲು, **ಶಕಟಂ** = ಬಂಡಿಯನ್ನು, **ಮುರಾರಿ** = ಕೃಷ್ಣನು, **ಬಭಂಜ** = ಪುಡಿಗೈದನು, **ಪಾದೇನ** = ಕಾಲಿನಿಂದ, **ಸುಕೋಮಲೇನ**= ಮೃದುವಾದ.

ಬೇರೆ ಊರಿಗೆ ಹೋಗುವವರು ತಮ್ಮ ವಸ್ತುಗಳನ್ನು ಕೊಂಡು ಹೋಗುವುದು ವಾಡಿಕೆ. ಅದೇ ರೀತಿ ಕಂಸನು ಬೇರೆ ಲೋಕಕ್ಕೆ ಹೋಗುವವನಿದ್ದಾನೆ. ಆಗ ತನ್ನ ವಸ್ತು-ಗಳನ್ನು ಒಯ್ಯಲು ಈ ಶಕಟವನ್ನು ಉಪಯೋಗಿಸಬಾರದು ಎಂಬ ಭಾವನೆಯಿಂದಲೋ ಎಂಬಂತೆ ಈ ಬಂಡಿಯಾಕಾರದ ದೈತ್ಯನನ್ನು ಕೃಷ್ಣನು ಕೊಂದನು.

'ದುಷ್ಟರು ಸಾಯುವ ಪ್ರಸಂಗ ಬಂದರೂ ತಮ್ಮ ಭೋಗವಸ್ತುಗಳಲ್ಲಿ ಆಸೆ ಬಿಡುವುದಿಲ್ಲ' ಎಂಬ ಸಂದೇಶ ಇಲ್ಲಿದೆ.

**ತತಃ ಸ ಮಾಯಾಮಪಹಾಯ ದೈತ್ಯ-**
**ಸ್ವರೂಪಧಾರೀ ಪುನರಾವಿರಾಸೀತ್ ।**
**ತಥಾಹಿ ವಿಷ್ಣೋಃ ಪದಯೋಗಕಾಲೇ**
**ಕಥಂ ನು ಸಾ ಜೀವಿತುಮುತ್ಸಹೇತ ॥ ೬೫ ॥**

**ತತಃ** ಅನಂತರ, **ಸಃ** = ಆ ಶಕಟನು, **ಮಾಯಾಂ** = ಕಾಪಟ್ಯವನ್ನು, **ಅಪಹಾಯ** = ಬಿಟ್ಟು, **ದೈತ್ಯ** = ದೈತ್ಯನ, **ಸ್ವರೂಪ** = ಸ್ವರೂಪವನ್ನು, **ಧಾರೀ** = ಧರಿಸಿದವನಾಗಿ, **ಪುನಃ** = ಮತ್ತೊಮ್ಮೆ, **ಆವಿರಾಸೀತ್** = ಬಂದನು. **ತಥಾ ಹಿ** = ಅದು ಸರಿ, **ವಿಷ್ಣೋಃ** = ದೇವರ, **ಪದ** = ಕಾಲಿನ, **ಯೋಗ** = ಸಂಪರ್ಕದ, **ಕಾಲೇ** = ಸಮಯದಲ್ಲಿ, **ಕಥಂ** = ಹೇಗೆ, **ಸಾ** = ಆ ಮಾಯೆಯು, **ಜೀವಿತುಂ** = ಇರಲು, **ಉತ್ಸಹೇತ**= ಸಾಧ್ಯವಾದೀತು?

ದೈತ್ಯನು ಕಪಟದಿಂದ ಬಂಡಿಯಲ್ಲಿ ಸೇರಿಕೊಂಡು ದೇವರನ್ನು ಕೊಲ್ಲಲು ಹವಣಿಸಿದನು. ಆದರೆ ದೇವರು ಆ ಬಂಡಿಯನ್ನು ತನ್ನ ಪಾದದಿಂದ ಪುಡಿ ಮಾಡಿದನು. ಆತನು ಮಾಯೆಯನ್ನು ಬಿಟ್ಟು ನಿಜರೂಪದಿಂದ ಬಂದನು. ಇದು ಸರಿ. ಯಾಕೆಂದರೆ ದೇವರ ಬಳಿಯಲ್ಲಿ ಯಾವ ಕಪಟವೂ ನಡೆಯುವುದಿಲ್ಲ.

ಸ ಕೃಷ್ಣಪಾದಾಭಿಹತಾಖಿಲಾಂಗೋ
ಬಭೂವ ದೈತ್ಯಃ ಕಿಲ ನಿರ್ಗತಾಸುಃ ।
ಅಹಂ ತು ಮನ್ಯೇ ಸ್ವಕಜಾತ್ಯಯೋಗ್ಯ-
ರಥಾಂಗಧಾರೀ ಸ ಮಮಾರ ಧೀರಃ ॥ ೬೬ ॥

**ಸಃ** = ಆ, **ಕೃಷ್ಣ** = ಕೃಷ್ಣನ, **ಪಾದ** = ಕಾಲಿನಿಂದ, **ಅಭಿಹತ** = ಹೊಡೆಯಲ್ಪಟ್ಟ, **ಅಖಿಲ** = ಎಲ್ಲಾ, **ಅಂಗಃ** = ಅವಯವವುಳ್ಳ, **ಬಭೂವ** = ಆದನು, **ದೈತ್ಯಃ** = ಅಸುರನು, **ಕಿಲ** = ಪ್ರಸಿದ್ಧ, **ನಿರ್ಗತ** = ಹಾರಿಹೋದ, **ಅಸುಃ** = ಪ್ರಾಣವುಳ್ಳವನು, **ಅಹಂ** = ನಾನು, **ಮನ್ಯೇ** = ತಿಳಿಯುತ್ತೇನೆ, **ಸ್ವಕ** = ತನ್ನ, **ಜಾತಿ** = ಸ್ವಭಾವಕ್ಕೆ, **ಅಯೋಗ್ಯ** = ಅನುಚಿತವಾದ, **ರಥಾಂಗ** = ಚಕ್ರವನ್ನು, **ಧಾರೀ** = ಧರಿಸಿದವನಾಗಿ, **ಸಃ** = ಆ, **ಮಮಾರ** = ಸತ್ತನು, **ಧೀರಃ**= ಪರಾಕ್ರಮಿಯಾದ.

ಕೃಷ್ಣನ ಪಾದದ ಹೊಡೆತಕ್ಕೆ ಸಿಕ್ಕಿ ಅಸುರನು ಸತ್ತನು. ರಾಜರು ದೈತ್ಯನು ಸಾಯಲು ಕಾರಣವನ್ನು ಊಹಿಸುತ್ತಾರೆ. ಈ ಅಸುರನು ಶಕಟನು. ಶಕಟ ಅಂದರೆ ಬಂಡಿ. ಬಂಡಿಯು ಚಕ್ರದಿಂದ ಕೂಡಿದೆ. ಚಕ್ರದಿಂದ ಕೂಡಿದವನು ಚಕ್ರೀ . ಆದರೆ ಚಕ್ರೀ ಎಂದು ದೇವರ ಹೆಸರು. ದೈತ್ಯರು ಎಂದೂ ದೇವರ ಹೆಸರನ್ನಿಟ್ಟುಕೊಳ್ಳಲು ಅಯೋಗ್ಯರು. ತನಗೆ ಅಯೋಗ್ಯವಾದದ್ದನ್ನು ಯಾರು ಇಟ್ಟುಕೊಳ್ಳುತ್ತಾರೋ ಅವರಿಗೆ ಉಳಿಗಾಲವಿಲ್ಲ. ಆದ್ದರಿಂದ ಈ ಅಸುರನು ಸತ್ತನು ಎಂದು. ಆದ್ದರಿಂದ ನಾವು ಯೋಗ್ಯತೆ ಮೀರಿ ಯಾವುದನ್ನೂ ಅಪೇಕ್ಷಿಸಬಾರದು.

ಧ್ರುವಂ ಪುನರ್ವಿಷ್ಣುಪದಸ್ಯ ಸಂಗ-
ಭಯಾತ್ ಸಕೃದ್ವಿಷ್ಣುಪದಾಹತೋಽಸೌ ।
ಅಧಃ ಪಪಾತಾಸುರಮಂಡಲೀಯಂ
ವಿನಾಶಕಾಲೇ ಹಿ ವಿರುದ್ಧಬುದ್ಧಿಃ[೧] ॥ ೬೭ ॥

[೧] ಇಯಮಸುರಮಂಡಲೀ ಅಸುರವರ್ಗಃ, ವಿನಾಶಕಾಲೇ ವಿರುದ್ಧಾ ವಿಪರೀತಾಬುದ್ಧಿ-ರ್ಜ್ಞಾನಂ ಯಸ್ಯಾಃ ಸಾ - (ವ್ಯಾ)

**ಧ್ರುವಂ** = ನಿಶ್ಚಯ, **ಪುನಃ** = ಮತ್ತೊಮ್ಮೆ, **ವಿಷ್ಣುಪದಸ್ಯ** = ದೇವರ ಪಾದದ, **ಸಂಗ** = ಸಂಬಂಧದ, **ಭಯಾತ್**= ಹೆದರಿಕೆಯಿಂದ, **ಸಕೃದ್** = ಒಮ್ಮೆ, ವಿಷ್ಣು = ದೇವರ, **ಪದ** = ಕಾಲಿನಿಂದ, **ಹತಃ** = ಒದೆಯಲ್ಪಟ್ಟ, **ಅಸೌ** = ಈ ಶಕಟನು, **ಅಧಃ** = ಕೆಳಗೆ, **ಪಪಾತ** = ಬಿದ್ದನು, **ಅಸುರಮಂಡಲೀ** = ದೈತ್ಯರ ಸಮೂಹವು, **ಇಯಂ** = ಈ, **ವಿನಾಶಕಾಲೇ** = ಮರಣಕಾಲದಲ್ಲಿ, **ವಿರುದ್ಧ** = ವಿಪರೀತವಾದ, **ಬುದ್ಧಿಃ**= ಮನಸ್ಸುಳ್ಳದ್ದು.

ವಿಷ್ಣುಪಾದದಿಂದ ಹತನಾದ ದೈತ್ಯನು ಕೆಳಗೆ ಹೋದನು. ಮೇಲೆ ಹೋಗಲಿಲ್ಲ. ಯಾಕೆಂದರೆ, ಮೇಲೆ ವಿಷ್ಣುಪಾದ (ಆಕಾಶ) ಇದೆ. ಒಮ್ಮೆ ವಿಷ್ಣುಪಾದದ ಒದೆತ ತಿಂದ ದೈತ್ಯನು ಮೇಲೆ ಹೋದರೆ ಪುನಃ ವಿಷ್ಣುಪಾದದ ಸಂಬಂಧವಾಗಿ ಒದೆತ ಬೀಳಬಹುದು ಎಂಬ ಭಯ.

ಆಕಾಶಕ್ಕೂ ದೇವರ ಪಾದಕ್ಕೂ ವಿಷ್ಣುಪಾದ ಎಂಬ ಶಬ್ದದಿಂದ ಸಾಮ್ಯ . ಹೀಗಿರುವಾಗ ಅಸುರ ಯಾಕೆ ಹೆದರಿದ? ಎಂಬ ಪ್ರಶ್ನೆಗೆ ರಾಜರು ಉತ್ತರಿಸುತ್ತಾರೆ. – ಅಸುರರ ಸ್ವಭಾವವೇ ಹೀಗೆ. ತಮ್ಮ ವಿನಾಶಕಾಲದಲ್ಲಿ ವಿರುದ್ಧವಾದ ತಿಳಿವಳಿಕೆ ಉಳ್ಳವರು ಆಗುತ್ತಾರೆ. ಆಕಾಶವನ್ನೇ ದೇವರ ಪಾದ ಎಂದು ತಿಳಿಯುವುದು. ಆದ್ದರಿಂದ ವ್ಯಕ್ತಿಗಳು ಸಾಯುವ ಕಾಲದಲ್ಲಿ ಸರಿಯಾದ ತಿಳಿವಳಿಕೆಗೆ ಪ್ರಯತ್ನಿಸಬೇಕು.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ದ್ವಿತೀಯೋ**
**ಮುದಾಮ್ ॥೬೮॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಗ್ಮಿಣೀಶವಿಜಯೇ ದ್ವಿತೀಯಃ ಸರ್ಗಃ ॥

ಈ ಗ್ರಂಥವು ರೋಮಾಂಚಕಾರಿ. ಶ್ರವಣದಿಂದ ಪಾಪವನ್ನು ಪರಿಹರಿಸುತ್ತದೆ. ಭಕ್ತಿಯಿಂದ ಚಿಂತಿಸುವವರಿಗೆ ನಾನಾ ರೀತಿಯ ಒಳ್ಳೆಯ, ಯೋಗ್ಯವಾದ ಅರ್ಥವನ್ನು ಕೊಡುತ್ತದೆ. ಕೃಷ್ಣಾವತಾರ ಆದಾಗ ಒಂದು ಸಂತೋಷ ದೇವತೆಗಳಿಗೆ ಆಗಿತ್ತು. ಈಗ ಎರಡು ಅಸುರರ ನಾಶದಿಂದ ಇನ್ನೊಂದು ಆನಂದ ಆಯಿತು. ಎರಡನೆಯ ಸರ್ಗವೂ ಮುಗಿಯಿತು.

* * * * *

## ತೃತೀಯಃ ಸರ್ಗಃ

**ಅಥಾಪರೋ ದೈತ್ಯಕದಂಬಕಾಸು-**
**ರಿವೋದ್ಧತೋ ವಾತಶರೀರಧಾರೀ।**
**ಪ್ರಗೃಹ್ಯ ಕೃಷ್ಣಂ ಗಗನಂ ಜಗಾಮ**
**ಸ್ವನಾಶಯೋಗ್ಯಸ್ಥಲಕಾಂಕ್ಷಯೇವ ॥೧॥**

**ಅಥ** = ಅನಂತರ, **ಅಪರಃ** = ಇನ್ನೊಬ್ಬ, **ದೈತ್ಯ** = ರಾಕ್ಷಸರ, **ಕದಂಬಕ** = ಸಮೂಹಕ್ಕೆ, **ಅಸುರಿವ** = ಪ್ರಾಣದಂತೆ ಇರುವ, **ಉದ್ಧತಃ** = ಕೊಬ್ಬಿದ, **ವಾತ** = ಗಾಳಿಯ, **ಶರೀರ** = ದೇಹವನ್ನು, **ಧಾರೀ** = ಧರಿಸಿದ, **ಪ್ರಗೃಹ್ಯ** = ಹಿಡಿದು, **ಕೃಷ್ಣಂ** = ಕೃಷ್ಣನನ್ನು, **ಗಗನಂ** = ಆಕಾಶವನ್ನು, **ಜಗಾಮ** = ಹೋದನು, **ಸ್ವ** = ತನ್ನ, **ನಾಶ** = ನಾಶಕ್ಕೆ, **ಯೋಗ್ಯ** = ಉಚಿತವಾದ, **ಸ್ಥಲ** = ಸ್ಥಳದ, **ಕಾಂಕ್ಷಯಾ ಇವ** = ಅಭಿಪ್ರಾಯದಿಂದಲೋ ಎಂಬಂತೆ.

ಅನಂತರ ತೃಣಾವರ್ತ ಎಂಬ ಅಸುರನು ಬಿರುಗಾಳಿಯ ರೂಪದಲ್ಲಿ ಬಂದನು. ಈತನು ಎಲ್ಲ ದೈತ್ಯರಿಗೂ ಪ್ರಾಣವಾಯುವಿನಂತೆ ಇದ್ದನು. ಬಹಳ ಸೊಕ್ಕಿದವನು. ಸುಂಟರಗಾಳಿಯು ತರಗೆಲೆಗಳನ್ನು ಮೇಲೆ ಕೊಂಡೊಯ್ಯುವಂತೆ ಕೃಷ್ಣನನ್ನು ಮೇಲೆ ಆಕಾಶಕ್ಕೆ ಒಯ್ದನು. ತನ್ನ ನಾಶ ಆಕಾಶದಲ್ಲೇ ಆಗಬೇಕು ಎಂಬ ಭಾವನೆಯಿಂದಲೋ ಎಂಬಂತಿತ್ತು.

ಈತನ ಹೆಸರು ತೃಣಾವರ್ತ. ಹುಲ್ಲು ಕಡ್ಡಿಗಳನ್ನು ಮಾತ್ರ ಮೇಲೆತ್ತುವ ಸಾಮರ್ಥ್ಯ ಈತನಿಗೆ, ಆದರೆ ಕೃಷ್ಣನನ್ನೇ ಮೇಲೆತ್ತಲು ಬಂದಿದ್ದಾನೆ. ಕೃಷ್ಣನು ಹುಲ್ಲಿನಂತೆ ಎಂಬ ಭಾವನೆಯಿಂದ. ಇದು 'ವಿನಾಶಕಾಲೇ ವಿಪರೀತ ಬುದ್ಧಿಃ'.

**ದುಸ್ತರ್ಕಾಯಿತ ಶರ್ಕರಾಭಿರಮಲಂ ಚಕ್ಷುಃ ಸ ಮುಷ್ಣನ್ ಗವಾಮ್**
**ಆವಾಸೇ ವಸತಾಂ ಸತಾಮುರುತಮೋ ವಿಸ್ತಾರಯನ್ ವಾರಯನ್।**
**ತದ್ವಾಕ್ಯಶ್ರವಣಂ ಕಠೋರಕುಟಿಲಧ್ವಾನೈರ್ಯಶೋದಾಸುತಂ**
**ದೈತ್ಯೋಽಗೂಹಯದಾಗಮಾಂತಲಲನಾಗರ್ಭಂ ಕುವಾದೀವ ತಮ್ ॥೨॥**

**ದುಸ್ತರ್ಕಾಯಿತ** = ಕೆಟ್ಟ ತರ್ಕದಂತಿರುವ, **ಶರ್ಕರಾಭಿಃ** = ಧೂಳಿನಿಂದ, **ಅಮಲಂ** = ಸ್ವಚ್ಛವಾದ, **ಚಕ್ಷುಃ** = ಕಣ್ಣುಗಳನ್ನು, **ಸಃ** = ಆ ಅಸುರನು, **ಮುಷ್ಣನ್** = ಮುಚ್ಚುವವನಾಗಿ, **ಗವಾಂ** = ಆಕಳುಗಳ, **ಆವಾಸೇ** = ಮನೆಗಳಲ್ಲಿ, **ವಸತಾಂ** = ವಾಸಿಸುವ, **ಸತಾಂ** = ಸಜ್ಜನರ, **ಉರುತಮಃ** = ಬಹಳ ಕತ್ತಲೆಯನ್ನು, **ವಿಸ್ತಾರಯನ್** = ಹರಡುತ್ತಾ, **ವಾರಯನ್** = ತಡೆಯುತ್ತಾ, **ತತ್** = ಆ ಜನರ, **ವಾಕ್ಯ** = ಮಾತಿನ, **ಶ್ರವಣಂ**

= ಕೇಳಿಸುವಿಕೆಯನ್ನು, **ಕಠೋರ** = ನಿಷ್ಠುರವಾದ, **ಕುಟಿಲ** = ವಕ್ರವಾದ, **ಧ್ವಾನೈಃ** = ಶಬ್ದಗಳಿಂದ, **ಯಶೋದಾಸುತಂ** = ಯಶೋದೆಯ ಮಗನಾದ, **ದೈತ್ಯಃ** = ಅಸುರನು, **ಅಗೂಹಯತ್** = ಮರೆ ಮಾಡಿದನು, **ಆಗಮಾಂತ** = ಉಪನಿಷತ್ತುಗಳೆಂಬ, ಲಲನಾ = ನಾರಿಯರ, **ಗರ್ಭಂ** = ಗರ್ಭದಲ್ಲಿರುವ, **ಕುವಾದೀ ಇವ**= ಕೆಟ್ಟ ವಾದಿಯಂತೆ, **ತಮ್** = ಕೃಷ್ಣನನ್ನು.

ಈ ಗಾಳಿಯಿಂದ ಬಹಳ ಧೂಳು ಎದ್ದಿತು. ಇದರಿಂದ ನಂದಗೋಕುಲದ ಎಲ್ಲರ ಗೋವುಗಳ ಹಾಗೂ ಜನರ ಕಣ್ಣುಗಳು ಏನೂ ಕಾಣದಾದವು. ಸರ್ವತ್ರ ಕತ್ತಲು ಆವರಿಸಿತು. ಈ ಗಾಳಿಯ ಭಯಂಕರ ಶಬ್ದದಿಂದ ಯಾರ ಮಾತು ಯಾರಿಗೂ ಕೇಳಿಸುತ್ತಿ-ರಲಿಲ್ಲ. ಎಲ್ಲರೂ ಕೃಷ್ಣ ಎಲ್ಲಿ ಎಂದು ತಪಿಸುತ್ತಿದ್ದರು. ಈ ರೀತಿ ದೈತ್ಯನು ಯಶೋದಾ-ಸುತನನ್ನು ಆಚ್ಛಾದಿಸಿದನು. ಇದಕ್ಕೆ ರಾಜರು ವೇದಾಂತದ ಒಂದು ಉದಾಹರಣೆಯನ್ನು ತೋರಿಸುತ್ತಾರೆ – ಅದ್ವೈತಿಗಳು ಸುಂಟರಗಾಳಿಯಂತೆ ತಮ್ಮ ಶುಷ್ಕತರ್ಕಗಳೆಂಬ ಧೂಳಿನಿಂದ 'ಗವಾಂ ಆವಾಸೇ ವಸತಾಂ ಸತಾಂ (ಗವಾಂ = ಶಬ್ದಗಳ, ಆವಾಸೇ = ವಾಸಸ್ಥಳವಾದ ವೇದಗಳಲ್ಲಿ, ವಸತಾಂ = ಇರುವ, ಸತಾಂ = ಸಜ್ಜನರ) ಅಂದರೆ ಸದಾಕಾಲ ಶಬ್ದರಾಶಿಗಳಾದ ವೇದಗಳನ್ನೇ ನಂಬಿರುವ ಸಜ್ಜನರ ಜ್ಞಾನವೆಂಬ ಕಣ್ಣನ್ನು ಅಪಹರಿಸುತ್ತಾರೆ. ಸುಂಟರಗಾಳಿಯಿಂದ ಸುತ್ತಲೂ ಕತ್ತಲು ಆವರಿಸಿರುವಂತೆ ಈ ಮಾಯಾವಾದಿಗಳ ಈ ತರ್ಕದಿಂದ ಎಲ್ಲಾ ಕಡೆ ಅಜ್ಞಾನ ಹರಡಿತು. ತಮ್ಮ ಎತ್ತರವಾದ ಧ್ವನಿಗಳಿಂದ ಸಜ್ಜನರ ಮಾತು, ದೇವರ ಅಸ್ತಿತ್ವವನ್ನು ಸಮರ್ಥಿಸತಕ್ಕದ್ದು ಯಾರಿಗೂ ಕೇಳದಾಯಿತು. ಫಲಿತಾಂಶ 'ವೇದಮಾತೆಯ ಗರ್ಭದಲ್ಲಿರುವ ದೇವರು ಕಾಣದಾ-ದನು'.

**ತದಾ ಖಲಸ್ಯೋತ್ಪತನಂ ಸ ಶೌರಿಃ**
**ಹೃದಾನುಮೇನೇ ಪತಿತಸ್ಯ ದೂರಾತ್ ।**
**ಗಿರೀಂದ್ರಕಲ್ಪೋತ್ಪತಿತಾತ್ಮಮೂರ್ತ್ಯಾ**
**ಶರೀರಮಾಚೂರ್ಣಯಿತುಂ ಧಿಯೇವ ॥೩॥**

ತದಾ = ಆವಾಗ, ಖಲಸ್ಯ = ದುಷ್ಟನ (ದೈತ್ಯನ), **ಉತ್ಪತಂ** = ಮೇಲಕ್ಕೆ ಹಾರುವ, ಸಃ = ಆ, **ಶೌರಿಃ** = ಕೃಷ್ಣನು, **ಹೃತ್** = ಮನಸ್ಸಿನ (ಅಭಿಪ್ರಾಯವನ್ನು), **ಅನುಮೇನೇ** = ಚಿಂತಿಸಿ (ಅನುಮಾನ ಮಾಡಿ ಅಂದರೆ ಊಹಿಸಿ), **ಪತಿತಸ್ಯ** = ಕೆಳಗೆ ಬೀಳುವ, **ದೂರಾತ್** = ದೂರದಿಂದ (ಇಲ್ಲಿ ಎತ್ತರ ಎಂಬರ್ಥ), **ಗಿರೀಂದ್ರಕಲ್ಪ** = ಬೆಟ್ಟದಂತೆ, **ಉತ್ಪತಿತಾತ್ಮ** = ಮೇಲಿಂದ ಕೆಳಗೆ ಬೀಳುವ, **ಆತ್ಮಮೂರ್ತ್ಯಾ** = ತನ್ನ ಶರೀರದಿಂದ (ತನ್ನ

ಸ್ವರೂಪದಿಂದ), **ಶರೀರಂ** = (ಕೃಷ್ಣನ) ದೇಹವನ್ನು, **ಚೂರ್ಣಯಿತುಂ** = ಪುಡಿಮಾಡಲು, **ಧಿಯಾ** = ಬುದ್ಧಿಯಿಂದ, **ಇವ**= ಎಂಬಂತೆ.

ದೈತ್ಯನ ಜೊತೆಗೆ ಮೇಲೇರುವುದನ್ನು ಕೃಷ್ಣನು ಅಪೇಕ್ಷಿಸಿದನು. ಯಾಕೆಂದರೆ ಈ ದೈತ್ಯನು ಮೇಲಿನಿಂದ ಕೆಳಗೆ ಬೀಳುತ್ತಾನೆ. ಆತನ ಮೇಲೆ ದೇವರ ದೊಡ್ಡಶರೀರವು ಬಿದ್ದಾಗ ಆತನು ಪುಡಿಯಾಗುತ್ತಾನೆ. ಮೇಲೇರುವಾಗ ದೇವರು ತನ್ನ ದೇಹವನ್ನು ದೊಡ್ಡದು ಮಾಡುತ್ತಾನೆ. ದೊಡ್ಡವಸ್ತುವು ಮೇಲಿನಿಂದ ಕೆಳಗೆ ಬಿದ್ದಾಗ ಕೆಳಗಿನ ವಸ್ತುವು ಪುಡಿಯಾಗುವುದು ಸ್ವಾಭಾವಿಕ.

• • • •

**ಸಂದೇಶ**

**ಅಯೋಗ್ಯಕಾಮಸ್ಯ ಕಥಂ ನ ಪಾತಃ**

ತನಗೆ ಅಯೋಗ್ಯವಾದದ್ದನ್ನು ಬಯಸಿದರೆ ಅದು ಸಿಗುವುದಿಲ್ಲ. ಇಷ್ಟೇ ಅಲ್ಲ ಅಪೇಕ್ಷಿಸಿದವನ ಪತನವೂ ಆಗುತ್ತದೆ

**ಹರಿಂ ಸ ಸಂಸ್ಥಾಪ್ಯ ಹೃದಿ ಸ್ವಕೀಯೇ**
**ಪರಿಭ್ರಮನ್ ವ್ಯೋಮ್ನಿ ಮುಹುಃ ಶ್ವಸಂಶ್ಚ ।**
**ಗರಂ ನಿಪೀಯ ಭ್ರಮಿತಾಂತರಾತ್ಮಾ**
**ಸರೋಧಿಯಾಽಭ್ರಂ ಪ್ರವಿಶನ್ನಿವಾಸ್ತೇ ॥ ೪ ॥**

**ಹರಿಂ** = ದೇವರನ್ನು, **ಸಃ** = ಆ ದೈತ್ಯನು, **ಸಂಸ್ಥಾಪ್ಯ** = ಇಟ್ಟು, **ಹೃದಿ** = ಹೃದಯದಲ್ಲಿ, **ಸ್ವಕೀಯೇ** = ತನ್ನ, **ಪರಿಭ್ರಮನ್** = ಸುತ್ತುತ್ತಾ, **ವ್ಯೋಮ್ನಿ** = ಆಕಾಶದಲ್ಲಿ, **ಮುಹುಃ** = ಪುನಃ, **ಶ್ವಸನ್ ಚ** = ಉಸಿರಾಡುತ್ತಾ, **ಗರಂ** = ವಿಷವನ್ನು, **ನಿಪೀಯ** = ಕುಡಿದು, **ಭ್ರಮಿತ** = ವ್ಯಗ್ರವಾದ, **ಅಂತರಾತ್ಮಾ** = ಮನಸ್ಸುಳ್ಳವನಾಗಿ, **ಸರಃ** = ಸರೋವರ ಎಂಬ, **ಧಿಯಾ** = ಬುದ್ಧಿಯಿಂದ, **ಅಭ್ರಂ** = ಗಗನವನ್ನು, **ಪ್ರವಿಶನ್ನಿವ** = ಪ್ರವೇಶಿಸುವವನಂತೆ, **ಆಸ್ತೇ** = ಇದ್ದಾನೆ.

ಈ ದೈತ್ಯನು ಕೃಷ್ಣನನ್ನು ತನ್ನ ಒಳಗೆ ಇಟ್ಟುಕೊಂಡು ಸುತ್ತಾಡಿದ. ಸುಂಟರಗಾಳಿ ಸುತ್ತುವುದು ಸಹಜ. ಕೃಷ್ಣನೆಂಬ ಭಾರವನ್ನೂ ಹೊತ್ತದ್ದರಿಂದ ಬಹಳ ಶ್ವಾಸೋ-ಚ್ಛ್ವಾಸವನ್ನೂ ಮಾಡುತ್ತಿದ್ದಾನೆ. ಕೃಷ್ಣನನ್ನು ತನ್ನೊಳಗೆ ಇಟ್ಟುಕೊಂಡದ್ದು ಅಂದರೆ ವಿಷವನ್ನು ತನ್ನಲ್ಲಿ ಇಟ್ಟುಕೊಂಡಂತೆ. ಯಾಕೆಂದರೆ, ವಿಷವೂ ಕೃಷ್ಣನೂ ಇಬ್ಬರೂ ಕಪ್ಪು. ಹಾಗೆ ಎರಡೂ ಇವನ ಸಾವಿಗೆ ಕಾರಣ. ವಿಷ ಕುಡಿದವರು ಉರಿ ತಡೆಯಲಾರದೆ ಸರೋವರವನ್ನು ಪ್ರವೇಶಿಸುವಂತೆ ಈತನು ನೀಲಬಣ್ಣದ ಆಕಾಶವನ್ನು ಸರೋವರ ಎಂದು ಭ್ರಮಿಸಿ ಪ್ರವೇಶಿಸಿದ್ದಾನೆ. ವಿನಾಶಕಾಲೇ ವಿಪರೀತಬುದ್ಧಿಃ.

**ಮುರದ್ವಿಷಂ ಮೂರ್ಧ್ನಿ ನಿಧಾಯ ವಿಷ್ಣೋಃ**
**ಪದಂ ಪ್ರವೇಷ್ಟುಂ ತ್ವರಯಾ ಗತೋಽಪಿ ।**
**ಅಸೌ ಪಪಾತಾಮರವೈರ್ಯಧಸ್ತಾತ್**
**ಅಯೋಗ್ಯಕಾಮಸ್ಯ ಕಥಂ ನ ಪಾತಃ ॥ ೫ ॥**

**ಮುರದ್ವಿಷಂ** = ಕೃಷ್ಣನನ್ನು, **ಮೂರ್ಧ್ನಿ** = ತಲೆಯಲ್ಲಿ, **ನಿಧಾಯ** = ಇಟ್ಟು, **ವಿಷ್ಣೋಃ** = ದೇವರ, **ಪದಂ** = ಪದವನ್ನು (ಆಕಾಶವನ್ನು), **ಪ್ರವೇಷ್ಟುಂ** = ಪ್ರವೇಶಿಸಲು, **ತ್ವರಯಾ** = ವೇಗದಿಂದ, **ಗತೋಽಪಿ** = ಹೋದರೂ, **ಅಸೌ** = ಈ ಅಸುರನು, **ಪಪಾತ** = ಬಿದ್ದನು, **ಅಮರ** = ದೇವತೆಗಳ, **ವೈರೀ** = ಶತ್ರು, **ಅಧಸ್ತಾತ್** = ಕೆಳಗೆ, **ಅಯೋಗ್ಯ** = ಅನುಚಿತ-ವಾದದ್ದನ್ನು, **ಕಾಮಸ್ಯ** = ಇಚ್ಛಿಸುವವನಿಗೆ, **ಕಥಂ** = ಹೇಗೆ? **ನ ಪಾತಃ** = ಪತನ ಇಲ್ಲ.

ಈ ದೈತ್ಯನು ದೇವರನ್ನು ಹೊತ್ತುಕೊಂಡು ವಿಷ್ಣುಪದವನ್ನು (ಆಕಾಶವನ್ನು) ಪ್ರವೇಶ ಮಾಡಿದನು. ಕೆಳಗೆ ಬಿದ್ದನು. ಈ ದೈತ್ಯರು ದೇವತೆಗಳ ಶತ್ರುಗಳು. ಹರಿಭಕ್ತರನ್ನು ದ್ವೇಷಿಸುವವರು. ಈ ದ್ವೇಷವು ಹರಿದ್ವೇಷದಲ್ಲೇ ಪರ್ಯವಸಾನ. ಹರಿದ್ವೇಷಿಗಳಿಗೆ ವಿಷ್ಣುಪದಪ್ರವೇಶಕ್ಕೆ ಯೋಗ್ಯತೆ ಇರುವುದಿಲ್ಲ. ತನಗೆ ಅಯೋಗ್ಯವಾದದ್ದನ್ನು ಬಯಸು-ವವನು ಕೆಳಗೆ ಬೀಳುವುದು ಖಂಡಿತ. 'ಅಯೋಗ್ಯಮಿಚ್ಛನ್ ಪುರುಷಃ ಪತತ್ಯೇವ ನ ಸಂಶಯಃ'.

**ಸ ವಾತರೂಪೀ ದಿತಿಜೋ ಮುಕುಂದ-**
**ಭರಾಸಹಿಷ್ಣುರ್ನಿಪಪಾತ ಭೂಮೌ ।**
**ತಥಾ ಹಿ ವಾತಸ್ಯ ಜವೋಽಧಿಕೋಽಪಿ**
**ಕಥನ್ನು ವಿಶ್ವಂಭರಮುದ್ಬಿಭರ್ತಿ ॥ ೬ ॥**

**ಸಃ** = ಆ, **ವಾತರೂಪೀ** = ಗಾಳಿಯ ರೂಪನಾದ, **ದಿತಿಜಃ** = ಅಸುರನು, **ಮುಕುಂದ-ಭರಾ** = ದೇವರ ಭಾರವನ್ನು, **ಅಸಹಿಷ್ಣುಃ** = ಸಹಿಸದೆ, **ನಿಪಪಾತ** = ಬಿದ್ದನು, **ಭೂಮೌ** = ಭೂಮಿಯಲ್ಲಿ, **ತಥಾ ಹಿ** = ಅದು ಸರಿ, **ವಾತಸ್ಯ** = ಗಾಳಿಗೆ, **ಜವಃ** = ವೇಗವು, **ಅಧಿಕೋಽಪಿ** = ಬಹಳ ಇದ್ದರೂ, **ಕಥಂ ನು** = ಹೇಗೆ ತಾನೇ, **ವಿಶ್ವಂಭರಂ** = ದೇವರನ್ನು, **ಉದ್ಬಿಭರ್ತಿ**= ಹೊರುತ್ತದೆ.

ಈ ಅಸುರನು ದೇವರ ಭಾರವನ್ನು ಸಹಿಸಲಾರದೆ ಕೆಳಗೆ ಬಿದ್ದನು. ದೇವರು ವಿಶ್ವಂಭರ. ಸಮಸ್ತವನ್ನೂ ತನ್ನಲ್ಲಿ ಧರಿಸಿದವನು. ಆದ್ದರಿಂದ ಬಹಳ ಭಾರವಾದ ವಸ್ತು. ಗಾಳಿ ಎಷ್ಟು ವೇಗವಾಗಿ ಬೀಸಿದರೂ ಭಾರದ ವಸ್ತುವನ್ನು ಹಿಡಿದುಕೊಳ್ಳುವ ಶಕ್ತಿ ಇರು-ವುದಿಲ್ಲ. ಹಿಡಿದುಕೊಂಡರೂ ತಾನು ಶಾಂತವಾಗಬೇಕಾಗುತ್ತದೆ.

**ಚಕ್ಷುಶ್ಚೌರ್ಯಫಲಂ ಜಗಾಮ ಪರಿವೃತ್ತಾಕ್ಷಃ ಪ್ರಭೋರೋಜಸಾ**
**ವಿಷ್ವಕ್ಸಂಭ್ರಮಣೇನ ದತ್ತತಮಸೋ ವಿಭ್ರಾಂತಮೂರ್ಧಾ ಫಲಮ್ ।**
**ಸಾಧೂನಾಂ ಹೃದಯಾರ್ತಿದಾನಫಲಿತಂ ಕ್ಲೇಶಂ ಪ್ರಪನ್ನಃ ಕ್ಷಿತೌ**
**ಮಾತುಃ ಪಾತಕರಃ ಪರಸ್ಯ ಸ ಖಲಃ ಪಾಷಾಣಪೃಷ್ಠೇಽಪತತ್ ॥ ೭ ॥**

**ಚಕ್ಷುಃ** = ಕಣ್ಣು, **ಚೌರ್ಯಫಲಂ** = ಕಳ್ಳತನದ ಫಲವನ್ನು, **ಜಗಾಮ** = ಹೊಂದಿತು, **ಪರಿವೃತ್ತ** = ಹೊರಬಂದ, **ಅಕ್ಷಃ** = ಕಣ್ಣುಗಳುಳ್ಳವನಾಗಿ, **ಪ್ರಭೋಃ** = ದೇವರ, ಓಜಸಾ = ತೇಜಸ್ಸಿನಿಂದ, **ವಿಷ್ವಕ್** = ಸುತ್ತಲೂ, **ಸಂಭ್ರಮಣೇನ** = ತಿರುಗಿಸಿದ್ದರಿಂದ, **ದತ್ತತಮಸಃ** =ಕೊಡಲ್ಪಟ್ಟ ಕತ್ತಲೆಯುಳ್ಳ, **ವಿಭ್ರಾಂತ** = ಸುತ್ತಿದ, **ಮೂರ್ಧಾ** = ತಲೆಯುಳ್ಳವನಾಗಿ, **ಫಲಂ** = ಫಲ- ವನ್ನಾಗಿ, **ಸಾಧೂನಾಂ** = ಸಜ್ಜನರಿಗೆ, **ಹೃದಯ** = ಮನಸ್ಸಿಗೆ, **ಆರ್ತಿ** = ದುಃಖವನ್ನು, **ದಾನ** = ಕೊಟ್ಟದ್ದರಿಂದ, **ಫಲಿತಂ** = ಫಲದಿಂದ ಕೂಡಿದ, **ಕ್ಲೇಶಂ** = ದುಃಖವನ್ನು, **ಪ್ರಪನ್ನಃ** = ಹೊಂದಿದವನಾಗಿ, **ಕ್ಷಿತೌ** = ಭೂಮಿಯಲ್ಲಿ, **ಮಾತುಃ** = ತಾಯಿಗೆ, **ಪಾತಕರಃ** = ಪತನವನ್ನು ಮಾಡಿದ, **ಪರಸ್ಯ** = ದೇವರ, **ಸಃ** = ಆ, **ಖಲಃ** = ದುಷ್ಟನು, **ಪಾಷಾಣ** = ಕಲ್ಲಿನ, **ಪೃಷ್ಠೇ** = ಮೇಲೆ, **ಅಪತತ್** = ಬಿದ್ದನು.

ಕೃಷ್ಣನು ಈ ಅಸುರನನ್ನು ಕುತ್ತಿಗೆಯಲ್ಲಿ ಹಿಡಿದನು. ಆಗ ಆತನ ಎರಡು ಕಣ್ಣುಗಳು ಹೊರಬಂದವು. ಇದು ಗೋಕುಲದ ಜನರಿಗೆ ಕಣ್ಣು ಕಾಣದ್ದಂತೆ ಮಾಡಿದ್ದರ ಫಲ. ತಲೆ ಸುತ್ತಿ ಬಂದಿತು. ಇದು ಜನರಿಗೆ ಕತ್ತಲೆ ಉಂಟು ಮಾಡಿದ್ದರ ಫಲ. ತಲೆ ಸುತ್ತಿ ಬರುವಾಗ ಎಲ್ಲಾ ಕತ್ತಲೆಯಾಗಿ ಕಾಣುತ್ತದೆ. ಇದನ್ನೇ 'ಕಣ್ಣು ಕತ್ತಲೆ ಬರುವುದು' ಎನ್ನುತ್ತೇವೆ. ಸಜ್ಜನರ ಮನಸ್ಸಿಗೆ ಬಹಳ ಕ್ಲೇಶವನ್ನು ಕೊಟ್ಟಿದ್ದನು. ಆದ್ದರಿಂದ ತಾನೂ ದುಃಖ ಪಟ್ಟ. ಕೃಷ್ಣನ ತಾಯಿಯಾದ ಯಶೋದೆಯನ್ನು ಬೀಳಿಸಿದ್ದ. ಆದ್ದರಿಂದ ತಾನು ಬಂಡೆಯ ಮೇಲೆ ರಭಸವಾಗಿ ಬಿದ್ದ. ಸಜ್ಜನರಿಗೆ ಯಾವ ರೀತಿಯಾದ ಅನ್ಯಾಯವನ್ನು ಮಾಡುತ್ತೇವೋ ಆ ರೀತಿಯಾದ ಫಲವನ್ನು ಉಣ್ಣುತ್ತೇವೆ ಎಂಬ ನೀತಿ ಇಲ್ಲಿದೆ.

**ಆಲೋಲಹೈಮವರದಾಮವತೀಂ ವಿತಾನ-**
**ಜಾಲಾವಲಂಬಿಶುಭಮೌಕ್ತಿಕರಮ್ಯಮಾಲಾಮ್ ।**
**ದೋಲಾಂ ವಿಧಾಯ ತದುಪರ್ಯಧಿರೋಪ್ಯ ಬಾಲಂ**
**ಸಾಲೋಕ್ಯಸೌಖ್ಯಮಲಭಿಷ್ಟ ಹೃದಾ ಯಶೋದಾ ॥ ೮ ॥**

**ಆಲೋಲ** = ಅಲುಗಾಡುವ, **ಹೈಮ** = ಚಿನ್ನದ, ವರ = ಉತ್ತಮವಾದ, ದಾಮವತೀಂ = ಹಗ್ಗವುಳ್ಳ, ವಿತಾನ = ಮೇಲ್ಕಟ್ಟುಗಳ, ಜಾಲ = ಗುಂಪಿನಲ್ಲಿ, **ಅವಲಂಬಿ** =

ನೇತಾಡುವ, **ಶುಭ** = ಒಳ್ಳೆಯ, **ಮೌಕ್ತಿಕ** = ಮುತ್ತುಗಳ, **ರಮ್ಯ** = ಒಳ್ಳೆಯ, **ಮಾಲಾಂ** = ಮಾಲೆಗಳುಳ್ಳ, **ದೋಲಾಂ** = ತೊಟ್ಟಿಲನ್ನು, **ವಿಧಾಯ** = ಮಾಡಿ, **ತದುಪರಿ** = ಆ ತೊಟ್ಟಿಲಲ್ಲಿ, **ಅಧಿರೋಪ್ಯ** = ಇಟ್ಟು, **ಬಾಲಂ** = ಮಗುವನ್ನು, **ಸಾಲೋಕ್ಯ** = ಸಾಲೋಕ್ಯ ಎಂಬ ಮೋಕ್ಷದ, **ಸೌಖ್ಯಂ** = ಸುಖವನ್ನು, **ಅಲಭಿಷ್ಟ** = ಹೊಂದಿದಳು, **ಹೃದಾ** = ಮನಸ್ಸಿನಿಂದ, **ಯಶೋದಾ**= ಯಶೋದೆಯು.

ಒಂದು ದಿನ ಯಶೋದೆ ಕೃಷ್ಣನನ್ನು ತೊಟ್ಟಿಲಲ್ಲಿ ಹಾಕಿದಳು. ತೊಟ್ಟಿಲು ನಾಲ್ಕು ಚಿನ್ನದ ಸರಪಳಿಗಳಿಂದ ಕೂಡಿತ್ತು. ಸರಪಳಿಗಳು ಚೆನ್ನಾಗಿ ಆಚೆ- ಈಚೆ ಹೋಗುತ್ತಿದ್ದವು. ತೊಟ್ಟಿಲಿನ ಮೇಲೆ ಮೇಲ್ಕಟ್ಟು ಇತ್ತು. ಆ ಮೇಲ್ಕಟ್ಟಿನಲ್ಲಿ ಮುತ್ತಿನ ಜಾಲರಿಗಳು ನೇತಾ-ಡುತ್ತಿದ್ದವು. ಇಂತಹ ತೊಟ್ಟಿಲಲ್ಲಿ ದೇವರನ್ನು ಇಟ್ಟು ತೂಗಿದಳು. ಅವಳ ಆನಂದಕ್ಕೆ ಪಾರವೇ ಇಲ್ಲ. ತಾನು ದೇವಲೋಕದಲ್ಲೇ ಇರುವಂತೆ ಅವಳಿಗೆ ಭಾಸವಾಯಿತು.

ಹೃದಯ ಎಂಬ ತೊಟ್ಟಿಲಲ್ಲಿ ದೇವರನ್ನು ಇಡಬೇಕು. ನಾಲ್ಕು ವೇದಗಳೆಂಬ ಸರಪಳಿಯಿಂದ ಹೃದಯವನ್ನು ಬಿಗಿಯಬೇಕು. ಅಂದರೆ, ವೇದಗಳ ಮೂಲಕ ದೇವರ ಚಿಂತನೆ ನಡೆಯಬೇಕು. ಲೋಕದಲ್ಲಿ ವಸ್ತುಗಳ ಭಾರವನ್ನು ಸರಪಳಿಯಿಂದ ಕೂಡಿದ ತಕ್ಕಡಿಯಲ್ಲಿ ಅಳೆಯುತ್ತೇವೆ. ಅದೇ ರೀತಿ ದೇವರ ವ್ಯಕ್ತಿತ್ವವನ್ನು ವೇದಗಳಿಂದ ಕೂಡಿದ ನಮ್ಮ ಹೃದಯದಿಂದ ಅಳೆಯಬೇಕು. ಕೇವಲ ಹೃದಯದಿಂದ ಅಳೆದರೆ ಅದು ಕುರುಡು ನಂಬಿಕೆ ಆಗುತ್ತದೆ. ಮೇಲ್ಕಟ್ಟು ಎನ್ನುವುದು ಒಂದು ಕಣ್‌ಪಟ್ಟಿ. ಕುದುರೆಯ ಕಣ್ಣಿಗೆ ಪಟ್ಟಿಯಂತೆ. ಪಟ್ಟಿಯಿದ್ದರೆ ಅನಪೇಕ್ಷಿತವಾದದ್ದು ಯಾವುದೂ ಕಾಣುವುದಿಲ್ಲ. ನಮ್ಮ ಗುರಿ ಮಾತ್ರ ತೋರುತ್ತದೆ. ಜಂತಿಗಳಿಗೆ ಮೇಲ್ಕಟ್ಟು ಹಾಕಿದಾಗ ಜಂತಿಗಳಲ್ಲಿರುವ ಕಶ್ಮಲಗಳು ಕಾಣದಿರುವಂತೆ. ಅದೇ ರೀತಿ ಅನಗತ್ಯವಾದುದಕ್ಕೆ ಕಿವಿ ಕೊಡದಿರುವುದು, ನೋಡದಿ-ರುವುದು, ಆಡದಿರುವುದು, ಹೋಗದಿರುವುದು ಇತ್ಯಾದಿ. ನೇತಾಡುವ ಮುತ್ತಿನ ಜಾಲರಿಗಳು ಊರ್ಧ್ವಲೋಕದಲ್ಲಿರುವ ದೇವತೆಗಳು. ಜಾಲರಿಗಳು ಕೆಳಮುಖವಾಗಿ ಇರುತ್ತವೆ. ದೇವತೆಗಳು ಕೆಳಮುಖವಾಗಿ ನಮ್ಮನ್ನು ನೋಡುತ್ತಿರುತ್ತಾರೆ. ಇಷ್ಟೆಲ್ಲಾ ಸಾಧನವನ್ನು ನಾವು ಮಾಡಿದರೆ ಆಗ ದೇವರು ಸಾಲೋಕ್ಯವನ್ನು ತನ್ನ ಲೋಕವನ್ನೇ ಕೊಡುತ್ತಾನೆ ಎಂದು ಅಭಿಪ್ರಾಯ. ಆದ್ದರಿಂದ ಪ್ರತಿದಿನ ನಾವು ದೇವರನ್ನು ತೊಟ್ಟಲಲ್ಲಿ ಇಟ್ಟು ತೂಗಬೇಕು.

**ದೋಲಾವಿಲಾಸಚಲಿತಾಲಕಶೋಭಿಫಾಲಂ**
**ಬಾಲಂ ಶುಚಿಸ್ಮಿತಸುಧಾರಸಶೋಭಿತಾಸ್ಯಮ್ ।**

ಶ್ಯಾಮಂ ಸಮೀಕ್ಷ್ಯ ಸಮಯಂ ಕಿಲ ಶರ್ಮ್ಮಯಂ ಸಾ
ತೇನೇ ಕ್ವಣತ್ಕನಕನೂಪುರಶೋಭಿಪಾದಮ್ ॥ ೯ ॥

**ದೋಲಾ** = ತೊಟ್ಟಿಲಿನ, **ವಿಲಾಸ** = ಅಲುಗಾಟದಿಂದ, **ಚಲಿತ** = ಅಲುಗಾಡುವ, **ಆಲಕ** = ಮುಂಗುರುಳಿನಿಂದ, **ಶೋಭಿ** = ಶೋಭಿಸುವ, **ಫಾಲಂ** = ಹಣೆಯುಳ್ಳ, **ಬಾಲಂ** = ಮಗುವನ್ನು, **ಶುಚಿ** = ನಿರ್ಮಲವಾದ, **ಸ್ಮಿತ** = ಮಂದಹಾಸ ಎಂಬ, **ಸುಧಾ** = ಅಮೃತದ, **ರಸ** = ರಸದಿಂದ, **ಶೋಭಿತ** = ಶೋಭಿಸುವ, **ಆಸ್ಯಂ** = ಮುಖವುಳ್ಳ, **ಶ್ಯಾಮಂ** = ನೀಲಬಣ್ಣದ, **ಸಮೀಕ್ಷ್ಯ** = ನೋಡಿ, **ಸಮಯಂ** = ಕಾಲವನ್ನು, **ಕಿಲ** = ಪ್ರಸಿದ್ಧ, **ಶರ್ಮ್ಮಯಂ** = ಸುಖಮಯವನ್ನಾಗಿ, **ಸಾ** = ಯಶೋದೆಯು, **ತೇನೇ** = ಮಾಡಿ-ದಳು, **ಕ್ವಣತ್** = ಶಬ್ದ ಮಾಡುವ, **ಕನಕ** = ಚಿನ್ನದ, **ನೂಪುರ** = ಗೆಜ್ಜೆಗಳಿಂದ, **ಶೋಭಿ** = ಶೋಭಿಸುವ, **ಪಾದಂ**= ಕಾಲುಗಳುಳ್ಳ.

ತೊಟ್ಟಿಲು ಅಲುಗಾಡುವುದರಿಂದ ಕೃಷ್ಣನ ಮುಂಗುರುಳು ಅಲುಗಾಡುತ್ತಿದೆ. ಇದರಿಂದ ಹಣೆ ಶೋಭಿಸುತ್ತದೆ. ಕೃಷ್ಣ ತೊಟ್ಟಿಲಲ್ಲಿ ಮಲಗಿದಲ್ಲಿ ಮುಗುಳ್ನಗುವನ್ನು ಬೀರುತ್ತಿದ್ದಾನೆ. ಈ ನಗುವೇ ಒಂದು ಅಮೃತರಸ. ಈ ರಸದಿಂದ ಮುಖ ಶೋಭಿಸುತ್ತಿದೆ. ಕಾಲಿಗೆ ಕಟ್ಟಿದ ಆಭರಣಗಳು ಶಬ್ದ ಮಾಡುತ್ತಿವೆ. ನೀಲಬಣ್ಣದಿಂದ ಕೂಡಿದ ಈ ಮಗುವನ್ನು ತೂಗುತ್ತಾ ನೋಡುತ್ತಾ ಯಶೋದೆ ಇಡೀ ದಿನವನ್ನು ಸುಖಮಯವನ್ನಾಗಿ ಕಳೆದಳು.

ಸದಾ ದೇವರನ್ನು ಹೃದಯದಲ್ಲಿ ತೂಗುವವರಿಗೆ ಚಿಂತೆಯಾದರೂ ಏನು?

ಗಂಡಂ ವರಾಂಗುಲಿದಲೈಃ ಲಘು ಚಾಲಯಂತೀ
ಮಂದಸ್ಮಿತಾನನಮ್ ಅಥೋ ಪರಿರಂಭಯಂತೀ ।
ಸಾಂದ್ರಸ್ತನಸ್ರುತಪಯಃ ಕಿಲ ಪಾಯಯಂತೀ
ನಂದಸ್ಯ ರಾಜ್ಞ್ಯಭವದಿತ್ಥಮಹರ್ನಯಂತೀ ॥ ೧೦ ॥

**ಗಂಡಂ** = ಗಲ್ಲವನ್ನು, **ವರ** = ಉತ್ತಮವಾದ, **ಅಂಗುಲಿ** = ಬೆರಳುಗಳ, **ದಲೈಃ** = ತುದಿಗಳಿಂದ, **ಲಘು** = ಮೆಲ್ಲನೇ, **ಚಾಲಯಂತೀ** = ಚಿವುಟುತ್ತಾ, **ಮಂದಸ್ಮಿತ** = ಮುಗುಳ್ನಗು ಉಳ್ಳ, **ಆನನಂ** = ಮುಖವುಳ್ಳ ಕೃಷ್ಣನನ್ನು, **ಅಥೋ** = ಅನಂತರ, **ಪರಿ-ರಂಭಯಂತೀ** = ಆಲಂಗಿಸುತ್ತಾ, **ಸಾಂದ್ರ** = ಪುಷ್ಟವಾದ, **ಸ್ತನ** = ಸ್ತನಗಳಿಂದ, **ಸ್ರುತ** = ಹರಿಯುವ, **ಪಯಃ** = ಹಾಲನ್ನು, **ಕಿಲ** = ಪ್ರಸಿದ್ಧ, **ಪಾಯಯಂತೀ** = ಕುಡಿಸುತ್ತಾ, **ನಂದಸ್ಯ** = ನಂದನ, **ರಾಜ್ಞೀ** = ಪತ್ನಿಯು, **ಅಭವತ್** = ಇದ್ದಳು, **ಇತ್ಥಂ** = ಈ ರೀತಿಯಾಗಿ, **ಅಹಃ** = ಹಗಲನ್ನು, **ನಯಂತೀ**= ಕಳೆಯುವವಳಾಗಿ.

ಯಶೋದೆಯು ತೊಟ್ಟಿಲಿನ ಮಗುವಿನ ಗಂಡಸ್ಥಳವನ್ನು (ಕೆನ್ನೆಯನ್ನು) ತನ್ನ ಕೈ-ಬೆರಳುಗಳಿಂದ ಮೆಲ್ಲಗೆ ಚಿವುಟುತ್ತಾಳೆ. ಆಗ ಮಗು ನಗುತ್ತದೆ. ಅದನ್ನು ತೊಟ್ಟಿಲಿಂದ ತೆಗೆದು ಆಲಂಗಿಸುತ್ತಾಳೆ. ಪ್ರೀತಿಯ ರಭಸಕ್ಕೆ ತನ್ನ ಸ್ತನಗಳಿಂದ ಹಾಲು ಉಕ್ಕುತ್ತದೆ. ಅದನ್ನು ಮಗುವಿಗೆ ಕುಡಿಸುತ್ತಾಳೆ. ಪುನಃ ಮಲಗಿಸುತ್ತಾಳೆ. ಇದೇ ರೀತಿ ತನ್ನ ದಿನಚರಿಯನ್ನು ಮಾಡಿಕೊಂಡಳು. ಸಾತ್ವಿಕರು ಲೌಕಿಕದ ವಿಷಯಕ್ಕೆ ತಲೆ ಹಾಕದೆ ದೇವರ ಜೊತೆಗೇ ಇರುತ್ತಾರೆ.

**ಯಾಽಮರ್ತ್ಯಮರ್ತ್ಯದಿತಿಜಾಲಿಭಿರಪ್ಯಭೇದ್ಯಂ**
**ಬ್ರಹ್ಮಾಂಡಭಾಂಡಮಭಿನನ್ನಖಕೋಟಿಮಾತ್ರಾತ್ ।**
**ಸ್ವಾಂಗುಷ್ಠಪುಷ್ಟಸುಭಗಾಂಗುಲಿಮಚ್ಯುತಸ್ತಾಂ**
**ಸಂಗೃಹ್ಯ ಚುಂಬತಿ ಶಿಶುಪ್ರಕೃತಿಃ ಶಯಾನಃ ॥ ೧೧ ॥**

**ಯಾ** = ಯಾವ ಬೆರಳು, **ಅಮರ್ತ್ಯ** = ದೇವತೆಗಳಿಂದ, **ಮರ್ತ್ಯ** = ಮಾನವರಿಂದ, **ದಿತಿಜ** = ದೈತ್ಯರ, **ಅಲಿಭಿರಪಿ** = ಸಮೂಹದಿಂದಲೂ, **ಅಭೇದ್ಯಂ** = ಭೇದಿಸಲು ಅಸಾಧ್ಯವಾದ, **ಬ್ರಹ್ಮಾಂಡ** = ಬ್ರಹ್ಮಾಂಡದ, **ಭಾಂಡಂ** = ಕಟಾಹವನ್ನು, **ಅಭಿನತ್** = ಸೀಳಿತೋ, **ನಖ** = ಉಗುರಿನ, **ಕೋಟಿಮಾತ್ರಾತ್** = ಕೇವಲ ತುದಿಯಿಂದ, **ಸ್ವ** = ತನ್ನ, **ಅಂಗುಷ್ಠ** = ಅಂಗುಟವೆಂಬ, **ಪುಷ್ಟ** = ಪುಷ್ಟವಾದ, **ಸುಭಗ** = ಚಂದದ, **ಅಂಗುಲಿಂ** = ಬೆರಳನ್ನು, **ಅಚ್ಯುತಃ** = ಕೃಷ್ಣನು, **ತಾಂ** = ಅದನ್ನು, **ಸಂಗೃಹ್ಯ** = ಹಿಡಿದು, **ಚುಂಬತಿ** = ಮುದ್ದಿಡುತ್ತಾನೆ, **ಶಿಶು** = ಮಗುವಿನ, **ಪ್ರಕೃತಿಃ** = ಸ್ವಭಾವವುಳ್ಳ, **ಶಯಾನಃ** = ಮಲಗಿದ.

ಮಕ್ಕಳ ಸ್ವಭಾವದಂತೆ ಕೃಷ್ಣನು ತನ್ನ ಹೆಬ್ಬೆರಳನ್ನು ಬಾಯಿಯಲ್ಲಿ ಇಟ್ಟು ಚೀಪುತ್ತಿದ್ದಾನೆ. ಚಂದದ, ಪುಷ್ಟವಾದ ಈ ಹೆಬ್ಬೆರಳು ಕೃಷ್ಣನ ತ್ರಿವಿಕ್ರಮಾವತಾರಕಾಲದಲ್ಲಿ ಬ್ರಹ್ಮಾಂಡದ ಕಟಾಹವನ್ನೇ ಒಡೆದಿತ್ತು. ಇದನ್ನು ಒಡೆಯಲು ಯಾವ ದೇವದೈತ್ಯರಿಂದಲೂ ಸಾಧ್ಯವಿಲ್ಲ. ಯಾರಿಂದಲೂ ಮಾಡಲು ಸಾಧ್ಯವಾಗದ ಈ ಕೆಲಸವನ್ನು ಬೆರಳು ಮಾಡಿದೆ ಎಂದು ಬೆರಳನ್ನು ಅಭಿನಂದಿಸುವಂತೆ ಇತ್ತು ಈ ದೃಶ್ಯ.

ಎಷ್ಟೇ ಕೆಳಮಟ್ಟದವನಾದರೂ ಒಳ್ಳೆಯ ಕೆಲಸವನ್ನು ಮಾಡಿದರೆ, ದೇವರು ಆತನನ್ನು ಆದರಿಸುತ್ತಾನೆ ಎಂದು ಸಂದೇಶ.

**ನಿದ್ರಾಮಾಶ್ರಯ ಕಿಂ ತದಾಶ್ರಯಫಲಂ ಭುಕ್ತಂ ವ್ರಜೇತ್ ಜೀರ್ಣತಾಂ**
**ನಿದ್ರಾ ಕಾಽಂಬ ನಿಮೀಲಿತಾಕ್ಷಿಯುಗಲಃ ಪ್ರಾಜ್ಞಂ ಯದಾಲಿಂಗತಿ ।**

**ಅಸ್ತ್ವೇವಂ ತ್ವಿತಿ ಮುದ್ರಿತಾತ್ಮನಯನಃ ಸ್ವಾಂಗಂ ಸಮಾಲಿಂಗ್ಯ ತತ್**
**ಸರ್ವಂ ಜೀರ್ಣಮಥೋ ದಿಶೇತಿ ಜನನೀಂ ಶಂಸನ್ನಿಜಂ ಸೋಽವತಾತ್ ॥೧೨॥**

**ನಿದ್ರಾಂ** = ನಿದ್ರೆಯನ್ನು, **ಆಶ್ರಯ** = ಮಾಡು, **ಕಿಂ** = ಏನು? **ತದಾಶ್ರಯಫಲಂ** = ನಿದ್ರೆಯನ್ನು ಮಾಡಿದ್ದಕ್ಕೆ ಫಲವು, **ಭುಕ್ತಂ** = ಉಂಡದ್ದು, **ವ್ರಜೇತ್** = ಆಗುತ್ತದೆ, **ಜೀರ್ಣತಾಂ** = ಜೀರ್ಣವು, **ನಿದ್ರಾ** = ನಿದ್ರೆಯು, **ಕಾ** = ಏನು, **ಅಂಬ** = ತಾಯಿಯೇ, **ನಿಮೀಲಿತ** = ಮುಚ್ಚಿದ, **ಅಕ್ಷಿ** = ಕಣ್ಣುಗಳ, **ಯುಗಲ** = ಎರಡು ಉಳ್ಳವನಾಗಿ, **ಪ್ರಾಜ್ಞಂ** = ದೇವರನ್ನು, **ಯದಾ** = ಯಾವಾಗ, **ಆಲಿಂಗತಿ** = ಆಲಿಂಗಿಸುತ್ತಾನೆ, **ಅಸ್ತು** = ಆಗಲಿ, **ಏವಂ** = ಈ ರೀತಿಯಾಗಿ, **ಇತಿ** = ಎಂದು, **ಮುದ್ರಿತ** = ಮುಚ್ಚಿದ, **ಆತ್ಮ** = ತನ್ನ, **ನಯನಃ** = ಕಣ್ಣುಳ್ಳವನಾಗಿ, **ಸ್ವಾಂಗಂ** = ತನ್ನ ಶರೀರವನ್ನು, **ಸಮಾಲಿಂಗ್ಯ** = ಆಲಿಂಗಿಸಿ, **ತತ್** = ಉಂಡದ್ದು, **ಸರ್ವಂ** = ಎಲ್ಲವೂ, **ಜೀರ್ಣಂ** = ಕರಗಿತು, **ಅಥೋ** = ಆದ್ದರಿಂದ, **ದಿಶ** = ಕೊಡು, **ಇತಿ** = ಎಂದು, **ಜನನೀಂ** = ತಾಯಿಯನ್ನು, **ಶಂಸನ್** = ಹೇಳುವ ಮೂಲಕ, **ನಿಜಂ** = ತನ್ನವರನ್ನು, **ಸಃ** = ಆ ಕೃಷ್ಣನು, **ಅವತಾತ್** = ರಕ್ಷಿಸಲಿ.

ತೊಟ್ಟಿಲಲ್ಲಿ ಮಲಗಿದ ಮಗುವಿಗೂ ತಾಯಿಗೂ ಸಂಭಾಷಣೆ ನಡೆಯುತ್ತಿದೆ. ಕೃಷ್ಣ ಮಲಗು ಎಂದು ತಾಯಿ. ಅಮ್ಮಾ ಏಕೆ ಮಲಗಬೇಕು? ತಿಂದಿದ್ದು ಜೀರ್ಣ ಆಗುತ್ತದೆ ಎಂದು ತಾಯಿ. ನಿದ್ರೆ ಎಂದರೆ ಏನು? ಎಂದು ಕೃಷ್ಣ. ಕಣ್ಣು ಮುಚ್ಚಿಕೊಂಡು ಪ್ರಾಜ್ಞ-ರೂಪೀ ದೇವರನ್ನು ಆಲಿಂಗಿಸುವುದೇ ನಿದ್ರೆ ಎಂದು ತಾಯಿ. ಆಗಲಿ ಅಮ್ಮ ಎಂದು ಹೇಳಿ ಕೃಷ್ಣ ಕಣ್ಣು ಮುಚ್ಚಿಕೊಂಡು ತನ್ನನ್ನೇ ಆಲಿಂಗಿಸಿಕೊಂಡ. ಕೃಷ್ಣನಿಗೂ ಪ್ರಾಜ್ಞರೂಪೀ ದೇವರಿಗೂ ಅಭೇದ ಇದೆ. ಆದ್ದರಿಂದ ತನ್ನನ್ನು ತಾನು ಆಲಿಂಗಿಸಿಕೊಂಡದ್ದು ಸರಿ. ಹೀಗೆ ತನ್ನನ್ನು ಆಲಿಂಗಿಸಿಕೊಂಡು ಅಮ್ಮ ನಿದ್ದೆ ಆಯಿತು, ತಿಂದದ್ದು ಜೀರ್ಣವೂ ಆಯಿತು, ಪುನಃ ತಿನ್ನಲು ಕೊಡು ಎಂದು ತಾಯಿಯನ್ನು ಬೇಡುವ ಕೃಷ್ಣನು ನಮ್ಮನ್ನು ರಕ್ಷಿಸಲಿ.

**ಮಾತರ್ಗಾಯಸಿ ಕಿಂ ಸದಾ ಜಲನಿಧೌ ಶೇಷಾಂಗಸಂಶಾಯಿನಂ**
**ತಾತಾಸೌ ನನು ನಿದ್ರಯಾ ಪರಿವೃತೋ ದದ್ಯಾತ್ತವಾಪೀತಿ ತಾಮ್ ।**
**ಏವಂ ಚೇತ್ ಗದಿತಂ ತ್ವದೀಯಮಖಿಲಂ ತತ್ಕರ್ಣದೇಶಂ ಕಥಂ**
**ಯಾತೀತಿ ಪ್ರತಿಪಾದಯನ್ನಿಜಮತಂ ಪಾಯಾದ್ಯಶೋದಾಸುತಃ ॥ ೧೩ ॥**

**ಮಾತಃ** = ತಾಯಿಯೇ, **ಗಾಯಸಿ** = ಹಾಡುತ್ತಿ, **ಕಿಂ** = ಯಾಕೆ, **ಸದಾ** = ಯಾವಾ-ಗಲೂ, **ಜಲನಿಧೌ** = ಸಮುದ್ರದಲ್ಲಿ, **ಶೇಷ** = ಹಾವಿನ, **ಅಂಗ** = ದೇಹದಲ್ಲಿ, **ಸಂಶಾಯಿನಂ** = ಮಲಗಿರುವ, **ತಾತ** = ಮಗುವೇ, **ಅಸೌ** = ಆ ದೇವರು, **ನನು** = ಪ್ರಸಿದ್ಧ, **ನಿದ್ರಯಾ** = ನಿದ್ರೆಯಿಂದ, **ಪರಿವೃತಃ** = ಕೂಡಿದ, **ದದ್ಯಾತ್** = ಕೊಡುತ್ತಾನೆ,

**ತವ ಅಪಿ** = ನಿನಗೂ, **ಇತಿ** = ಎಂದು, **ತಾಂ** = ಅದನ್ನು, **ಏವಂ ಚೇತ್** = ಹಾಗಿದ್ದರೆ, **ಗದಿತಂ** = ಹಾಡುವಿಕೆಯು, **ತ್ವದೀಯಮ್** = ನಿನ್ನ, **ಅಖಿಲಂ** = ಎಲ್ಲವೂ, **ತತ್** = ಆ ದೇವರ, **ಕರ್ಣದೇಶಂ** = ಕಿವಿ- ಪ್ರದೇಶವನ್ನು, **ಕಥಂ** = ಹೇಗೆ, **ಯಾತಿ** = ಸೇರುತ್ತದೆ, **ಇತಿ** = ಎಂದು, **ಪ್ರತಿಪಾದಯನ್** = ಹೇಳುವ, **ನಿಜಮತಂ** = ತನ್ನ ಅಭಿಪ್ರಾಯವನ್ನು, **ಪಾಯಾತ್** = ರಕ್ಷಿಸಲಿ, **ಯಶೋದಾಸುತಃ** = ಯಶೋದೆಯ ಮಗನು.

ಯಶೋದೆಯು ತೊಟ್ಟಿಲು ತೂಗುವಾಗ ದೇವರ ಹಾಡನ್ನು ಹಾಡುತ್ತಿದ್ದಳು. ಆಗ ಕೃಷ್ಣನ ಪ್ರಶ್ನೆ – 'ಅಮ್ಮ, ದಿನಾಲೂ ನೀನು ಶೇಷಶಾಯಿಯಾದ ನಾರಾಯಣನನ್ನು ನನ್ನ ತೊಟ್ಟಲು ತೂಗುವಾಗ ಯಾಕೆ ಹಾಡುತ್ತೀ ?' ಎಂದು. ಯಶೋದೆಯ ಉತ್ತರ – ಅವನು ಯಾವಾಗಲೂ ನಿದ್ರೆಯಿಂದ ಕೂಡಿರುತ್ತಾನೆ. ನಿನಗೂ ಸ್ವಲ್ಪ ನಿದ್ರೆಯನ್ನು ಕೊಡಲಿ' ಎಂದು. ಕೃಷ್ಣನ ಪ್ರಶ್ನೆ – 'ಆತನು ಸದಾ ನಿದ್ರೆಯಲ್ಲಿರುವುದಾದರೆ ನೀನು ಮಾತನಾಡಿದ್ದು ಅವನಿಗೆ ಹೇಗೆ ಕೇಳಿಸುತ್ತದೆ?' ಎಂದು. ಈ ರೀತಿಯಾಗಿ ಕೃಷ್ಣನು ದೇವರಿಗೆ ನಿದ್ರೆ ಇಲ್ಲ ಎಂಬುದನ್ನು ಯಶೋದೆಯಿಂದ ಒಪ್ಪಿಸಿದನು. ಎಲ್ಲರೂ ಇದನ್ನು ತಿಳಿಯಬೇಕು. ಏನೆಂದರೆ, ಮಲಗುವ ಪ್ರತಿಯೊಬ್ಬನೂ ಎಚ್ಚರದಿಂದಲೇ ಮಲಗಬೇಕು ಎಂದು.

**ಲೋಲತ್ ಕಂಕಣಪಾಣಿಪದ್ಮಧೃತಯಾ ನೀಲೋಚ್ಚಲತ್ ಕುಂತಲಾ**
**ಬಾಲಾಃ ಸ್ರಸ್ತದುಕೂಲಹಾರವಲಯಾ ಮೌಲಿಸ್ಖಲನ್ ಮಲ್ಲಿಕಾಃ।**
**ಲೋಲಾಂಗ್ಯಃ ಕ್ವಣದಂಘ್ರಿಭೂಷಣಗಣಾ ಈಷತ್ ಚಲತ್ಕುಂಡಲಾಃ**
**ವ್ಯಾಲೋಲಂ ಸಹ ದೋಲಯಾ ಮೃಗದೃಶಃ ಕೃತ್ವೋಪನಿನ್ಯುಃ ಪ್ರಿಯಮ್ ೧೪**

**ಲೋಲತ್** = ಅಲುಗಾಡುವ, **ಕಂಕಣ** = ಬಳೆಗಳುಳ್ಳ, **ಪಾಣಿಪದ್ಮ** = ಕರಕಮಲದಿಂದ, **ಧೃತಯಾ** = ಹಿಡಿಯಲ್ಪಟ್ಟ, **ನೀಲ** = ಕಪ್ಪಾದ, **ಉಚ್ಚಲತ್** = ಕಂಪಿಸುವ, **ಕುಂತಲಾ** = ತಲೆಕೂದಲುಳ್ಳ, **ಬಾಲಾಃ** = ಗೋಪಿಯರು, **ಸ್ರಸ್ತ** = ಅಲುಗಾಡುವ, **ದುಕೂಲ** = ವಸ್ತ್ರವು, **ಹಾರ** = ಆಭರಣಗಳು, **ವಲಯಾ** = ಬಳೆಗಳುಳ್ಳ, **ಮೌಲಿ** = ತಲೆಯಿಂದ, **ಸ್ಖಲನ್** = ಬೀಳುತ್ತಿರುವ, **ಮಲ್ಲಿಕಾಃ** = ಮಲ್ಲಿಗೆ ಹೂಗಳುಳ್ಳ, **ಲೋಲಿ** = ಹಿಂದೆ ಮುಂದೆ ಅಲಗಾಡುತ್ತಿರುವ, **ಅಂಗ್ಯಃ** = ಶರೀರವುಳ್ಳ, **ಕ್ವಣತ್** = ಧ್ವನಿಮಾಡುವ, **ಅಂಘ್ರಿ** = ಕಾಲುಗಳ, **ಭೂಷಣಗಣಾ** = ಆಭರಣಗಳ ಸಮೂಹವುಳ್ಳ, **ಈಷತ್** = ಸ್ವಲ್ಪವಾಗಿ (ಮೆಲ್ಲನೆ), **ಚಲತ್** = ಚಲಿಸುವ, **ಕುಂಡಲಾಃ** = ಕರ್ಣಾಭರಣಗಳುಳ್ಳ, **ವ್ಯಾಲೋಲಂ** = ಚಂಚಲವನ್ನಾಗಿ, **ಸಹ** = ಕೂಡಿಕೊಂಡು, **ದೋಲಯಾ** = ತೊಟ್ಟಿಲಿನಿಂದ, **ಮೃಗ** = ಜಿಂಕೆಯ, **ದೃಶಃ** = ಕಣ್ಣುಗಳುಳ್ಳ, **ಕೃತ್ವಾ** = ಮಾಡಿ, **ಉಪನಿನ್ಯುಃ** = ಸಮೀಪಕ್ಕೆ ತಂದರು, **ಪ್ರಿಯಮ್** = ಪ್ರಿಯನಾದ ಕೃಷ್ಣನನ್ನು.

**ಅಸ್ತ್ವೇವಂ ತ್ವಿತಿ ಮುದ್ರಿತಾತ್ಮನಯನಃ ಸ್ವಾಂಗಂ ಸಮಾಲಿಂಗ್ಯ ತತ್**
**ಸರ್ವಂ ಜೀರ್ಣಮಥೋ ದಿಶೇತಿ ಜನನೀಂ ಶಂಸನ್ನಿಜಂ ಸೋಽವತಾತ್ ॥೧೨॥**

**ನಿದ್ರಾಂ** = ನಿದ್ರೆಯನ್ನು, **ಆಶ್ರಯ** = ಮಾಡು, **ಕಿಂ** = ಏನು? **ತದಾಶ್ರಯಫಲಂ** = ನಿದ್ರೆಯನ್ನು ಮಾಡಿದ್ದಕ್ಕೆ ಫಲವು, **ಭುಕ್ತಂ** = ಉಂಡದ್ದು, **ವ್ರಜೇತ್** = ಆಗುತ್ತದೆ, **ಜೀರ್ಣತಾಂ** = ಜೀರ್ಣವು, **ನಿದ್ರಾ** = ನಿದ್ರೆಯು, **ಕಾ** = ಏನು, **ಅಂಬ** = ತಾಯಿಯೇ, **ನಿಮೀಲಿತ** = ಮುಚ್ಚಿದ, **ಅಕ್ಷಿ** = ಕಣ್ಣುಗಳ, **ಯುಗಲ** = ಎರಡು ಉಳ್ಳವನಾಗಿ, **ಪ್ರಾಜ್ಞಂ** = ದೇವರನ್ನು, **ಯದಾ** = ಯಾವಾಗ, **ಆಲಿಂಗತಿ** = ಆಲಿಂಗಿಸುತ್ತಾನೆ, **ಅಸ್ತು** = ಆಗಲಿ, **ಏವಂ** = ಈ ರೀತಿಯಾಗಿ, **ಇತಿ** = ಎಂದು, **ಮುದ್ರಿತ** = ಮುಚ್ಚಿದ, **ಆತ್ಮ** = ತನ್ನ, **ನಯನಃ** = ಕಣ್ಣುಳ್ಳವನಾಗಿ, **ಸ್ವಾಂಗಂ** = ತನ್ನ ಶರೀರವನ್ನು, **ಸಮಾಲಿಂಗ್ಯ** = ಆಲಿಂಗಿಸಿ, **ತತ್** = ಉಂಡದ್ದು, **ಸರ್ವಂ** = ಎಲ್ಲವೂ, **ಜೀರ್ಣಂ** = ಕರಗಿತು, **ಅಥೋ** = ಆದ್ದರಿಂದ, **ದಿಶ** = ಕೊಡು, **ಇತಿ** = ಎಂದು, **ಜನನೀಂ** = ತಾಯಿಯನ್ನು, **ಶಂಸನ್** = ಹೇಳುವ ಮೂಲಕ, **ನಿಜಂ** = ತನ್ನವರನ್ನು, **ಸಃ** = ಆ ಕೃಷ್ಣನು, **ಅವತಾತ್**= ರಕ್ಷಿಸಲಿ.

ತೊಟ್ಟಿಲಲ್ಲಿ ಮಲಗಿದ ಮಗುವಿಗೂ ತಾಯಿಗೂ ಸಂಭಾಷಣೆ ನಡೆಯುತ್ತಿದೆ. ಕೃಷ್ಣ ಮಲಗು ಎಂದು ತಾಯಿ. ಅಮ್ಮಾ ಏಕೆ ಮಲಗಬೇಕು? ತಿಂದಿದ್ದು ಜೀರ್ಣ ಆಗುತ್ತದೆ ಎಂದು ತಾಯಿ. ನಿದ್ರೆ ಎಂದರೆ ಏನು? ಎಂದು ಕೃಷ್ಣ. ಕಣ್ಣು ಮುಚ್ಚಿಕೊಂಡು ಪ್ರಾಜ್ಞ-ರೂಪೀ ದೇವರನ್ನು ಆಲಿಂಗಿಸುವುದೇ ನಿದ್ರೆ ಎಂದು ತಾಯಿ. ಆಗಲಿ ಅಮ್ಮ ಎಂದು ಹೇಳಿ ಕೃಷ್ಣ ಕಣ್ಣು ಮುಚ್ಚಿಕೊಂಡು ತನ್ನನ್ನೇ ಆಲಿಂಗಿಸಿಕೊಂಡ. ಕೃಷ್ಣನಿಗೂ ಪ್ರಾಜ್ಞರೂಪೀ ದೇವರಿಗೂ ಅಭೇದ ಇದೆ. ಆದ್ದರಿಂದ ತನ್ನನ್ನು ತಾನು ಆಲಿಂಗಿಸಿಕೊಂಡದ್ದು ಸರಿ. ಹೀಗೆ ತನ್ನನ್ನು ಆಲಿಂಗಿಸಿಕೊಂಡು ಅಮ್ಮ ನಿದ್ದೆ ಆಯಿತು, ತಿಂದದ್ದು ಜೀರ್ಣವೂ ಆಯಿತು, ಪುನಃ ತಿನ್ನಲು ಕೊಡು ಎಂದು ತಾಯಿಯನ್ನು ಬೇಡುವ ಕೃಷ್ಣನು ನಮ್ಮನ್ನು ರಕ್ಷಿಸಲಿ.

**ಮಾತರ್ಗಾಯಸಿ ಕಿಂ ಸದಾ ಜಲನಿಧೌ ಶೇಷಾಂಗಸಂಶಾಯಿನಂ**
**ತಾತಾಸೌ ನನು ನಿದ್ರಯಾ ಪರಿವೃತೋ ದದ್ಯಾತ್ತವಾಪೀತಿ ತಾಮ್ ।**
**ಏವಂ ಚೇತ್ ಗದಿತಂ ತ್ವದೀಯಮಖಿಲಂ ತತ್ಕರ್ಣದೇಶಂ ಕಥಂ**
**ಯಾತೀತಿ ಪ್ರತಿಪಾದಯನ್ನಿಜಮತಂ ಪಾಯಾದ್ಯಶೋದಾಸುತಃ ॥ ೧೩ ॥**

**ಮಾತಃ** = ತಾಯಿಯೇ, **ಗಾಯಸಿ** = ಹಾಡುತ್ತಿ, **ಕಿಂ** = ಯಾಕೆ, **ಸದಾ** = ಯಾವಾ-ಗಲೂ, **ಜಲನಿಧೌ** = ಸಮುದ್ರದಲ್ಲಿ, **ಶೇಷ** = ಹಾವಿನ, **ಅಂಗ** = ದೇಹದಲ್ಲಿ, **ಸಂಶಾಯಿನಂ** = ಮಲಗಿರುವ, **ತಾತ** = ಮಗುವೇ, **ಅಸೌ** = ಆ ದೇವರು, **ನನು** = ಪ್ರಸಿದ್ಧ, **ನಿದ್ರಯಾ** = ನಿದ್ರೆಯಿಂದ, **ಪರಿವೃತಃ** = ಕೂಡಿದ, **ದದ್ಯಾತ್** = ಕೊಡುತ್ತಾನೆ,

**ತವ ಅಪಿ** = ನಿನಗೂ, **ಇತಿ** = ಎಂದು, **ತಾಂ** = ಅದನ್ನು, **ಏವಂ ಚೇತ್** = ಹಾಗಿದ್ದರೆ, **ಗದಿತಂ** = ಹಾಡುವಿಕೆಯು, **ತ್ವದೀಯಮ್** = ನಿನ್ನ, **ಅಖಿಲಂ** = ಎಲ್ಲವೂ, **ತತ್** = ಆ ದೇವರ, **ಕರ್ಣದೇಶಂ** = ಕಿವಿ- ಪ್ರದೇಶವನ್ನು, **ಕಥಂ** = ಹೇಗೆ, **ಯಾತಿ** = ಸೇರುತ್ತದೆ, **ಇತಿ** = ಎಂದು, **ಪ್ರತಿಪಾದಯನ್** = ಹೇಳುವ, **ನಿಜಮತಂ** = ತನ್ನ ಅಭಿಪ್ರಾಯವನ್ನು, **ಪಾಯಾತ್** = ರಕ್ಷಿಸಲಿ, **ಯಶೋದಾಸುತಃ** = ಯಶೋದೆಯ ಮಗನು.

ಯಶೋದೆಯು ತೊಟ್ಟಿಲು ತೂಗುವಾಗ ದೇವರ ಹಾಡನ್ನು ಹಾಡುತ್ತಿದ್ದಳು. ಆಗ ಕೃಷ್ಣನ ಪ್ರಶ್ನೆ – 'ಅಮ್ಮ, ದಿನಾಲೂ ನೀನು ಶೇಷಶಾಯಿಯಾದ ನಾರಾಯಣನನ್ನು ನನ್ನ ತೊಟ್ಟಿಲು ತೂಗುವಾಗ ಯಾಕೆ ಹಾಡುತ್ತೀ?' ಎಂದು. ಯಶೋದೆಯ ಉತ್ತರ – ಅವನು ಯಾವಾಗಲೂ ನಿದ್ರೆಯಿಂದ ಕೂಡಿರುತ್ತಾನೆ. ನಿನಗೂ ಸ್ವಲ್ಪ ನಿದ್ರೆಯನ್ನು ಕೊಡಲಿ' ಎಂದು. ಕೃಷ್ಣನ ಪ್ರಶ್ನೆ – 'ಆತನು ಸದಾ ನಿದ್ರೆಯಲ್ಲಿರುವುದಾದರೆ ನೀನು ಮಾತನಾಡಿದ್ದು ಅವನಿಗೆ ಹೇಗೆ ಕೇಳಿಸುತ್ತದೆ?' ಎಂದು. ಈ ರೀತಿಯಾಗಿ ಕೃಷ್ಣನು ದೇವರಿಗೆ ನಿದ್ರೆ ಇಲ್ಲ ಎಂಬುದನ್ನು ಯಶೋದೆಯಿಂದ ಒಪ್ಪಿಸಿದನು. ಎಲ್ಲರೂ ಇದನ್ನು ತಿಳಿಯಬೇಕು. ಏನೆಂದರೆ, ಮಲಗುವ ಪ್ರತಿಯೊಬ್ಬನೂ ಎಚ್ಚರದಿಂದಲೇ ಮಲಗಬೇಕು ಎಂದು.

**ಲೋಲತ್ ಕಂಕಣಪಾಣಿಪದ್ಮಧೃತಯಾ ನೀಲೋಚ್ಚಲತ್ ಕುಂತಲಾ**
**ಬಾಲಾಃ ಸ್ರಸ್ತದುಕೂಲಹಾರವಲಯಾ ಮೌಲಿಸ್ಖಲನ್ ಮಲ್ಲಿಕಾಃ।**
**ಲೋಲಾಂಗ್ಯಃ ಕ್ವಣದಂಘ್ರಿಭೂಷಣಗಣಾ ಈಷತ್ ಚಲತ್ಕುಂಡಲಾಃ**
**ವ್ಯಾಲೋಲಂ ಸಹ ದೋಲಯಾ ಮೃಗದೃಶಃ ಕೃತ್ವೋಪನಿನ್ಯುಃ ಪ್ರಿಯಮ್ ೧೪**

**ಲೋಲತ್** = ಅಲುಗಾಡುವ, **ಕಂಕಣ** = ಬಳೆಗಳುಳ್ಳ, **ಪಾಣಿಪದ್ಮ** = ಕರಕಮಲದಿಂದ, **ಧೃತಯಾ** = ಹಿಡಿಯಲ್ಪಟ್ಟ, **ನೀಲ** = ಕಪ್ಪಾದ, **ಉಚ್ಚಲತ್** = ಕಂಪಿಸುವ, **ಕುಂತಲಾ** = ತಲೆಕೂದಲುಳ್ಳ, **ಬಾಲಾಃ** = ಗೋಪಿಯರು, **ಸ್ರಸ್ತ** = ಅಲುಗಾಡುವ, **ದುಕೂಲ** = ವಸ್ತ್ರವು, **ಹಾರ** = ಆಭರಣಗಳು, **ವಲಯಾ** = ಬಳೆಗಳುಳ್ಳ, **ಮೌಲಿ** = ತಲೆಯಿಂದ, **ಸ್ಖಲನ್** = ಬೀಳುತ್ತಿರುವ, **ಮಲ್ಲಿಕಾಃ** = ಮಲ್ಲಿಗೆ ಹೂಗಳುಳ್ಳ, **ಲೋಲಿ** = ಹಿಂದೆ ಮುಂದೆ ಅಲಗಾಡುತ್ತಿರುವ, **ಅಂಗ್ಯಃ** = ಶರೀರವುಳ್ಳ, **ಕ್ವಣತ್** = ಧ್ವನಿಮಾಡುವ, **ಅಂಘ್ರಿ** = ಕಾಲುಗಳ, **ಭೂಷಣಗಣಾ** = ಆಭರಣಗಳ ಸಮೂಹವುಳ್ಳ, **ಈಷತ್** = ಸ್ವಲ್ಪವಾಗಿ (ಮೆಲ್ಲನೆ), **ಚಲತ್** = ಚಲಿಸುವ, **ಕುಂಡಲಾಃ** = ಕರ್ಣಾಭರಣಗಳುಳ್ಳ, **ವ್ಯಾಲೋಲಂ** = ಚಂಚಲವನ್ನಾಗಿ, **ಸಹ** = ಕೂಡಿಕೊಂಡು, **ದೋಲಯಾ** = ತೊಟ್ಟಿಲಿನಿಂದ, **ಮೃಗ** = ಜಿಂಕೆಯ, **ದೃಶಃ** = ಕಣ್ಣುಗಳುಳ್ಳ, **ಕೃತ್ವಾ** = ಮಾಡಿ, **ಉಪನಿನ್ಯುಃ** = ಸಮೀಪಕ್ಕೆ ತಂದರು, **ಪ್ರಿಯಮ್** = ಪ್ರಿಯನಾದ ಕೃಷ್ಣನನ್ನು.

ಬಹಳ ಬಾಲೆಯರು ತೊಟ್ಟಿಲನ್ನು ತೂಗುತ್ತಿದ್ದರು. ತೊಟ್ಟಿಲು ತೂಗುವ ರಭಸದಲ್ಲಿ ನೀಳವಾದ ತಲೆಗೂದಲು ಅಲುಗಾಡುತ್ತಿದೆ. ಉಟ್ಟ ಬಟ್ಟೆ, ತೊಟ್ಟ ಆಭರಣ, ಬಳೆಗಳು ಅಲುಗಾಡುತ್ತಿವೆ. ತಲೆಯಿಂದ ಪುಷ್ಪಗಳು ಉದುರುತ್ತಿವೆ. ಶರೀರವೇ ಅಲುಗಾಡುತ್ತಿದೆ. ಕಾಲುಗೆಜ್ಜೆ ಮೊದಲಾದವುಗಳು ಶಬ್ದ ಮಾಡುತ್ತಿವೆ. ಕರ್ಣಕುಂಡಲ ಸ್ವಲ್ಪ ಅಲುಗುತ್ತಿದೆ. ಇಂತಹ ಹರಿಣಾಕ್ಷಿಯರು ತಮ್ಮ ಅಲಂಕೃತ ಕೈಗಳಿಂದ ತೊಟ್ಟಿಲಲ್ಲಿದ್ದ ಕೃಷ್ಣನನ್ನು ಚಂಚಲನನ್ನಾಗಿ ಮಾಡಿದರು. ಅಲಂಕೃತ ಸ್ತ್ರೀಯರ ಹಾವಭಾವಗಳಿಗೆ ಎಂತಹ ಪುರುಷರೂ ಚಂಚಲರಾಗುತ್ತಾರೆ ಎಂದು ಅಭಿಪ್ರಾಯ. ಸುವರ್ಣ(ಅಕ್ಷರ, ವೇದ)ಗಳಿಂದ ಅಲಂಕೃತ-ರಾದವರಿಗೆ ದೇವರು ವಶನಾಗುತ್ತಾನೆ ಎಂದು ಸಂದೇಶ.

**ಯೇ ವೈ ವಿಟ್ಠಲಸೇವಕಾಃ ಶುಭಧಿಯಸ್ತೇಷಾಂ ಸ ಲಭ್ಯಸ್ತ್ವಿತಿ**
**ಪ್ರಾಯೋ ಜ್ಞಾಪಯಿತುಂ ಮುರದ್ವಿಷಮಿತಃ ಸಂಪ್ರಾಪಯಂತ್ಯೇಕದಾ ।**
**ಅನ್ಯೇಷಾಂ ಸ ಹಿ ದೂರಗಸ್ತ್ವಿತಿ ತತಃ ಪ್ರಾಪ್ತಂ ಚ ತಂ ಕುರ್ವತೀ**
**ದೋಲಾ ಸಾ ಮಣಿಮಂಡಿತಾ ವಿಜಯತೇ ಸ್ವಾನಂದಮೂರ್ತೇಃ**
**ಶಿಶೋಃ ॥೧೫॥**

**ಯಃ ವೈ** = ಯಾರು, **ವಿಟ್ಠಲಸೇವಕಾಃ** = ದೇವರ ಸೇವಕರು, **ಶುಭಧಿಯಃ** = ಒಳ್ಳೆಯ ಬುದ್ಧಿಯುಳ್ಳವರು, **ತೇಷಾಂ** = ಅವರಿಗೆ, **ಸಃ** = ದೇವರು. **ಲಭ್ಯಃ** = ಸಿಗುವನು, **ತು ಇತಿ** = ಎಂದು, **ಪ್ರಾಯಃ** = ಬಹುಶಃ, **ಜ್ಞಾಪಯಿತುಂ** = ತಿಳಿಸಲು, **ಮುರದ್ವಿಷಮ್** = ದೇವರನ್ನು, **ಇತಃ** = ಸಮೀಪಕ್ಕೆ, **ಸಂಪ್ರಾಪಯನ್** = ಒಯ್ಯುತ್ತಾ, **ಏಕದಾ** = ಒಮ್ಮೆ, **ಅನ್ಯೇಷಾಂ** = ಬೇರೆಯವರಿಗೆ, **ಸಃ ಹಿ** = ಆ ದೇವರು, **ದೂರಗಃ** = ದೂರದಲ್ಲಿ ಇರುವವನು, **ತು ಇತಿ** = ಎಂದು, **ತತಃ** = ಅಲ್ಲಿಂದ, **ಪ್ರಾಪ್ತಂ** = ದೂರಹೋದ-ವನನ್ನಾಗಿ, **ತಂ** = ದೇವರನ್ನು, **ಕುರ್ವತೀ** = ಮಾಡುವ, **ದೋಲಾ** = ತೊಟ್ಟಿಲು, **ಸಾ** = ಆ, **ಮಣಿಮಂಡಿತಾ** = ಮಣಿಗಳಿಂದ ಅಲಂಕೃತವಾದ, **ವಿಜಯತೇ** = ಉತ್ಕೃಷ್ಟವಾಗಿದೆ, **ಸ್ವಾನಂದ** = ಸ್ವರೂಪಾನಂದವೇ, **ಮೂರ್ತೇಃ** = ಶರೀರವಾಗಿ ಉಳ್ಳ, **ಶಿಶೋಃ**= ಮಗು-ವಿನ.

ತೊಟ್ಟಿಲಿನ ಹಗ್ಗವನ್ನು ಹಿಡಿದು ಸಮೀಪಕ್ಕೆ ಎಳೆದಾಗ ತೊಟ್ಟಿಲು ದೇವರನ್ನು ನಮ್ಮ ಸಮೀಪಕ್ಕೆ ತರುತ್ತದೆ. ಹಗ್ಗವನ್ನು ಬಿಟ್ಟಾಗ ದೇವರನ್ನು ದೂರಕ್ಕೆ ಒಯ್ಯುತ್ತದೆ. ಇದು ಸಹಜವಾದ ಪ್ರಕ್ರಿಯೆ. ಇದನ್ನು ರಾಜರು ಶಾಸ್ತ್ರೀಯವಾಗಿ ವರ್ಣಿಸುತ್ತಾರೆ. ತೊಟ್ಟಿಲಲ್ಲಿ-ರುವವ ವಿಟ್ಠಲ. ಅಂದರೆ ಜ್ಞಾನಶೂನ್ಯರಿಗೆ ಜ್ಞಾನವನ್ನು ಕೊಡುವವ ಎಂದರ್ಥ. ಸಾತ್ವಿಕರಾದ ಜೀವರು ಸರಪಳಿಗಳೆಂಬ ವೇದಗಳನ್ನು ತಮ್ಮತ್ತ ಎಳೆಯುವುದೇ ದೇವರ ಸೇವೆ

ಮಾಡುವುದು. ಇಂತಹ ಸೇವಕರಿಗೆ ದೇವರು ಸಿಗುತ್ತಾನೆ ಎಂದು ತೊಟ್ಟಿಲು ಸಮೀಪ ಬರುವುದರ ಸಂಕೇತ. ಹಾಗೆಯೇ ವೇದಗಳೆಂಬ ಸರಪಳಿಗಳನ್ನು ಬಿಟ್ಟರೆ ತೊಟ್ಟಿಲು ದೂರ ಹೋಗುವ ಮೂಲಕ ದೇವರು ದೂರ ಎಂದು ತಿಳಿಸುತ್ತದೆ. ಆದರೂ ತೊಟ್ಟಿಲಿನ ಮಗು ಸಂತೋಷದಲ್ಲಿಯೇ ಇರುತ್ತದೆ. ಅಂದರೆ, ದೇವರು ಸ್ವರಮಣ. ಯಾರು ಹಿಡಿದರೂ ಬಿಟ್ಟರೂ ದೇವರು ಒಂದೇ ರೀತಿ ಇರುತ್ತಾನೆ. ಪುನಃ ಸರಪಳಿ ಹಿಡಿದು ಎಳೆದರೆ ಬರುತ್ತಾನೆ. ತನ್ನನ್ನು ಇವರು ಒಮ್ಮೆ ತ್ಯಾಗ ಮಾಡಿದ್ದಾರೆ ಎಂದು ಸಿಟ್ಟಾಗದೆ ಭಕ್ತರ ಅಪರಾಧವನ್ನು ಸಹಿಸಿಕೊಂಡು ಪುನಃ ಬರುತ್ತಾನೆ. ಭಕ್ತರಿದ್ದಲ್ಲಿಗೆ ಬಂದು ಅನುಗ್ರಹಿಸುತ್ತಾನೆ. ಈ ರೀತಿ-ಯಾಗಿ ನವರತ್ನಗಳಿಂದ ಅಲಂಕೃತವಾದ ದೇವರ ತೊಟ್ಟಿಲು ಶೋಭಿಸುತ್ತಿದೆ.

ನಾಲ್ಕು ಸರಪಳಿಗಳು ಎಂದರೆ, ನಾಲ್ಕು ಪುರುಷಾರ್ಥಗಳು. ತೊಟ್ಟಿಲಿನ ದೇವರು ನಮ್ಮಲ್ಲಿ ಕೇಳುತ್ತಾನೆ. 'ಪುರುಷಾರ್ಥ ಬೇಕಾ? ನಾನು ಬೇಕಾ?' ಎಂದು. ಪುರುಷಾರ್ಥ ಬೇಕು ಎಂದು ನಾಲ್ಕು ಸರಪಳಿಗಳನ್ನು ಒಟ್ಟಿಗೆ ಹಿಡಿದು ನಮ್ಮ ಕಡೆ ಎಳೆದರೆ ತೊಟ್ಟಿಲು ದೂರ ಹೋಗುತ್ತದೆ. ಆಗ ದೇವರೂ 'ನಾನು ನಿಮಗೆ ದೂರ' ಎಂದು ದೂರ ಹೋಗು-ತ್ತಾನೆ. ಪುರುಷಾರ್ಥ ಬೇಡ ಎಂದು ಸರಪಳಿಗಳನ್ನು ಒಟ್ಟಿಗೆ ದೂರ ಮಾಡಿದರೆ ತೊಟ್ಟಿಲು ಸಮೀಪ ಬಂದು 'ನಾನು ನಿಮಗೆ' ಎಂದು ಸಮೀಪ ಬರುತ್ತಾನೆ. ಆದ್ದರಿಂದ ಯಾವುದೋ ಫಲದ ಆಸೆಯಿಂದ ದೇವರನ್ನು ಭಜಿಸಬಾರದು. ನಿಷ್ಕಾಮದಿಂದ ದೇವರನ್ನು ಭಜಿಸಬೇಕು.

ಸ್ತನೋತ್ಥದುಗ್ಧೇನ ಸುತೃಪ್ತಮೇನಂ
ನಿರೂಪಯಂತ್ಯಾಃ ಸ ಹರಿರ್ಜಗಂತಿ ।
ಪ್ರದರ್ಶಯಾಮಾಸ ನ ತೃಪ್ತಿರಸ್ಮಾತ್
ಉದಾರದೇಹಸ್ಯ ಮಮೇತಿ ಶಿಕ್ಷನ್ ॥೧೬॥

ಸ್ತನ = ಸ್ತನದಿಂದ, ಉತ್ಥ = ಉಂಟಾದ, ದುಗ್ಧೇನ = ಹಾಲಿನಿಂದ, ಸುತೃಪ್ತಂ = ತೃಪ್ತ-ನನ್ನಾಗಿ, ನಿರೂಪಯಂತ್ಯಾಃ = ತಿಳಿದಿರುವ, ಸಃ = ಆ, ಹರಿಃ = ದೇವರು, ಜಗಂತಿ = ಲೋಕಗಳನ್ನು, ಪ್ರದರ್ಶಯಾಮಾಸ = ತೋರಿಸಿದನು, ನ ತೃಪ್ತಿಃ = ತೃಪ್ತಿ ಇಲ್ಲ, ಅಸ್ಮಾತ್ = ಇದರಿಂದ, ಉದಾರದೇಹಸ್ಯ = ದೊಡ್ಡ ಹೊಟ್ಟೆಯುಳ್ಳ, ಮಮ = ನನಗೆ, ಇತಿ = ಎಂದು, ಶಿಕ್ಷನ್= ತಿಳಿಸುತ್ತಾ .

ತೊಟ್ಟಿಲಿನ ಮಗು ಆಕಳಿಸಿತು. ಆಗ ಯಶೋದೆ ಮಗುವಿನ ಬಾಯಿಯನ್ನು ನೋಡಿ-ದಳು. ಬ್ರಹ್ಮಾಂಡವನ್ನು ಕಂಡಳು. ಕೃಷ್ಣನು ಬಾಯಿಯಲ್ಲಿ ಬ್ರಹ್ಮಾಂಡವನ್ನು ತೋರಿಸಲು

ಕಾರಣ ಇಷ್ಟೇ – ಈ ಯಶೋದೆಯು ಕೃಷ್ಣನಿಗೆ ತನ್ನ ಎದೆಯ ಹಾಲುಣಿಸಿ ಕೃಷ್ಣನ ಹೊಟ್ಟೆಯು ತುಂಬಿತು. ತೃಪ್ತಿಯಾಗಿದೆ ಎಂದು ವಿಪರೀತವಾಗಿ ತಿಳಿಯುತ್ತಿದ್ದಳು. ಅದಕ್ಕೆ ಕೃಷ್ಣನು 'ಅಮ್ಮ, ನನ್ನ ಹೊಟ್ಟೆಯು ಬಹಳ ದೊಡ್ಡದು, ನಿನ್ನ ಎದೆಯ ಹಾಲು ನನಗೆ ಏನೂ ಸಾಲದು' ಎಂದು ತಿಳಿಸಿ ಅವಳ ಭ್ರಾಂತಿಯನ್ನು ಕಳೆದನು (ತೆಗೆದನು).

**ಮುಖೇ ಸ ಲೋಕಾನ್ ಖಲು ಲೋಕಯಿತ್ವಾ**
**ತದಂತರೇಽಂಬಾಂ ಸಗೃಹಾಂ ಸನಾಥಾಮ್ ।**
**ಅಖಂಡಯತ್ ಪುತ್ರಮತಿಂ ಜನನ್ಯಾಮ್**
**ಅಯೋಜಯದ್ ವಿಶ್ವಪಿತೃತ್ವಬುದ್ಧಿಮ್ ॥೧೭॥**

**ಮುಖೇ** = ಬಾಯಿಯಲ್ಲಿ, **ಸಃ** = ಕೃಷ್ಣನು, **ಲೋಕಾನ್** = ಲೋಕಗಳನ್ನು, **ಖಲು** = ಪ್ರಸಿದ್ಧ, **ಲೋಕಯಿತ್ವಾ** = ತೋರಿಸಿ, **ತದಂತರೇ** = ಆ ಲೋಕದ ಮಧ್ಯದಲ್ಲಿ, **ಅಂಬಾಂ** = ತಾಯಿಯನ್ನು, **ಸಗೃಹಾಂ** = ಮನೆಯಿಂದ ಕೂಡಿದ, **ಸನಾಥಾಮ್** = ಕೃಷ್ಣನಿಂದ ಕೂಡಿದ, **ಅಖಂಡಯತ್** = ಹೋಗಲಾಡಿಸಿದನು, **ಪುತ್ರಮತಿಂ** = ಮಗನೆಂಬ ಬುದ್ಧಿಯನ್ನು, **ಜನನ್ಯಾಮ್** = ತಾಯಿಯಲ್ಲಿ, **ಅಯೋಜಯದ್** = ಉಂಟುಮಾಡಿದನು, **ವಿಶ್ವ**= ಜಗತ್ತಿನ, **ಪಿತೃತ್ವ**= ತಂದೆಯೆಂಬ, **ಬುದ್ಧಿಮ್** = ಬುದ್ಧಿಯನ್ನು.

ದೇವರು ತನ್ನ ಬಾಯಿಯಲ್ಲಿ ಜಗತ್ತನ್ನೂ ಅದರಲ್ಲಿ ನಂದಗೋಕುಲವನ್ನೂ ಗೋಕುಲದಲ್ಲಿ ನಂದಗೋಪನ ಮನೆಯನ್ನೂ, ಆ ಮನೆಯಲ್ಲಿ ಯಶೋದೆಯನ್ನೂ ಅವಳ ಪರಿವಾರವನ್ನೂ ತೋರಿಸಿದನು. ಇದನ್ನು ಕಂಡ ಯಶೋದೆಯು ಕೃಷ್ಣ ದೇವರು ತನ್ನ ಮಗನಲ್ಲ. ಈತ ಇಡೀ ಜಗತ್ತಿನ ತಂದೆ ಎಂಬ ತಿಳಿವಳಿಕೆ ಬರುವಂತೆ ಮಾಡಿದನು.

ತನ್ನ ಭಕ್ತರಿಗೆ ಸರಿಯಾದ ತಿಳಿವಳಿಕೆ ಕೊಡುವುದೇ ದೇವರ ಉದ್ದೇಶ.

**ನ ನಾಮ ಕುರ್ವಂತಿ ಮಮೇತಿ ನೂನಂ**
**ಸ ಪೂತನಾದೀನ್ ವಿನಿಹತ್ಯ ಮಾತುಃ ।**
**ಪ್ರದರ್ಶ್ಯ ವಿಶ್ವಂ ಜಠರೇ ಸ್ವಶಕ್ತ್ಯಾ**
**ಬಹೂನಿ ನಾಮಾನಿ ಬಭಾರ ಬಾಲಃ ॥೧೮॥**

**ನ ನಾಮ ಕುರ್ವಂತಿ** = ಹೆಸರನ್ನು ಮಾಡುವುದಿಲ್ಲ, **ಮಮ** = ನನಗೆ, **ಇತಿ** = ಎಂದು, **ನೂನಂ** = ನಿಶ್ಚಯ, **ಸ** = ಕೃಷ್ಣನು, **ಪೂತನಾದೀನ್** = ಪೂತನಾ ಮೊದಲಾದವರನ್ನು, **ವಿನಿಹತ್ಯ** = ಕೊಂದು, **ಮಾತುಃ** = ತಾಯಿಗೆ, **ಪ್ರದರ್ಶ್ಯ** = ತೋರಿ, **ವಿಶ್ವಂ** = ಜಗತ್ತನ್ನು,

**ಜಠರೇ** = ಉದರದಲ್ಲಿ, **ಸ್ವಶಕ್ತ್ಯಾ** = ತನ್ನ ಶಕ್ತಿಯಿಂದ, **ಬಹೂನಿ** = ಬಹಳ, **ನಾಮಾನಿ** = ಹೆಸರುಗಳನ್ನು, **ಬಭಾರ** = ಧರಿಸಿದನು, **ಬಾಲಃ**= ಶಿಶುವು.

ಕೃಷ್ಣನಿಗೆ ನಂದಗೋಪ ಇನ್ನೂ ನಾಮಕರಣ ಮಾಡಲಿಲ್ಲ. ಇದರಿಂದ ಕೃಷ್ಣನು ಸಿಟ್ಟು-ಗೊಂಡವನಂತೆ ತಾನು ಅನೇಕ ಕೆಲಸಗಳ ಮೂಲಕ ಅಂದರೆ ಪೂತನಾದಿಗಳ ಸಂಹಾರದ ಮೂಲಕ **'ಪೂತನಾಜೀವಿತಹರಃ, ಶಕಟಾಸುರಭಂಜನಃ, ತೃಣೀಕೃತತೃಣಾವರ್ತ, ವಿಶ್ವಂಭರಃ'** ಇತ್ಯಾದಿ ನಾಮಗಳನ್ನು ಧರಿಸಿದನು. ಜನರು ಈ ಹೆಸರುಗಳಿಂದ ಕೃಷ್ಣನನ್ನು ಕರೆಯಲು ಆರಂಭಿಸಿದರು. ದೇವರನ್ನು ಸಹಸ್ರನಾಮಗಳಿಂದ ಕರೆದಾಗ ತೃಪ್ತನಾಗು-ತ್ತಾನೆ.

**ಅಥೈತ್ಯ ಗರ್ಗಃ ಕಿಲ ರಾಮಕೃಷ್ಣೌ**
**ಚಕಾರ ನಾಮ್ನಾ ವಿನತೌ ಸುತೌ ತೌ ।**
**ಅಹಂ ತು ಮನ್ಯೇ ಚಕಿತಸ್ತದೀಯ**
**ಗುರುತ್ವಕೀರ್ತ್ಯಾ ಜಗೃಹೇ ತದಾಖ್ಯಾಮ್ ॥೧೯॥**

**ಅಥ** = ಅನಂತರ, **ಏತ್ಯ** = ಬಂದು, **ಗರ್ಗಃ** = ಗರ್ಗಾಚಾರ್ಯರು, **ಕಿಲ** = ಪ್ರಸಿದ್ಧ, **ರಾಮಕೃಷ್ಣೌ** = ರಾಮಕೃಷ್ಣರನ್ನು, **ಚಕಾರ** = ಮಾಡಿದರು, **ನಾಮ್ನಾ** = ಹೆಸರಿನಿಂದ, **ವಿನತೌ** = ವಿನೀತರಾದ, **ಸುತೌ** = ಮಕ್ಕಳಾದ, **ತೌ** = ಆ, **ಅಹಂ ತು** = ನಾನಾದರೂ, **ಮನ್ಯೇ** = ತಿಳಿಯುತ್ತೇನೆ, **ಚಕಿತಃ** = ಭಯಗೊಂಡವರಾಗಿ, **ತದೀಯ** = ರಾಮಕೃಷ್ಣರ, **ಗುರುತ್ವ** = ಗುರುವಾಗುವಿಕೆಯ, **ಕೀರ್ತ್ಯಾ** = ಹೇಳುವಿಕೆಯಿಂದ, **ಜಗೃಹೇ** = ಸ್ವೀಕರಿಸಿದರು, **ತದಾಖ್ಯಾಮ್** = ಅವರ ಹೆಸರನ್ನು.

ಗರ್ಗಾಚಾರ್ಯರು ಯಾದವರ ಪುರೋಹಿತರು. ಇವರು ಒಂದು ದಿನ ಗೋಕುಲಕ್ಕೆ ಬಂದು ಈ ಎರಡು ಮಕ್ಕಳ ಕಿವಿಯಲ್ಲಿ ರಾಮ-ಕೃಷ್ಣ ಎಂಬ ನಾಮವನ್ನು ಉಚ್ಚರಿಸುವ ಮೂಲಕ ನಾಮಕರಣವನ್ನು ಮಾಡಿದರು.

ರಾಜರು ಹೇಳುತ್ತಾರೆ – 'ಇದು ನಾಮಕರಣ ಮಾಡಿದ್ದಲ್ಲ. ಜನರು ಗರ್ಗಾ-ಚಾರ್ಯರನ್ನು ನೋಡಿ ಇವರು ಕೃಷ್ಣನ ಗುರುಗಳು ಎಂದು ಹೇಳುತ್ತಾರೆ. ಇದನ್ನು ಕೇಳಿಸಿ-ಕೊಳ್ಳುವ ಗರ್ಗರಿಗೆ ಪಾಪವು ಬರುತ್ತದೆ. ಆ ಪಾಪದಿಂದ ಮುಕ್ತರಾಗಲು ಗರ್ಗರು ದೇವರ ಮುಂದೆ ಹರಿಸ್ಮರಣೆ ಮಾಡಿದ್ದು. ಹರಿ ಸ್ಮರಣೆ ಮಾಡಿದರೆ ಪಾಪ ಪರಿಹಾರವಾಗುತ್ತದೆ. ಆದ್ದರಿಂದ ನಿತ್ಯವೂ ನಾವು ಮಾಡುವ ಪಾಪದ ಪರಿಹಾರಕ್ಕಾಗಿ 'ಹರೇ ರಾಮ ಹರೇ ರಾಮ ...' ಎಂದು ನಾಮಸ್ಮರಣೆ ಮಾಡಬೇಕು.

**ಅನಂತನಾಮಾಪಿ ಸ ಕೃಷ್ಣಸಂಜ್ಞಾಮ್**
**ಅವಾಪ್ಯ ತುಷ್ಟಃ ಕಿಲ ಗರ್ಗದತ್ತಾಮ್ ।**
**ತಥಾಹಿ ಶಬ್ದೇಷು ಬಹೂದಿತೇಷು**
**ಪ್ರಿಯೇರಿತಃ ಪ್ರೀತಿಕರೋ ಹಿ ಲೋಕೇ ॥೨೦॥**

**ಅನಂತನಾಮಾ ಅಪಿ** = ಬಹಳ ಹೆಸರುಳ್ಳವನಾದರೂ, **ಸಃ** = ಅವನು, **ಕೃಷ್ಣಸಂಜ್ಞಾಮ್** = ಕೃಷ್ಣ ಎಂಬ ಹೆಸರನ್ನು, **ಅವಾಪ್ಯ** = ಹೊಂದಿ, **ತುಷ್ಟಕಿಲ** = ಸಂತೋಷಗೊಂಡನಷ್ಟೇ, **ಗರ್ಗ** = ಗರ್ಗರಿಂದ, **ದತ್ತಾಂ** = ಕೊಡಲ್ಪಟ್ಟ, **ತಥಾಹಿ** = ಇದು ಸರಿ, **ಶಬ್ದೇಷು** = ಶಬ್ದಗಳಲ್ಲಿ, **ಬಹು** = ಬಹಳ ಜನರಿಂದ, **ಉದಿತೇಷು** = ಹೇಳಲ್ಪಟ್ಟಿದ್ದರಲ್ಲಿ, **ಪ್ರಿಯ** = ಪ್ರಿಯರಿಂದ, **ಈರಿತಃ** = ಹೇಳಲ್ಪಟ್ಟದ್ದರಲ್ಲಿ, **ಪ್ರೀತಿಕರಃ** = ಸಂತೋಷವನ್ನುಂಟು ಮಾಡತಕ್ಕದ್ದು, **ಹಿ** = ಪ್ರಸಿದ್ಧ, **ಲೋಕೇ** = ಲೋಕದಲ್ಲಿ.

ಅನಂತವೇದಗಳು ದೇವರ ಅನಂತ ನಾಮಗಳು. ಆದರೂ ದೇವರು ಗರ್ಗಾ-ಚಾರ್ಯರು ಇಟ್ಟ ಕೃಷ್ಣ ಎಂಬ ಹೆಸರನ್ನೇ ತಾನು ಇಟ್ಟುಕೊಂಡ. ಗರ್ಗರು ಪ್ರೀತಿಯಿಂದ ಕೊಟ್ಟ ಹೆಸರು ಇದು. ಲೋಕದಲ್ಲಿಯೂ ಈ ನಿಯಮವು ಇದೆ. ಬಹಳ ಸಂಸ್ಥೆಗಳು ನಮಗೆ ಬಿರುದು ಕೊಟ್ಟಿದ್ದರೂ ನಾವು ರಾಷ್ಟ್ರಪತಿ ಕೊಟ್ಟ ಬಿರುದನ್ನು ಎಲ್ಲರಿಗೂ ಕಾಣುವಂತೆ ಮನೆಯಲ್ಲಿ ತೂಗುಹಾಕುತ್ತೇವೆ. ಬಾಕಿಯದ್ದು ಮೂಲೆಯಲ್ಲಿ ಇರುತ್ತದೆ. ರಾಷ್ಟ್ರಪತಿ ಕೊಟ್ಟದ್ದರಲ್ಲಿ ಪ್ರೀತಿಯಿಲ್ಲದಿದ್ದರೂ ತೂಕ ಇರುತ್ತದೆ.

**ಸಪತ್ನಪತ್ನೀವದನೋಡುರಾಜಂ**
**ಕ್ರಮೇಣ ಯಃ ಕ್ಷೀಣಕಲಂ ಕರೋತಿ ।**
**ಸಿತೇತರಃ ಪಕ್ಷ ಇವರ್ಕ್ಷನಾಥಂ**
**ಗುಣೋಚಿತಾ ತಸ್ಯ ಹಿ ಕೃಷ್ಣಸಂಜ್ಞಾ ॥ ೨೧ ॥**

**ಸಪತ್ನ** = ಶತ್ರುಗಳ, **ಪತ್ನೀ** = ಹೆಂಡತಿಯರ, **ವದನ** = ಮುಖವೆಂಬ, **ಉಡುರಾಜಂ** = ಚಂದ್ರನನ್ನು, **ಕ್ರಮೇಣ** = ಸಾವಕಾಶವಾಗಿ, **ಯಃ** = ಯಾರು, **ಕ್ಷೀಣಕಲಂ** = ನಷ್ಟ-ವಾಗುವ ಕಾಂತಿಯುಳ್ಳದನ್ನಾಗಿ, **ಕರೋತಿ** = ಮಾಡುತ್ತಾನೋ, **ಸಿತ** = ಕಪ್ಪಿಗಿಂತ, **ಇತರಃ** = ಇತರವಾದ ಅಂದರೆ ಬೆಳ್ಳಗಾದ, **ಪಕ್ಷ ಇವ** = ಪಕ್ಷದಂತೆ, **ಋಕ್ಷನಾಥಂ** = ನಕ್ಷತ್ರಗಳಿಗೆ ಒಡೆಯನಾದ ಚಂದ್ರನನ್ನು, **ಗುಣ** = ಗುಣಗಳಿಗೆ, **ಉಚಿತಾ** = ಯೋಗ್ಯವು, **ತಸ್ಯ** = ಅವನಿಗೆ, **ಹಿ** = ಪ್ರಸಿದ್ಧ, **ಕೃಷ್ಣ** = ಕೃಷ್ಣನೆಂಬ, **ಸಂಜ್ಞಾ**= ಹೆಸರು.

ಈ ಅವತಾರದಲ್ಲಿ ದೇವರಿಗೆ ಕೃಷ್ಣ ಎಂಬ ಹೆಸರು ಯೋಗ್ಯವೇ ಆಗಿದೆ. ಕೃಷ್ಣನು ಅನೇಕ ದೈತ್ಯರನ್ನು ಸಂಹಾರ ಮಾಡುತ್ತಾನೆ. ಇದರಿಂದ ಆ ದೈತ್ಯರ ಪತ್ನಿಯರ ಮುಖಚಂದ್ರ

ಕ್ಷೀಣಿಸುತ್ತದೆ. ಕೃಷ್ಣ ಎಂದು ಒಂದು ಪಕ್ಷಕ್ಕೂ ಹೆಸರಿದೆ. ಶುಕ್ಲಪಕ್ಷ-ಕೃಷ್ಣಪಕ್ಷ ಎಂದು ೧೫-೧೫ ದಿನಗಳಿ(ಳ ಗುಂಪಿ)ಗೆ ಹೆಸರಿದೆ. ಕೃಷ್ಣಪಕ್ಷದ ಕೆಲಸ ಚಂದ್ರನನ್ನು ಕ್ಷೀಣಿಸುವುದು. ಆದ್ದರಿಂದ ಈತನಿಗೆ ಕೃಷ್ಣ ಎಂಬ ಹೆಸರು ಸಾರ್ಥಕ.

**ಯತಃ ಸ್ವಸಂದರ್ಶನತೋ ನರಾಣಾಂ**
**ವರಾಂಗನಾನಾಂ ಸುರಚಾರಣಾನಾಮ್ ।**
**ಮನಾಂಸಿ ಸರ್ವಾಣ್ಯಪಕರ್ಷತೀಶಃ**
**ತತೋಽಪಿ ಕೃಷ್ಣಂ ಪ್ರವದಂತಿ ಸಂತಃ ॥ ೨೨ ॥**

**ಯತಃ** = ಯಾವ ಕಾರಣದಿಂದ, **ಸ್ವ** = ತನ್ನ, **ಸಂದರ್ಶನತಃ** = ದರ್ಶನದಿಂದ, **ನರಾಣಾಂ** = ಜನರ, **ವರಾಂಗನಾನಾಂ** = ಉತ್ತಮಸ್ತ್ರೀಯರ, **ಸುರಚಾರಣಾನಾಂ** = ದೇವತೆಗಳ, ಚಾರಣರ, **ಮನಾಂಸಿ** = ಮನಸ್ಸುಗಳನ್ನು(ಹಾಗೂ), **ಸರ್ವಾಣಿ** = ಎಲ್ಲವನ್ನೂ, **ಅಪಕರ್ಷತಿ** = ಸೆಳೆಯುತ್ತಾನೆ, **ಈಶಃ** = ದೇವರು, **ತತಃ ಅಪಿ** = ಆದ್ದರಿಂದಲೂ, **ಕೃಷ್ಣಂ** = ಕೃಷ್ಣನನ್ನಾಗಿ, **ಪ್ರವದಂತಿ** = ಹೇಳುತ್ತಾರೆ, **ಸಂತಃ** = ಸಜ್ಜನರು.

**ಕರ್ಷತಿ ಇತಿ ಕೃಷ್ಣಃ** = ಆಕರ್ಷಣೆ ಉಳ್ಳವ ಆದ್ದರಿಂದ ಕೃಷ್ಣ - ಈ ಕೃಷ್ಣನನ್ನು ಕಂಡಾಗ ಎಲ್ಲರೂ ಬಹಳ ಆಕರ್ಷಿತರಾಗುತ್ತಾರೆ. ಆದ್ದರಿಂದಲೂ ಕೃಷ್ಣ ಎಂಬ ಹೆಸರು ಸಾರ್ಥಕ.

**ಯತಃ ಸ ಪೃಥ್ವೀತಲಸಂಸ್ಥಿತೋಽಪಿ**
**ಸುಖೀ ಧರಣ್ಯಾಃ ಸುಖದಾಯಕಶ್ಚ ।**
**ತತೋಽಪಿ ಕೃಷ್ಣಂ ಪ್ರವದಂತಿ ಕೃಷ್ಣಂ**
**ಸಮುಲ್ಲಸತ್ ಕೇಶವಕೇಶರೂಪಮ್ ॥೨೩॥**

**ಯತಃ** = ಯಾವ ಕಾರಣದಿಂದ, **ಸ** = ಕೃಷ್ಣನು, **ಪೃಥ್ವೀತಲ** = ಭೂಮಿಯಲ್ಲಿ, **ಸಂಸ್ಥಿತಃ ಅಪಿ** = ಇದ್ದವನಾದರೂ, **ಸುಖೀ** = ಸುಖಪೂರ್ಣನು, **ಧರಣ್ಯಾಃ** = ಭೂಮಿಗೆ, **ಸುಖದಾಯಕಶ್ಚ** = ಆನಂದವನ್ನು ಕೊಡುವವನೂ, **ತತಃ ಅಪಿ** = ಆದ್ದರಿಂದಲೂ, **ಕೃಷ್ಣಂ** = ಕೃಷ್ಣನನ್ನು, **ಪ್ರವದಂತಿ** = ಹೇಳುತ್ತಾರೆ, **ಕೃಷ್ಣಂ** = ಕೃಷ್ಣನನ್ನು, **ಸಮುಲ್ಲಸತ್** = ಶೋಭಿಸುವ, **ಕೇಶವ** = ದೇವರ, **ಕೇಶರೂಪಮ್**= ಕೂದಲಿನ ಸ್ವರೂಪನು.

ಕೃಷ್+ಣ – ಕೃಷ್ = ಕೃಷಿಗೆ ಯೋಗ್ಯವಾದ ಭೂಮಿ. ಇಲ್ಲಿ ದುಃಖವೇ ಬಹಳ. ಇಂತಹ ಜಾಗದಲ್ಲಿ ತಾನಿದ್ದರೂ ಣ = ತಾನು ಸುಖರೂಪನೇ. ಯಾವುದೇ ದುಃಖವನ್ನು ಅನುಭವಿಸುವುದಿಲ್ಲ. ಆದ್ದರಿಂದ ಈತನು ಕೃಷ್ಣನು. ಈ ಭೂಮಿಯು ತನ್ನ ದುಃಖವನ್ನು

ಪರಿಹಾರಮಾಡು ಎಂದು ದೇವರಲ್ಲಿ ಮೊರೆ ಇಟ್ಟಿದ್ದಳು. ಅದಕ್ಕಾಗಿ ದೇವರು ಭೂಮಿಗೆ ಬಂದನು. ಆದ್ದರಿಂದ ಭೂಮಿಯ ಅಥವಾ ಭೂಮಿಯಲ್ಲಿದ್ದ ಸಜ್ಜನರ ದುಃಖವನ್ನು ಪರಿಹರಿಸಿ ಸುಖವನ್ನು ಕೊಡುವವನಾದ್ದರಿಂದ ಈತನು ಕೃಷ್ಣನು. ಹಾಗೆಯೇ ಮೂಲ-ರೂಪದ ಕೃಷ್ಣಕೇಶ = ಕಪ್ಪುಕೂದಲಿನ ಅವತಾರ ಈತನು. ಆದ್ದರಿಂದ ಕೃಷ್ಣನು.

**ಯತಶ್ಚ ದೈತೇಯಕದಂಬಕಕ್ಷ-**
**ಚಯಸ್ಯ ವಿಧ್ವಂಸವಿಧೌ ಮುರಾರಿಃ ।**
**ವನಾಗ್ನಿಮನ್ವೇತಿ ಲಯಾಗ್ನಿಕಲ್ಪಂ**
**ತತೋऽಪಿ ಗಾಯಂತಿ ಹಿ ಕೃಷ್ಣಮೇನಮ್ ॥೨೪॥**

**ಯತಃ ಚ** = ಯಾವಕಾರಣದಿಂದ, **ದೈತೇಯ** = ದೈತ್ಯರ, **ಕದಂಬ** = ಸಮೂಹವೆಂಬ, **ಕಕ್ಷ** = ಕಾಡುಗಳ, **ಚಯಸ್ಯ** = ಸಮೂಹಕ್ಕೆ, **ವಿಧ್ವಂಸ** = ನಾಶದ, **ವಿಧೌ** = ಕೆಲಸದಲ್ಲಿ, **ಮುರಾರಿಃ** = ಕೃಷ್ಣನು, **ವನಾಗ್ನಿಮ್** = ಕಾಡಿನ ಬೆಂಕಿಯನ್ನು, **ಅನ್ವೇತಿ** = ಅನುಕರಿಸು-ತ್ತಾನೆ, **ಲಯಾಗ್ನಿ** = ಪ್ರಳಯಕಾಲದ ಬೆಂಕಿಗೆ, **ಕಲ್ಪಂ** = ಸದೃಶನಾದ, **ತತಃ ಅಪಿ** = ಆದ್ದರಿಂದಲೂ, **ಗಾಯಂತಿ** = ಹೇಳುತ್ತಾರೆ, **ಹಿ** = ಪ್ರಸಿದ್ಧ, **ಕೃಷ್ಣಮ್** = ಕೃಷ್ಣನೆಂದು, **ಏನಮ್** = ಇವನನ್ನು.

ದೇವರ ಈ ರೂಪವು ಎಲ್ಲಾ ಅಸುರಸಮೂಹ ಎಂಬ ಕಾಡಿಗೆ ಬೆಂಕಿಯಂತೆ ಇದ್ದಾನೆ. ಆದ್ದರಿಂದ ಪ್ರಳಯಾಗ್ನಿಯಂತೆ ಇರುವ ಈತನನ್ನು ಕೃಷ್ಣ ಎಂದು ಕರೆಯುವುದು ಸಹಜ. ಬೆಂಕಿಗೂ ಕೃಷ್ಣ ಎಂಬ ಹೆಸರಿದೆ.

**ವ್ರಜಾಂಗನಾನಾಂ ಸ್ಮರತಾಂ ಮುನೀನಾಮ್**
**ಅಭೇದ್ಯಹೃದ್ಯಪ್ರಣಯಾಖ್ಯದಾಮ್ನಾ ।**
**ನಿಬದ್ಧಮೃದ್ವಂಘ್ರಿಸರೋಜಯುಗ್ಮಃ**
**ಚಚಾರ ದೋರ್ಭ್ಯಾಂ ಶುಭಜಾನುಯುಗ್ಮ್ಯಾಮ್ ॥೨೫॥**

**ವ್ರಜ** = ನಂದಗೋಕುಲದ, **ಅಂಗನಾನಾಂ** = ಸ್ತ್ರೀಯರ, **ಸ್ಮರತಾಂ** = ಧ್ಯಾನಿಸುವ, **ಮುನೀನಾಮ್** = ಋಷಿಗಳ, **ಅಭೇದ್ಯ** = ತುಂಡು ಮಾಡಲು ಅಸಾಧ್ಯವಾದ, **ಹೃದ್ಯ** = ಚಂದದ, **ಪ್ರಣಯಾಖ್ಯ** = ಪ್ರೀತಿ ಎಂದು ಹೆಸರುಳ್ಳ, **ದಾಮ್ನಾ** = ಹಗ್ಗದಿಂದ, **ನಿಬದ್ಧ** = ಕಟ್ಟಲ್ಪಟ್ಟ, **ಮೃದು** = ಮೆತ್ತಗಿನ, **ಅಂಘ್ರಿ** = ಪಾದಗಳೆಂಬ, **ಸರೋಜಯುಗ್ಮಃ** = ತಾವರೆ-ಗಳ ಜೊತೆಯುಳ್ಳ, **ಚಚಾರ** = ಸಂಚರಿಸಿದನು, **ದೋರ್ಭ್ಯಾಂ** = ಕೈಗಳಿಂದ, **ಶುಭ** = ಒಳ್ಳೆಯ, **ಜಾನು** = ಕಾಲಗಂಟಿನಿಂದ, **ಯುಗ್ಮ್ಯಾಮ್** = ಕೂಡಿದ.

ಕೃಷ್ಣನು ಅಂಬೆಗಾಲಿಡಲು ಆರಂಭಿಸಿದನು. ಅಂಬೆಗಾಲಿಡುವುದು ಮಕ್ಕಳ ಸ್ವಭಾವ. ಅಥವಾ ಯಾರ ಕಾಲುಗಳು ಕಟ್ಟಲ್ಪಟ್ಟಿವೆಯೋ ಅವರೂ ನಡೆಯ(ಮುಂದೆ ಹೋಗ)-ಬೇಕಾದರೆ ಅಂಬೆಗಾಲಿಡುತ್ತಾರೆ. ಕೃಷ್ಣನ ಕಾಲುಗಳನ್ನು ಗೋಪಿಯರು, ಮುನಿಗಳು ತಮ್ಮ ಪ್ರೀತಿಯೆಂಬ ಹಗ್ಗದಿಂದ ದೇವರನ್ನು ಗಟ್ಟಿಯಾಗಿ ಕಟ್ಟಿದ್ದಾರೆ. ಆದ್ದರಿಂದ ನಡೆಯಲಾಗದೆ ಕೃಷ್ಣನು ಕೈಗಳ ಸಹಾಯದಿಂದ ನಡೆಯಲು ಅಂದರೆ ಅಂಬೆಗಾಲಿಡಲು ಆರಂಭಿಸಿದನು.

ಅನೇಕಲೋಕಾನುದರೇ ವಿಧಾಯ
ಯ ಏಷ ಶೇತೇ ಸ್ಮ ಲಯಾಂಬುಮಧ್ಯೇ।
ಶಿಶುಃ ಸ ಸಂದರ್ಶಯಿತುಂ ಸಲಜ್ಜಃ
ಕೃಶೋದರಂ ಜಾನುಚರೋ ಬಭೂವ ॥ ೨೬ ॥

**ಅನೇಕಲೋಕಾನ್** = ಬಹಳ ಜಗತ್ತುಗಳನ್ನು, **ಉದರೇ** = ಹೊಟ್ಟೆಯಲ್ಲಿ, **ವಿಧಾಯ** = ಇಟ್ಟುಕೊಂಡು, **ಯಃ ಏಷಃ** = ಯಾವ ಇವನು, **ಶೇತೇ** = ಮಲಗಿದ್ದಾನೆ, **ಲಯ** = ಪ್ರಳಯ ಕಾಲದ, **ಅಂಬು** = ನೀರಿನ, **ಮಧ್ಯೇ** = ಮಧ್ಯದಲ್ಲಿ, **ಶಿಶುಃ** = ಮಗುವು, **ಸಃ** = ಆ, **ಸಂದರ್ಶಯಿತುಂ** = ನಾಚಿಕೆಯಿಂದ ಕೂಡಿದ್ದಾಗಿ, **ಸಲಜ್ಜಃ** = ನಾಚಿಕೆಯಿಂದ ಕೂಡಿದ್ದಾಗಿ, **ಕೃಶ** = ಚಿಕ್ಕದಾದ, **ಉದರಂ** = ಹೊಟ್ಟೆಯನ್ನು, **ಜಾನುಚರಃ** = ಜಾನು-ಗಳಿಂದ ಹೋಗುವವನು, **ಬಭೂವ** = ಆದನು.

ಕೃಷ್ಣನು ಹಿಂದೆ ಪ್ರಳಯಕಾಲದಲ್ಲಿ ಎಲ್ಲಾ ಲೋಕಗಳನ್ನೂ ತನ್ನ ಉದರದಲ್ಲಿಟ್ಟು-ಕೊಂಡು ನೀರಿನ ಮಧ್ಯದಲ್ಲಿ ಮಲಗಿದವನು. ಆ ಸಂದರ್ಭದಲ್ಲಿ ಹೊಟ್ಟೆ ದೊಡ್ಡದಿದ್ದಿರ-ಬೇಕು. ಹೊಟ್ಟೆ ದೊಡ್ಡದಿರುವಿಕೆ ಶ್ರೀಮಂತಿಕೆಯ ಲಕ್ಷಣ. ಈಗ ಹೊಟ್ಟೆ ಚಿಕ್ಕದಿದೆ. ಅಂದರೆ ದಾರಿದ್ರ್ಯ ಬಂದಂತೆ. ಮೊದಲು ಶ್ರೀಮಂತರಿದ್ದು ಅನಂತರ ದಾರಿದ್ರ್ಯ ಬಂದರೆ ಅದನ್ನು ತೋರಿಸಲು ಜನ ನಾಚುತ್ತಾರೆ. ದಾರಿದ್ರ್ಯವನ್ನು ಮರೆಮಾಚುತ್ತಾರೆ. ಅದೇ ರೀತಿ ದೇವರು ತನ್ನ ದಾರಿದ್ರ್ಯಸೂಚಕವಾದ ಚಿಕ್ಕ ಹೊಟ್ಟೆಯನ್ನು ತೋರಿಸಲು ನಾಚಿ ಅದನ್ನು ಅಡಗಿಸುವ ಸಲುವಾಗಿ ತಾನು ಅಂಬೆಗಾಲಿಡಲು ಆರಂಭಿಸಿದನೇನೋ ಎಂಬಂತೆ ಇದೆ. ಅಂಬೆಗಾಲಿ-ಡುವಾಗ ಹೊಟ್ಟೆ ಕೆಳಮುಖವಾಗಿ ಇರುವುದು. ಆಗ ಯಾರಿಗೂ ಕಾಣುವುದಿಲ್ಲ.

ಕರ್ಷನ್ನಂಘ್ರಿಯುಗಂ ಮುನೀಂದ್ರಮನಸಾ ಸಾಕಂ ವ್ರಜಸ್ತ್ರೀದೃಶಾ
ಜಂಬಾಲೇನ ಚ ನೀಲನೀಲಸುತನುರ್ಲೋಲಾಲಕಶ್ರೀಮುಖಃ।

**ಅಂಬಾಂಬೇತಿ ಹಿ ಯಾಮುದೀರ್ಯ ಪಿಬತಿ ಸ್ಮಾಂಕಾಧಿರೂಢಃ ಸ್ತನಂ**
**ಕಿಂ ವಾಽತಪ್ಯತ ಸಾ ತಪೋಽಸ್ಯ ಜನನೀ ಯಸ್ಯೇದಮೀದೃಕ್‌ಫಲಮ್ ॥೨೭**

**ಕರ್ಷನ್** = ಸೆಳೆಯುತ್ತಾ, **ಅಂಘ್ರಿಯುಗಂ** = ಎರಡು ಕಾಲುಗಳನ್ನು, **ಮುನೀಂದ್ರ** = ಋಷಿಶ್ರೇಷ್ಠರ, **ಮನಸಾ** = ಮನಸ್ಸಿನಿಂದ, **ಸಾಕಂ** = ಕೂಡಿಕೊಂಡು, **ವ್ರಜ** = ಗೋಕುಲದ, **ಸ್ತ್ರೀ** = ಗೋಪಿಯರ, **ದೃಶಾ** = ಕಣ್ಣುಗಳಿಂದ, **ಜಂಬಾಲೇನ** = ಕೆಸರಿನಿಂದ, **ನೀಲನೀಲ** = ತುಂಬಾ ಕಪ್ಪಾದ, **ಸುತನುಃ** = ಶರೀರವುಳ್ಳ, **ಲೋಲ** = ಅಲುಗಾಡುವ, **ಆಲಕ** = ಮುಂಗುರುಳುಳ್ಳ, **ಶ್ರೀಮುಖಃ** = ಶೋಭಿಸುವ ಮುಖವುಳ್ಳ, **ಅಂಬ ಅಂಬ** = ಅಮ್ಮಾ, **ಇತಿ ಹಿ** = ಎಂದು, **ಯಾಮ್** = ಯಾರನ್ನು, **ಉದೀರ್ಯ** = ಕರೆದು, **ಪಿಬತಿ ಸ್ಮ** = ಕುಡಿಯುತ್ತಾನೆಯೋ, **ಅಂಕಾಧಿರೂಢಃ** = ತೊಡೆಯನ್ನು ಏರಿದವನಾಗಿ, **ಸ್ತನಂ** = ಹಾಲನ್ನು, **ಕಿಂ ವಾ** = ಎಂತಹ, **ಅತಪ್ಯತ** = ತಪಸ್ಸು ಮಾಡಿದಳೋ, **ಸಾ** = ಆ, **ತಪಃ** = ತಪಸ್ಸನ್ನು, **ಅಸ್ಯ** = ಕೃಷ್ಣನ, **ಜನನೀ** = ತಾಯಿಯು, **ಯಸ್ಯ** = ಯಾವ, **ಇದಮ್** = ಇದು, **ಈದೃಕ್** = ಇಂತಹ, **ಫಲಮ್**= ಫಲವು.

ಕೃಷ್ಣನ ಈ ನಡಿಗೆಯನ್ನು ಋಷಿಗಳು ತಮ್ಮ ಮನಸ್ಸಿನಿಂದ ಚಿಂತಿಸುತ್ತಿದ್ದಾರೆ. ಸ್ತ್ರೀಯರು ನೋಡುತ್ತಿದ್ದಾರೆ. ಸ್ತ್ರೀಯರ ಕಡೆಗಣ್ಣು ಕಪ್ಪಗಿದೆ. ಇಂತಹ ಕಡೆಗಣ್ಣಿನ ನೋಟದಿಂದ ಹಾಗೂ ಅಂಗಳದ ಕೆಸರಿನಿಂದ, ಮೊದಲೇ ಕಪ್ಪಗಿದ್ದ ಕೃಷ್ಣ ಮತ್ತಷ್ಟು ಕಪ್ಪಾಗಿ ತೋರುತ್ತಿದ್ದಾನೆ. ಮುಂಗುರುಳು ಮುಖದಲ್ಲಿ ನಲಿಯುತ್ತಿದೆ. ಇಂತಹ ಮಗು ಯಶೋದೆಯನ್ನು 'ಅಮ್ಮ, ಅಮ್ಮ' ಎಂದು ಕರೆಯುತ್ತಾ ಅವಳ ತೊಡೆಯೇರಿ ಸ್ತನ್ಯಪಾನ ಮಾಡುತ್ತದೆ. ಯಾರಿಗೂ ಸಿಗದ ಈ ಭಾಗ್ಯ ಯಶೋದೆಗೆ ಸಿಕ್ಕಿದೆ. ಯಾವ ಜನ್ಮದ ಪುಣ್ಯವೋ ಏನೋ? ಎಂದು ರಾಜರು ಉದ್ಗಾರವೆತ್ತಿದ್ದಾರೆ. ಇದನ್ನೇ ದಾಸರು ಏನು ಸುಕೃತವ ಮಾಡಿದಳು ತಾ ಯಶೋದೆ ಎಂದು ಉದ್ಗಾರವೆತ್ತಿದ್ದಾರೆ.

**ವೈಗುಣ್ಯಂ ವಿವಿಧೋದಯೈರ್ವಿಮೃಶತಾಂ ವಿತ್ತೈರ್ಜಗದ್ಬಾಧ್ಯತಾಂ**
**ವೈರೂಪ್ಯಂ ನಿಜತೇಜಸಾ ನಿರುಪಮೈರಂಗೈರ್ನಿರಾಕಾರತಾಮ್ ।**
**ನೀಚೈಕ್ಯಂ ಚ ನಿರಸ್ಯ ನಿರ್ಮಲಧಿಯಾಂ ನಿತ್ಯಾರ್ಚಯಾ ವಿಟ್ಠಲೋ**
**ದಿಗ್ಭಿನ್ನಾಂಬರಧಿಕ್ಕ್ರಿಯಾರ್ಥಮಭವದ್ದಿಗ್ವಸ್ತ್ರತಾಂ ದೀಪಯನ್ ॥ ೨೮ ॥**

**ವೈಗುಣ್ಯಂ** = ನಿರ್ಗುಣತ್ವವನ್ನು, **ವಿವಿಧೋದಯೈಃ** = ನಾನಾರೀತಿಯ ಕೆಲಸಗಳ ಪ್ರಕಟನೆಯಿಂದ, **ವಿಮೃಶತಾಂ** = ಸ್ಮರಿಸುವವರಿಗೆ, **ವಿತ್ತೈಃ** = ದ್ರವ್ಯಾದಿಗಳಿಂದ, **ಜಗದ್** = ಜಗತ್ತಿಗೆ, **ಬಾಧ್ಯತಾಂ** = ಬಾಧ್ಯತ್ವವನ್ನು, **ವೈರೂಪ್ಯಂ** = ಬಣ್ಣ ಇಲ್ಲದಿರುವಿಕೆಯನ್ನು, **ನಿಜ** = ತನ್ನ, **ತೇಜಸಾ** = ರೂಪದಿಂದ, **ನಿರುಪಮೈಃ** = ಸಾಟಿ ಇಲ್ಲದ, **ಅಂಗೈಃ** =

ಅವಯವಗಳಿಂದ, **ನಿರಾಕಾರತಾಮ್** = ಆಕಾರ ಇಲ್ಲದಿರುವಿಕೆಯನ್ನು, **ನೀಚೈಕ್ಯಂ** = ನೀಚ ಜೀವರಿಂದ ಐಕ್ಯವನ್ನು, **ಚ** = ಕೂಡ, **ನಿರಸ್ಯ** = ಹೋಗಲಾಡಿಸಿ, **ನಿರ್ಮಲ** = ಶುದ್ಧವಾದ, **ಧಿಯಾಂ** = ಬುದ್ಧಿಯುಳ್ಳ ಋಷಿಗಳ, **ನಿತ್ಯಾರ್ಚಯಾ** = ನಿತ್ಯಸೇವೆ-ಯಿಂದ, **ವಿಟ್ಠಲ** = ಕೃಷ್ಣನು, **ದಿಕ್** = ದಿಕ್ಕಿಗಿಂತ, **ಭಿನ್ನ** = ಬೇರೆಯಾದ, **ಅಂಬರ** = ಆಕಾಶವನ್ನು, **ಧಿಕ್ ಕ್ರಿಯಾರ್ಥಮ್** = ಖಂಡಿಸುವುದಕ್ಕೋಸ್ಕರ, **ಅಭವದ್** = ಆದನು, **ದಿಗ್ವಸ್ತ್ರತಾಂ** = ದಿಗಂಬರತ್ವವನ್ನು, **ದೀಪಯನ್**= ತಿಳಿಸುತ್ತಾ.

ಕೃಷ್ಣನು ತನ್ನ ಈ ಬಾಲರೂಪಾದಿಗಳಿಂದ ಅನೇಕ ಮತಗಳನ್ನು ಖಂಡಿಸುತ್ತಾನೆ ಎಂದು ತಿಳಿಸುತ್ತಾರೆ ರಾಜರು. ಅದ್ವೈತಿಗಳು ದೇವರನ್ನು ನಿರ್ಗುಣ, ನಿರಾಕಾರನನ್ನಾಗಿ ಹೇಳುತ್ತಾರೆ. ಕೃಷ್ಣನು ತನ್ನ ಪರಾಕ್ರಮಗಳಿಂದ, ಹಾಗೇ ಸೌಂದರ್ಯದಿಂದಾಗಿ ಈ ವಿಚಾರವನ್ನು ಖಂಡಿಸಿದನು. ಪರಬ್ರಹ್ಮನಾದ ಕೃಷ್ಣನಲ್ಲಿಯೇ ಇದನ್ನು ಪ್ರತ್ಯಕ್ಷವಾಗಿ ಎಲ್ಲರೂ ನೋಡು-ತ್ತಿದ್ದಾರೆ. ಪ್ರತ್ಯಕ್ಷಸಿದ್ಧವಾದುದನ್ನು ಅಪಲಾಪ ಮಾಡಲು ಸಾಧ್ಯವಿಲ್ಲ. ಈ ಪ್ರತ್ಯಕ್ಷಕ್ಕೆ ಬಾಧವೂ ಇಲ್ಲ. ಕೃಷ್ಣನೂ ಬ್ರಹ್ಮ ಎಂಬ ವಿಷಯದಲ್ಲಿ ಸಂಶಯ ಕೂಡದು. ಏಕೆಂದರೆ, ಅನೇಕ ಜ್ಞಾನಿಗಳು ನಿತ್ಯದಲ್ಲಿಯೂ ಈ ಕೃಷ್ಣನನ್ನು ಅರ್ಚಿಸುತ್ತಿದ್ದಾರೆ. ಇವರಿಗೆ ಅಜ್ಞಾನಾ-ದಿಗಳು ಇಲ್ಲ. ಇವರು ಅಪರೋಕ್ಷಜ್ಞಾನಿಗಳು. ಇವರು ದೇವಕಿಯ ಗರ್ಭವನ್ನು ಪ್ರವೇಶಿಸಿ ''ಹೇ ಕೃಷ್ಣ! ನೀನು ಸರ್ವೋತ್ತಮ. ನೀಚರಾದ ನಮಗಿಂತ ಭಿನ್ನ' ಎಂದು ಪೂಜಿಸಿದ್ದಾರೆ. ಆದ್ದರಿಂದ ಮಾಯಾ ಬ್ರಹ್ಮರಾದ ಜೀವರಿಂದ ಭಿನ್ನ ಎಂದೂ, ಪರಬ್ರಹ್ಮ ಎಂದೂ ಸಿದ್ಧವಾಗುತ್ತದೆ.

''ಈ ಜಗತ್ತು ಬಾಧಿತ. ಶುಕ್ತಿರಜತದಂತೆ. (ಕಪ್ಪೆ)ಚಿಪ್ಪಿನಲ್ಲಿ ಬೆಳ್ಳಿ ತೋರಿದಂತೆ. ಚಿಪ್ಪು ಕಾಣದಿರುವಾಗ ನಮಗೆ ಅದು ಬೆಳ್ಳಿಯಾಗಿ ತೋರುತ್ತದೆ. ಚಿಪ್ಪು ಚಿಪ್ಪಾಗಿ ಕಂಡರೆ ಬೆಳ್ಳಿ ತೋರುವುದಿಲ್ಲ. ಆಗ ಬೆಳ್ಳಿಯು ಬಾಧಿತವಾಯಿತು ಎಂದು ಹೇಳುತ್ತೇವೆ. ಅದೇ ರೀತಿ ಜಗತ್ತು ತೋರುವುದು ಮಾತ್ರ. ವಸ್ತುತಃ ಇಲ್ಲ. ನಮಗೆ ಈಗ ದೇವರು ತೋರುವುದಿಲ್ಲ. ಆದ್ದರಿಂದ ಜಗತ್ತು ತೋರುತ್ತದೆ. ದೇವರು ತೋರಿದರೆ ಜಗತ್ತು ನಿಜವಾಗಿ ಇಲ್ಲ ಎಂದಾಗುತ್ತದೆ'' ಎಂದು ಅದ್ವೈತಿಗಳ ವಾದ. ಇವರ ಈ ವಾದವನ್ನು ದೇವರು ಸುಳ್ಳಾಗಿ-ಸಿದ. ಕೃಷ್ಣನನ್ನು ನೋಡಿದ್ದರಿಂದಲೇ ಗೋಪರಿಗೆ ಬಹಳ ಸಂಪತ್ತು ಬಂದಿತ್ತು. ಈ ಸಂಪತ್ತನ್ನು ಉಪಯೋಗಿಸಿಕೊಂಡು ಆನಂದವನ್ನು ಪಡೆದರು. ಆದ್ದರಿಂದ ಈ ಸಂಪತ್ತು ಸುಳ್ಳಲ್ಲ. ದೇವರಿಗೆ ಬಣ್ಣ ಇಲ್ಲ ಎಂದು ಅವರ ಇನ್ನೊಂದು ವಾದ. ಕೃಷ್ಣನು ತನ್ನ ಕೆಂಪಾದ ತುಟಿಗಳಿಂದ, ಹಸ್ತಪಾದತಲಗಳಿಂದ ಹಾಗೆಯೇ ಬಿಳಿಯಾದ ಉಗುರುಗಳಿಂದ, ದಂತ-ಪಂಕ್ತಿಗಳಿಂದ, ಕಪ್ಪಾದ ಕೂದಲಿನಿಂದ, ಮೈಬಣ್ಣದಿಂದ ತನಗೆ ಬಣ್ಣ ಇದೆ ಎಂದು

ತೋರಿಸಿದನು. ಈ ಬಣ್ಣವನ್ನೂ ಜ್ಞಾನಿಗಳೇ ಕಂಡದ್ದರಿಂದ ಇದು ಸುಳ್ಳಲ್ಲ. ಒಳ್ಳೆ ಹಸ್ತಾದಿ-ಅವಯವಗಳಿಂದ ತನಗೆ ಆಕಾರ ಇದೆ. ತಾನು ನಿರಾಕಾರನಲ್ಲ ಎಂಬುದನ್ನು ತೋರಿಸಿದ. ದೇವಕಿಯ ಗರ್ಭದಲ್ಲಿ ತಾನು ಇರುವಾಗ ಅಲ್ಲಿಗೆ ಸಮಸ್ತದೇವತೆಗಳೂ ಬಂದು ದೇವರನ್ನು ಪ್ರಾರ್ಥಿಸಿದ್ದರು. ಹಾಗೆಯೇ ಅವತಾರದ ಅನಂತರವೂ ಆಗಾಗ ಎಲ್ಲಾ ಜೀವರೂ ಪೂಜಿಸುತ್ತಾ ಇದ್ದುದರಿಂದ ಜೀವಬ್ರಹ್ಮೈಕ್ಯವನ್ನೂ ಖಂಡಿಸಿದನು. ಯಾರೂ ಕೂಡಾ ತನ್ನನ್ನು ತಾನು ಪೂಜಿಸುವುದಿಲ್ಲ. ಇನ್ನು ತಾರ್ಕಿಕರ ಮತವನ್ನು ಖಂಡಿಸಿದನು. ತಾರ್ಕಿಕರು ಪದಾರ್ಥವಾದಿಗಳು. ಆಕಾಶ ಹಾಗೂ ದಿಕ್ಕುಗಳು ಭಿನ್ನ ಪದಾರ್ಥಗಳು ಎಂದರು. ಇದು ತಪ್ಪು. ಆಕಾಶವೂ ದಿಕ್ಕು ಒಂದೇ. ಆಕಾಶ ಎಂದರೂ ಅಂಬರ ಎಂದರೂ ಒಂದೇ. ದಿಕ್ಕೇ ಅಂಬರ ಎಂದು ತಿಳಿಸಲು ತಾನು ದಿಗಂಬರನಾದ. ಇದು ರಾಜರ ಗ್ರಂಥದ ವೈಶಿಷ್ಟ್ಯ. ಮಧ್ವಶಾಸ್ತ್ರದ ಸಮಗ್ರಸಾರವನ್ನು ಒಂದೇ ಶ್ಲೋಕದಲ್ಲಿ ತುಂಬಿದ್ದಾರೆ.

**ಗೋಪೀಗೃಹಾಂಗಣತಲೇ ರಣದಂಘ್ರಿವೇಷೋ**
**ಗೋವತ್ಸಕೈಃ ಸಹ ಚರನ್ ರಜಸಾಽನುಷಕ್ತಃ।**
**ದೇಹಾಭಿಮಾನರಹಿತೈರ್ದಿವಿ ಸಂಸ್ತುವದ್ಭಿಃ**
**ದೇವೈಶ್ಚ ದೃಶ್ಯವಿಭವೋ ದಯಿತಾಸಮೇತೈಃ ॥ ೨೯ ॥**

**ಗೋಪೀ** = ಯಶೋದೆಯ, **ಗೃಹ** = ಮನೆಯ, **ಅಂಗಣತಲೇ** = ಅಂಗಳದಲ್ಲಿ, **ರಣತ್** = ಶಬ್ದ ಮಾಡುವ, **ಅಂಘ್ರಿ** = ಕಾಲಿನ, **ವೇಷಃ** = ಆಭರಣವುಳ್ಳ, **ಗೋ** = ಆಕಳಿನ, **ವತ್ಸಕೈಃ** = ಕರುಗಳಿಂದ, **ಸಹ** = ಕೂಡಿಕೊಂಡು, **ಚರನ್** = ಸಂಚರಿಸುತ್ತಾ, **ರಜಸಾ** = ಧೂಳಿನಿಂದ, **ಅನುಷಕ್ತಃ** = ಕೂಡಿದವನಾಗಿ, **ದೇಹ** = ಶರೀರದ, **ಅಭಿಮಾನ** = ಅಭಿ-ಮಾನದಿಂದ, **ರಹಿತೈಃ** = ರಹಿತರಾದ, **ದಿವಿ** = ಸ್ವರ್ಗದಲ್ಲಿ, **ಸಂಸ್ತುವದ್ಭಿಃ** = ಹೊಗಳುವ, **ದೇವೈಃ ಚ** = ದೇವತೆಗಳಿಂದಲೂ, **ದೃಶ್ಯ** = ಗೋಚರಿಸುವ, **ವಿಭವಃ** = ವೈಭವವುಳ್ಳ, **ದಯಿತಾ** = ಪತ್ನಿಯರಿಂದ, **ಸಮೇತೈಃ** = ಕೂಡಿದ.

ಈ ಕೃಷ್ಣನು ಯಶೋದೆಯ ಮನೆಯ ಅಂಗಳದಲ್ಲಿ ಆಡುತ್ತಿದ್ದಾನೆ. ಜೊತೆಯಲ್ಲಿ ಕರುಗಳೂ ಇವೆ. ಕಾಲಿನ ಗೆಜ್ಜೆ ಶಬ್ದ ಮಾಡುತ್ತಿದೆ. ಮೈತುಂಬಾ ಧೂಳಾಗಿದೆ. ಆಕಾಶದಲ್ಲಿ ದೇವತೆಗಳು ತಮ್ಮ ಪತ್ನಿಯರಿಂದ ಕೂಡಿಕೊಂಡು ಮೈಮರೆತು ನೋಡುತ್ತಿದ್ದಾರೆ. ಇಂತಹ ಕೃಷ್ಣನು ಎನ್ನ ಹೃದಯದಲ್ಲೂ ಕಾಣಲಿ.

**ಶಾರ್ದೂಲರಮ್ಯನಖರಂಜಿತಕಂಠದೇಶಃ**
**ಸಾಸೂಯದಾನವನಿಕಾಯವನೇ ಹುತಾಶಃ।**

**ಹಾರಸ್ಫುರತ್ ಕಟಕಕಂಕಣನೂಪುರಶ್ರೀಃ**
**ಹಾಸಪ್ರಕಾಶಿತದಿಶಾಪಟಲಃ ಸ ಬಾಲಃ ॥ ೩೦ ॥**

**ಶಾರ್ದೂಲ** = ಹುಲಿಯ, **ರಮ್ಯ** = ಚಂದದ, **ನಖ** = ಉಗುರಿನಿಂದ, **ರಂಜಿತ** = ಶೋಭಿಸುವ, **ಕಂಠದೇಶಃ** = ಕುತ್ತಿಗೆಯುಳ್ಳ, **ಸಾಸೂಯ** = ಮತ್ಸರದಿಂದ ಕೂಡಿದ, **ದಾನವ** = ದೈತ್ಯರ, **ನಿಕಾಯ** = ಸಮೂಹವೆಂಬ, **ವನೇ** = ಕಾಡಿನಲ್ಲಿ, **ಹುತಾಶಃ** = ಬೆಂಕಿಯಂತಿರುವ, **ಹಾರ** = ಸರಗಳು, **ಸ್ಫುರತ್** = ಶೋಭಿಸುವ, **ಕಟಕ** = ಭುಜಕೀರ್ತಿಯು, **ಕಂಕಣ** = ಬಳೆಗಳು, **ನೂಪುರ** = ಗೆಜ್ಜೆಗಳು ಇವುಗಳ, **ಶ್ರೀಃ** = ಕಾಂತಿಯಿಂದ, **ಹಾಸ** = ನಗುವಿನಿಂದ, **ಪ್ರಕಾಶಿತ** = ಶೋಭಿಸುವ, **ದಿಶಾ** = ದಿಕ್ಕುಗಳ, **ಪಟಲಃ** = ಸಮೂಹವುಳ್ಳ, **ಸಃ** = ಆ, **ಬಾಲಃ** = ಮಗುವು.

ಈ ಮಗುವಿನ ಕುತ್ತಿಗೆಯಲ್ಲಿ ಹುಲಿಯುಗುರು ಇದೆ. ದೇವರ ಕುತ್ತಿಗೆಯಿಂದಾಗಿ ಹುಲಿಯುಗುರು ಶೋಭಿಸುತ್ತಿದೆ. ದೈತ್ಯರು ಭಗವದ್‌ದ್ವೇಷಿಗಳು. ಈ ದೈತ್ಯರೆಂಬ ವನಕ್ಕೆ ಅಗ್ನಿಯಂತೆ ಇದ್ದಾನೆ. ಮೈತುಂಬಾ ಆಭರಣಗಳು, ಕುತ್ತಿಗೆಯಲ್ಲಿ ಸರಗಳು, ಭುಜಕೀರ್ತಿ-(ತೋಳ್ಬಳೆ)ಗಳು, ಬಳೆಗಳು ಹಾಗೂ ಗೆಜ್ಜೆಗಳು. ಮುಖದಲ್ಲಿ ಮಂದಹಾಸ. ಈ ಹಾಸದಿಂದ ಎಲ್ಲಾ ದಿಕ್ಕುಗಳು ಬೆಳ್ಳಗಾದಂತೆ. ಇಂತಹ ಕೃಷ್ಣನು ಧ್ಯಾನಗೋಚರನಾಗಲಿ.

**ನವ್ಯಸ್ಖಲದ್ವಚನನಂದಿತಸರ್ವಲೋಕಃ**
**ಸುವ್ಯಕ್ತಕುಂತಲತತಿಃ ಸುಭಗಾಗ್ರಗಣ್ಯಃ।**
**ದಿಗ್ವಸ್ತ್ರದರ್ಶಿತಕಟಿಃ ದಿನನಾಥದೀಪ್ತಿಃ**
**ಹೃದ್ಗಃ ಸದಾಽಸ್ತು ಸ ಶಿಶುರ್ಹೃದಯಂಗಮೋ ಮೇ ॥ ೩೧ ॥**

**ನವ್ಯ** = ಹೊಸತಾದ, **ಸ್ಖಲತ್** = ಅಸ್ಪಷ್ಟವಾದ, **ವಚನ** = ಮಾತಿನಿಂದ, **ನಂದಿತ** = ಸಂತೋಷ- ಗೊಳಿಸಲ್ಪಟ್ಟ, **ಸರ್ವ** = ಎಲ್ಲಾ, **ಲೋಕಃ** = ಲೋಕವುಳ್ಳ, **ಸುವ್ಯಕ್ತ** = ಚೆನ್ನಾಗಿ ಬಂದಿರುವ, **ಕುಂತಲ** = ತಲೆಕೂದಲಿನ, **ತತಿಃ** = ಸಮೂಹವುಳ್ಳ, **ಸುಭಗಾಗ್ರಗಣ್ಯಃ** = ಚಂದದವರಿಗಿಂತಲೂ ಚಂದದ, **ದಿಗ್‌ವಸ್ತ್ರ** = ಬತ್ತಲೆಯಾದ್ದರಿಂದ, **ದರ್ಶಿತ** = ಕಾಣುವ, **ಕಟಿಃ** = ಸೊಂಟವುಳ್ಳ, **ದಿನನಾಥ**= ಸೂರ್ಯನಂತೆ, **ದೀಪ್ತಿಃ** = ಕಾಂತಿಯುಳ್ಳ, **ಹೃದ್ಗಃ** = ಮನದಲ್ಲಿರುವವನು, **ಸದಾ** = ಯಾವಾಗಲೂ, **ಅಸ್ತು** = ಆಗಲಿ, **ಸಃ** = ಆ, **ಶಿಶುಃ** = ಮಗುವು, **ಹೃದಯಂಗಮಃ** = ಮನೋಹರವಾದ, **ಮೇ**= ನನ್ನ.

ಮಗು ತೊದಲು ನುಡಿಗಳಿಂದ ಮಾತನಾಡಲು ಆರಂಭಿಸಿದನು. ಇದರಿಂದ

ಕೇಳುಗರು ತೃಪ್ತಿಪಡುತ್ತಿದ್ದಾರೆ. ತಲೆಯಲ್ಲಿ ಕೂದಲು ಬೆಳೆಯಲು ಆರಂಭಿಸಿದೆ. ಚಂದದ ವಸ್ತುಗಳಲ್ಲಿ ಬಹಳ ಚಂದದ ಮಗು ಇದು. ದಿಗಂಬರನಾದ್ದರಿಂದ ವಿಶ್ವರೂಪದರ್ಶನವೂ ಆಗುತ್ತಿದೆ. ಸೂರ್ಯನಷ್ಟು ಪ್ರಖರವಾಗಿದೆ. ಇಂತಹ ಚಂದದ ಮಗು ಎನ್ನ ಹೃದಯದಲ್ಲಿ ಸದಾ ಇರಲಿ ಎಂದು ರಾಜರು ಪ್ರಾರ್ಥಿಸುತ್ತಿದ್ದಾರೆ. ದೇವರ ಇಂತಹ ಬಾಲರೂಪದ ಚಿಂತನೆಯನ್ನು ಮಾಡಬೇಕು ಎಂದು ರಾಜರು ಮೂರು ಶ್ಲೋಕಗಳಲ್ಲಿ ತಿಳಿಸುತ್ತಾರೆ.

**ನಾರೀಣಾಮಪಿ ಮೋಕ್ಷದಃ ಕಿಮಿತಿ ನೋ ದದ್ಯಾ ವಿಶುದ್ಧಾತ್ಮನಾಮ್**
**ಅಸ್ಮಾಕಂ ತ್ವಿತಿ ಯೋಗಿಪೂಗಮನಸಾಂ ಕೋಪಂ ವಿಧುನ್ವನ್ನಿವ ।**
**ಗೋಪಸ್ತ್ರೀನಿಕರಸ್ಯ ದುಗ್ಧಜಲಧಿಂ ಸ್ವಂ ದಾತುಕಾಮೋ ಹರಿಃ**
**ತದ್ಗೇಹಸ್ಥಿತದುಗ್ಧಮಂಡಲಮಥೋ ಮುಷ್ಣನ್ ಚಚಾರ ವ್ರಜೇ॥ ೩೨ ॥**

**ನಾರೀಣಾಮ್ ಅಪಿ** = ಸ್ತ್ರೀಯರಿಗೂ, **ಮೋಕ್ಷದಃ** = ಮೋಕ್ಷವನ್ನು ಕೊಡುವವನು, **ಕಿಮ್ ಇತಿ** = ಯಾಕೆ? **ನೋ ದದ್ಯಾಃ** = ಕೊಡುವುದಿಲ್ಲ. **ವಿಶುದ್ಧ** = ನಿರ್ಮಲವಾದ, **ಆತ್ಮನಾಂ** = ಮನಸ್ಸುಳ್ಳ, **ಅಸ್ಮಾಕಂ** = ನಮಗೆ, **ತು ಇತಿ** = ಎಂದು, **ಯೋಗಿ** = ಮುನಿಗಳ, **ಪೂಗ** = ಸಮೂಹದ, **ಮನಸಾಂ** = ಮನಸ್ಸಿಗೆ, **ಕೋಪಂ** = ಸಿಟ್ಟನ್ನು, **ವಿಧುನ್ವನ್ ಇವ** = ಮಾಡುವವನಂತೆ, **ಗೋಪಸ್ತ್ರೀ** = ಗೋಪಿಯರ, **ನಿಕರಸ್ಯ** = ಸಮೂಹಕ್ಕೆ, **ದುಗ್ಧ** = ಹಾಲಿನ, **ಜಲಧಿಂ** = ಸಮುದ್ರವನ್ನು, **ಸ್ವಂ** = ತನ್ನ, **ದಾತು-ಕಾಮಃ** = ಕೊಡುವ ಇಚ್ಛೆಯುಳ್ಳ, **ಹರಿಃ** = ಕೃಷ್ಣನು, **ತದ್ಗೇಹ** = ಗೋಪಿಯರ ಮನೆಗಳಲ್ಲಿ, **ಸ್ಥಿತ** = ಇರುವ, **ದುಗ್ಧಮಂಡಲಮ್** = ಹಾಲಿನ ಸಮೂಹವನ್ನು, **ಅಥೋ** = ಅನಂತರ, **ಮುಷ್ಣನ್** = ಕದಿಯುತ್ತಾ, **ಚಚಾರ** = ಸಂಚರಿಸಿದನು, **ವ್ರಜೇ**= ಗೋಕುಲದಲ್ಲಿ.

ಕೃಷ್ಣನು ಗೋಪಿಯರ ಮನೆಯ ಹಾಲು ಮೊದಲಾದುವನ್ನು ತೆಗೆಯಲು ಆರಂಭಿಸಿದನು. ತಾನು ಅದನ್ನು ತೆಗೆಯಬೇಕಾದರೆ ಅದಕ್ಕೆ ಪ್ರತಿಯಾಗಿ, ಅವರಿಗೆ ತನ್ನ ಕ್ಷೀರ-ಸಮುದ್ರವನ್ನು ಕೊಡುತ್ತಾನೆ. ಅಂದರೆ, ಮೋಕ್ಷವನ್ನು ಕೊಡುತ್ತಾನೆ. ಈ ವಿಚಾರವನ್ನು ಆಲೋಚನೆ ಮಾಡುವ ಋಷಿಗಳು ದೇವರಲ್ಲಿ 'ನೀನು ಆ ಸ್ತ್ರೀಯರಿಗೆ ಮೋಕ್ಷವನ್ನು ಕೊಡುತ್ತೀ. ನಾವು ಬಹಳ ವರ್ಷಗಳಿಂದ ಕಠಿಣವ್ರತಾದಿಗಳನ್ನು ಮಾಡುತ್ತಿದ್ದೇವೆ. ನಿನ್ನ ದಯದಿಂದ ನಿರ್ಮಲರಾಗಿದ್ದೇವೆ. ಆದರೂ ನಮಗೆ ಮೋಕ್ಷ ಕೊಡುವುದಿಲ್ಲವೇಕೆ?' ಎಂದು ಸಿಟ್ಟಾಗಬೇಕು ಎಂಬ ಭಾವನೆಯಿಂದಲೋ ಎಂಬಂತೆ ಸ್ತ್ರೀಯರ ಮನೆಗಳ ಹಾಲು ಮೊದಲಾದವನ್ನು ತೆಗೆಯಲು ಆರಂಭಿಸಿದನು.

ಕೃಷ್ಣನು ಮನೆಮನೆಗೆ ಬರುವಾಗ ಕೆಲವರು ಸಿಟ್ಟಾದರು. ಇನ್ನು ಕೆಲವರು ಸ್ವಾಗತಿಸಿದರು. ಸಿಟ್ಟಾದ ಜನರು ಯೋಗ್ಯತೆ ಮೀರಿ ಪುಣ್ಯ ಮಾಡಿದ್ದಾರೆ ಎಂದರ್ಥ. ಆ ಹೆಚ್ಚಿನ ಪುಣ್ಯವನ್ನು ಕಸಿಯಲು ಅವರ ಮನೆಗೆ ಲಗ್ಗೆಯಿಟ್ಟ. ದೇವರಿಗೆ ಏಧಮಾನದ್ವಿಟ್ ಎಂದು ಹೆಸರಿದೆ. 'ಸಂತೋಷಗೊಂಡ ಜನರ ಯೋಗ್ಯತಾ ಮೀರಿ ಸಾಧನೆ ಮಾಡಿಸದವನು' ಎಂದರ್ಥ. ಅವರಿಗೆ ಅನುಗ್ರಹ ಮಾಡುವುದಕ್ಕೋಸ್ಕರ ಅವರ ಮನೆಯ ನೈವೇದ್ಯವನ್ನು ಸ್ವೀಕರಿಸಿದ ಎಂದರ್ಥ.

ಹರೌ ಪಯೋ ಮುಷ್ಣತಿ ಕಾಪಿ ತುಷ್ಟಾ
ದಧಾರ ಮರ್ಕಾಯ ದದತ್ಯಮರ್ಷಮ್ ।
ತಥಾಹಿ ತಚ್ಛೇಷಮನನ್ಯಯೋಗ್ಯಂ
ಹರಂತಮುದ್ವೀಕ್ಷ್ಯ ಕಥಂ ನ ಮನ್ಯುಃ ॥ ೩೩ ॥

**ಹರೌ** = ದೇವರು, **ಪಯಃ** = ಹಾಲನ್ನು, **ಮುಷ್ಣತಿ** = ಕದಿಯುತ್ತಿರಲು, **ಕಾಪಿ** = ಒಬ್ಬಳು, **ತುಷ್ಟಾ** = ಖುಷಿಪಟ್ಟಳು, **ದಧಾರ** = ಧರಿಸಿದಳು, **ಮರ್ಕಾಯ** = ಮಂಗನಿಗೆ, **ದದತಿ** = ಕೊಡುತ್ತಿರಲು, **ಅಮರ್ಷಮ್** = ಸಿಟ್ಟನ್ನು, **ತಥಾಹಿ** = ಸಿಟ್ಟು ಸರಿ, **ತತ್** = ದೇವರ, **ಶೇಷಂ** = ಎಂಜಲನ್ನು, **ಅನನ್ಯಯೋಗ್ಯಂ** = ಅಸಾತ್ವಿಕರಿಗೆ ಅಯೋಗ್ಯವಾದ, **ಹರಂತಂ** = ತಿನ್ನುವ, **ಉದ್ವೀಕ್ಷ್ಯ** = ನೋಡಿ, **ಕಥಂ** = ಹೇಗೆ, **ನ ಮನ್ಯುಃ** = ಸಿಟ್ಟು ಇಲ್ಲ.

ಒಬ್ಬಳ ಮನೆಯಲ್ಲಿ ದೇವರು ಹಾಲುಂಡ. ಆಗ ಆಕೆ ಬಹಳ ಸಂತಸಪಟ್ಟಳು. ಕೃಷ್ಣನು ಉಳಿದ ಹಾಲನ್ನು ಅಲ್ಲೇ ಇದ್ದ ಕಪಿಗೆ ಕುಡಿಸಿದ. ಆಗ ಆಕೆ ಕ್ರುದ್ಧಳಾದಳು. ದೇವರ ಭಕ್ತರಿಗೆ ಇದು ಎರಡೂ ಸಹಜ ಗುಣ. ದೇವರು ಉಂಡ ಅನಂತರ ಆತನ ಶೇಷ ನಮಗೆ ಸಿಕ್ಕಿದರೆ ನಮ್ಮ ಎಲ್ಲಾ ಕಷ್ಟಗಳೂ ಪರಿಹಾರವಾಗುತ್ತವೆ. ಆ ದೃಷ್ಟಿಯಲ್ಲಿ ಆಕೆ ತುಷ್ಟಳಾದದ್ದು. ಆದರೆ ಅದನ್ನು ಅಯೋಗ್ಯವಾದ ಮಂಗ ತಿಂದಾಗ ತನಗೆ ಸಿಗಲಿಲ್ಲ ಎಂಬ ಅಭಿಪ್ರಾಯದಿಂದ ಸಿಟ್ಟು ಬರುವುದು ಸಹಜ. ಶಾಸ್ತ್ರವು ಹೇಳುತ್ತದೆ 'ಉಚ್ಛಿಷ್ಟಭೋಜಿನೋ ದಾಸಾಃ ತವ ಮಾಯಾಂ ಜಯೇಮ ಹಿ' - ನಿನ್ನ ಎಂಜಲನ್ನು ಉಂಡವರು ನಿನ್ನ ಮಾಯೆಯ ಬಲೆಗೆ ಬೀಳುವುದಿಲ್ಲ ಎಂದು.

ಪ್ರಗೃಹ್ಯ ಘಂಟಾಮಪರೇಣ ಪಾತ್ರಂ
ಕರೇಣ ಚಾನ್ಯೇನ ಪಯಃ ಪಿಬಂತಮ್ ।
ನಿಶಾಮ್ಯ ಮಿತ್ರಾಣಿ ಚ ತರ್ಪಯಂತಂ
ಸುವಿಸ್ಮಿತಾ ಕಾಪಿ ಬಭೂವ ತೂಷ್ಣೀಮ್ ॥ ೩೪ ॥

**ಪ್ರಗೃಹ್ಯ** = ಹಿಡಿದುಕೊಂಡು, **ಘಂಟಾಮ್** = ಗಂಟೆಯನ್ನು, **ಅಪರೇಣ** = ಇನ್ನೊಂದು, **ಪಾತ್ರಂ** = ಪಾತ್ರೆಯನ್ನು, **ಕರೇಣ** = ಕೈಯಿಂದ, **ಚ ಅನ್ಯೇನ** = ಇನ್ನೊಂದು, **ಪಯಃ** = ಹಾಲನ್ನು, **ಪಿಬಂತಮ್** = ಕುಡಿಯುವ, **ನಿಶಾಮ್ಯ** = ನೋಡಿ, **ಮಿತ್ರಾಣಿ** = ಗೆಳೆಯರನ್ನು, **ಚ ತರ್ಪಯಂತಂ** = ತೃಪ್ತಿಪಡಿಸುವ, **ಸುವಿಸ್ಮಿತಾ** = ಆಶ್ಚರ್ಯಗೊಂಡು, **ಕಾಪಿ** = ಒಬ್ಬಳು, **ಬಭೂವ** = ಆದಳು, **ತೂಷ್ಣೀಮ್**= ಸುಮ್ಮನೆ.

ಒಂದು ಕೈಯಿಂದ ಘಂಟೆಯನ್ನೂ, ಒಂದು ಕೈಯಿಂದ ಪಾತ್ರೆಯನ್ನೂ, ಮತ್ತೊಂದು ಕೈಯಿಂದ ಹಾಲು ಕುಡಿಯುವುದನ್ನೂ, ಇನ್ನು ಕೆಲವು ಕೈಗಳಿಂದ ಗೆಳೆಯರಿಗೆ ಕುಡಿಸುವುದನ್ನೂ ಕಂಡ ಒಬ್ಬಳು ಗೋಪಿ ಆಶ್ಚರ್ಯಪಟ್ಟಳು. ಈ ಮಗು ''ಸಹಸ್ರಶೀರ್ಷ'' ಎಂದು. ಇದರಿಂದಾಗಿ ಮಾತೇ ಹೊರಡಲಿಲ್ಲ. ಇನ್ನೊಂದು ಮನೆಯ ದೃಶ್ಯ ಹೀಗಿದೆ – ಕೃಷ್ಣ ಮನೆಗೆ ಬಂದು ಮೊಸರಿನ ಪಾತ್ರೆಗೆ ಕೈ ಹಾಕಿದಾಗ ಗೊತ್ತಾಗುವ ಸಲುವಾಗಿ ಆ ಮಡಕೆಗೆ ಒಂದು ಘಂಟಾಮಣಿಯನ್ನು ಕಟ್ಟಿದ್ದಳು. ದೇವರ ಬರುವಿಕೆ ತಿಳಿಯುವುದು ಘಂಟಾನಾದದಿಂದ. ಆದ್ದರಿಂದ ಪೂಜಾಕಾಲದಲ್ಲಿ ಘಂಟಾನಾದಕ್ಕೆ ಮಹತ್ವ.

**ಕರಸ್ಥಭಾಸ್ವನ್ನವನೀತಮನ್ಯಾ**
**ವಿಭೀಷಯಂತ್ಯನ್ವಗಮತ್ ಮುಕುಂದಮ್ ।**
**ಸ್ವಮೌಲಿಮಾಲಾಚ್ಯುತಪುಷ್ಪಪುಂಜೈಃ**
**ಪದಾನಿ ತಸ್ಯೇಶಿತುರರ್ಚಯಂತೀ ॥೩೫॥**

**ಕರ** = ಕೈಯಲ್ಲಿ, **ಸ್ಥ** = ಇರುವ, **ಭಾಸ್ವತ್** = ಹೊಳೆಯುವ, **ನವನೀತಂ** = ಬೆಣ್ಣೆಯುಳ್ಳ, **ವಿಭೀಷಯಂತೀ** = ಹೆದರಿಸುತ್ತಾ, **ಅನ್ವಗಮತ್** = ಅನುಸರಿಸಿದಳು, **ಮುಕುಂದಂ** = ದೇವರನ್ನು, **ಸ್ವ** = ತನ್ನ, **ಮೌಲಿ** = ತಲೆಯ, **ಮಾಲಾ** = ಮಾಲಿಕೆಯಿಂದ, **ಚ್ಯುತ** = ಉದುರುವ, **ಪುಷ್ಪ** = ಹೂಗಳ, **ಪುಂಜೈಃ** = ಗುಂಪುಗಳಿಂದ, **ಪದಾನಿ** = ಪಾದಗಳನ್ನು, **ತಸ್ಯ** = ದೇವರ, **ಈಶಿತುಃ** = ಸ್ವಾಮಿಯಾದ, **ಅರ್ಚಯಂತೀ**= ಅರ್ಚಿಸುವ.

ಇನ್ನೊಂದು ಮನೆಯಲ್ಲಿ ಕೃಷ್ಣನು ಬೆಣ್ಣೆಯನ್ನು ತೆಗೆದು ತಿನ್ನಲು ಕೈಯಲ್ಲಿ ಹಿಡಿದಿದ್ದ. ಆಗ ಗೃಹಿಣಿ ನೋಡಿದಳು. ಸಿಟ್ಟಾದಳು. ಹೆದರಿಸುವ ಸಲುವಾಗಿ ಕೃಷ್ಣನ ಹಿಂದಿನಿಂದ ಓಡಿದಳು. ಅವಳು ಓಡುವ ರಭಸಕ್ಕೆ ತಲೆಯಲ್ಲಿದ್ದ ಪುಷ್ಪಗಳು ಉದುರುತ್ತಿದ್ದವು. ಕೃಷ್ಣನನ್ನು ಬೈಯುತ್ತಲೂ ಇದ್ದಳು. ದೂರದಲ್ಲಿ ನೋಡುವಾಗ ದೇವರ ಕೈಯಲ್ಲಿ ನೈವೇದ್ಯವನ್ನು ಕೊಟ್ಟು, ಮಂತ್ರಗಳನ್ನು ಹೇಳುತ್ತಾ ಪುಷ್ಪಗಳಿಂದ ದೇವರ ಪಾದಗಳನ್ನು ಅರ್ಚಿಸುವಂತಿತ್ತು.

**ಅಧಿಕ್ಷಿಪಂತ್ಯಾಂ ಸುಕೃತೇನ ಸಾಕಂ**
**ದಧೀನಿ ಧೀರಃ ಸ ಚುಚೋರ ಚೋರಃ ।**
**ಅಗಣ್ಯಪುಣ್ಯಾಖ್ಯಧನಾನಿ ದಾನೀ**
**ಪ್ರದಾಯ ಸೋಽಚೂಚುರತ್ ಆನತಾಯಾಮ್ ॥ ೩೬ ॥**

**ಅಧಿಕ್ಷಿಪಂತ್ಯಾಂ** = ಒಬ್ಬಳು ಬೈಯುತ್ತಿರಲು, **ಸುಕೃತೇನ** = ಪುಣ್ಯದಿಂದ, **ಸಾಕಂ** = ಕೂಡಿದ, **ದಧೀನಿ** = ಮೊಸರನ್ನು, **ಧೀರಃ** = ಧೈರ್ಯವುಳ್ಳ, **ಸಃ** = ಆ ಕೃಷ್ಣನು, **ಚುಚೋರ** = ಕದ್ದನು, **ಚೋರಃ** = ಕಳ್ಳನಾದ, **ಅಗಣ್ಯ** = ಲೆಕ್ಕವಿಲ್ಲದ, **ಪುಣ್ಯಾಖ್ಯ** = ಪುಣ್ಯವೆಂಬ, **ಧನಾನಿ** = ಹಣವನ್ನು (ಸಂಪತ್ತನ್ನು), **ದಾನೀ** = ಕೊಡುತ್ತಿದ್ದನು, **ಪ್ರದಾಯ** = ತೆಗೆದುಕೊಂಡು, **ಸಃ** = ಅವನು, **ಅಚೂಚುರತ್** = ಕದ್ದಂತಹ (ತೆಗೆಯುತ್ತಿದ್ದ), **ಆನತಾಯಾಮ್**= ಬಗ್ಗದ (ದೇವರಿಗೆ ನಮಿಸದ)

ಕೃಷ್ಣ ಮನೆಮನೆಗಳಿಂದ ಗವ್ಯಗಳನ್ನು ತೆಗೆಯುವಾಗ ಯಾರಾದರೂ ಆಕ್ಷೇಪ ಮಾಡಿದರೆ ಅವರ ಪುಣ್ಯವನ್ನೂ ತೆಗೆಯುತ್ತಿದ್ದನು. ಈ ಪುಣ್ಯವನ್ನು ದೇವರನ್ನು ಸಂತೋಷ-ದಿಂದ ಸ್ವಾಗತಿಸುವವರಿಗೆ ಕೊಡುತ್ತಿದ್ದನು. ಆದ್ದರಿಂದ ದೇವರ ವಿಷಯದಲ್ಲಿ ವ್ಯರ್ಥವಾಗಿ 'ಅಷ್ಟು ಯಾಕೆ ದೇವರಿಗೆ, ಇಷ್ಟು ಸಾಕು' ಎಂಬಿತ್ಯಾದಿ ಆಕ್ಷೇಪಗಳನ್ನು ಮಾಡಬಾರದು.

**ಅಭೂತ್ ಯಶೋದಾತನಯಸ್ಯ ಪೃಥ್ವ್ಯಾಂ**
**ವಿನಿಂದಿತಾ ತಸ್ಕರತಾಽಪಿ ಭೂತ್ಯೈ ।**
**ತಥಾಹಿ ಲಕ್ಷ್ಮೀನಯನಾಂತಭಾಜಾಮ್**
**ಅಸಹ್ಯದೋಷೋಽಪಿ ಭವೇತ್ ಗುಣಾಯ ॥ ೩೭ ॥**

**ಅಭೂತ್** = ಆಯಿತು, **ಯಶೋದಾ** = ಯಶೋದೆಯ, **ತನಯಸ್ಯ** = ಮಗನಿಗೆ, **ಪೃಥ್ವ್ಯಾಂ** = ಭೂಮಿಯಲ್ಲಿ, **ವಿನಿಂದಿತಾ** = ಬೈಯುವಿಕೆಯು, **ತಸ್ಕರತಾ ಅಪಿ** = ಕಳ್ಳತನವೆಂಬ, **ಭೂತ್ಯೈ** = ಶ್ರೇಯಸ್ಸಿಗೋಸ್ಕರ, **ತಥಾ ಹಿ** = ಅದು ಸರಿ, **ಲಕ್ಷ್ಮೀ** = ಲಕ್ಷ್ಮಿಯ, **ನಯನಾಂತ** = ಕಡೆಗಣ್ಣಿಗೆ, **ಭಾಜಾಂ** = ಒಳಗಾದವರಿಗೆ, **ಅಸಹ್ಯ** = ಬಹಳವಾದ, **ದೋಷಃ ಅಪಿ** = ದೋಷವೂ, **ಭವೇತ್** = ಆಗುತ್ತದೆ, **ಗುಣಾಯ** = ಗುಣಕ್ಕೋಸ್ಕರ.

ಯದ್ಯಪಿ ಕಳ್ಳತನವು ಒಂದು ದೋಷ, ಎಲ್ಲರೂ ಅದನ್ನು ನಿಂದಿಸುತ್ತಾರೆ. ಆದರೆ ದೇವರಲ್ಲಿ ಇದು ದೋಷ ಆಗಲಿಲ್ಲ. ಯಾಕೆಂದರೆ, ಯಾರು ದೇವರ ಈ ಕೆಲಸವನ್ನು ಸ್ಮರಿಸುತ್ತಾರೋ ಅವರಲ್ಲಿರುವ ಕಳ್ಳತನ ನಿಮಿತ್ತಕವಾದ ಪಾಪವು ಪರಿಹಾರವಾಗುತ್ತದೆ.

ಬಡವರಲ್ಲಿ ಯಾವುದು ದೋಷ ಎಂದು ಆಗಿರುತ್ತದೋ ಅದು ಶ್ರೀಮಂತರಲ್ಲಿ ಗುಣವೇ ಆಗುತ್ತದೆ. ಅದನ್ನು ಶ್ರೀಮಂತರ ಮುಂದೆ ಹೇಳಿದರೆ ಅದರಿಂದ ಅವರು ಪ್ರಸನ್ನರಾಗಿ ಹೇಳಿದವನಿಗೆ ಸಂಪದಾದಿಗಳನ್ನು ಕೊಡುತ್ತಾರೆ. ದೇವರೂ ಶ್ರೀಮಂತನೇ. ದ್ವಾದಶ-ಸ್ತೋತ್ರದ ಎರಡನೆಯ ಅಧ್ಯಾಯದಲ್ಲಿ – ಇಂದಿರೆಯ ದೃಢವಾದ ಕಡೆಗಣ್ಣ ನೋಡಕ್ಕೆ ಒಳಗಾದವನು ದೇವರು ಎಂದು ಹೇಳಿದ್ದಾರೆ.

ಸ್ವಕೀಯಚೌರ್ಯಂ ನಿತರಾಂ ಗೃಣದ್ಭ್ಯಃ
ದದೌ ವಿಮುಕ್ತಿಂ ಕಿಲ ಗೋಪಬಾಲಃ ।
ಅಹಂ ಸ್ವಮರ್ಮಾಲಪತಾಂ ಸ ಚಕ್ರೇ
ಫಲೇನ ವಾಗ್ಬಂಧಮಿತಿ ಪ್ರತರ್ಕೇ ॥ ೩೮ ॥

**ಸ್ವಕೀಯ** = ತನ್ನ, **ಚೌರ್ಯಂ** = ಕಳ್ಳತನವನ್ನು, ನಿತರಾಂ = ಚೆನ್ನಾಗಿ, ಗೃಣದ್ಭ್ಯಃ = ಹೇಳುವವರಿಗೆ, **ದದೌ** = ಕೊಟ್ಟನು, **ವಿಮುಕ್ತಿಂ** = ಮೋಕ್ಷವನ್ನು, **ಕಿಲ** = ಪ್ರಸಿದ್ಧ, **ಗೋಪಬಾಲಃ** = ಕೃಷ್ಣನು, **ಅಹಂ** = ನಾನು, **ಸ್ವ** = ತನ್ನ, **ಮರ್ಮ** = ಚರ್ಯೆ-ಯನ್ನು, **ಆಲಪತಾಂ** = ಹೇಳುವವರ, **ಸಃ** = ಕೃಷ್ಣನು, **ಚಕ್ರೇ** = ಮಾಡಿದನು, **ಫಲೇನ** = ಫಲದಿಂದ, **ವಾಕ್** = ಬಾಯಿಯ, **ಬಂಧಂ** = ಮುಚ್ಚಿಸುವಿಕೆಯನ್ನು, **ಇತಿ** = ಎಂದು, **ಪ್ರತರ್ಕೇ**= ತಿಳಿಯುತ್ತೇನೆ.

ಗೋಪನ ಮಗುವಾದ ಕೃಷ್ಣನು ತನ್ನ ಈ ಕೆಲಸವನ್ನು ಯಾರೆಲ್ಲಾ ಹೇಳುತ್ತಾರೋ ಅಂದರೆ, ಅವರಿಗೆಲ್ಲಾ ತಾನು ಮುಕ್ತಿಯನ್ನು ಕೊಟ್ಟನು. ಅವರ ಬಾಯಿ ಮುಚ್ಚಿಸಿದನು. ಲೋಕದಲ್ಲಿಯೂ ನಮ್ಮ ರಹಸ್ಯವನ್ನು ಯಾರಾದರೂ ಹೇಳಿದರೆ ಅವರಿಗೆ ನಾವು ಬೇಕಾ-ದ್ದನ್ನು ಕೊಟ್ಟು ಸುಮ್ಮನಾಗಿಸುವಂತೆ, ಎಂದು ರಾಜರು ತಿಳಿಸುತ್ತಾರೆ.

ಆದರೂ ಇಷ್ಟರಿಂದಲೂ ದೇವರು ತೃಪ್ತನಾಗುವುದಿಲ್ಲ ಎಂದು ತಿಳಿಸಲು ಗೋಪ-ಬಾಲ ಎಂದು ಹೇಳಿದ್ದಾರೆ. ಇದರಿಂದಾಗಿ ಶಾಸ್ತ್ರಾಧ್ಯಯನದ ಬಲ ಬೇಕು ಎಂದು ತಿಳಿಸಿದಂತೆ ಆಯಿತು. ಗೋವುಗಳು ಅಂದರೆ ವೇದದ ಮಾತುಗಳು. ಅವುಗಳನ್ನು ಪ = ರಕ್ಷಣೆ ಮಾಡುವವರು, ಅಂದರೆ ಅಧ್ಯಯನ ಮಾಡುವವರು. ಬಾಲ = ಬಲಸಂಬಂಧಿ ಬಾಲ. ತಥಾ ಚ ವೇದಾಧ್ಯಯನ, ಶಾಸ್ತ್ರಾಧ್ಯಯನ ಎಂಬ ಬಲದ ಸಂಬಂಧ ಉಳ್ಳ ದೇವರು ಜೀವನಿಗೆ ಮೋಕ್ಷವನ್ನು ಕೊಡುತ್ತಾನೆ.

ಸ್ವಭಕ್ತಪುಂಜಾರ್ಜಿತಪಾಪವೃಂದಂ
ದಿವಾನಿಶಂ ಯೋ ಹರತಿ ಸ್ಮ ಬಾಲಃ ।

**ಗೃಹೇ ಗೃಹೇ ದುಗ್ಧಮಸೌ ಅಮುಷ್ಣಾತ್**
**ತಥಾ ಹಿ ಕಸ್ತ್ಯಕ್ಷ್ಯತಿ ಸಿದ್ಧವಿದ್ಯಾಮ್ ॥ ೩೯ ॥**

**ಸ್ವಭಕ್ತ** = ತನ್ನ ಭಕ್ತರ, **ಪುಂಜ** = ಸಮೂಹದಿಂದ, **ಆರ್ಜಿತ** = ಗಳಿಸಲ್ಪಟ್ಟ, **ಪಾಪ** = ಪಾಪಗಳ, **ವೃಂದಂ** = ಸಮೂಹವನ್ನು, **ದಿವಾನಿಶಂ** = ಹಗಲೂ ಇರಳೂ, **ಯಃ** = ಯಾವನು, **ಹರತಿ ಸ್ಮ** = ನಾಶ ಮಾಡುತ್ತಿದ್ದನೋ, **ಬಾಲ** = ಬಾಲಕನು, **ಗೃಹೇ ಗೃಹೇ** = ಪ್ರತಿ ಮನೆಯಲ್ಲಿಯೂ, **ದುಗ್ಧಂ** = ಹಾಲನ್ನು, **ಅಸೌ** = ಈ ಕೃಷ್ಣನು, **ಅಮುಷ್ಣಾತ್** = ಅಪಹರಿಸಿದನು, **ತಥಾ ಹಿ** = ಇದು ಸರಿ, **ಕಃ** = ಯಾರು, **ತ್ಯಕ್ಷತಿ** = ಬಿಡುತ್ತಾನೆ, ಸಿದ್ಧ-**ವಿದ್ಯಾಂ** = ಕರಗತವಾದ ವಿದ್ಯೆಯನ್ನು.

ಕೃಷ್ಣನಿಗೆ ಹರಿ ಎಂಬ ಹೆಸರಿದೆ. ಯಾಕೆಂದರೆ, ತನ್ನ ಭಕ್ತರಾದ ಜೀವರು ಪ್ರತಿದಿನ ತಿಳಿದೋ ತಿಳಿಯದೆಯೋ ತಪ್ಪು ಮಾಡುತ್ತಾರೆ. ಆ ತಪ್ಪುಗಳ ಪರಿಹಾರಕ್ಕಾಗಿ ಹರಿಸ್ಮರಣೆ ಮಾಡುತ್ತಾರೆ. ಆಗ ದೇವರು ಅವರ ತಪ್ಪುಗಳ ಅಪಹಾರ ಮಾಡುತ್ತಾನೆ. ಹೀಗೆ ಅಪಹಾರ ಮಾಡುವುದು ದೇವರ ಸ್ವಭಾವ. ಆದ್ದರಿಂದ ಈ ಅವತಾರದಲ್ಲಿಯೂ ತನ್ನ ಸ್ವಭಾವವನ್ನು ಗವ್ಯದ ಅಪಹಾರದ ಮೂಲಕ ತೋರಿಸಿದನು. ಸ್ವಭಾವವು ಎಂದೂ ನಮ್ಮನ್ನು ಬಿಡು-ವುದಿಲ್ಲ.

**ಹಸ್ತಃ ಕಿಂ ನವನೀತಭಾಜನಮುಖೇ ನ್ಯಸ್ತಸ್ತ್ವಯಾ ಶ್ರೀಪತೇ**
**ದೃಪ್ತಪ್ರಸ್ತರಸಮ್ಮಿತಾತಿಕಠಿನಾವಸ್ಥಾಂತರಾಯಾ ಗೃಹೇ।**
**ಯುಕ್ತಾ ನ ಸ್ಥಿತಿರಸ್ಯ ಕೋಮಲಹೃದಃ ತತ್ತನ್ವಿ ಚಿತ್ತೇ ಮಮ**
**ಪ್ರೀತ್ಯಾ ಸ್ಥಾಪಯಿತುಂ ಮೃಗಾಕ್ಷಿ ಮೃದುನೀತ್ಯುಕ್ತ್ವಾ ಹಸನ್ ಪಾತ್ವಸೌ॥೪೦॥**

**ಹಸ್ತಃ** = ಕೈಯು, **ಕಿಂ** = ಯಾಕೆ, **ನವನೀತ** = ಬೆಣ್ಣೆಯ, **ಭಾಜನ** = ಪಾತ್ರದ, **ಮುಖೇ** = ಮೇಲೆ, **ನ್ಯಸ್ತಃ** = ಇಡಲ್ಪಟ್ಟಿದೆ, **ತ್ವಯಾ** = ನಿನ್ನಿಂದ, **ಶ್ರೀಪತೇ** = ಲಕ್ಷ್ಮೀಪತಿಯೇ, **ದೃಪ್ತ** = ದೊಡ್ಡದಾದ, **ಪ್ರಸ್ತರ** = ಕಲ್ಲಿಗೆ, **ಸಮ್ಮಿತ** = ಸಮಾನವಾದ, **ಅತಿಕಠಿನ** = ಬಹಳಗಟ್ಟಿಯಾದ, **ಅವಸ್ಥಾ** = ಸ್ವಭಾವದ, **ಅಂತರಾಯಾಃ** = ಮನಸ್ಸುಳ್ಳ, **ಗೃಹೇ** = ಮನೆಯಲ್ಲಿ, **ಯುಕ್ತಾ** = ಒಳ್ಳೆಯ, **ನ** = ಅಲ್ಲ, **ಸ್ಥಿತಿಃ** = ಇರುವಿಕೆಯು, **ಅಸ್ಯ** = ಈ ಬೆಣ್ಣೆಗೆ, **ಕೋಮಲ** = ಮೃದುವಾದ, **ಹೃದಃ** = ಮಧ್ಯವುಳ್ಳ, **ತತ್** = ಆದ್ದರಿಂದ, **ತನ್ವಿ** = ಕೃಶಾಂಗಿಯೇ, **ಚಿತ್ತೇ** = ಮನಸ್ಸಿನಲ್ಲಿ, **ಮಮ** = ನನ್ನ, **ಪ್ರೀತ್ಯಾ** = ಪ್ರೀತಿಯಿಂದ, **ಸ್ಥಾಪಯಿತುಂ** = ಇಡಲು, **ಮೃಗಾಕ್ಷಿ** = ಹರಿಣಾಕ್ಷಿಯೇ, **ಮೃದುನಿ** = ಕೋಮಲವಾದ, **ಇತಿ** = ಎಂದು, **ಉಕ್ತ್ವಾ** = ಹೇಳಿ, **ಹಸನ್** = ನಗುತ್ತಾ, **ಪಾತು** = ರಕ್ಷಿಸಲಿ, **ಅಸೌ**= ಈ ಕೃಷ್ಣನು.

ಒಂದು ಮನೆಯಲ್ಲಿ ಕೃಷ್ಣನು ಬೆಣ್ಣೆಯ ಪಾತ್ರೆಯೊಳಗೆ ಕೈಯಿಕ್ಕಿದ್ದಾನೆ. ಆಗ ಗೋಪಿಯು ಬಂದಳು. ಕೃಷ್ಣ ಬೆಣ್ಣೆಯ ಪಾತ್ರೆಯೊಳಗೆ ಏಕೆ ಕೈ ಹಾಕಿದೆ? ಎಂದು ಗದರಿಸಿದಳು. ಕೃಷ್ಣನ ಉತ್ತರ – ನೀನು ಕಲ್ಲಿನಂತಹ ಮನಸ್ಸಿನವಳು. ಇಂತಹವಳ ಮನೆಯಲ್ಲಿ ಮೃದುವಾದ ಬೆಣ್ಣೆ ಇರಬಾರದು ಎಂದು. ಹಾಗಾದರೆ ಎಲ್ಲಿ ಇಡುತ್ತೀಯಾ ಎಂದು ಗೋಪಿ ಕೇಳಿದಳು. ಮೃದುವಾದ ಮನಸ್ಸುಳ್ಳ ನನ್ನಲ್ಲಿ ಇದನ್ನು ಇಟ್ಟುಕೊಳ್ಳುತ್ತೇನೆ ಎಂದು ಕೃಷ್ಣನು ಉತ್ತರಿಸಿದನು.

ಗೋಪಿಯು ಕೃಷ್ಣನನ್ನು ಶ್ರೀಪತೇ ಎಂದು ಕರೆದದ್ದರಿಂದ ಗೋಪಿಗೆ ಕೃಷ್ಣನ ಪರಿಚಯ ಇದೆ. ಹಾಗೆಯೇ ಕೋಪವೂ ನಟನೆ ಎಂದು ತಿಳಿಯುತ್ತದೆ. ಈ ಶ್ಲೋಕದ ಎರಡನೆಯ ಪಾದದಿಂದ ದೇವರು ಹಸಿವೆಯಿಂದಾಗಿ ತಿನ್ನಲು ಬಂದದ್ದಲ್ಲ, ದೇವರಿಗೆ ಹಸಿವೆಯೇ ಇಲ್ಲ ಎಂದು ತಿಳಿಯುತ್ತದೆ. ಆದರೂ ಈ ಮನೆಗೆ ಬಂದಿದ್ದಾನೆ ಅಂದರೆ ಇವಳಿಗೆ ಅನುಗ್ರಹ ಮಾಡಲು ಎಂದೇ ಅರ್ಥ. ಅವಳನ್ನು ತನ್ವಿ = ಕೃಶದವಳೇ, ಮೃಗಾಕ್ಷಿ = ಸೂಕ್ಷ್ಮವಾದ ದೃಷ್ಟಿಯುಳ್ಳವಳೇ ಎಂದು ಕರೆದದ್ದರಿಂದ ಅನುಗ್ರಹವನ್ನು ಪಡೆಯುವ ಸಾಮರ್ಥ್ಯ ಇವಳಿಗಿದೆ ಎಂದು ತಿಳಿಯುತ್ತದೆ. ತಾನು ಮೃದು ಮನಸ್ಸಿನವ ಎಂದು ಹೇಳಿದ್ದರಿಂದ ಭಕ್ತರು ಬೈದರೂ ಅವರಲ್ಲಿ ಅನುಕಂಪ ತೋರುವ ಸ್ವಭಾವ ದೇವರದ್ದು ಎಂದು ತಿಳಿಯುತ್ತದೆ.

● ● ● ●

**ಸಂದೇಶ**

**ಶಬ್ದೇಷು ಬಹೂದಿತೇಷು ಪ್ರಿಯೇರಿತಃ ಪ್ರೀತಿಕರೋ ಹಿ ಲೋಕೇ**

ನಮಗೆ ಬಿರುದು ಬಾವಲಿಗಳು ಬಹಳ ಬಂದರೂ, ನಾವು ನಮ್ಮ ಹೆಸರಿನೊಟ್ಟಿಗೆ ಇಟ್ಟುಕೊಳ್ಳುವುದು ನಮಗೆ ಅತ್ಯಂತಪ್ರಿಯರು ಕೊಟ್ಟದ್ದನ್ನು ಮಾತ್ರ

---

**ಯಸ್ಯ ಶ್ರೀಚರಣಾಂಬುಜೇನ ಶಕಟಃ ಸಂಚೂರ್ಣಿತಾಂಗೋಽಭವತ್**
**ತಸ್ಯಾಂಗೇ ಮೃದುತಾ ನ ಯುಕ್ತಿಸಹಿತೇತ್ಯುಕ್ತಂ ಮುದಾ ಯೋಽವದತ್ ।**
**ಬಾಲ್ಯೇ ಮಾಮಧಿರೋಪ್ಯ ವಕ್ಷಸಿ ಶಿಶುಂ ಸನ್ನರ್ತಯಂತ್ಯಾಸ್ತವ**
**ಸ್ಥೂಲೋರೋಜ ಸಮಾಗಮೇನ ತದಿತಿ ಪ್ರೌಢಿಂ ಸ ದದ್ಯಾನ್ಮಮ ॥ ೪೧ ॥**

**ಯಸ್ಯ** = ಯಾರ, **ಶ್ರೀ** = ಕಾಂತಿಯಿಂದ ಕೂಡಿದ, **ಚರಣ** = ಕಾಲುಗಳೆಂಬ, **ಅಂಬುಜೇನ** = ಕಮಲದಿಂದ, **ಶಕಟಃ** = ಬಂಡಿಯು, **ಸಂಚೂರ್ಣಿತ** = ಪುಡಿ(ಮಾಡಲ್ಪಟ್ಟ)ಯಾದ, **ಅಂಗಃ** = ಭಾಗವುಳ್ಳದ್ದು, **ಅಭವತ್** = ಆಯಿತೋ, **ತಸ್ಯ** = ಅಂತಹವನ, **ಅಂಗೇ** = ಶರೀರದಲ್ಲಿ, **ಮೃದುತಾ** = ಮಾರ್ದವವು, **ನ ಯುಕ್ತಿಸಹಿತಾ** = ಯೋಗ್ಯವಲ್ಲ, **ಇತಿ** = ಎಂದು, **ಉಕ್ತಂ** = ಹೇಳುತ್ತಿರಲು, **ಮುದಾ** = ಸಂತೋಷದಿಂದ,

**ಯಃ** = ಯಾರು, **ಅವದತ್** = ಹೇಳಿದನೋ, **ಬಾಲ್ಯೇ** = ಬಾಲ್ಯದಲ್ಲಿ, **ಮಾಮ್** = ನನ್ನನ್ನು, **ಅಧಿರೋಪ್ಯ** = ಏರಿಸಿ, **ವಕ್ಷಸಿ** = ಎದೆಯಲ್ಲಿ, **ಶಿಶುಂ** = ಮಗುವಾದ, **ಸನ್ನರ್ತಯಂತ್ಯಾಃ** = ಆಡಿಸುವ, **ತವ** = ನಿನ್ನ, **ಸ್ಥೂಲ** = ಗಟ್ಟಿಯಾದ, **ಉರೋಜ** = ಸ್ತನಗಳ, **ಸಮಾಗಮೇನ** = ಸಂಬಂಧದಿಂದ, **ತತ್** = ಅದು, **ಇತಿ** = ಎಂದು, **ಪ್ರೌಢಿಂ** = ವಾಕ್‌ಪಟುತ್ವವನ್ನು, **ಸಃ** = ಅವನು, **ದದ್ಯಾತ್** = ಕೊಡಲಿ, **ಮಮ** = ನನಗೆ.

ಕೃಷ್ಣನ ಉತ್ತರಕ್ಕೆ ಗೋಪಿಯು ಪುನಃ ಹೇಳುತ್ತಾಳೆ, 'ಕೃಷ್ಣ ನೀನು ನಿನ್ನ ಕಾಲಿನ ಹೊಡೆತದಿಂದ ಒಂದು ಬಂಡಿಯನ್ನೇ ಪುಡಿಮಾಡಿದವನು. ಇಂತಹ ನೀನು ಮೃದುವೇ?' ಎಂದು. ಇದಕ್ಕೆ ಕೃಷ್ಣನ ಪ್ರತಿಕ್ರಿಯೆ – 'ನಾನು ನಿಜವಾಗಿಯೂ ಮೃದುವಾಗಿಯೇ ಇದ್ದವನು. ಆದರೆ ಮಗುವಾದ ನನ್ನನ್ನು ನೀವೆಲ್ಲರೂ ಎತ್ತಿ ನಿಮ್ಮ ಎದೆಯ ಮೇಲೆ ಇಟ್ಟುಕೊಂಡು ಆಡಿಸುತ್ತಿದ್ದವರು. ಆಗ ನಿಮ್ಮ ಗಟ್ಟಿಯಾದ ಎದೆ ನನ್ನ ಕಾಲಿಗೆ ತಾಗಿ ನನ್ನ ಪಾದ ಗಟ್ಟಿಯಾದದ್ದು' ಎಂದಾಗ ಗೋಪಿ ನಿರುತ್ತರಳಾದಳು. ಇಂತಹ ಕೃಷ್ಣನು ನಮಗೂ ವಾಕ್ ಪಟುತ್ವವನ್ನು, ಸ್ಫೂರ್ತಿಯನ್ನು ಕೊಡಲಿ.

**ಬಧ್ನಾಮ್ಯದ್ಯ ಭವಂತಮಂಗ ಕಿತವಂ ಸಾಧ್ಯಂ ತತಃ ಕಿಂ ಪ್ರಿಯೇ**
**ದುಗ್ಧಾನಾಂ ಪರಿರಕ್ಷಣಂ ಕಪಟಸನ್ನದ್ಧೇ ನಿಬದ್ಧೇ ತ್ವಯಿ।**
**ಮುಗ್ಧೇ ತ್ವಂ ವಿರಸಾ ಸಮುಜ್ಝಸಿ ಪರಂ ಸ್ನಿಗ್ಧಂ ನ ತನ್ಮಾಂ ತ್ಯಜೇತ್**
**ಪದ್ಮಾಕ್ಷೀತ್ಯಬಲಾಮುದೀರ್ಯ ವಶಯನ್ ಬುದ್ಧಿಂ ಸ ದದ್ಯಾನ್ಮಮ॥ ೪೨ ॥**

**ಬಧ್ನಾಮಿ** = ಕಟ್ಟುತ್ತೇನೆ, **ಅದ್ಯ** = ಈಗ, **ಭವಂತಂ** = ನಿನ್ನನ್ನು, **ಅಂಗ** = ಪ್ರಿಯನೇ, **ಕಿತವಂ** = ಧೂರ್ತನಾದ, **ಸಾಧ್ಯಂ** = ಮಾಡತಕ್ಕದ್ದು, (**ತತಃ** = ಅದರಿಂದ), **ಕಿಂ** = ಏನು? **ಪ್ರಿಯೇ** = ಗೆಳತಿಯೇ, **ದುಗ್ಧಾನಾಂ** = ಹಾಲುಗಳ, **ಪರಿರಕ್ಷಣಂ** = ರಕ್ಷಣೆಯು, **ಕಪಟ** = ವಂಚನೆಯಿಂದ, **ಸನ್ನದ್ಧೇ** = ಕೂಡಿದ, **ನಿಬದ್ಧೇ** = ಕಟ್ಟಲ್ಪಡುತ್ತಿರಲು, **ತ್ವಯಿ** = ನೀನು, **ಮುಗ್ಧೇ** = ಮನೋಹರಳೇ, **ತ್ವಂ** = ನೀನು, **ವಿರಸಾ** = ಪ್ರೀತಿರಹಿತಳಾದ, **ಸಮುಜ್ಝಸಿ** = ತ್ಯಜಿಸುತ್ತಿ, **ಪರಂ** = ಆದರೆ, **ಸ್ನಿಗ್ಧಂ** = ಪಸೆಯಿಂದ ಕೂಡಿದ, **ನ** = ಇಲ್ಲ, **ತತ್** = ಅದು, **ಮಾಂ** = ನನ್ನನ್ನು, **ತ್ಯಜೇತ್** = ಬಿಡುವುದು, **ಪದ್ಮಾಕ್ಷೀ** = ಕಮಲಾಕ್ಷಿಯೇ, **ಇತಿ** = ಎಂದು, **ಅಬಲಾಂ** = ಹೆಣ್ಣನ್ನು, **ಉದೀರ್ಯ** = ಹೇಳಿ, **ವಶಯನ್** = ವಶೀಕರಿಸುವ, **ಬುದ್ಧಿಂ** = ಬುದ್ಧಿಯನ್ನು, **ಸಃ** = ಕೃಷ್ಣನು, **ದದ್ಯಾತ್** = ಕೊಡಲಿ, **ಮಮ** = ನನಗೆ,

'ಎಲೋ ತುಂಟ ಕೃಷ್ಣನೇ! ನಿನ್ನನ್ನು ಈಗ ಕಟ್ಟಿಹಾಕುವೆನು' ಎಂದು ಗೋಪಿಯು ಹೇಳಿದಳು. 'ನನ್ನನ್ನು ಕಟ್ಟಿದರೆ ನಿನಗೇನು ಲಾಭ?' ಎಂದು ಕೃಷ್ಣನ ಪ್ರಶ್ನೆ. 'ನನ್ನ ಹಾಲು

ಉಳಿಯುತ್ತದೆ' ಎಂದು ಗೋಪಿಯ ಮಾತು. 'ಎಲೋ ಚಂದದ ಹೆಣ್ಣೇ . ಕಮಲಾಕ್ಷಿಯೇ! ನೀನು ನನ್ನನ್ನು ಸಿಟ್ಟಿನಿಂದ ಕಟ್ಟಬಹುಧು. ಆದರೆ ಆ ಹಾಲಿಗೆ ನಾನು ಅಂದರೆ ಬಹಳ ಸ್ನೇಹ. ಅದು ನನ್ನನ್ನು ಬಿಡುವುದಿಲ್ಲ' ಎಂದು ಕೃಷ್ಣನು ಹೇಳಿ ಆ ಗೋಪಿಯನ್ನು ತಾನು ವಶೀಕರಿಸಿ-ಕೊಂಡನು.

ಇಲ್ಲಿ 'ತುಂಟನೇ' ಎಂದು ಹೇಳಿದ್ದರಿಂದ ಗೋಪಿಗೆ ದೇವರಲ್ಲಿನ ಪ್ರೀತಿಯು ವ್ಯಕ್ತ-ವಾಗುತ್ತದೆ. ಕಟ್ಟಿಹಾಕುತ್ತೇನೆ ಎನ್ನುವುದರಿಂದ ದೇವರು ತನ್ನ ಮನೆಯಲ್ಲಿಯೇ ಇರಬೇಕು ಎಂದು ತಿಳಿಯುತ್ತದೆ. ಸ್ನಿಗ್ಧವಾದ ಹಾಲು ಎಂದು ಹೇಳಿದ್ದರಿಂದ ಹಾಲಿನಲ್ಲಿರುವ ದೇವರ ರೂಪ ಸ್ನೇಹಮಯವಾದದ್ದು. ಆದ್ದರಿಂದಲೇ ದೇವರ ನೈವೇದ್ಯಕ್ಕೆ ಹಾಲು ಪ್ರಶಸ್ತ. ಹಾಗಾಗಿಯೇ ನೂತನ ದಂಪತಿಗಳ ಜೀವನ ಸ್ನೇಹಮಯ ಆಗುವುದಕ್ಕೋಸ್ಕರ ಅವರಿಗೆ ಹಾಲು ಕುಡಿಸುವ ಕ್ರಮ ಜಾರಿಯಲ್ಲಿದೆ.

**ತತಃ ಕ್ವಣನ್ನೂಪುರ ಶೋಭಿಪಾದಾಃ**
**ಸ್ತ್ರಿಯೋ ವಿದಗ್ಧೈರನುಮೇಯಮಧ್ಯಾಃ।**
**ಶುಚಿಸ್ಮಿತಾಃ ಕುಂಡಲಶೋಭಿಗಂಡಾಃ**
**ನ್ಯವೇದಯನ್ ತಚ್ಚರಿತಾನಿ ಮಾತುಃ ॥ ೪೩ ॥**

**ತತಃ** = ಅನಂತರ, **ಕ್ವಣತ್** = ಧ್ವನಿಗೈಯುವ, **ನೂಪುರ** = ಕಾಲುಗೆಜ್ಜೆಗಳಿಂದ, **ಶೋಭಿ** = ಶೋಭಿಸುವ, **ಪಾದಾಃ** = ಚರಣವುಳ್ಳ, **ಸ್ತ್ರಿಯಃ** = ಸ್ತ್ರೀಯರು, **ವಿದಗ್ಧೈಃ** = ಪಂಡಿತರಿಂದ, **ಅನುಮೇಯ** = ಊಹಿಸುವ, **ಮಧ್ಯಾಃ** = ಸೊಂಟವುಳ್ಳ, **ಶುಚಿ** = ಸ್ವಚ್ಛವಾದ, **ಸ್ಮಿತಾ** = ನಗುವುಳ್ಳ, **ಕುಂಡಲ** = ಓಲೆಗಳಿಂದ, **ಶೋಭಿ** = ಶೋಭಿಸುವ, **ಗಂಡಾಃ** = ಕೆನ್ನೆಗಳುಳ್ಳ, **ನ್ಯವೇದಯನ್** = ತಿಳಿಸಿದರು, **ತತ್** = ಆ ಕೃಷ್ಣನ, **ಚರಿತಾನಿ** = ಘಟನೆಗಳನ್ನು , **ಮಾತುಃ** = ತಾಯಿಗೆ.

ಅನಂತರ ಒಂದು ದಿನ ಎಲ್ಲಾ ಗೋಪಿಯರೂ ಜೊತೆಯಾಗಿ ಯಶೋದೆಯ ಬಳಿಗೆ ಬಂದರು. ಅವರ ಕಾಲುಗಳ ಗೆಜ್ಜೆಗಳು ಧ್ವನಿಸುತ್ತಿದ್ದವು. ಬಹಳ ಕೃಶವಾದ ಹೊಟ್ಟೆ ಉಳ್ಳವರಾಗಿದ್ದರು. ಕರ್ಣಾಭರಣದಿಂದ ಚಂದ ಕಾಣುವ ಅವರು ಕೃಷ್ಣನ ಚೇಷ್ಟೆಗಳನ್ನು ಯಶೋದೆಯಲ್ಲಿ ನಗುತ್ತಾ ತಿಳಿಸಿದರು. ಸಿಟ್ಟಿನಿಂದ ಅಲ್ಲ, ಪ್ರೀತಿಯಿಂದ ಎಂದು ಅಭಿಪ್ರಾಯ.

**ಯದಾತ್ಮಜಸ್ತೇ ಪಿಬತಿ ಸ್ಮ ದುಗ್ಧಂ**
**ವಿಭಿದ್ಯ ಪಾತ್ರಾಣಿ ತದಾ ಮಮಾಸೀತ್ ।**

**ನ ಮನ್ಯುರುತ್ಸರ್ಪಿತದೀಯದಂತ-**
**ದೃಗಂತಕಾಂತಿಂ ಹೃದಿ ತರ್ಕಯಂತ್ಯಾಃ ॥ ೪೪ ॥**

**ಯದಾ** = ಯಾವಾಗ, **ಆತ್ಮಜಃ** = ಮಗನು, **ತೇ** = ನಿನ್ನ, **ಪಿಬತಿ ಸ್ಮ** = ಕುಡಿಯುತ್ತಾನೆ, **ದುಗ್ಧಂ** = ಹಾಲನ್ನು, **ವಿಭಿದ್ಯ** = ಒಡೆದು, **ಪಾತ್ರಾಣಿ** = ಪಾತ್ರೆಗಳನ್ನು, **ತದಾ** = ಆಗ, **ಮಮ** = ನನಗೆ, **ಆಸೀತ್** = ಆಯಿತು, **ನ** = ಇಲ್ಲ, **ಮನ್ಯುಃ** = ಕೋಪವು, **ಉತ್ ಸರ್ಪಿ** = ಮೇಲ್ಮುಖವಾಗಿ ಹೋಗುವ, **ತದೀಯ** = ಕೃಷ್ಣನ, **ದಂತ** = ಹಲ್ಲುಗಳ, **ದೃಕ್ ಅಂತ** = ಕಡೆಗಣ್ಣಿನ, **ಕಾಂತಿಂ** = ಪ್ರಕಾಶವನ್ನು, **ಹೃದಿ** = ಮನಸ್ಸಿನಲ್ಲಿ, **ತರ್ಕಯಂತ್ಯಾಃ**= ಆಲೋಚಿಸುವ.

ಒಬ್ಬಳು ಗೋಪಿ ಈ ರೀತಿ ಹೇಳಿದಳು – ''ನಿನ್ನ ಮಗ ಹಾಲಿನ ಪಾತ್ರೆಯನ್ನು ಒಡೆದನು. ಆದರಿಂದ ಹಾಲು ಕೆಳಗೆ ಸೋರುತ್ತಿತ್ತು. ಅದನ್ನು ಕೃಷ್ಣನು ನಗುತ್ತಾ ನೋಡಿ ಕುಡಿಯುತ್ತಿದ್ದನು. ಆಗ ಆತನ ಹಲ್ಲುಗಳ ಕಾಂತಿಯು ಹಾಗೂ ಕಣ್ಣುಗಳ ಬಿಳಿಯಾದ ಕಾಂತಿಯು ಹಾಲಿನ ಪಾತ್ರದ ರಂಧ್ರದ ಕಡೆಗೆ ಹೋಗುತ್ತಿತ್ತು. ಇದರಿಂದಾಗಿ ಹಾಲು ಕೆಳಗೆ ಸುರಿಯುವುದು ಕಾಣಿಸದೆ ಕಾಂತಿ ಮಾತ್ರ ಕಾಣುತ್ತಿತ್ತು. ಆದ್ದರಿಂದ ನನಗೆ ಸಿಟ್ಟೇ ಬರಲಿಲ್ಲ. ಏಕೆಂದರೆ, ಬಿಳಿಯಾಗಿ ತೋರುವುದು ಹಾಲಲ್ಲ, ಬದಲಿಗೆ ಬಿಳಿಯಾಗಿ ತೋರುವುದು ಹಲ್ಲಿನ ಹಾಗೂ ಕಣ್ಣಿನ ಕಾಂತಿ. ಆದ್ದರಿಂದ ನನ್ನ ಹಾಲು ನಷ್ಟ ಆಗಲಿಲ್ಲ; ಉಳಿಯಿತು ಎಂದು ಸಂತೋಷಪಟ್ಟೆ'' ಎಂದು.

**ಪಯಃ ಪ್ರಮುಷ್ಣನ್ ಸಖಿ ಭರ್ತ್ಸನಾರ್ಥಂ**
**ಸಮಾಗತಾನಾಂ ಅಪಹೃತ್ಯ ಚೇತಃ।**
**ಸ್ವಕೃತ್ಯಸಾಧ್ಯಾನ್ಯವಲಂಬ್ಯ ಕಂಠಂ**
**ಜಿಘೃಕ್ಷತಿ ಸ್ವೈರಮಯಂ ಸುತಸ್ತೇ ॥೪೫॥**

**ಪಯಃ** = ಹಾಲನ್ನು, **ಪ್ರಮುಷ್ಣನ್** = ಕದಿಯುವ, **ಸಖಿ** = ಗೆಳತಿಯೇ, **ಭರ್ತ್ಸನಾರ್ಥಂ** = ಬೈಯ್ಯುವುದಕ್ಕೋಸ್ಕರ, **ಸಮಾಗತಾನಾಂ** = ಬಂದಿರುವ, **ಅಪಹೃತ್ಯ** = ಅಪಹರಿಸಿ, **ಚೇತಃ** = ಮನಸ್ಸನ್ನು, **ಸ್ವ**= ತನ್ನ, **ಕೃತಿ** = ಪ್ರಯತ್ನದಿಂದ, **ಅಸಾಧ್ಯಾನಿ** = ಮಾಡಲು ಅಶಕ್ಯವಾದದ್ದನ್ನು, **ಅವಲಂಬ್ಯ** = ಆಶ್ರಯಿಸಿ, **ಕಂಠಂ** = ಕುತ್ತಿಗೆಯನ್ನು, **ಜಿಘೃಕ್ಷತಿ** = ಪಡೆಯಲು ಬಯಸುತ್ತಾನೆ, **ಸ್ವೈರಂ** = ಯಥೇಚ್ಛವಾಗಿ, **ಅಯಂ** = ಈ, **ಸುತಃ** = ಮಗನು, **ತೇ** = ನಿನ್ನ.

ಇನ್ನೊಬ್ಬಳ ದೂರು – 'ಹಾಲು ಕದಿಯುತ್ತಿರುವಾಗ ನಾವು ಬೈಯ್ಯಲು ಸಮೀಪ

ಹೋಗುತ್ತಿದ್ದವು. ಆಗ ಆತ ನಮ್ಮನ್ನು ನೋಡುತ್ತಾನೆ. ಆತನ ಸೌಂದರ್ಯಕ್ಕೆ ನಾವು ಮಾರು ಹೋಗುತ್ತೇವೆ. ಅಲ್ಲೇ ಸ್ತಬ್ಧರಾಗಿ ನಿಲ್ಲುತ್ತೇವೆ. ಆಗ ನಮ್ಮ ಹೆಗಲನ್ನೇರಿ ಆತ ಯಾವ ಭಯವೂ ಇಲ್ಲದೆ ಹಾಲನ್ನು ಕುಡಿಯುತ್ತಾನೆ'. ಸ್ತ್ರೀಯರು ಸೌಂದರ್ಯಕ್ಕೆ ಬೇಗ ಬಲಿಯಾಗುತ್ತಾರೆ. ಹಾಗೆಯೇ ಎಲ್ಲರ ಮನಸ್ಸನ್ನೂ ನಿಯಂತ್ರಿಸುವವ ಈತ ಎಂದು ಇದರಿಂದ ತಿಳಿಯುತ್ತದೆ.

ಯದೀದೃಶಂ ಕರ್ಮ ಕರೋಷಿ ಕೃಷ್ಣ
ನ ತರ್ಹಿ ನಂದಸ್ಯ ಸುತಸ್ತ್ವಮನ್ಯಃ।
ಇತೀರಿತೇ ಹಂತ ಹಸನ್ ಯಶೋದೇ
ಬಹೂನ್ಯನಿಷ್ಟಾನಿ ಸ ನಸ್ತನೋತಿ ॥ ೪೬ ॥

**ಯದಿ** = ಒಂದು ವೇಳೆ, **ಈದೃಶಂ** = ಇಂತಹ, **ಕರ್ಮ** = ಕೆಲಸವನ್ನು, **ಕರೋಷಿ** = ಮಾಡುತ್ತಿಯಾದರೆ, **ಕೃಷ್ಣ** = ಕೃಷ್ಣನೇ, **ತರ್ಹಿ** = ಆವಾಗ, **ನಂದಸ್ಯ** = ನಂದನ, **ಸುತಃ** = ಮಗನು, (ನ = ಅಲ್ಲ) **ತ್ವಮ್** = ನೀನು, **ಅನ್ಯಃ** = ಬೇರೆಯವನು, **ಇತಿ** = ಎಂದು, **ಈರಿತೇ** = ಹೇಳುತ್ತಿರಲು, **ಹಂತ** = ಆಶ್ಚರ್ಯವು, **ಹಸನ್** = ನಗುತ್ತಾ, **ಯಶೋದೇ** = ಯಶೋದೆಯೇ, **ಬಹೂನಿ** = ಬಹಳ, **ಅನಿಷ್ಟಾನಿ** = ಅನಿಷ್ಟಗಳನ್ನು, **ಸಃ** = ಅವನು, **ನಃ** = ನಮಗೆ, **ತನೋತಿ**= ಮಾಡುತ್ತಾನೆ.

''ಕೃಷ್ಣ, ನೀನು ಈ ರೀತಿ ಚೇಷ್ಟೆ ಮಾಡಬೇಡ. ನಂದನ ಮಕ್ಕಳು ಈ ರೀತಿ ಮಾಡು-ವವರಲ್ಲ. ಆದ್ದರಿಂದ ನೀನು ಹೀಗೆ ಮಾಡಿದರೆ ನಂದನ ಮಗನೇ ಅಲ್ಲ ಎಂದಾಗುತ್ತದೆ. ಇದು ನಾಚಿಕೆ ಎಂದು ನಾವು ಕೃಷ್ಣನಿಗೆ ಹೇಳಿದರೆ ಅಮ್ಮ ಯಶೋದೆ, ಆತ ಇನ್ನೂ ಹೆಚ್ಚಿನ ತುಂಟಾಟ ಮಾಡುತ್ತಾನೆ'' ಎಂದು ಮತ್ತೊಬ್ಬಳು ದೂರು ನೀಡುತ್ತಾಳೆ.

ದೇವರು ಯಾರ ಮಗನೂ ಅಲ್ಲ. ಆದ್ದರಿಂದ ಈ ಗೋಪಿ ಹೇಳಿದಂತೆ ಇಂತಹ ತಿಳುವಳಿಕೆ ಬರುವುದಕ್ಕಾಗಿ ಕೃಷ್ಣ ಹೆಚ್ಚು ತುಂಟಾಟ ಮಾಡುವುದು ಸರಿ.

ಇದಂ ಹಿ ದೇವಸ್ಯ ಸಮರ್ಪಣಾರ್ಹ-
ಮಿತೀರಿತೇ ತರ್ಹ್ಯಹಮೇವ ದೇವಃ।
ಸ ಇತ್ಥಮಾಭಾಷ್ಯ ತದೇವ ಭುಂಕ್ತೇ
ನ ದೇವಿ ಪುತ್ರಸ್ತವ ದೇವಭಕ್ತಃ ॥ ೪೭ ॥

**ಇದಂ** = ಇದು, **ದೇವಸ್ಯ** = ದೇವರಿಗೆ, **ಸಮರ್ಪಣ** = ಅರ್ಪಣೆಗೆ, **ಅರ್ಹಂ** =

ಯೋಗ್ಯವು, ಇತಿ = ಎಂದು, **ಈರಿತೇ** = ಹೇಳುತ್ತಿರಲು, **ತರ್ಹಿ** = ಹಾಗಾದರೆ, **ಅಹಂ ಏವ** = ನಾನೇ, **ದೇವಃ** = ದೇವರು, **ಸಃ** = ಅವನು, **ಇತ್ಥಂ** = ಈ ರೀತಿಯಾಗಿ, **ಆಭಾಷ್ಯ** = ಹೇಳಿ, **ತತ್ ಏವ** = ಅದನ್ನೇ, **ಭುಂಕ್ತೇ** = ತಿನ್ನುತ್ತಾನೆ, **ದೇವಿ** = ಯಶೋದೆಯೇ, **ಪುತ್ರಃ** = ಮಗನು, **ತವ** = ನಿನ್ನ, **ನ ದೇವಭಕ್ತಃ** = ದೇವರ ಭಕ್ತನಲ್ಲವೇ?

ಮಗದೊಬ್ಬಳ ದೂರು ಹೀಗಿದೆ – ''ಅಮ್ಮ, ಕೃಷ್ಣ ತಿನ್ನಬಾರದು ಎಂದು ಎಲ್ಲಾ ಹಾಲು ಮೊಸರುಗಳನ್ನು ದೇವರ ಮುಂಭಾಗದಲ್ಲಿ ಇಟ್ಟಿದ್ದೆನು. ಕೃಷ್ಣ ಬಂದು ಕೈಹಾಕಲು ನೋಡಿದ. ದೇವಸಮರ್ಪಣೆ ಆಗಿಲ್ಲ ಎಂದು ಹೇಳಿದೆ. ಆಗ ಆತನು ನಾನೇ ದೇವರು. ಎಲ್ಲವೂ ನನಗೇ ಸಮರ್ಪಣೆ. ಎಲ್ಲವೂ ಕೃಷ್ಣಾರ್ಪಣ ಎಂದು ಹೇಳಿ ಎಲ್ಲವನ್ನೂ ತಿಂದ. ಅಮ್ಮ ನಿನ್ನ ಮಗ ದೇವರ ಭಕ್ತನಲ್ಲವೇ? ನೀವು ತುಂಬಾ ಭಕ್ತರು. ನಿಮ್ಮ ಯಾವ ಗುಣವೂ ಆತನಿಗೆ ಬಂದಿಲ್ಲ'' ಎಂದಳು.

**ಗೃಹೇ ಗೃಹೇಽಯಂ ನವನೀತದುಗ್ಧದಧೀನಿ**
**ಸರ್ವಾಣ್ಯಪಹೃತ್ಯ ಭುಂಕ್ತೇ।**
**ತಥಾಪಿ ತೃಪ್ತಿಂ ನ ಸುತಸ್ತವೈತಿ**
**ಕಿಮಸ್ಯ ಭೂತಾನಿ ವಸಂತಿ ಕುಕ್ಷೌ ॥೪೮॥**

**ಗೃಹೇಗೃಹೇ** = ಪ್ರತಿಮನೆಯಲ್ಲಿಯೂ, **ಅಯಂ** = ಇವನು, **ನವನೀತ** = ಬೆಣ್ಣೆಯನ್ನು, **ದುಗ್ಧ** = ಹಾಲನ್ನು, **ದಧೀನಿ** = ಮೊಸರನ್ನು, **ಸರ್ವಾಣಿ** = ಎಲ್ಲವನ್ನೂ, **ಅಪಹೃತ್ಯ** = ಅಪಹರಿಸಿ, **ಭುಂಕ್ತೇ** = ತಿನ್ನುತ್ತಾನೆ. **ತಥಾಪಿ** = ಹಾಗಿದ್ದರೂ, **ತೃಪ್ತಿಂ** = ತೃಪ್ತಿಯನ್ನು, **ಸುತಃ** = ಮಗನು, **ತವ** = ನಿನ್ನ, (ನ) ಏತಿ = ಹೊಂದುವುದಿಲ್ಲ. **ಕಿಮ್ ಅಸ್ಯ** = ಏನು ಇವನ, **ಭೂತಾನಿ** = ಭೂತಗಳು, **ವಸಂತಿ** = ಇವೆಯೋ? **ಕುಕ್ಷೌ**= ಹೊಟ್ಟೆಯಲ್ಲಿ.

ಮತ್ತೊಬ್ಬಳ ದೂರು – ''ಯಶೋದೆ! ಎಲ್ಲಾ ಮನೆಗಳಿಗೂ ಕೃಷ್ಣ ಹೋಗಿ ಭಾರೀ ಮೊಸರು, ಹಾಲು, ಬೆಣ್ಣೆಗಳನ್ನು ತಿನ್ನುತ್ತಾನೆ. ಆದರೂ ಆತನಿಗೆ ಸಾಕು ಎಂದು ಅನ್ನಿಸು-ವುದಿಲ್ಲ. ಅಮ್ಮ! ಈತನ ಹೊಟ್ಟೆಯಲ್ಲಿ ಭೂತಗಳು ಇವೆಯೋ?'' ಎಂದು.

ಕೃಷ್ಣನು ಜಗದುದರ. ಆತನ ಹೊಟ್ಟೆಯಲ್ಲಿ ಪಂಚಭೂತಗಳೂ ಇವೆ. ಆದ್ದರಿಂದ ಈಕೆ ಉತ್ಪ್ರೇಕ್ಷೆ ಸರಿಯಾಗಿಯೇ ಇದೆ.

**ನ ಮುಂಚ ವತ್ಸಾನ್ ತ್ವಮಿಹೇತ್ಯ ಬದ್ಧಾನ್**
**ಇತೀರಿತೇ ಪುಣ್ಯಪದೇ ಯಶೋದೇ।**

ಸ್ಮಿತೋಲ್ಲಸತ್ ವಕ್ತ್ರಮದಾತ್ ಸುತಸ್ತೇ
ಸ್ವಭಾವ ಇತ್ಯುತ್ತರಮುತ್ತರಜ್ಞಃ ॥ ೪೯ ॥

**ನ ಮುಂಚ** = ಬಿಡಬೇಡ, **ವತ್ಸಾನ್** = ಕರುಗಳನ್ನು, **ತ್ವಂ** = ನೀನು, **ಇಹ** = ಇಲ್ಲಿಗೆ, **ಏತ್ಯ** = ಬಂದು, **ಬದ್ಧಾನ್** = ಕಟ್ಟಿದ, **ಇತಿ** = ಎಂದು, **ಈರಿತೇ** = ಹೇಳುತ್ತಿರಲು, **ಪುಣ್ಯಪದೇ** = ಒಳ್ಳೆಯ ಹೆಸರುಳ್ಳ, **ಯಶೋದೇ** = ಯಶೋದೆಯೇ!, **ಸ್ಮಿತ** = ನಗುವಿನ, **ಉಲ್ಲಸತ್** = ಶೋಭಿಸುವ, **ವಕ್ತ್ರಮ್** = ಮುಖವುಳ್ಳದ್ದಾಗಿ, **ಅದಾತ್** = ಕೊಟ್ಟನು, **ಸುತಃ** = ಮಗನು, **ತೇ** = ನಿನ್ನ, **ಸ್ವಭಾವಃ** = ಸ್ವಭಾವವು, **ಇತಿ** = ಎಂದು, **ಉತ್ತರಮ್** = ಉತ್ತರವನ್ನು, **ಉತ್ತರಜ್ಞಃ**= ಉತ್ತರವನ್ನು ತಿಳಿದ.

ಒಬ್ಬಳ ದೂರು – 'ಅಮ್ಮ! ಕೃಷ್ಣ ಮನೆಗೆ ಬಂದ, ಕಟ್ಟಿದ ಕರುಗಳನ್ನು ಬಿಡಿಸಿದ. ಬಿಡಬೇಡವೋ ಅವುಗಳು ಆಕಳುಗಳ ಹಾಲನ್ನು ಕುಡಿಯುತ್ತವೆ ಎಂದೆ. ತಾಯೇ ಆಗ ಕೃಷ್ಣನು ನಗುತ್ತಾ ಇದು ನನ್ನ ಸ್ವಭಾವ ಎಂದನು. ಯಾರಿಗೆ ಏನು ಉತ್ತರ ಕೊಡಬೇಕೆಂದು ತಿಳಿದಿದ್ದಾನೆ ನಿನ್ನ ಮಗ. ಆದ್ದರಿಂದ ನಾವು ಮರು ಮಾತನಾಡುವಂತೆಯೇ ಇಲ್ಲ' ಎಂದಳು.

ಈ ಗೋಪಿಗೆ ಕೃಷ್ಣನ ತಿಳುವಳಿಕೆ ಚೆನ್ನಾಗಿದೆ. ಆದ್ದರಿಂದ ಯಶೋದೆಯನ್ನು 'ಪುಣ್ಯಪದೇ' ಅಂದರೆ ಪುಣ್ಯವನ್ನು ಸಂಪಾದಿಸಿದವಳೇ! ಎಂದು ಕರೆದಿದ್ದಾಳೆ. ದೇವರನ್ನು ಮಗನನ್ನಾಗಿ ಪಡೆದದ್ದರಿಂದಲೇ ಈ ವಿಶೇಷಣವು ಸಾರ್ಥಕವಾದದ್ದು. ಕೃಷ್ಣನಿಗೆ ಉತ್ತರಜ್ಞಃ ಉತ್ತರವನ್ನು ತಿಳಿದವನು ಎಂಬ ವಿಶೇಷಣವಿದೆ. ದೇವರು ಕೊಟ್ಟ ಉತ್ತರ ಸ್ವಭಾವ ಎಂದು. ಉಪನಿಷತ್ತು ಹೇಳುತ್ತದೆ ದೇವಸ್ಯೇಷಃ ಸ್ವಭಾವೋಽಯಂ. ಇದು ದೇವರ ಸ್ವಭಾವ. ಯಾವುದೆಂದರೆ ಬಂಧಕೋ ಭವಪಾಶೇನ ಭವಪಾಶಾಚ್ಚ ಮೋಚಕಃ, ಸಂಸಾರವೆಂಬ ಹಗ್ಗದಿಂದ ಬಂಧಿಸಿರುವುದು ಹಾಗೆಯೇ ಬದ್ಧರಾದ ಜೀವರನ್ನು ಬಿಡಿಸುವುದು. ಆದ್ದರಿಂದ ಇದು ದೇವರು ಮತ್ತು ಭಕ್ತರ ನಡುವೆ ನಡೆದ ಸಂವಾದ ಹೊರತು ಸಾಮಾನ್ಯ ಒಂದು ಸ್ತ್ರೀಗೂ ದೇವರಿಗೂ ನಡೆದ ಮಾತುಕತೆ ಅಲ್ಲ.

ಕಸ್ಮಾದಂಗ ನಯಸ್ಯುಲೂಖಲಮಿತೋ ದುಗ್ಧಸ್ಯ ಪಾತ್ರಾದಧಃ
ಸ್ನಿಗ್ಧಂ ಸ್ಥಾಪಯಿತುಂ ತತಶ್ಚ ಕಿಮಿತಿ ಪ್ರೋಕ್ತೇ ಪ್ರಭುರ್ಯೋಽಗದತ್ ।
ಮಧ್ಯಸ್ಯಾಗ್ರಸುಜಾತಸುಸ್ಮಿತಪಯಃ ಪಾತ್ರಾನನಸ್ಯೋಪಮಾಂ
ಮುಗ್ಧೇ ವೀಕ್ಷಯಿತುಂ ತವೇತಿ ಸ ಪಟುರ್ದುಷ್ಕರ್ಮಣಾಂ ಗೂಹನೇ ॥೫೦॥

**ಕಸ್ಮಾತ್** = ಯಾಕೆ, **ಅಂಗ** = ಮಗುವೇ, **ನಯಸಿ** = ಒಯ್ಯುವಿ, **ಉಲೂಖಲಮ್** =

ಒರಳನ್ನು, **ಇತಃ** = ಇಲ್ಲಿಂದ, **ದುಗ್ಧಸ್ಯ** = ಹಾಲಿನ, **ಪಾತ್ರಾತ್** = ಪಾತ್ರೆಯ, **ಅಧಃ** = ಕೆಳಗೆ, **ಸ್ನಿಗ್ಧಂ** = ಒಳ್ಳೆಯ ಒರಳನ್ನು, **ಸ್ಥಾಪಯಿತುಂ** = ಇಡಲು, **ತತಃ ಚ** = ಅನಂತರ, **ಕಿಮ್** = ಏನು? ಇತಿ = ಎಂದು, **ಪ್ರೋಕ್ತೇ** = ಕೇಳುತ್ತಿರಲು, **ಪ್ರಭುಃ** = ಸ್ವಾಮಿಯಾದ, **ಯಃ** = ಕೃಷ್ಣನು, **ಅಗದತ್** = ಹೇಳಿದನು, **ಮಧ್ಯಸ್ಯ** = ಮಧ್ಯಭಾಗಕ್ಕೆ, **ಅಗ್ರ** = ಮೇಲೆ, **ಸುಜಾತ** = ಉಂಟಾದ, **ಸುಸ್ಮಿತಃ** = ನಗುವಿನಂತಿರುವ, **ಪಯಃ** = ಹಾಲಿನ, **ಪಾತ್ರ** = ಪಾತ್ರವೆಂಬ, **ಆನನಸ್ಯ** = ಮುಖವುಳ್ಳ, **ಉಪಮಾಂ** = ಹೋಲಿಕೆಯನ್ನು, **ಮುಗ್ಧೇ** = ಮನೋಹರಳೇ! **ವೀಕ್ಷಯಿತುಂ** = ನೋಡಲು, **ತವ** = ನಿನ್ನ, **ಇತಿ** = ಎಂದು, **ಸಃ** = ಆ, **ಪಟುಃ** = ಚತುರನು, **ದುಷ್ಕರ್ಮಣಾಂ** = ಕೆಟ್ಟಕೆಲಸಗಳ, **ಗೂಹನೇ**= ಅಡಗಿಸುವುದರಲ್ಲಿ.

ಮಗದೊಬ್ಬಳ ದೂರು – “ಅಮ್ಮ, ಕೃಷ್ಣನು ಉಲೂಖಲವನ್ನು (ಒರಳನ್ನು) ಒಯ್ಯುತ್ತಿದ್ದ. ಎಲ್ಲಿಗೆ ಒಯ್ಯುತ್ತಿ? ಎಂದು ಕೇಳಿದೆ. ಹಾಲಿನ ಪಾತ್ರೆಯ ಅಡಿಯಲ್ಲಿಡಲು ಎಂದ. ಯಾಕೆ? ಎಂದು ಕೇಳಿದಾಗ ನಿನಗೂ ಇದಕ್ಕೂ ಸಾಮ್ಯವನ್ನು ನೋಡಲು ಎಂದನು. ಅದು ಹೇಗೆ? ಎಂದು ಕೇಳಿದಾಗ ನಿನ್ನ ಮಧ್ಯ ಭಾಗ ಅಂದರೆ ಕಟಿಪ್ರದೇಶ ಕೃಶವಾಗಿದೆ. ನಿತಂಬ ಹಾಗೂ ಹೃದಯ ವಿಶಾಲವಾಗಿದೆ. ಉಲೂಖಲವೂ ಹಾಗೇ ಇದೆ. (ಉಲೂಖಲ ಅಂದರೆ ಹಿಂದಿನ ಕಾಲದ ಅವಲಕ್ಕಿ ಕುಟ್ಟುವ ಸಾಧನ. ಅದು ಮಧ್ಯಭಾಗದಲ್ಲಿ ಸಪೂರ. ಮೇಲೆ ಮತ್ತು ಕೆಳಗೆ ಅಗಲವಾಗಿದೆ). ಮುಂದೇನು? ಎಂದು ಕೇಳಿದಾಗ, ಉಲೂಖಲದ ಮೇಲ್ಭಾಗದಲ್ಲಿ ಹಾಲಿನ ಗಡಿಗೆ ಇದೆ. ಅದಕ್ಕೆ ನೀನು ಅರಿಶಿನ, ಕುಂಕುಮ ಹಚ್ಚಿದ್ದಿ. ಅದರಲ್ಲಿ ಬಿಳಿಯಾದ ಹಾಲಿದೆ. ಅದೇ ರೀತಿ ನಿನ್ನ ಎದೆಯ ಮೇಲ್ಭಾಗದಲ್ಲಿ ನಿನ್ನ ಮುಖ ಇದೆ. ಮುಖದಲ್ಲಿ ಕುಂಕುಮಾದಿಗಳು ಇವೆ. ಮುಖದಲ್ಲಿ ಹಾಲಿನಂತಹ ನಗುವಿದೆ. ಆದ್ದರಿಂದ ಇದನ್ನು ನೋಡಿದಾಗ ನಿನ್ನನ್ನು ನೋಡಿದಂತೆ ಆಗುತ್ತದೆ ಎಂದು ಹೇಳಿದನು. ಆಗ ನಾನು ಪೂರ್ಣ ಆತನ ವಶಳಾದೆ. ಈ ರೀತಿ ತಾನು ಮಾಡುವ ಚೌರ್ಯವನ್ನು ಮರೆ ಮಾಚುವುದರಲ್ಲಿ ನಿನ್ನ ಮಗ ಬಹಳ ನಿಪುಣ' ಎಂದಳು.

**ಕ್ವಚಿತ್ಕರೇಣೈವ ಸ ದುಗ್ಧಭಾಜನಂ**
**ಕ್ವಚಿಚ್ಚ ಪಾದೇನ ಸಮೀಕ್ಷತೇ ಸಖಿ।**
**ಸಮಾಗತಾಃ ಪಶ್ಯತಿ ಪೃಷ್ಠತಸ್ತದಾ**
**ಸ ವಿಶ್ವತಶ್ಚಕ್ಷುರಿವಾಸ್ತಿ ಬಾಲಕಃ ॥೫೧॥**

**ಕ್ವಚಿತ್** = ಕೆಲವು ಕಡೆ, **ಕರೇಣೈವ** = ಕೈಯಿಂದಲೇ, **ಸಃ** = ಅವನು, **ದುಗ್ಧಭಾಜನಂ** = ಹಾಲಿನ ಪಾತ್ರೆಯನ್ನು, **ಕ್ವಚಿಚ್ಚ** = ಕೆಲವೊಮ್ಮೆ, **ಪಾದೇನ** = ಕಾಲಿನಿಂದ, **ಸಮೀಕ್ಷತೇ** =

ನೋಡುತ್ತಾನೆ. **ಸಖಿ** = ಗೆಳತಿಯೇ, **ಸಮಾಗತಾಃ** = ಬಂದವರನ್ನು, **ಪಶ್ಯತಿ** = ನೋಡುತ್ತಾನೆ, **ಪೃಷ್ಠತಃ** = ಹಿಂದಿನಿಂದ, **ತದಾ** = ಆಗ, **ಸಃ** = ಅವನು, **ವಿಶ್ವತಃ** = ಎಲ್ಲೆಡೆ, **ಚಕ್ಷುರಿವ** = ಕಣ್ಣುಳ್ಳವರಂತೆ, **ಅಸ್ತಿ** = ಇದ್ದಾನೆ, **ಬಾಲಕಃ**= ಬಾಲಕನು.

ಪುನಃ ಮತ್ತೊಬ್ಬಳ ದೂರು – ಅಮ್ಮ, ಕೃಷ್ಣನ ಕಣ್ಣಿಗೆ ಮಡಕೆಗಳು ಕಾಣಬಾರದೆಂದು ಇಟ್ಟರೆ, ಆತನು ಕೈಕಾಲುಗಳಿಂದಲೇ ಅವುಗಳ ಇರುವಿಕೆಯನ್ನು ತಿಳಿಯುತ್ತಾನೆ. ಆತನಿಗೆ ಗೊತ್ತಾಗಬಾರದು ಎಂದು ಹಿಂದಿನಿಂದ ಹೋದರೆ ತಾನು ಹಿಂದೆ ತಿರುಗದೆಯೇ ನೋಡಿ ಬಿಡುತ್ತಾನೆ. ಹೇಗೆಂದೇ ಅರ್ಥ ಆಗುತ್ತಿಲ್ಲ. ಏನಾದರೂ ಆತನಿಗೆ ಕೈಮೈಯೆಲ್ಲಾ ಕಣ್ಣಾಗಿ-ದೆಯಾ? ಎಂದಳು. ಈ ಗೋಪಿಯು 'ವಿಶ್ವತಃ ಚಕ್ಷುರುತ ವಿಶ್ವತೋ ಮುಖಃ' ಎಂಬ ಶ್ರುತಿಯನ್ನು ಹಿಡಿದುಕೊಂಡು ಕೃಷ್ಣನನ್ನು ದೂರಿದಳು.

**ಉಲೂಖಲೇ ತಂ ಯದಿ ಬಂಧಯಾಮೋ**
**ನಯೇತ್ ತದೋಲೂಖಲಮೇವ ಬಾಲಃ।**
**ಧ್ರುವಂ ಗೃಹಸ್ತಂಭವರೇ ನಿಬದ್ಧೋ**
**ಗೃಹಾಣ್ಯಸೌ ಪಾತಯಿತುಂ ಸಮರ್ಥಃ ॥ ೫೨ ॥**

**ಉಲೂಖಲೇ** = ಒರಳಲ್ಲಿ, **ತಂ** = ಅವನನ್ನು, **ಯದಿ** = ಒಂದುವೇಳೆ, **ಬಂಧಯಾಮಃ** = ಬಂಧಿಸಿದರೆ, **ನಯೇತ್** = ಒಯ್ಯುತ್ತಾನೆ, **ತದಾ** = ಆಗ, **ಉಲೂಖಲಮೇವ** = ಒರಳನ್ನೇ, **ಬಾಲಃ** = ಹುಡುಗನು, **ಧ್ರುವಂ** = ನಿಶ್ಚಯ, **ಗೃಹ** = ಮನೆಯ, **ಸ್ತಂಭವರೇ** = ಉತ್ತಮ ಕಂಭದಲ್ಲಿ, **ನಿಬದ್ಧಃ** = ಕಟ್ಟಲ್ಪಟ್ಟರೆ, **ಗೃಹಾಣಿ** = ಮನೆಗಳನ್ನು, **ಅಸೌ** = ಇವನು, **ಪಾತಯಿತುಂ** = ಬೀಳಿಸಲು, **ಸಮರ್ಥಃ** = ಸಮರ್ಥನು.

ಮತ್ತೊಬ್ಬಳ ದೂರು – ''ಈತನ ತಂಟೆ ತಡೆಯಲಾರದೆ ಉಲೂಖಲದಲ್ಲಿ ಬಂಧಿಸಿ-ದರೆ ಅದನ್ನೇ ಎಳೆದುಕೊಂಡು ಹೋದ. ಅಕಸ್ಮಾತ್ ನಾನು ಆತನನ್ನು ಮನೆಯ ಕಂಬಕ್ಕೆ ಕಟ್ಟಿದರೆ' ಎಂದು ಮಾತನ್ನು ಅಲ್ಲಿಯೇ ನಿಲ್ಲಿಸಿದಳು. ಅಂದರೆ ಮನೆಯನ್ನೇ ಬೀಳಿಸಿಯಾನು. ಮನೆಯನ್ನು ಬೀಳಿಸುವಷ್ಟು ಸಾಮರ್ಥ್ಯವುಳ್ಳವನು ಇವನು ಎಂದರ್ಥ.

**ವಿಶ್ವಂಭರಸ್ಯಾಸ್ಯ ಹಿ ಬಂಧನಾಯ**
**ದಾಮಾನಿ ಸಂಪಾದಯಿತುಂ ಕ ಈಶಃ।**
**ಬದ್ಧಃ ಕಥಂಚಿತ್ ಯದಿ ತರ್ಹಿ ಬದ್ಧಾಃ**
**ಮಧ್ಯೇ ವಿಲೀನಾ ವಯಮೇವ ನೂನಮ್ ॥ ೫೩ ॥**

**ವಿಶ್ವಂಭರಸ್ಯ** = ಜಗತ್ತನ್ನು ಧರಿಸಿದ, **ಅಸ್ಯ ಹಿ** = ಈ ಕೃಷ್ಣನ, **ಬಂಧನಾಯ** = ಕಟ್ಟಲು, **ದಾಮಾನಿ** = ಹಗ್ಗಗಳನ್ನು, **ಸಂಪಾದಯಿತುಂ** = ಸಂಗ್ರಹಿಸಲು, **ಕಃ** = ಯಾವನು, **ಈಶಃ** = ಸಮರ್ಥನು, **ಬದ್ಧಃ** = ಕಟ್ಟಲ್ಪಟ್ಟರೆ, **ಕಥಂಚಿತ್** = ಹೇಗೋ ಬಹುಕಷ್ಟದಿಂದ, **ಯದಿ** = ಒಂದು ವೇಳೆ, **ತರ್ಹಿ** = ಆವಾಗ, **ಬದ್ಧಾಃ** = ಕಟ್ಟಲ್ಪಡುವೆವು, **ಮಧ್ಯೇ** = ಮಧ್ಯದಲ್ಲಿ, **ವಿಲೀನಾಃ** = ಸಿಕ್ಕಿದವರಾಗಿ, **ವಯಮ್ ಏವ** = ನಾವೇ, **ನೂನಮ್** = ನಿಶ್ಚಯವು.

ಇನ್ನೊಬ್ಬಳು – ''ಈತನನ್ನು ಕಟ್ಟೋಣ ಅಂದರೆ ಈತನು ವಿಶ್ವಂಭರ. ಇಷ್ಟು ದೊಡ್ಡ ಜಗತ್ತನ್ನು ಕಟ್ಟಲು ಬೇಕಾದ ಹಗ್ಗ ಇಲ್ಲ. ಇನ್ನು ವಿಶ್ವಂಭರನನ್ನು ಕಟ್ಟಲು ಹಗ್ಗವನ್ನು ಎಲ್ಲಿಂದ ತರುವುದು? ಬಹು ಕಷ್ಟಪಟ್ಟು ಹಗ್ಗವನ್ನು ತಂದು ಕಟ್ಟಿದರೂ ಆ ಬಂಧನಕ್ಕೆ ಆತನು ಸಿಗುವುದಿಲ್ಲ. ಏಕೆಂದರೆ, ಆತ ನಿತ್ಯಮುಕ್ತ. ಆತನಲ್ಲಿ ಸೇರಿದ ನಾವೇ ಬದ್ಧರಾಗುವುದು. ಇದು ದೇವರನ್ನು ನಾವು ಯಾವ ರೀತಿ ಉಪಾಸನೆ ಮಾಡುತ್ತೇವೋ ಆ ರೀತಿ ಫಲವನ್ನು ಪಡೆಯುತ್ತೇವೆ ಎಂಬುದಕ್ಕೆ ಉದಾಹರಣೆ. ಮುಂದೆ ಒಂದು ದಿನ ಕೃಷ್ಣನನ್ನು ಕಟ್ಟಲು ಪ್ರಯತ್ನಿಸುವ ಯಶೋದೆಗೂ ಒಂದು ಸೂಚನೆ.

**ಅಹೋ ಯಶೋದೇ ತವ ಬಾಲಕೋಽಯಂ**
**ಗೃಹೇ ಗೃಹೇಽತ್ಯುಷ್ಣಮಪೀಹ ದುಗ್ಧಮ್ ।**
**ಪಿಬನ್ನ ತಾಪಂ ಲಭತೇ ಕದಾಪಿ**
**ಕಿಮಸ್ಯ ವಕ್ತ್ರೇ ಜಲರಾಶಿರಾಸ್ತೇ ॥ ೫೪ ॥**

**ಅಹೋ** = ಆಶ್ಚರ್ಯ, **ಯಶೋದೇ** = ಯಶೋದೆಯೇ, **ತವ** = ನಿನ್ನ, **ಬಾಲಕಃ** = ಮಗನು, **ಅಯಂ** = ಈ, **ಗೃಹೇಗೃಹೇ** = ಪ್ರತಿಮನೆಯಲ್ಲಿಯೂ, **ಅತ್ಯುಷ್ಣಮ್ ಅಪಿ** = ಬಹಳ ಬಿಸಿಯಾಗಿದ್ದರೂ, **ಇಹ** = ಇಲ್ಲಿ, **ದುಗ್ಧಮ್** = ಹಾಲನ್ನು, **ಪಿಬನ್** = ಕುಡಿಯುತ್ತಾ, **ತಾಪಂ** = ದುಃಖವನ್ನು, **ನ ಲಭತೇ** = ಹೊಂದುವುದಿಲ್ಲ, **ಕದಾಪಿ** = ಯಾವಾಗಲೂ, **ಕಿಮ್** = ಏನು, **ಅಸ್ಯ** = ಇವನ, **ವಕ್ತ್ರೇ** = ಬಾಯಿಯಲ್ಲಿ, **ಜಲರಾಶಿಃ** = ಸಮುದ್ರವು, **ಆಸ್ತೇ** = ಇದೆಯೋ?

ಮಗದೊಬ್ಬಳು – ''ಅಮ್ಮ, ಕೃಷ್ಣ ಹಾಲು ಕುಡಿಯಬಾರದು ಎಂದು ಸದಾ ಒಲೆಯ ಮೇಲೆಯೇ ಇಡುತ್ತಿದ್ದೆ. ಅಂತಹ ಬಿಸಿ ಹಾಲನ್ನು ಅನಾಯಾಸವಾಗಿ ಬೇಗಬೇಗನೇ ಕುಡಿಯುತ್ತಿದ್ದ. ಆತ ಕುಡಿಯುವುದು ನೋಡಿದಾಗ, ಆತನ ಬಾಯಿಯಲ್ಲಿ ಸಮುದ್ರ ಇದೆಯೋ ಎಂಬ ಭಾವನೆ ಬರುತ್ತದೆ'' ಎಂದಳು. ಈ ಮಾತು ಶ್ರುತಿಸಿದ್ಧವಾಗಿದೆ. ಸಮುದ್ರದ ಅಧಿಪತಿ ವರುಣನು ದೇವರ ಮುಖವನ್ನು ಆಶ್ರಯಿಸಿದ್ದಾನೆ.

ವಿಲೋಕ್ಯ ದೂರಸ್ಥಿತದುಗ್ಧಭಾಂಡ-
ಮುಲೂಖಲಾದ್ಯೈಃ ಯತತೇ ಗೃಹೀತುಮ್ ।
ಶಿಶುಃ ಸ ತಾವತ್ ಕ್ವಚಿದೇಧತೇऽಹೋ
ಕಿಮೇಷ ಗೂಢಾಷ್ಟಮಹಾವಿಭೂತಿಃ ॥ ೫೫ ॥

**ವಿಲೋಕ್ಯ** = ನೋಡಿ, **ದೂರ** = ದೂರದಲ್ಲಿ, **ಸ್ಥಿತ** = ಇರುವ, **ದುಗ್ಧ** = ಹಾಲಿನ, **ಭಾಂಡಂ** = ಪಾತ್ರೆಯನ್ನು, **ಉಲೂಖಲ** = ಒರಳು, **ಆದ್ಯೈಃ** = ಮೊದಲಾದ್ದರಿಂದ, **ಯತತೇ** = ಪ್ರಯತ್ನಿಸುತ್ತಾನೆ, **ಗೃಹೀತುಂ** = ತೆಗೆಯಲು, **ಶಿಶುಃ** = ಮಗುವು, **ಸಃ** = ಆ, **ತಾವತ್** = ಅಲ್ಲಿಯ ತನಕ, **ಕ್ವಚಿತ್** = ಒಮ್ಮೆ, **ಏಧತೇ** = ಬೆಳೆಯುತ್ತಾನೆ, **ಅಹೋ** = ಆಶ್ಚರ್ಯ, **ಕಿಮ್** = ಏನು? **ಏಷಃ** = ಇವನು, **ಗೂಢ** = ರಹಸ್ಯವಾದ, **ಅಷ್ಟ** = ಎಂಟು, **ಮಹಾವಿಭೂತಿಃ** = ದೊಡ್ಡ ಐಶ್ವರ್ಯವುಳ್ಳವನು.

ಪಕ್ಕದಲ್ಲಿದ್ದವಳು – ''ಯಶೋದೆ, ಹಾಲಿನ ಪಾತ್ರೆಯನ್ನು ಬಹಳ ಎತ್ತರದಲ್ಲಿ ಕಟ್ಟಿದ್ದೆನು. ಕೃಷ್ಣನಿಗೆ ಎಟುಕಬಾರದು ಎಂದು. ಸಮೀಪದಲ್ಲಿ ಏಣಿ ಏನಾದರೂ ಇದ್ದರೆ ಅದರ ಮೂಲಕ ಹತ್ತಲು ಪ್ರಯತ್ನಿಸುತ್ತಾನೆ. ಏನೂ ಸಿಗದಿದ್ದರೆ, ತಾನೇ ಅಷ್ಟು ಎತ್ತರಕ್ಕೆ ಬೆಳೆಯುತ್ತಾನೆ. ಈತನು ಅಷ್ಟೈಶ್ವರ್ಯಸಿದ್ಧಿಯುಳ್ಳವನು' ಎಂದು ದೂರಿದಳು.

ನ ನಿಷ್ಠುರಾ ವಾಕ್ ಸಮುದೇತಿ ವಕ್ತ್ರಾತ್
ಕರಶ್ಚ ನಸ್ತಾಡಯಿತುಂ ಯಶೋದೇ ।
ವಿಲೋಲನೇತ್ರಂ ತವ ಪುತ್ರರತ್ನಂ
ಧ್ರುವಂ ಸುತಸ್ತೇ ಜಗತಾಂ ನಿಯಂತಾ ॥ ೫೬ ॥

**ನಿಷ್ಠುರಾ** = ಕಠಿನವಾದ, **ವಾಕ್** = ಮಾತು, **ನ ಸಮುದೇತಿ** = ಬರುವುದಿಲ್ಲ, **ವಕ್ತ್ರಾತ್** = ಬಾಯಿಯಿಂದ, **ಕರಶ್ಚ** = ಕೈಯಾದರೋ, **ನಃ** = ನಮ್ಮಗಳ, **ತಾಡಯಿತುಂ (ನ)** = ಹೊಡೆಯಲು ಬರುವುದಿಲ್ಲ, **ಯಶೋದೇ** = ಯಶೋದೆಯೇ, **ವಿಲೋಲ** = ಚಂಚಲವಾದ, **ನೇತ್ರಂ** = ಕಣ್ಣುಳ್ಳ, **ತವ** = ನಿನ್ನ, **ಪುತ್ರರತ್ನಂ** = ಮಗನೆಂಬ ರತ್ನವನ್ನು, **ಧ್ರುವಂ** = ನಿಶ್ಚಯವಾಗಿಯೂ, **ಸುತಃ** = ಮಗನು, **ತೇ** = ನಿನ್ನ, **ಜಗತಾಂ** = ಲೋಕದ, **ನಿಯಂತಾ** = ನಿಯಾಮಕನು.

ಮತ್ತೊಬ್ಬಳು – ಹೇ ಅಮ್ಮ! ನಿನ್ನ ಮಗನ ಲೂಟಿಯನ್ನು ನೋಡಿದರೂ ಬೈಗಳು ನನ್ನ ಬಾಯಿಂದ ಹೊರಡುವುದೇ ಇಲ್ಲ; ಹೊಡೆಯಲು ಕೈ ಮುಂದೆ ಬರುವುದಿಲ್ಲ. ಈ ರೀತಿ ತನ್ನ ನೋಟದಿಂದ ನಮ್ಮನ್ನು ನಿಯಂತ್ರಣದಲ್ಲಿಟ್ಟಿರುವ ಈ ಕೃಷ್ಣನು ಇಡೀ ಜಗತ್ತನ್ನು ಇದೇ ರೀತಿ ನಿಯಮಿಸುತ್ತಾನೆ.

**ಬತಾಂಧಕಾರಾರ್ಪಿತದಧ್ಯಮತ್ರಂ**
**ಅಪಿ ಸ್ವಭಾಸ್ವನ್ನಯನಾಂತಲಕ್ಷ್ಮ್ಯಾ ।**
**ಸಮೀಕ್ಷತೇ ಲೋಚನಯೋಃ ಕಿಮೇಷ**
**ಬಿಭರ್ತಿ ಬಾಲಸ್ತವ ಪುಷ್ಪವಂತೌ ॥೫೭॥**

**ಬತ** = ಆಶ್ಚರ್ಯ, **ಅಂಧಕಾರ** = ಕತ್ತಲೆಯಲ್ಲಿ, **ಅರ್ಪಿತ** = ಇಟ್ಟಿರುವ, **ದಧ್ಯಮತ್ರಮ್ ಅಪಿ** = ಮೊಸರಿನ ಪಾತ್ರೆಯನ್ನು, **ಸ್ವ** = ತನ್ನ, **ಭಾಸ್ವತ್** = ಶೋಭಿಸುವ, **ನಯನ** = ಕಣ್ಣಿನ, **ಅಂತ** = ಕೊನೆಯ, **ಲಕ್ಷ್ಮ್ಯಾ** = ಕಾಂತಿಯಿಂದ, **ಸಮೀಕ್ಷತೇ** = ನೋಡುತ್ತಾನೆ, **ಲೋಚನಯೋಃ** = ಕಣ್ಣುಗಳ, **ಕಿಮ್** = ಏನು, **ಏಷಃ** = ಇವನು, **ಬಿಭರ್ತಿ** = ಧರಿಸಿದ್ದಾನೋ, **ಬಾಲಃ** = ಮಗನು, **ತವ** = ನಿನ್ನ, **ಪುಷ್ಪವಂತೌ** = ಸೂರ್ಯ-ಚಂದ್ರರನ್ನು.

ಇನ್ನೊಬ್ಬಳು – ಅಮ್ಮ, ನಾನು ಮೊಸರಿನ ಪಾತ್ರೆಗಳನ್ನು ಕತ್ತಲೆ ಕೋಣೆಯಲ್ಲಿ ಇಟ್ಟಿದ್ದೆ. ಆದರೆ ಈತ ಬಂದು ತನ್ನ ಕಣ್ಣಿಂದ ಆ ಕೋಣೆಯನ್ನು ನೋಡಿದರೆ ಸಾಕು. ಅಲ್ಲಿ ಬೆಳಕಾಗುತ್ತಿತ್ತು. ಕತ್ತಲೆಯೇ ಇರುತ್ತಿರಲಿಲ್ಲ. ಹೀಗೆ ಕೃಷ್ಣನು ಮೊಸರಿನ ಪಾತ್ರೆಗಳನ್ನು ಕಂಡು ಹಿಡಿದು ಬಿಡುತ್ತಿದ್ದ. ಅಮ್ಮ, ಈತನ ಕಣ್ಣುಗಳಲ್ಲಿ ಸೂರ್ಯ ಚಂದ್ರರು ಇದ್ದಾರೆಯೇ?'' ಎಂದಳು. ಸೂರ್ಯಚಂದ್ರರು ದೇವರ ಕಣ್ಣುಗಳಿಂದ ಹುಟ್ಟಿದವರು. ಆದ್ದರಿಂದ ದೇವರ ಕಣ್ಣುಗಳನ್ನು ಆಶ್ರಯಿಸಿಕೊಂಡಿದ್ದಾರೆ.

**ಮಂತ್ರಾತ್ಮಾ ಸ ಕವಾಟಮಾಶು ವಿವೃತಂ ಕರ್ತುಂ ಸಮರ್ಥೋ ವೃಥಾ**
**ಬಂಧಂ ನಿತ್ಯವಿಮುಕ್ತಿದೋ ರಚಯಿತುಂ ವಿಶ್ವಂಭರೋऽಯಂ ಜಗತ್ ।**
**ವಕ್ತ್ರೇ ದರ್ಶಯಿತುಂ ಕಠೋರವಚಸಾಂ ವಿಸ್ಮಾಪನಂ ಕರ್ಹಿಚಿತ್**
**ಬದ್ಧಃ ಪಾಟಯಿತುಂ ಚ ತದ್ವಿಟಪಿನೋ ಕಿಂ ದೇವಿ ಕುರ್ಮೋ ವಯಮ್ ॥೫೮॥**

**ಮಂತ್ರಾತ್ಮಾ** = ಮಂತ್ರಪ್ರತಿಪಾದ್ಯನಾದ, **ಸಃ** = ಅವನು, **ಕವಾಟಂ** = ಬಾಗಿಲನ್ನು, **ಆಶು** = ಕೂಡಲೇ, **ವಿವೃತಂ** = ತೆರೆಯುವಂತೆ, **ಕರ್ತುಂ** = ಮಾಡಲು, **ಸಮರ್ಥಃ** = ಸಮರ್ಥನು, **ವೃಥಾ** = ವ್ಯರ್ಥವನ್ನಾಗಿ, **ಬಂಧಂ** = ಬಂಧನವನ್ನು, **ನಿತ್ಯ** = ಯಾವಾಗಲೂ, **ವಿಮುಕ್ತಿ** = ಬಿಡುಗಡೆಯನ್ನು, **ದಃ** ಕೊಡುವ, **ರಚಯಿತುಂ** = ಮಾಡಲು, **ವಿಶ್ವಂಭರಃ** = ಲೋಕವನ್ನು ಹೊತ್ತ, **ಅಯಂ** = ಇವನು, **ಜಗತ್** = ಲೋಕವನ್ನು, **ವಕ್ತ್ರೇ** = ಬಾಯಿಯಲ್ಲಿ, **ದರ್ಶಯಿತುಂ** = ತೋರಿಸಲು, **ಕಠೋರ** = ನಿಷ್ಠುರವಾದ, **ವಚಸಾಂ** = ಮಾತುಳ್ಳ ನಮಗೆ, **ವಿಸ್ಮಾಪನಂ** = ಮರೆಯುವಿಕೆಯನ್ನು, **ಕರ್ಹಿಚಿತ್** = ಒಮ್ಮೊಮ್ಮೆ, **ಬದ್ಧಃ** = ಕಟ್ಟಲ್ಪಟ್ಟ ಅವನು, **ಪಾಟಯಿತುಂ ಚ** = ಉರುಳಿ-

ಸಲು, **ತತ್** = ಆ, **ವಿಟಪಿನಃ** = ಮರಗಳನ್ನು , **ಕಿಂ** = ಏನನ್ನು , **ದೇವಿ** = ದೇವಿಯೇ, **ಕುರ್ಮಃ** = ಮಾಡಿಯೇವು, **ವಯಮ್**= ನಾವು.

ಎಲ್ಲಾ ಗೋಪಿಯರು ಒಟ್ಟಿಗೆ ಹೇಳುತ್ತಾರೆ. ತನ್ಮೂಲಕ ತಮ್ಮ ತ್ರಿಕಾಲಜ್ಞಾನವನ್ನು ಪ್ರಕಟಿಸುತ್ತಾರೆ. – ಕೃಷ್ಣ ಮನೆಗೆ ಬರಬಾರದೆಂದು ಬಾಗಿಲನ್ನು ಹಾಕಿದರೆ ಮಾಂತ್ರಿಕನಂತೆ ಬಾಗಿಲನ್ನು ತೆರೆಯಲು ಸಮರ್ಥನು. ಇದು ಗೋಪಿಯರ ಅತೀತಜ್ಞಾನದ ಸೂಚನೆ. ಕೃಷ್ಣನು ಅವತರಿಸಿದಾಗ ಸೆರೆಮನೆಯ ಬಾಗಿಲುಗಳು ತೆರೆದಿದ್ದವು. ನಾವು ಆತನನ್ನು ಕಟ್ಟಿ ಹಾಕಿದರೆ ತಾನು ನಿತ್ಯಮುಕ್ತನಾದ್ದರಿಂದ ವ್ಯರ್ಥವನ್ನಾಗಿ ಮಾಡುತ್ತಾನೆ. ಇದರಿಂದ ಹಿಂದೆ ವಸುದೇವನ ಸರಪಳಿಬಂಧನವನ್ನು ಬಿಡಿಸಿದ ಘಟನೆಯ ತಿಳುವಳಿಕೆ ಇವರಿಗೆ ಇದೆ ಎಂದಾಯಿತು. ಈತನನ್ನು ಬೈಯ್ಯೋಣವೆಂದರೆ ಮೋಹಕವಾದ ಜಗತ್ತನ್ನು ಬಾಯಿಯಲ್ಲಿ ತೋರಿಸಿ ನಮ್ಮನ್ನು ಮೋಹಗೊಳಿಸುತ್ತಾನೆ. ಬೈಯ್ಯಲು ಆರಂಭಿಸಿದರೆ ಕಣ್ಣು ಅಗಲ ಮಾಡಿ ಬಾಯಿ ತೆರೆದು ನಿಲ್ಲುತ್ತಾನೆ. ಆಗ ವಿಶ್ವಂಭರನಾದ ಈತನ ಬಾಯಿಯಲ್ಲಿ ನಮಗೆ ಎಲ್ಲವೂ ತೋರುತ್ತದೆ. ಚಿತ್ರವಿಚಿತ್ರವಾದ ಜಗತ್ತನ್ನು ನೋಡಿದ ನಮಗೆ ಮಾಡಲು ತೊಡಗಿದ ಕೆಲಸದಲ್ಲಿ ಮರೆಯುವಿಕೆ ಬರುತ್ತದೆ. ಎಷ್ಟೋ ಸಂದರ್ಭದಲ್ಲಿ ನಾವು ಸಿಟ್ಟಿನಿಂದ ನಮ್ಮ ಮಕ್ಕಳನ್ನು ಬೈದು ಅನಂತರ ತಾಪ ಪಡುತ್ತೇವೆ. ಅಂದರೆ ನಮ್ಮ ಹಿಡಿತ ನಮ್ಮಲ್ಲಿ ಇಲ್ಲ-ದಿರುವುದೇ ಇದಕ್ಕೆ ಕಾರಣ. ಇಂತಹ ಸಂದರ್ಭದಲ್ಲಿ ಕೃಷ್ಣನ ಈ ರೂಪವನ್ನು ಚಿಂತಿಸಿದರೆ ಇಂತಹ ಪ್ರಸಂಗ ತಪ್ಪುತ್ತದೆ. ಇದರಿಂದ ಮುಂದೆ, ಬೈಯ್ಯುವ ಯಶೋದೆಗೆ ಬ್ರಹ್ಮಾಂಡದ ದರ್ಶನದ ಪ್ರಸಂಗವನ್ನು ಸೂಚಿಸಿ, ಈ ಸ್ತ್ರೀಯರು ತಮಗಿರುವ ಭವಿಷ್ಯತ್ತಿನ ಜ್ಞಾನವನ್ನು ಸೂಚಿಸಿದರು.

ಈತನನ್ನು ಪುಸಲಾಯಿಸಿ ಯಾವುದಕ್ಕಾದರೂ ಮರಕ್ಕೆ ಕಟ್ಟಿದರೂ ಆ ಮರವನ್ನೇ ಬೀಳಿಸುವ ಸಾಮರ್ಥ್ಯವುಳ್ಳವನು. ಇದರಿಂದ ಮುಂದೆ ಈ ಯಶೋದೆ ಕೃಷ್ಣನನ್ನು ಕಟ್ಟಿ ಹಾಕಲು ಇದ್ದಾಳೆ ಎಂಬುದನ್ನು ಸೂಚಿಸುತ್ತಾರೆ.

ಅಂತೂ ಯಶೋದೆ, ನಮಗೆ ಏನು ಮಾಡಬೇಕೆಂದೇ ತೋರುವುದಿಲ್ಲ ಎಂದು ಗೋಪಿಯರು ಒಟ್ಟಿಗೆ ದೂರಿದರು.

ಇತಿ ಸ್ಮ ಸಂಕೀರ್ತ್ಯ ಸುರಾಧಿರಾಜಂ
ವ್ರಜಸ್ತ್ರಿಯೋ ಭಾವಿವಿಮುಕ್ತಿಬೀಜಮ್ ।
ವಿಲೋಲನೇತ್ರಂ ತಮವೇಕ್ಷ್ಯ ವಾಚಃ
ಶನೈರಲಂಚಕ್ರುರನೇಕಭಾವಾಃ ॥೫೯॥

**ಇತಿ ಸ್ಮ** = ಈ ರೀತಿಯಾಗಿ, **ಸಂಕೀರ್ತ್ಯ** = ಹೇಳಿ, **ಸುರಾಧಿರಾಜಂ** = ದೇವತೆಗಳ ಒಡೆಯನನ್ನು, **ವ್ರಜಸ್ತ್ರಿಯಃ** = ಗೋಕುಲದ ಹೆಣ್ಮಕ್ಕಳು, **ಭಾವಿ** = ಮುಂದಿನ, **ವಿಮುಕ್ತಿ** = ಮೋಕ್ಷಕ್ಕೆ, **ಬೀಜಮ್** = ಕಾರಣನಾದ, **ವಿಲೋಲ ನೇತ್ರಂ** = ಚಂಚಲವಾದ ಕಣ್ಣುಳ್ಳ, **ತಂ** = ಕೃಷ್ಣನ್ನು, **ಅವೇಕ್ಷ್ಯ** = ನೋಡಿ, **ವಾಚಃ** = ಮಾತುಗಳನ್ನು, **ಶನೈಃ** = ಮೆಲ್ಲಗೆ, **ಅಲಂ ಚಕ್ರುಃ** = ಕೊನೆಗೊಳಿಸಿದರು, **ಅನೇಕಭಾವಾಃ** = ಬಹಳ ಅಭಿಪ್ರಾಯವುಳ್ಳ.

ಈ ರೀತಿ ಕೃಷ್ಣನನ್ನು ನಿಂದಾಸ್ತುತಿಪೂರ್ವಕ ಹೊಗಳಿದರು. ಈ ಸ್ತ್ರೀಯರಿಗೆ ಕೃಷ್ಣನ ಹೊಗಳುವಿಕೆಯಲ್ಲೇ ತಾತ್ಪರ್ಯ ಎಂಬುದಕ್ಕೆ ಇವರಿಗೆ ಈಗ ಕೃಷ್ಣದರ್ಶನ ಆದದ್ದೇ ಸಾಕ್ಷಿ. ನಿಂದಕರಿಗೆ ದೇವರ ದರ್ಶನ ಇಲ್ಲ ತಾನೇ? ಸ್ತ್ರೀಯರ ಇಷ್ಟು ಮಾತು ಮುಗಿಯುತ್ತಿರುವಾಗ ಕೃಷ್ಣ ಅಲ್ಲಿಗೆ ಬಂದನು. ಆಗ ಸ್ತ್ರೀಯರು ಮಾತು ನಿಲ್ಲಿಸಿದರು.

ಇದನ್ನು ಆಧ್ಯಾತ್ಮಿಕವಾಗಿ ಈ ರೀತಿ ಕೂಡಿಸುತ್ತಾರೆ – ಮೊದಲು ದೇವರ ಬಗ್ಗೆ ಶ್ರವಣ, ಕಥನ, ಮನನ. ಅದನ್ನು ಈ ಗೋಪಿಯರು ಮಾಡಿದರು. ಅನಂತರ ದೇವರ ಸಾಕ್ಷಾತ್ಕಾರ. ಕೃಷ್ಣದರ್ಶನವಾಯಿತು ಇವರಿಗೆ. ದೇವರ ದರ್ಶನವಾದರೆ ಮುಂದೆ ಮೋಕ್ಷ ನಿಶ್ಚಿತ. ದೇವರನ್ನು ಕಂಡಾಗ ಧ್ರುವನಂತೆ ಯಾರ ಬಾಯಿಯಿಂದಲೂ ಮಾತೇ ಬಾರದಾಯಿತು. ಆಶ್ಚರ್ಯದ ವಸ್ತುವನ್ನು ಕಂಡಾಗ ಯಾರಾದರೂ ಸ್ತಬ್ಧರಾಗುತ್ತಾರೆ.

ನಿಂದಾಸ್ತುತಿಗಳಿಗೆ ಕೃಷ್ಣನ ಬಾಲಲೀಲೆಗಳು ಉತ್ತಮ ಉದಾಹರಣೆ.

**ಸದಾ ಸದಾನಂದಸುತೃಪ್ತವೃತ್ತೇಃ**
**ಭವದ್‌ಗೃಹಸ್ಥೈಃ ನವನೀತಮುಖ್ಯೈಃ ।**
**ಸಮಾ ಮಮೈಷಾ ಮೃದಿತೀವ ಶಂಸನ್**
**ಮೃದಂ ಜಘಾಸ ಸ್ವವಶೋऽಖಿಲೇಶಃ ॥೬೦॥**

**ಸದಾ** = ಯಾವಾಗಲೂ, **ಸದಾನಂದ** = ಒಳ್ಳೆಯ ಆನಂದದಿಂದ, **ಸುತೃಪ್ತ** = ಸಂತುಷ್ಟನಾದ, **ವೃತ್ತೇಃ** = ಕೆಲಸವುಳ್ಳ, **ಭವದ್** = ನಿಮ್ಮ, **ಗೃಹಸ್ಥೈಃ** = ಮನೆಯಲ್ಲಿರುವ, **ನವನೀತ** = ಬೆಣ್ಣೆಯೇ, **ಮುಖ್ಯೈಃ** = ಮೊದಲಾದ್ದರಿಂದ, **ಸಮಾ** = ಸಮಾನವು, **ಮಮ** = ನನಗೆ, **ಏಷಾ** = ಈ, **ಮೃತ್** = ಮಣ್ಣು, **ಇತಿ ಇವ** = ಎಂಬಂತೆ, **ಶಂಸನ್** = ಹೇಳುತ್ತಾ, **ಮೃದಂ** = ಮಣ್ಣನ್ನು, **ಜಘಾಸ** = ತಿಂದನು, **ಸ್ವವಶಃ** = ಸ್ವತಂತ್ರನು, **ಅಖಿಲೇಶಃ** = ಎಲ್ಲರಿಗೂ ಒಡೆಯನು.

ಇವರೆಲ್ಲರೂ ನೋಡುತ್ತಿರುವಂತೆ ಕೃಷ್ಣನು ಮಣ್ಣನ್ನು ಬಾಯಿಯಲ್ಲಿ ಹಾಕಿಕೊಂಡನು.

ಇದರ ಅಭಿಪ್ರಾಯ ಈ ರೀತಿ ಇದೆ ಎಂದು ರಾಜರು ತಿಳಿಸುತ್ತಾರೆ – ಕೃಷ್ಣನು ಸದಾ ಒಳ್ಳೆಯ ಆನಂದದಿಂದ ತುಂಬಿದವನು. ಸ್ವರಮಣನು. ತನ್ನ ತೃಪ್ತಿಗೆ ಯಾವುದರ ಅಪೇಕ್ಷೆಯೂ ಇಲ್ಲದವನು. ಆದ್ದರಿಂದ ಗೋಪಸ್ತ್ರೀಯರ ಮನೆಯ ಹಾಲು ಇತ್ಯಾದಿಗಳು ಈತನಿಗೆ ಮಣ್ಣಿಗೆ ಸಮಾನ. ಹೇಗೆ ಮಣ್ಣು ತಿಂದರೆ ಯಾವ ರೀತಿಯಾದ ಆನಂದವೂ ಇರುವು-ದಿಲ್ಲವೋ ಹಾಗೆಯೇ. ಕೃಷ್ಣನು ಯಾರ ಮನೆಯಿಂದಲೂ ಏನೂ ತೆಗೆಯಲಿಲ್ಲ. ಏಕೆಂದರೆ, ಎಲ್ಲವೂ ತನ್ನದೇ. 'ಈಶಾವಾಸ್ಯಮಿದಂ ಸರ್ವಂ' 'ಎಲ್ಲವೂ ದೇವರಿಗೆ ಸೇರಿದ್ದು' ಎಂದು ಉಪನಿಷತ್ತು ಹೇಳುತ್ತದೆ. ಇದನ್ನು ತಿಳಿಸಲು ಅಖಿಲೇಶ ಎಂದಿದ್ದಾರೆ. ತನ್ನ ಬಗ್ಗೆ ದೂರುವುದರಲ್ಲಿ ಅರ್ಥ ಇಲ್ಲ ಎಂದು ತಿಳಿಯುತ್ತದೆ.

• • • •

**ಸಂದೇಶ**

**ಮರ್ತ್ಯೋಽಪಕಾರನಿರತಸ್ಯ ನ ಕಃ ಸಹಾಯಃ**

ಸಮಾಜಸೇವಕರಿಗೆ ಎಲ್ಲರೂ ಸಹಾಯ ಮಾಡುತ್ತಾರೆ.

---

**ಗೋಪೀಭಿರಾಪಾದಿತಚೌರ್ಯಕರ್ಮಾ**
**ಮಾತುಃ ಸಮಕ್ಷಂ ಮಹಿತಸ್ತ್ರಿಲೋಕ್ಯಾಮ್ ।**
**ಮೃತ್ಸ್ನಾಂ ಕಿಲಾದದ್ವಸುದೇವಸೂನುಃ**
**ನಾತ್ರಾಸ್ತಿ ಚೋರತ್ವಮಿತೀವ ಹಿನ್ವನ್ ॥ ೬೧ ॥**

**ಗೋಪೀಭಿಃ** = ಗೋಪಿಯರಿಂದ, **ಆಪಾದಿತ** = ಹೊರಿಸಲ್ಪಟ್ಟ, **ಚೌರ್ಯ** = ಕಳ್ಳತನದ, **ಕರ್ಮಾ** = ಕೆಲಸವುಳ್ಳ, **ಮಾತುಃ** = ತಾಯಿಯ, **ಸಮಕ್ಷಂ** = ಎದುರಿಗೆ, **ಮಹಿತಃ** = ಪೂಜಿಸಲ್ಪಟ್ಟ, **ತ್ರಿಲೋಕ್ಯಾಮ್** = ಮೂರು ಲೋಕಗಳಲ್ಲಿ, **ಮೃತ್ಸ್ನಾಂ** = ಮಣ್ಣನ್ನು, **ಆದತ್ ಕಿಲ** = ತಿಂದನಷ್ಟೇ, **ವಸುದೇವಸೂನುಃ** = ವಸುದೇವ ಸುತನು, **ಅತ್ರ** = ಇಲ್ಲಿ, **ನ ಅಸ್ತಿ** = ಇಲ್ಲ, **ಚೋರತ್ವಮ್** = ಕಳ್ಳತನವು, **ಇತಿ ಇವ** = ಎಂಬಂತೆ, **ಹಿನ್ವನ್** = ತಿಳಿಸುತ್ತಾ.

ಗೋಪಿಯರು ಕೃಷ್ಣನ ಕಳ್ಳತನವನ್ನು ಬಹಳವಾಗಿ ಹೇಳಿದರು. ಇದರಿಂದ ಕೃಷ್ಣ ಸಿಟ್ಟು-ಗೊಂಡವನಂತೆ ನಟಿಸಿ ಯಶೋದೆಯ ಮುಂದೆಯೇ ಮಣ್ಣನ್ನು ಮೆದ್ದ. ಈಗ ಗೋಪಿ-ಯರು ಏನು ಹೇಳುತ್ತಾರೆ? 'ಕೃಷ್ಣ ಕಳ್ಳತನದಿಂದ ಮಣ್ಣು ತಿಂದ' ಎಂದು ಹೇಳು-ತ್ತಾರೆಯೇ? ಎಲ್ಲರ ಎದುರಿನಲ್ಲೇ ತಿಂದಿದ್ದರಿಂದ ಇದು ಹೇಗೆ ಕಳ್ಳತನವಲ್ಲವೋ ಹಾಗೆಯೇ ಹಾಲು ತೆಗೆದದ್ದೂ ಗೋಪಿಯರ ಸಮಕ್ಷಮದಲ್ಲೇ. ಆದ್ದರಿಂದ ಅದೂ ಕಳ್ಳತನವಾಗದು ಎಂದು ತಿಳಿಸಿದನು.

ಮೃದಂ ಸಮಾಸ್ವಾದ್ಯ ಜಗಂತಿ ಮಾತುಃ
ಪ್ರದರ್ಶಯಾಮಾಸ ಕಿಲಾಸ್ಯದೇಶೇ ।
ಅಹಂ ಸುಪಾತ್ರೇ ರಸಯಾ ಪ್ರದತ್ತಾ
ಸಹಸ್ರಧಾಽಸೌ ಫಲಿತೇತಿ ಮನ್ಯೇ ॥ ೬೨ ॥

**ಮೃದಂ** = ಮಣ್ಣನ್ನು, **ಸಮಾಸ್ವಾದ್ಯ** = ತಿಂದು, **ಜಗಂತಿ** = ಲೋಕಗಳನ್ನು, **ಮಾತುಃ** = ತಾಯಿಗೆ, **ಪ್ರದರ್ಶಯಾಮಾಸ** = ತೋರಿಸಿದನು, **ಕಿಲ** = ಪ್ರಸಿದ್ಧ, **ಆಸ್ಯದೇಶೇ** = ಬಾಯಿಯಲ್ಲಿ, **ಅಹಂ** = ನಾನು, **ಸುಪಾತ್ರೇ** = ಯೋಗ್ಯವ್ಯಕ್ತಿಯಲ್ಲಿ, **ರಸಯಾ** = ಭೂಮಿಯಿಂದ, **ಪ್ರದತ್ತಾ** = ಕೊಡಲ್ಪಟ್ಟದ್ದು, **ಸಹಸ್ರಧಾ** = ಸಾವಿರಪಟ್ಟು, **ಅಸೌ** = ಇದು, **ಫಲಿತಾ** = ಫಲಿಸಿತು, **ಇತಿ** = ಎಂದು, **ಮನ್ಯೇ** = ತಿಳಿಯುತ್ತೇನೆ.

ಕೃಷ್ಣನು ಸ್ವಲ್ಪವೇ ಮಣ್ಣು ತಿಂದದ್ದು. ಆದರೆ ಅದು ಬ್ರಹ್ಮಾಂಡವಾಗಿ ಯಶೋದೆಗೆ ಕಂಡಿತು. ಇದರ ಅಭಿಪ್ರಾಯ ಹೀಗಿದೆ – ಭೂಮಿಯು ಸತ್ಪಾತ್ರದಲ್ಲಿ ತನ್ನಲ್ಲಿದ್ದುದನ್ನು ಸ್ವಲ್ಪ ದಾನ ಮಾಡಿದಳು. ಆದ್ದರಿಂದ ಅದು ಸಾವಿರಪಟ್ಟು ಫಲಿಸಿತು. ಆದ್ದರಿಂದ ದಾನ ಮಾಡಿದುದಕ್ಕೆ ಫಲ ಬರಬೇಕಾದರೆ ಪಾತ್ರಾಪಾತ್ರ ವಿಚಾರ ಮಾಡಬೇಕು.

ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ
ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।
ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ
ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಸ್ತೃತೀಯೋ ಮುದಾಮ್ ॥೬೩

॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಗ್ಮಿಣೀಶವಿಜಯೇ ತೃತೀಯಃ ಸರ್ಗಃ ॥೩॥

ಕಾವ್ಯದಲ್ಲಿ ಮೂರನೇ ಸರ್ಗವು ಮುಗಿಯಿತು. ದೇವತೆಗಳಿಗೆ ಮೂರನೇ ಆನಂದ-ವಾಯಿತು.

* * * * *

## ಚತುರ್ಥಃ ಸರ್ಗಃ

**ಉದ್ಗಚ್ಛತ್ಕಬರೀಪ್ರಸೂನನಿಕರಾಂ ವೈರಾಗ್ಯಭಾಗ್ಯಪ್ರಿಯಃ**
**ಸದ್ಗೀತಾತ್ಮಯಶೋಽನುವರ್ಣನಪರಾಂ ಜ್ಞಾನಾನುಮೋದೀ ಹರಿಃ।**
**ದಧ್ನೋ ನಿರ್ಮಥನೋದ್ಯತಾಂ ಸಮುದಿತಪ್ರೇಮಾಶ್ರುಧಾರಾಂ ನಿಜ-**
**ಪ್ರೇಮ್ಣಾ ಮಂದಮುಪಾಜಗಾಮ ಜನನೀಂ ಭಕ್ತೈಕವಶ್ಯಃ ಪ್ರಭುಃ ॥ ೧ ॥**

**ಉದ್ಗಚ್ಛತ್** = ಉದುರುವ, ಕಬರೀ = ತಲೆಸೂಡಿಯ, **ಪ್ರಸೂನ** = ಪುಷ್ಪಗಳ, **ನಿಕರಾಂ** = ಗುಂಪುಳ್ಳ, **ವೈರಾಗ್ಯ** = ವಿರಕ್ತಿ ಎಂಬ, **ಭಾಗ್ಯ** = ಸಂಪತ್ತಿನಲ್ಲಿ, **ಪ್ರಿಯಃ** = ಅಪೇಕ್ಷೆಯುಳ್ಳ, **ಸತ್** = ಸಜ್ಜನರಿಂದ, **ಗೀತ** = ಹೇಳಲ್ಪಟ್ಟ, **ಆತ್ಮ** = ತನ್ನ, **ಯಶಃ** = ಕೀರ್ತಿಯ, **ಅನುವರ್ಣನ** = ಹೇಳುವುದರಲ್ಲಿ, **ಪರಾಂ** = ಆಸಕ್ತಳಾದ, **ಜ್ಞಾನ** = ಜ್ಞಾನದಿಂದ, **ಅನುಮೋದೀ** = ತೃಪ್ತಿಪಡುವ, **ಹರಿಃ** = ದೇವರು, **ದಧ್ನಃ** = ಮೊಸರಿನ, **ನಿರ್ಮಥನ** = ಕಡೆಯುವುದರಲ್ಲಿ, **ಉದ್ಯತಾಂ** = ಸಿದ್ಧಳಾದ, **ಸಮುದಿತ** = ಬರುವ, **ಪ್ರೇಮಾಶ್ರು** = ಪ್ರೀತಿಯ ಕಣ್ಣೀರಿನ, **ಧಾರಾಂ** = ಪ್ರವಾಹವುಳ್ಳ, **ನಿಜ** = ಕೃಷ್ಣನಲ್ಲಿ, **ಪ್ರೇಮ್ಣಾ** = ಪ್ರೀತಿಯಿಂದ, **ಮಂದಂ** = ಮೆಲ್ಲಗೆ, **ಉಪಾಜಗಾಮ** = ಬಂದನು, **ಜನನೀಂ** = ತಾಯಿಯನ್ನು, **ಭಕ್ತ** = ಭಕ್ತರ, **ಏಕ** = ಮುಖ್ಯವಾಗಿ, **ವಶ್ಯಃ** = ಅಧೀನ-ನಾದ, **ಪ್ರಭುಃ** = ಒಡೆಯನಾದ.

ಯಶೋದೆ ಮನೆಯಲ್ಲಿ ಮೊಸರು ಕಡೆಯುತ್ತಿದ್ದಾಳೆ. ಆಗ ದೇಹದ ಚಲನೆಯಿಂದಾಗಿ ತಲೆಗೆ ಮುಡಿದಿರುವ ಹೂಗಳು ಉದುರುತ್ತಿವೆ. ಆದರೆ ಅವಳು ಅದನ್ನು ಹೆಕ್ಕುವ ಗೊಡವೆಗೆ ಹೋಗಲಿಲ್ಲ. ಇದರಿಂದ ಅವಳಿಗೆ ಮಥನದಲ್ಲೇ ಆಸಕ್ತಿ. ಲೌಕಿಕದಲ್ಲಿ ವೈರಾಗ್ಯ ಇದೆ ಎಂದು ತಿಳಿಯುತ್ತದೆ. ದೇವರನ್ನು ಪಡೆಯುವ ಸಾಧನಗಳಲ್ಲಿ ಮೊದಲು ಬೇಕಾದದ್ದು ವಿಷಯಗಳಲ್ಲಿ ವೈರಾಗ್ಯ ಎಂದು ವ್ಯಾಸರು ಬ್ರಹ್ಮಸೂತ್ರದ ತೃತೀಯಾಧ್ಯಾಯದ ಪ್ರಥಮ ಪಾದದಲ್ಲಿ ತಿಳಿಸುತ್ತಾರೆ.

ದೇವರೂ ಅಂತಹವನೇ. ವೈರಾಗ್ಯವನ್ನೇ ಸಂಪತ್ತನ್ನಾಗಿ ಮಾಡಿಕೊಂಡವರಿಗೆ ಸಿಗುತ್ತಾನೆ. ಪ್ರಕೃತ ಯಶೋದೆ ಅಂತಹವರ ಪಾಲಿಗೆ ಸೇರಿದ್ದರಿಂದ ಕೃಷ್ಣ ಅವಳಲ್ಲಿಗೆ ಬಂದನು.

ಅವಳು ದಧಿಮಥನ ಮಾಡುವಾಗ ಹಾಡುಗಳನ್ನು ಹೇಳುತ್ತಿದ್ದಳು. ಇದು ದೇವರನ್ನು ಸ್ತೋತ್ರ ಮಾಡುವುದು. ಈಕೆ ದೇವರನ್ನು ತಿಳಿದುಕೊಂಡು ಹಾಡುತ್ತಿದ್ದಳು. ಇದೇ ಬ್ರಹ್ಮಸೂತ್ರಗಳ ೩ನೇ ಅಧ್ಯಾಯದ ೪ನೆಯ ಜ್ಞಾನಪಾದ. ಜ್ಞಾನವು ಕೊನೆಯ ಸಾಧನ.

ದೇವರು ಜ್ಞಾನಿಗಳಿಗೆ ಪ್ರಿಯ. ಆದ್ದರಿಂದ ಜ್ಞಾನಿಯಾದ ಯಶೋದೆಯ ಬಳಿಗೆ ಬಂದನು. ಕೃಷ್ಣನಿಗೆ ಇವಳಲ್ಲಿ ಪ್ರೀತಿ. ಇವಳಿಗೆ ಕೃಷ್ಣನಲ್ಲಿ ಪ್ರೀತಿ. ಇವಳಿಗೆ ದೇವರಲ್ಲಿ ಪ್ರೀತಿ ಇದೆ ಎಂದು ತಿಳಿಯಲು ಇವಳ ಕಣ್ಣಲ್ಲಿ ಇಳಿಯುವ ನೀರೇ ಸಾಕ್ಷಿ. ಪ್ರೀತಿ ಇದ್ದಾಗ ಮಾತ್ರ ಸ್ತೋತ್ರದ ಸಮಯದಲ್ಲಿ ಕಣ್ಣೀರು ಬರುವುದು. ಇದು ಈ ಬ್ರಹ್ಮಸೂತ್ರಾಧ್ಯಾಯದ ೨ನೆಯ ಪಾದದ ಭಕ್ತಿ ಎಂಬ ಸಾಧನ.

ನಾವು ಸಾಧನೆ ಮಾಡಿದಾಕ್ಷಣ ದೇವರು ಬರಬೇಕಾಗಿಲ್ಲ. ಸಾಧನೆ ಮಾಡುವುದು ನಮ್ಮ ಕೈಯ್ಯಲ್ಲಿ. ಕಾಣಿಸುವುದು ಆತನ ಕೈಯಲ್ಲಿ ಎಂದು ತಿಳಿಸಲು ಮಂದಮ್ ಉಪಾಜಗಾಮ ಎಂದಿದ್ದಾರೆ.

**ಅಂಕೋಜ್ಝಿತೇಂದುಪ್ರತಿಮಾನನಂ ತ-**
**ಮಂಕಂ ಸಮಾರೋಪ್ಯ ಮುಹುರ್ಮೃಜಂತೀ ।**
**ಪಂಕಂ ಮನೋಜ್ಞಾಂಗಗತಂ ಕ್ಷುಧಾರ್ತ-**
**ಶಂಕಾ ಸ್ತನಕ್ಷೀರಮಪಾಯಯತ್ ಸಾ ॥ ೨ ॥**

**ಅಂಕ** = ಕಲಂಕದಿಂದ, **ಉಜ್ಝಿತ** = ರಹಿತನಾದ, **ಇಂದು** = ಚಂದ್ರನಿಗೆ, **ಪ್ರತಿಮಾ** = ಸಮಾನವಾದ, **ಆನನಂ** = ಮುಖವುಳ್ಳ, **ತಂ** = ಕೃಷ್ಣನನ್ನು, **ಅಂಕಂ** = ತೊಡೆಯನ್ನು, **ಸಮಾರೋಪ್ಯ** = ಏರಿಸಿ, **ಮುಹುಃ** = ಪುನಃ ಪುನಃ, **ಮೃಜಂತೀ** = ತೊಳೆಯುತ್ತಾ, **ಪಂಕಂ** = ಕೆಸರನ್ನು, **ಮನೋಜ್ಞ** = ಮನೋಹರನ, **ಅಂಗ** = ಮೈಯ್ಯಲ್ಲಿ, **ಗತಂ** = ಇರುವ, **ಕ್ಷುತ್** = ಹಸಿವಿನ, **ಆರ್ತ** = ದುಃಖದ, **ಶಂಕಾ** = ಸಂಶಯವುಳ್ಳ, **ಸ್ತನಕ್ಷೀರಂ** = ಎದೆಹಾಲನ್ನು, **ಅಪಾಯಯತ್** = ಕುಡಿಸಿದಳು, **ಸಾ** = ಆ ಯಶೋದೆ.

ಕೃಷ್ಣನದ್ದು ಚಂದ್ರನಂತಹ ಮುಖ. ಚಂದ್ರನಲ್ಲಿಯಾದರೋ ಕಲಂಕ ಇದೆ. ಆದರೆ ಕೃಷ್ಣನ ಮುಖದಲ್ಲಿ ಯಾವ ಕಲೆಯೂ ಇಲ್ಲ. ಇಂತಹ ಕೃಷ್ಣನ ಮೈ ತುಂಬಾ ಕೆಸರು. ಯಶೋದೆಯು ಕೃಷ್ಣನನ್ನು ತೊಡೆಯಲ್ಲಿ ಕುಳ್ಳಿರಿಸಿ ಮೈಯ ಕೆಸರನ್ನೆಲ್ಲಾ ತೊಳೆದಳು. ಸ್ನಾನ ಮಾಡಿಸಿದಳು. ಅನಂತರ ತನ್ನ ಎದೆಹಾಲನ್ನು ಉಣಿಸಿದಳು.

ಮೊದಲು ದೇವರ ಆವಾಹನೆ. ಅನಂತರ ಅಭಿಷೇಕ. ಅನಂತರ ಎದೆ ತುಂಬಿ ಕೊಡುವ ನೈವೇದ್ಯ.

**ತದನು ದಹನವೇಗಾದುತ್ಪ್ರವತ್ಕ್ಷೀರಲೋಭಾತ್**
**ಮಧುಜಿತಮಪಹಾಯಾಜಾನತೀ ಸಾ ಜಗಾಮ ।**

**ಹರಿರಪಿ ಸಮಯಾರ್ಹಾಂ ಹಾನಿಮಸ್ಯೈ ಪ್ರದಾತುಂ**
**ವ್ಯಭಜತ ದಧಿಭಾಂಡಂ ಕ್ಷಿಪ್ತಪಾಷಾಣಖಂಡಃ ॥ ೩ ॥**

**ತದನು** = ಅನಂತರ, **ದಹನ** = ಬೆಂಕಿಯ, **ವೇಗಾತ್** = ವೇಗದಿಂದಾಗಿ, **ಉತ್ಪ್ಲವತ್** = ಉಕ್ಕುವ, **ಕ್ಷೀರ** = ಹಾಲಿನಲ್ಲಿ, **ಲೋಭಾತ್** = ಆಸೆಯಿಂದ, **ಮಧುಜಿತಂ** = ಕೃಷ್ಣನನ್ನು, **ಅಪಹಾಯ** = ಕೆಳಗಿಟ್ಟು, **ಅಜಾನತೀ** = ತಿಳಿಯದವಳಾಗಿ, **ಸಾ** = ಯಶೋದೆಯು, **ಜಗಾಮ** = ಹೋದಳು, **ಹರಿಃ ಅಪಿ** = ದೇವರಾದರೋ, **ಸಮಯ** = ಈ ಕಾಲಕ್ಕೆ, **ಅರ್ಹಾಂ** = ಯೋಗ್ಯವಾದ, **ಹಾನಿಂ** = ಅನಿಷ್ಟವನ್ನು, **ಅಸ್ಯೈ** = ಇವಳಿಗೆ, **ಪ್ರದಾತುಂ** = ಮಾಡಲು, **ವ್ಯಭಜತ** = ಒಡೆದನು, **ದಧಿ** = ಮೊಸರಿನ, **ಭಾಂಡಂ** = ಪಾತ್ರೆಯನ್ನು, **ಕ್ಷಿಪ್ತ** = ಬಿಸಾಡಲ್ಪಟ್ಟ, **ಪಾಷಾಣ** = ಕಲ್ಲಿನ, **ಖಂಡಃ**= ತುಂಡುಳ್ಳವನಾಗಿ.

ಸ್ತನ್ಯ ಉಣಿಸುತ್ತಿರುವಾಗ ಒಲೆಯಲ್ಲಿ ಹಾಲು ಇಟ್ಟಿದ್ದಳು. ಬೆಂಕಿಯ ರಭಸಕ್ಕೆ ಆ ಹಾಲು ಉಕ್ಕೇರಿತು. ಅದನ್ನು ಕಂಡ ಯಶೋದೆ ಹಾಲಿನ ಮೇಲಿನ ಆಸೆಯಿಂದ ಎದೆ ಹಾಲು ಉಣ್ಣುತ್ತಿದ್ದ ಕೃಷ್ಣನನ್ನು ತೊಡೆಯಿಂದ ಕೆಳಗಿಳಿಸಿ ಒಲೆಯ ಬಳಿಗೆ ಹೋದಳು. ಕೃಷ್ಣನು ದೇವರು ಎಂಬ ಪ್ರಜ್ಞೆಯು ಆಕೆಗೆ ಆಗ ಇರಲಿಲ್ಲ. ಕೃಷ್ಣನೂ ಈಗ ಸಿಟ್ಟಾದ. ಈಕೆಗೆ ನನಗಿಂತಲೂ ತನ್ನ ಹಾಲು ಮೇಲಾಯಿತೇ? ಈಕೆಗೆ ತಕ್ಕ ಶಾಸ್ತಿಯನ್ನು ಮಾಡಬೇಕು ಎಂದು ಆಲೋಚಿಸಿದನು. ಅಲ್ಲೇ ಬಿದ್ದಿರುವ ಒಂದು ಕಲ್ಲನ್ನು ತೆಗೆದುಕೊಂಡು ದೊಡ್ಡ ಮೊಸರಿನ ಗಡಿಗೆಯನ್ನು ಒಡೆದನು.

ದೇವರ ಭಕ್ತರಾಗಿದ್ದರೂ ದೇವರನ್ನು ತಿರಸ್ಕರಿಸಿ ವಿಷಯಪದಾರ್ಥಗಳನ್ನೇ ವಿಶೇಷವಾಗಿ ಹಚ್ಚಿಕೊಂಡರೆ ಅವರ ಸರ್ವಸ್ವವನ್ನೂ ದೇವರು ಅಪಹರಿಸುತ್ತಾನೆ. ದೇವರಿಗೆ ಹಾಲುಣಿಸುವಾಗ ಒಲೆಯಲ್ಲಿ ಹಾಲು ಉಕ್ಕಿದ್ದು. ಇದರಿಂದಾಗಿ ದೇವರಿಗೆ ಕೊಟ್ಟರೆ ನಮ್ಮಲ್ಲಿ ಸಂಪತ್ತು ಹೆಚ್ಚುತ್ತದೆ ಎಂದು ತಿಳಿಯುತ್ತದೆ. ಪ್ರತಿಯೊಂದು ಮನೆಯಲ್ಲಿಯೂ ಮೂರು ರೀತಿಯಲ್ಲಿ ದೇವರಿಗೆ ನೈವೇದ್ಯ ಆಗಬೇಕು. (೧) ಪ್ರತಿಮೆಯ ಮೂಲಕ, (೨) ಅಗ್ನಿಯ ಮೂಲಕ, (೩) ಅತಿಥಿಗಳ ಮೂಲಕ. ಯಶೋದೆ ತಾನು ಕೃಷ್ಣನಿಗೆ ಹಾಲುಣಿಸುವುದರಿಂದ ಪ್ರತಿಮೆಯ ಮೂಲಕ ಆಯಿತು. ಒಲೆಯಲ್ಲಿದ್ದ ಹಾಲು ಬೆಂಕಿಗೆ ಬೀಳುವುದರಿಂದ ಅಗ್ನಿಯ ಮೂಲಕ ಆಯಿತು. ಮನೆಗೆ ನಿತ್ಯ ಅತಿಥಿಗಳು ಬರುತ್ತಿರುತ್ತಾರೆ. ಅವರಿಗೆ ಆತಿಥ್ಯ ನಡೆಯುತ್ತದೆ. ಹೀಗೆ ಯಶೋದೆಯು ಶಾಸ್ತ್ರೀಯವಾಗಿ ನಿತ್ಯವೂ ದೇವರ ಪೂಜೆಯನ್ನು ಮಾಡುತ್ತಿದ್ದಳು.

**ದದೌ ಬಿಡಾಲಾಯ ಜನನ್ಯದೃಷ್ಟಃ**
**ತದಾ ಸ್ವನೀತಂ ನವನೀತಜಾತಮ್ ।**
**ಕ್ಷಿಣೋತಿ ನೂನಂ ಧನಲೋಭಭಾಜಾಂ**
**ಧನಾನ್ಯನರ್ಹತ್ಸ್ವತಿದಿಶ್ಯ ದೇವಃ ॥ ೪ ॥**

**ದದೌ** = ಕೊಟ್ಟನು, **ಬಿಡಾಲಾಯ** = ಬೆಕ್ಕಿಗೆ, ಜನನಿ = ತಾಯಿಗೆ, **ಅದೃಷ್ಟಃ** = ಕಾಣದೆ, **ತದಾ** = ಆಗ, **ಸ್ವ**= ತಾನು, ನೀತಂ = ಒಯ್ದಿರುವ, **ನವನೀತ** = ಬೆಣ್ಣೆಯ, **ಜಾತಂ** = ಗುಂಪನ್ನು, **ಕ್ಷಿಣೋತಿ** = ನಾಶ ಮಾಡುತ್ತಾನೆ, **ನೂನಂ** = ನಿಶ್ಚಯ, **ಧನ** = ಹಣದಲ್ಲಿ, **ಲೋಭಂ** = ಆಸೆಯನ್ನು, **ಭಾಜಾಂ** = ಮಾಡುವವರ, **ಧನಾನಿ** = ಸಂಪತ್ತನ್ನು, **ಅನರ್ಹತ್ಸು**= ಅಯೋಗ್ಯರಲ್ಲಿ, **ಅತಿದಿಶ್ಯ** = ಕೊಟ್ಟು, **ದೇವಃ** = ಕೃಷ್ಣನು.

ಹಾಲಿನ ಪಾತ್ರೆಯನ್ನು ಕೆಳಗಿಳಿಸಿ ಬಂದು ನೋಡಿದರೆ ಕೃಷ್ಣ ಇಲ್ಲ. ಕೃಷ್ಣನು ತಾಯಿಗೆ ಕಾಣಿಸದಂತೆ ಗಡಿಗೆಯ ಬೆಣ್ಣೆಯನ್ನು ತೆಗೆದುಕೊಂಡು ಬೆಕ್ಕಿಗೆ ತಿನ್ನಿಸಿದನು. ಜಿಪುಣರ ಸಂಪತ್ತು ಈ ರೀತಿ ಅಯೋಗ್ಯರ ಪಾಲಾಗುತ್ತದೆ ಎಂದು ದೇವರು ತೋರಿಸಿದನು. ಭಗವತ್ ಸೇವಾರಹಿತರಿಗೆ ದೇವರ ದರ್ಶನ ಅಶಕ್ಯ ಎನ್ನುವುದನ್ನೂ ತೋರಿಸಿದನು.

**ವಿಚಾರಭಾರಾರ್ಪಿತಮಾನಸಾಽಥೋ**
**ವಿಮರ್ಶಲಭ್ಯಂ ತಮವೇಕ್ಷ್ಯ ಮಾತಾ ।**
**ಅನುವ್ರಜಂತ್ಯಸ್ಪೃಶದಪ್ಯಗಮ್ಯಂ**
**ಪರಾನುಯಾತ್ರಾರ್ಜಿತಪುಣ್ಯಪಾತ್ರೀ ॥ ೫ ॥**

**ವಿಚಾರ** = ಹುಡುಕುವ, **ಭಾರಾ** = ಭರದಲ್ಲಿ, **ಅರ್ಪಿತ** = ಇಟ್ಟಿರುವ, **ಮಾನಸಾ** = ಮನಸ್ಸುಳ್ಳ, **ಅಥೋ** = ಅನಂತರ, **ವಿಮರ್ಶ** = ಮನನದಿಂದ, **ಲಭ್ಯಂ** = ಸಿಗುವ, **ತಂ** = ಕೃಷ್ಣನನ್ನು = **ಅವೇಕ್ಷ್ಯ** = ನೋಡಿ, **ಮಾತಾ** = ತಾಯಿಯು, **ಅನುವ್ರಜಂತೀ** = ಅನುಸರಿಸಿದವಳಾಗಿ, **ಅಸ್ಪೃಶತ್** = ಹಿಡಿದಳು, **ಅಗಮ್ಯಂ ಅಪಿ** = ಹಿಡಿಯಲು ಅಸಾಧ್ಯನನ್ನೂ, **ಪರಾನುಯಾತ್ರಾ** = ದೇವರ ಅನುಸರಣೆಯಿಂದ, **ಅರ್ಜಿತ** = ಸಂಪಾದಿಸಿದ, **ಪುಣ್ಯ** = ಪುಣ್ಯಕ್ಕೆ, **ಪಾತ್ರೀ**= ಪಾತ್ರಳಾದ.

ಕೃಷ್ಣ ಎಲ್ಲಿಗೆ ಹೋದ? ಎಂದು ಯಶೋದೆಯು ವಿಚಾರ ಮಾಡತೊಡಗಿದಳು. ಬಹಳ ವಿಚಾರ ಮಾಡಿ ಹುಡುಕಿದಾಗ ಕೃಷ್ಣ ಕಂಡನು. ದೇವರು ಪ್ರತಿಯೊಬ್ಬರ ಹೃದಯ ಗುಹೆಯಲ್ಲಿ ಅಡಗಿರುತ್ತಾನೆ. ಆತ ಪುಕ್ಕಟೆಯಾಗಿ ತೋರುವುದಿಲ್ಲ. ಶಾಸ್ತ್ರದ ಮೂಲಕ ವಿಮರ್ಶೆ ಮಾಡಿದಾಗ ಮಾತ್ರ ಸಿಕ್ಕುವವ ತಾನೇ? ಕೃಷ್ಣ ಕಂಡಕೂಡಲೇ ಆತನನ್ನು

ಹಿಡಿಯಲು ಹಿಂದೆ ಹೊರಟಳು. ಯದ್ಯಪಿ ದೇವರು ಯಾರಿಗೂ ಸಿಕ್ಕುವವನಲ್ಲ. ಆದರೆ ಈಕೆ ಕೃಷ್ಣನ ಹಿಂದೆ ಹೊರಟ ಪುಣ್ಯದ ಪ್ರಭಾವದಿಂದ ಹಿಡಿದಳು.

**ಯದೀಯನಾಮ ಸ್ಮರತಾಂ ಜನಾನಾಂ**
**ಬಿಭೇತ್ಯಸಹ್ಯೋಽಪಿ ಹಿ ದಂಡಪಾಣಿಃ।**
**ಅಭೀಷಯದ್ವಿಶ್ವಸೃಜಾಂ ವರಿಷ್ಠಂ[೧]**
**ಗೃಹೀತದಂಡಾ ಕಿಲ ನಂದರಾಜ್ಞೀ ॥ ೬ ॥**

**ಯದೀಯ** = ಯಾರ, **ನಾಮ** = ಹೆಸರನ್ನು, **ಸ್ಮರತಾಂ** = ಸ್ಮರಿಸುವವರಿಗೆ, **ಜನಾನಾಂ** = ಜನರಿಗೆ, **ಬಿಭೇತಿ** = ಹೆದರುತ್ತಾನೆ, **ಅಸಹ್ಯಃ** = ಭಯಂಕರನಾದ, **ದಂಡಪಾಣಿಃ ಅಪಿ** = ಯಮನೂ ಕೂಡ, **ಹಿ** = ಪ್ರಸಿದ್ಧವು, **ಅಭೀಷಯತ್** = ಹೆದರಿಸಿದಳು, **ವಿಶ್ವಸೃಜಾಂ** = ಜಗತ್ತನ್ನು ಸೃಷ್ಟಿಸುವ ಬ್ರಹ್ಮಾದಿಗಳಿಗೆ, **ವರಿಷ್ಠಂ** = ಶ್ರೇಷ್ಠನಾದ, **ಗೃಹೀತ** = ಹಿಡಿದಿರುವ, **ದಂಡಾ** = ಬೆತ್ತವುಳ್ಳ, **ಕಿಲ** = ಪ್ರಸಿದ್ಧ, **ನಂದರಾಜ್ಞೀ** = ಯಶೋದೆಯು.

ಯಶೋದೆಯು ಕೈಯ್ಯಲ್ಲಿ ಒಂದು ಕೋಲನ್ನು ಹಿಡಿದುಕೊಂಡು ಕೃಷ್ಣನನ್ನು ಹೆದರಿಸಿದಳು. ಯಮ ಅಂದರೆ ಎಲ್ಲರೂ ಹೆದರುತ್ತಾರೆ. ಅಂತಹ ಯಮನೂ ಕೃಷ್ಣನಿಗೆ ಬಿಡಿ, ಕೃಷ್ಣನ ಭಕ್ತರಿಗೂ ಹೆದರುತ್ತಾನೆ. ಇಷ್ಟು ಮಹಿಮೆಯುಳ್ಳ ಕೃಷ್ಣನನ್ನು ಯಶೋದೆ ಹೆದರಿಸುತ್ತಾಳೆ ಅಂದರೆ ಅವಳ ಅಜ್ಞಾನ ಕೊನೆ ಹಂತ ಎಂದು ತಿಳಿಸಲು ಈ ಶ್ಲೋಕದಲ್ಲಿ 'ಕಿಲ' ಎಂದು ತಿಳಿಸಿದ್ದಾರೆ.

**ಅಜಾಂಡಕೋಟ್ಯಾಶ್ರಯರೋಮಕೂಪಂ**
**ತಮಾತ್ತಕೋಪಾ ಕಿಲ ನಂದಗೋಪೀ।**
**ಇಯೇಷ ಬದ್ಧುಂ ನಹಿ ರೋಷರುದ್ಧಂ**
**ಮನೋ ಮಿನೋತ್ಯಪ್ಯಮರಾನುಭಾವಮ್ ॥ ೭ ॥**

**ಅಜಾಂಡ** = ಬ್ರಹ್ಮಾಂಡಗಳ, **ಕೋಟಿ** = ಕೋಟಿಗೆ, **ಆಶ್ರಯ** = ಆಧಾರವಾದ, **ರೋಮ- ಕೂಪಂ** = ರೋಮರಂಧ್ರವುಳ್ಳ, **ತಂ** = ಕೃಷ್ಣನನ್ನು, **ಆತ್ತ** = ಹೊಂದಿದ, **ಕೋಪಾ** = ಕೋಪವುಳ್ಳ, **ಕಿಲ** = ಪ್ರಸಿದ್ಧ, **ನಂದಗೋಪೀ** = ಯಶೋದೆಯು, **ಇಯೇಷ** = ಇಚ್ಛಿಸಿದಳು, **ಬದ್ಧುಂ** = ಕಟ್ಟಲು, **ರೋಷ** = ಕೋಪದಿಂದ, **ರುದ್ಧಂ** = ತಡೆಯಲ್ಪಟ್ಟ, **ಮನಃ** = ಮನಸ್ಸು, **ನಹಿ ಮಿನೋತಿ** = ತಿಳಿಯುವುದಿಲ್ಲ, **ಅಮರ** = ದೇವತೆಗಳ, **ಅನುಭಾವಂ ಅಪಿ** = ಸಾಮರ್ಥ್ಯವನ್ನೂ.

---

[೧] (**ಪ್ರಭುಂ** = ಪ್ರಭುವಾದ, **ತಂ** = ಆ ಕೃಷ್ಣನನ್ನು) – ಪಾ

ಈ ನಂದಗೋಪಿಯು ಸಿಟ್ಟಾದಳು. ಕೃಷ್ಣನನ್ನು ಒಂದು ಕಡೆ ಕಟ್ಟಿಹಾಕಲು ಇಚ್ಛಿಸಿದಳು. ಯದ್ಯಪಿ ಕೃಷ್ಣನು ಬ್ರಹ್ಮಾಂಡವನ್ನೇ ತನ್ನಲ್ಲಿ ತುಂಬಿಸಿಕೊಂಡವನು. ಈತನ ಒಂದು ರೋಮಕೂಪವೇ ಸಾಕು ಈ ಬ್ರಹ್ಮಾಂಡಕ್ಕೆ. ಇದರಿಂದಾಗಿ ದೇವರ ದೇಹ ಎಷ್ಟು ದೊಡ್ಡದು ಎಂದು ತಿಳಿಯುತ್ತದೆ. ಬ್ರಹ್ಮಾಂಡವನ್ನೇ ಕಟ್ಟುವುದು ಮೂರ್ಖತನದ ಪರಮಾವಧಿ. ಇಂತಹ ಅಸಾಧ್ಯ ಕೆಲಸವನ್ನು ಯಶೋದೆ ಹೇಗೆ ಇಚ್ಛಿಸಿದಳು? ಅಂದರೆ ಈಗ ಆಕೆ ಸಿಟ್ಟಾಗಿದ್ದಾಳೆ. ಸಿಟ್ಟುಗೊಂಡ ವ್ಯಕ್ತಿಗಳು ವಿವೇಚನಾ ಶಕ್ತಿ ಕಳೆದುಕೊಳ್ಳುತ್ತಾರೆ. ಈಕೆ ದೇವರ ಸಾಮರ್ಥ್ಯವನ್ನು ಅರಿಯದೆ ಇಂತಹ ಕೆಲಸಕ್ಕೆ ಮುಂದಾಗಿದ್ದಾಳೆ.

ಕೃತಾಗಸಂ ತಂ ಕಿಲ ನೈವ ಮಾತಾ
ಶಶಾಕ ಬದ್ಧುಂ ಮಮ ತು ಪ್ರತರ್ಕಃ ।
ತದೀಯರಮ್ಯೋದರಮಧ್ಯಸಂಸ್ಥ-
ವಿಮುಕ್ತಶಕ್ತ್ಯೈವ ನ ಬಂಧ ಆಸೀತ್ ॥ ೮ ॥

**ಕೃತ** = ಮಾಡಿದ, **ಆಗಸಂ** = ಅಪರಾಧವುಳ್ಳ, **ತಂ** = ಅವನನ್ನು, **ಕಿಲ** = ಪ್ರಸಿದ್ಧ, **ಮಾತಾ** = ತಾಯಿಯು, **ನೈವ ಶಶಾಕ** = ಶಕ್ತಳಾಗಲಿಲ್ಲ, **ಬದ್ಧುಂ** = ಕಟ್ಟಲು, **ಮಮ** = ನನ್ನ, **ಪ್ರತರ್ಕಃ ತು** = ಊಹೆಯಾದರೋ, **ತದೀಯ** = ಕೃಷ್ಣನ, **ರಮ್ಯ** = ಚಂದದ, **ಉದರ** = ಹೊಟ್ಟೆಯ, **ಮಧ್ಯ** = ಮಧ್ಯದಲ್ಲಿ, **ಸಂಸ್ಥ** = ಇರುವ, **ವಿಮುಕ್ತ** = ಮುಕ್ತರ, **ಶಕ್ತ್ಯಾ ಏವ** = ಶಕ್ತಿಯಿಂದಲೇ, **ಬಂಧಃ** = ಬಂಧನವು, **ನ ಆಸೀತ್** = ಉಂಟಾಗಲಿಲ್ಲ.

ಮೇಲ್ನೋಟಕ್ಕೆ ಅಪರಾಧಿಯಂತೆ ತೋರಿದ ಕೃಷ್ಣನನ್ನು ಕಟ್ಟಲು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಯಾಕೆಂದರೆ – ಈತನ ಉದರದಲ್ಲಿ ಮುಕ್ತರು ಇದ್ದಾರೆ. ಇವರು ಸಂಸಾರ ಬಂಧವನ್ನು ಕಳಚಿಕೊಂಡು ಅಲ್ಲಿಗೆ ಹೋದವರು. ಬ್ರಹ್ಮಸೂತ್ರಗಳು ಹೇಳುತ್ತವೆ 'ನ ಚ ಪುನರಾವರ್ತತೇ' ಮುಕ್ತರಾದವರು ಪುನಃ ಬದ್ಧರಾಗುವುದಿಲ್ಲ ಎಂದು. ಇಂತಹ ಮುಕ್ತರು ಸೇರಿರುವ ಕೃಷ್ಣನನ್ನು ಬಂಧಿಸಿದರೆ ಮುಕ್ತರೂ ಬದ್ಧರಾಗಬೇಕಾದೀತು. ಆದ್ದರಿಂದ ಯಶೋದೆ ಅಸಮರ್ಥಳಾದಳು ಎಂದು ರಾಜರು ಊಹಿಸುತ್ತಾರೆ.

ಸಾಶಾಂ ಮುಹುಃ ಸ್ವಪ್ರಸುವಂ ವಿಧಾತು-
ಮೀಶತ್ವಮಪ್ಯಾತ್ಮಗತಂ ಮುಕುಂದಃ ।
ಬಂಧಂ ರುಣದ್ಧಿ ಸ್ಮ ತದಾತ್ತದಾಮ
ಸಂದರ್ಶಯನ್ ಸ್ವಾತ್ಮನಿ ಕಿಂಚಿದೂನಮ್ ॥೯॥

**ಸಾಶಾಂ** = ಆಸೆಯಿಂದ ಕೂಡಿದವಳನ್ನು, **ಮುಹುಃ** = ಮತ್ತೂ ಮತ್ತೂ, **ಸ್ವ** = ತನ್ನ,

**ಪ್ರಸುವಂ** = ತಾಯಿಯನ್ನು, **ವಿಧಾತುಂ** = ಮಾಡಲು, **ಈಶತ್ವಂ ಅಪಿ** = ಒಡೆತನವನ್ನೂ, **ಆತ್ಮಗತಂ** = ತನ್ನಲ್ಲಿ ಇರುವ, **ಮುಕುಂದಃ** = ದೇವರು, **ಬಂಧಂ** = ಬಂಧವನ್ನು, **ರುಣದ್ಧಿ ಸ್ಮ** = ತಡೆಯಿತು, **ತತ್** = ಯಶೋದೆಯಿಂದ, **ಆತ್ತ** = ಸ್ವೀಕೃತವಾದ, **ದಾಮ** = ಹಗ್ಗವು, **ಸಂದರ್ಶಯನ್** = ತೋರಿಸುತ್ತಾ, **ಸ್ವಾತ್ಮನಿ** = ತನ್ನಲ್ಲಿ, **ಕಿಂಚಿತ್** = ಸ್ವಲ್ಪ, **ಊನಮ್** = ಕಮ್ಮಿಯಾಗಿ.

ಕಟ್ಟಲು ಪ್ರಯತ್ನಿಸಿದಾಗ ಎರಡು ಅಂಗುಲ ಹಗ್ಗ ಕಮ್ಮಿಯಾಯಿತು. ಆಗ ಯಶೋದೆಗೆ, ಇನ್ನೊಂದು ಹಗ್ಗವನ್ನು ಈ ಹಗ್ಗಕ್ಕೆ ಜೋಡಿಸಿದರೆ ಕಟ್ಟಲು ಸಾಧ್ಯವಾಗುತ್ತದೆ ಎಂಬ ಆಸೆಯು ಉಂಟಾಯಿತು. ಇದೇ ರೀತಿ ಇವಳ ಆಸೆಯನ್ನು ಜೀವಂತವಾಗಿಯೇ ಇರಿಸಿದನು. ತಾನು ಈಶನು. ಕಟ್ಟಲು ಸಿಗುವವನಲ್ಲ ಎಂಬ ಭಾವನೆಯನ್ನು ಇವಳಿಗೆ ಉಳಿಸಬೇಕಾಗಿದೆ. ಅದಕ್ಕಾಗಿ ಕಟ್ಟಲು ಸಿಗುತ್ತಿರಲಿಲ್ಲ. ಈ ಎರಡು ಉದ್ದೇಶದಿಂದ ಕೃಷ್ಣನನ್ನು ಸುತ್ತುವರೆದ ಹಗ್ಗದ ಎರಡು ತುದಿಗಳ ಅಂತರ ಸ್ವಲ್ಪವೇ ಇತ್ತು.

ಭಾಗವತ ಹೇಳುತ್ತದೆ – ಎರಡು ಅಂಗುಲ ಕಮ್ಮಿಯಾಗಿತ್ತು. ಏಕೆಂದರೆ ದೇವರು ನಮಗೆ ಸಿಕ್ಕಬೇಕಾದರೆ ಮೂರರ ಅಪೇಕ್ಷೆ ಇದೆ – ಜ್ಞಾನ, ಭಕ್ತಿ, ವೈರಾಗ್ಯ. ಯಶೋದೆಗೆ ದೇವರ ಜ್ಞಾನ ಇಲ್ಲ. ಜ್ಞಾನ ಇದ್ದಿದ್ದರೆ ಕೃಷ್ಣನನ್ನು ಕಟ್ಟುವ ಕೆಲಸಕ್ಕೆ ಹೋಗುತ್ತಿರಲಿಲ್ಲ. ವಿಷಯ ವೈರಾಗ್ಯವೂ ಇಲ್ಲ. ಮನೆಯಲ್ಲಿರುವ ಹಾಲು ಮೊಸರು ಹಾಳಾಗುತ್ತಿದೆ ಎಂಬ ಸಿಟ್ಟು ತಾನೇ ಆಕೆಗೆ? ಕೇವಲ ಕೃಷ್ಣನಲ್ಲಿ ಪ್ರೀತಿ ಇದೆ. ಈ ರೀತಿ ಜ್ಞಾನ, ವೈರಾಗ್ಯಗಳ ಕೊರತೆ ಇದೆ ಎಂದು ತಿಳಿಯಲು ಎರಡೇ ಅಂಗುಲ ಕಮ್ಮಿಯಾಗಿತ್ತು.

ದಾಸರು ತನ್ನ ಒಂದು ಹಾಡಿನಲ್ಲಿ 'ಏನು ಒಲ್ಲೆ ಹರಿ, ನಿನ್ನ ಸ್ತುತಿಸಿ ಕೇಳ್ವುದು, ಜ್ಞಾನ, ಭಕ್ತಿ ಕೊಡು ಎನಗೆ ಇದುವೇ ದೊಡ್ಡದು' ಎಂದು ವೈರಾಗ್ಯ, ಜ್ಞಾನ, ಭಕ್ತಿಗಳನ್ನು ದೇವರಲ್ಲಿ ಬೇಡಿದ್ದಾರೆ.

ಸುತೋ ನ ಮೇಽಯಂ ಹರಿರೇವ ಸಾಕ್ಷಾತ್
ಇತಿ ಪ್ರಬೋಧೇಽಂಕುರಿತೇ ಪುರಂಧ್ರೀ ।
ಬಬಂಧ ನಂದಸ್ಯ ಬಲಾನುಜಂ ತಂ
ಬುಧೈರ್ನಿಬದ್ಧಂ ಪ್ರಣಯಾಖ್ಯರಜ್ವಾ ॥ ೧೦ ॥

**ಸುತಃ** = ಮಗನು, **ನ** = ಅಲ್ಲ, **ಮೇ** = ನನ್ನ, **ಅಯಂ** = ಇವನು, **ಹರಿಃ ಏವ** = ದೇವರೇ, **ಸಾಕ್ಷಾತ್** = ಮುಖ್ಯವಾಗಿ, **ಇತಿ** = ಎಂದು, **ಪ್ರಬೋಧೇ** = ಜ್ಞಾನವು, **ಅಂಕುರಿತೇ** = ಉದಿಸುತ್ತಿರಲು, **ಪುರಂಧ್ರೀ** = ಸ್ತ್ರೀಯು, **ಬಬಂಧ** = ಕಟ್ಟಿದಳು, **ನಂದಸ್ಯ**

= ನಂದನ, **ಬಲಾನುಜಂ** = ಬಲರಾಮನ ತಮ್ಮನಾದ, **ತಂ** = ಆ ಕೃಷ್ಣನನ್ನು, **ಬುಧೈಃ** = ಜ್ಞಾನಿಗಳಿಂದ, **ನಿಬದ್ಧಂ** = ಕಟ್ಟಲ್ಪಟ್ಟ, **ಪ್ರಣಯ** = ಸ್ನೇಹವೆಂದು, **ಆಖ್ಯಾ** = ಹೆಸರುಳ್ಳ, **ರಜ್ವಾ** = ಹಗ್ಗದಿಂದ.

ಯಶೋದೆ ಬಹಳ ಬಳಲಿದಳು. ಕೃಷ್ಣ ತನ್ನ ಮಗನಲ್ಲ. ಸಾಕ್ಷಾತ್ ದೇವರು ಎಂಬ ತಿಳುವಳಿಕೆ ಬಂದಿತು. ಆಗ ಕೃಷ್ಣನು ಕಟ್ಟಲು ಸಿಕ್ಕಿದನು. ದೇವರನ್ನು ಕಟ್ಟಲು ಬಾಹ್ಯ ಹಗ್ಗ ಉಪಯೋಗವಿಲ್ಲ. ಜ್ಞಾನವೆಂಬ ಹಗ್ಗವೇ ಮುಖ್ಯ ಋಷಿಗಳು ಸದಾ ಈತನನ್ನು ತಮ್ಮ ಹೃದಯದಲ್ಲಿ ಜ್ಞಾನದಿಂದ ಕೂಡಿದ ಪ್ರೀತಿ ಎಂಬ ಹಗ್ಗದಿಂದ ಕಟ್ಟುತ್ತಾರೆ.

**ಅಸಾಧ್ಯಭಾಗಸ್ಥಿತದುಗ್ಧಚೌರ್ಯೇ**
**ವಿಶಾರದಂ ತಂ ವಿನಿಬಧ್ಯ ಮಾತಾ ।**
**ಉಲೂಖಲಸ್ಯಾಪಿ ಬಬಂಧ ಮಧ್ಯಂ**
**ಸಹಾಯಭೂತಸ್ಯ ತದೀಯಕಾರ್ಯೇ ॥ ೧೧ ॥**

**ಅಸಾಧ್ಯ** = ಎಟುಕದ, **ಭಾಗ** = ಸ್ಥಳದಲ್ಲಿ, **ಸ್ಥಿತ** = ಇರುವ, **ದುಗ್ಧ** = ಹಾಲಿನ, **ಚೌರ್ಯೇ** = ಕಳ್ಳತನದಲ್ಲಿ, **ವಿಶಾರದಂ** = ಚತುರನಾದ, **ತಂ** = ಅವನನ್ನು, **ವಿನಿಬಧ್ಯ** = ಕಟ್ಟಿ, **ಮಾತಾ** = ತಾಯಿಯು, **ಉಲೂಖಲಸ್ಯ ಅಪಿ** = ಒರಳಿಗೂ, **ಬಬಂಧ** = ಕಟ್ಟಿದಳು, **ಮಧ್ಯಂ** = ಮಧ್ಯವನ್ನು, **ಸಹಾಯಭೂತಸ್ಯ** = ಸಹಾಯಮಾಡುವ, **ತದೀಯ** = ಕೃಷ್ಣನ, **ಕಾರ್ಯೇ** = ಕಾರ್ಯದಲ್ಲಿ.

ಯಾರಿಗೂ ಎಟುಕದ ಜಾಗದಲ್ಲಿ ಗಡಿಗೆಗಳು ಇದ್ದರೂ ಕೃಷ್ಣ ಅಲ್ಲಿಂದ ಕಳ್ಳತನ ಮಾಡುತ್ತಿದ್ದ. ಇಂತಹ ಕೃಷ್ಣನ ಉದರವನ್ನು ಹಗ್ಗದಿಂದ ಬಿಗಿದಳು. ಈ ಕೃಷ್ಣನ ಚೌರ್ಯಕ್ಕೆ ಸಹಾಯ ಮಾಡುತ್ತಿದ್ದುದು ಈ ಮರದ ದಿಮ್ಮಿ. (ಉಲೂಖಲ) ಎಂದು ಕೃಷ್ಣನನ್ನು ಅದರ ಮಧ್ಯಕ್ಕೆ ಬಿಗಿದಳು. ಈಗ ಇಬ್ಬರಿಗೂ ಒಂದೇ ರೀತಿಯ ಶಿಕ್ಷೆ.

**ಅನಾಹಿ ಯಃ ಕಾರ್ಯವಶಾಜ್ಜನನ್ಯಾ**
**ಶನೈರಸೌ ಸಾಕಮುಲೂಖಲೇನ ।**
**ವಿಧಾಯ ಘೃಷ್ಟಂ ಸ್ವಕಯೋರನಿಷ್ಟ-**
**ಮಭೀಪ್ಸಿತಂ ದಾತುಮಿವ ಪ್ರತಸ್ಥೇ ॥ ೧೨ ॥**

**ಅನಾಹಿ** = ಕಟ್ಟಲ್ಪಟ್ಟನು, **ಯಃ** = ಯಾರು, **ಕಾರ್ಯ** = ಕೆಲಸದ, **ವಶಾತ್** = ನಿಮಿತ್ತ-ದಿಂದ, **ಜನನ್ಯಾ** = ತಾಯಿಯಿಂದ, **ಶನೈಃ** = ಮೆಲ್ಲನೆ, **ಅಸೌ** = ಕೃಷ್ಣನು, **ಸಾಕಂ** =

ಕೂಡಿಕೊಂಡು, **ಉಲೂಖಲೇನ** = ಒರಳಿನಿಂದ, **ವಿಧಾಯ** = ಮಾಡಿ, **ಘೃಷ್ಟಂ** = ಪುಡಿಯನ್ನಾಗಿ, **ಸ್ವಕಯೋಃ** = ತನ್ನವರ, **ಅನಿಷ್ಟಂ** = ಪಾಪವನ್ನು, **ಅಭೀಪ್ಸಿತಂ** = ಇಷ್ಟವನ್ನು, **ದಾತುಮ್ ಇವ** = ಕೊಡಲು ಎಂಬಂತೆ, **ಪ್ರತಸ್ಥೇ** = ಹೊರಟನು.

ಈ ರೀತಿ ಬದ್ಧನಾದ ಕೃಷ್ಣನು ಈ ಬಂಧನವನ್ನು ಒಂದು ಒಳ್ಳೆಯ ಕೆಲಸಕ್ಕೆ ಉಪ-ಯೋಗಿಸಿಕೊಂಡನು. ಆ ದಿಮ್ಮಿಯನ್ನು ಕೃಷ್ಣನು ಎಳೆದುಕೊಂಡು ಎರಡು ಮರಗಳು ಜೊತೆಯಾಗಿ ಬೆಳೆದಿರುವಲ್ಲಿಗೆ ಬಂದನು. ಆ ಎರಡು ಮರಗಳಲ್ಲಿ ತನ್ನ ಇಬ್ಬರು ಭಕ್ತರು ಶಾಪಗ್ರಸ್ತರಾಗಿ ಸೇರಿಕೊಂಡಿದ್ದಾರೆ. ಅವರ ಪಾಪಗಳನ್ನು ಪುಡಿಗೈದು ಅವರನ್ನು ಉದ್ಧರಿಸ-ಬೇಕಾಗಿದೆ. ಪಾಪಗಳನ್ನು ಪುಡಿಗೈಯಲು ಈ ದಿಮ್ಮಿಯನ್ನು ಎಳೆದುಕೊಂಡು ಹೋಗುವಂತೆ ಇದೆ.

ಕೃಷ್ಣನ ಸಂಪರ್ಕವನ್ನು ಬೆಳೆಸಿದರೆ ದೇವರು ನಮ್ಮನ್ನು ತನ್ನ ದಾರಿಯಲ್ಲಿ ಕರೆದು-ಕೊಂಡು ಹೋಗುತ್ತಾನೆ.

**ಅಸಜ್ಜನೇಷ್ವಾಚರಿತೋಗ್ರಶಿಕ್ಷಾಂ**
**ಸ್ವಭಕ್ತಪುಂಜೇಷು ಕೃತಾಂ ಚ ರಕ್ಷಾಮ್ ।**
**ನಭಸ್ಯುಭೌ ಗಾತುಮಥೋ ಚಿಕೀರ್ಷನ್**
**ವಿಪಾಟಯಾಮಾಸ ಸ ಪಾದಪೌ ದ್ವೌ ॥೧೩॥**

**ಅಸಜ್ಜನೇಷು** = ದುಷ್ಟರಲ್ಲಿ, **ಆಚರಿತ** = ಮಾಡಿದ, **ಉಗ್ರ** = ಬಹಳವಾದ, **ಶಿಕ್ಷಾಂ** = ಶಿಕ್ಷೆಯನ್ನು, **ಸ್ವ** = ತನ್ನ, **ಭಕ್ತ** = ಭಕ್ತರ, **ಪುಂಜೇಷು** = ಸಮೂಹದಲ್ಲಿ, **ಕೃತಾಂ** = ಮಾಡಿದ, **ರಕ್ಷಾಂ ಚ** = ರಕ್ಷಣೆಯನ್ನೂ, ನಭಸಿ = ಆಕಾಶದಲ್ಲಿ, **ಅಥೋ** = ಅನಂತರ, **ಗಾತುಂ** = ಹೇಳಲು, **ಉಭೌ** = ಇಬ್ಬರನ್ನು, **ಚಿಕೀರ್ಷನ್ನಿವ** = ಮಾಡುವವನಂತೆ, **ವಿಪಾಟಯಾಮಾಸ** = ಬೀಳಿಸಿದನು, **ಸಃ** = ಕೃಷ್ಣನು, **ಪಾದಪೌ** = ಮರಗಳನ್ನು, **ದ್ವೌ** = ಎರಡು.

ಕೃಷ್ಣನು ಎರಡು ಮರಗಳ ಮಧ್ಯೆ ನುಸುಳಿದ. ಆದರೆ ಆತನಿಗೆ ತಾಗಿಕೊಂಡಿರುವ ದಿಮ್ಮಿಗೆ ಜಾಗ ಸಾಕಾಗಲಿಲ್ಲ. ಕೃಷ್ಣನು ದಿಮ್ಮಿಯನ್ನು ಎಳೆದನು. ಆಗ ಮರಗಳು ಉರುಳಿದವು. ಕೃಷ್ಣ ಯಾಕೆ ಉರುಳಿಸಿದ? ಎನ್ನುವುದನ್ನು ರಾಜರು ಈ ರೀತಿ ಊಹಿಸುತ್ತಾರೆ. ಒಂದು– ದುಷ್ಟರಿಗೆ ಶಿಕ್ಷೆ; ಎರಡು– ಶಿಷ್ಟರ ರಕ್ಷೆ. ಈ ಎರಡು ಕೆಲಸಗಳನ್ನು ಮೇಲಿನ ಲೋಕದಲ್ಲಿ ತಿಳಿಸಲೋಸುಗ ಎಂದು. ಈ ಎರಡು ಕೆಲಸಗಳು ಬಹಳ ಇವೆ. ಆದ್ದರಿಂದ ಹೇಳಲು ಒಬ್ಬನಿಂದ ಸಾಧ್ಯವಿಲ್ಲ. ಅದಕ್ಕಾಗಿ ಎರಡು ಮರಗಳನ್ನು ಉರುಳಿಸಿ ಅದರಿಂದ

ಇಬ್ಬರು ಸಜ್ಜೀವರನ್ನು ಎತ್ತಿದನು. ಈ ವೃಕ್ಷಗಳಲ್ಲಿ ಇಬ್ಬರು ಸಜ್ಜೀವರಂತೆ ದುರ್ಜೀವರೂ ಸೇರಿದ್ದಾರೆ. ಅವರ ಶಿಕ್ಷೆ. ಈ ಸಜ್ಜೀವರ ರಕ್ಷೆ ಎಂಬ ವಿಷಯವೂ ಇಲ್ಲಿ ವೇದ್ಯವಾಗುತ್ತದೆ.

ಸ್ವಭೃತ್ಯಭೀಮಾನುಜಮದ್ವಿತೀಯಂ
ಪ್ರಿಯಂ ವಿಧಿತ್ಸುರ್ದಯಯೇವ ದೇವಃ।
ಸ ಭೂರುಹಾವರ್ಜುನಸಂಜ್ಞಿತೌ ತೌ
ಬಭಂಜ ಕಂಜಾಯತಮಂಜುನೇತ್ರಃ ॥ ೧೪ ॥

**ಸ್ವ** = ತನ್ನ, **ಭೃತ್ಯ** = ಸೇವಕನಾದ, **ಭೀಮ** = ಭೀಮನ, **ಅನುಜಂ** = ತಮ್ಮನನ್ನು, **ಅದ್ವಿತೀಯಂ** = ಸಾಟಿ ಇಲ್ಲದವನನ್ನಾಗಿ, **ಪ್ರಿಯಂ** = ಇಷ್ಟನಾದ, **ವಿಧಿತ್ಸುಃ** = ಮಾಡುವ ಮನಸ್ಸುಳ್ಳ, **ದಯಯಾ ಇವ** = ದಯೆಯಿಂದ ಎಂಬಂತೆ, **ದೇವಃ** = ಕೃಷ್ಣನು, **ಸಃ** = ಆ, **ಭೂರುಹೌ** = ಮರಗಳನ್ನು, **ಅರ್ಜುನ** = ಅರ್ಜುನ ಎಂಬ, **ಸಂಜ್ಞಿತೌ** = ಹೆಸರುಳ್ಳ, **ತೌ** = ಆ, **ಬಭಂಜ** = ಮುರಿದನು, **ಕಂಜಾಯತ** = ಕಮಲದಂತೆ ವಿಶಾಲವಾದ, **ಮಂಜು** = ಚಂದದ, **ನೇತ್ರಃ** = ಕಣ್ಣುಳ್ಳ.

ಈ ಮರಗಳ ಹೆಸರು ಅರ್ಜುನಗಳು ಎಂದು. ಅಂದರೆ ಮತ್ತಿಮರಗಳು. ಮುಂದೆ ಇಂದ್ರ ಅರ್ಜುನನಾಗಿ ಭೀಮನಿಗೆ ತಮ್ಮನಾಗಿ ಹುಟ್ಟುವವನಿದ್ದಾನೆ. ಭೀಮನು ಕೃಷ್ಣನಿಗೆ ಬಹಳ ಪ್ರಿಯನು. ಕೃಷ್ಣನ ಪ್ರಿಯನಾದ ಭೀಮನ ತಮ್ಮನು ಅದ್ವಿತೀಯನಾಗಬೇಕು. ಅರ್ಜುನ ಎಂಬ ಹೆಸರಿನ ಈ ಮರಗಳಿದ್ದರೆ ಆಗ ಅರ್ಜುನನು ಸದ್ವಿತೀಯನಾಗುತ್ತಾನೆ. ಇದನ್ನು ತಪ್ಪಿಸಲು ಅರ್ಜುನನಿಗೆ ಅದ್ವಿತೀಯತ್ವವನ್ನು ಕೊಡಲು ಕೃಷ್ಣನು ಈ ಮರಗಳನ್ನು ಉರುಳಿಸಿದನು.

ಇದರಿಂದ ಭೀಮನು ಕೃಷ್ಣನಿಗೆ ಪ್ರಿಯನು. ಭೀಮ ಎಂದರೆ ಆಚಾರ್ಯ ಮಧ್ವರು. ಈ ಮಧ್ವರಿಗೆ ಸಂಬಂಧಿಯಾಗಿ (ಶಾಸ್ತ್ರದ ಮೂಲಕ) ನಾವು ಇದ್ದರೆ ದೇವರು ನಮ್ಮನ್ನು ಈ ಲೋಕದಲ್ಲಿ ಚೆನ್ನಾಗಿ ಮೆರೆಸುತ್ತಾನೆ ಎಂದು ತಿಳಿಯುತ್ತದೆ.

ತದಂಗಬಂಧಪ್ರತಿಬಂಧಪುಣ್ಯ-
ಬಲೇನ ಸಿದ್ಧೌ ತತ ಉತ್ಥಿತೌ ದ್ವೌ ।
ಪ್ರಶಂಸ್ಯ ವೃಂದಾವನವಲ್ಲಭಂ ತಂ
ತದೇಯತುಸ್ತನ್ಮನಸೌ ಸ್ವಲೋಕಮ್ ॥ ೧೫ ॥

**ತದಂಗ** = ಕೃಷ್ಣನ ಶರೀರದಲ್ಲಿ, **ಬಂಧ** = ಬಂಧನದ, **ಪ್ರತಿಬಂಧ** = ತಡೆಯುವಿಕೆಯು,

**ಪುಣ್ಯಬಲೇನ** = ಪುಣ್ಯದ ಬಲದಿಂದ, **ಸಿದ್ಧೌ** = ಜ್ಞಾನಾದಿಗಳಿಂದ ಕೂಡಿದ, **ತತಃ** = ಆದರಿಂದ, **ಉತ್ಥಿತೌ** = ಎದ್ದರು, **ದ್ವೌ** = ಇಬ್ಬರು, **ಪ್ರಶಂಸ್ಯ** = ಹೊಗಳಿ, **ವೃಂದಾವನ** = ವೃಂದಾವನಕ್ಕೆ, **ವಲ್ಲಭಂ** = ಪ್ರಿಯನಾದ, **ತಂ** = ಕೃಷ್ಣನನ್ನು, **ತದಾ** = ಆಗ, **ಈಯತುಃ** = ಹೊರಟರು, **ತತ್** = ಕೃಷ್ಣನಲ್ಲಿ, **ಮನಸೌ** = ಮನಸ್ಸುಳ್ಳವರಾಗಿ, **ಸ್ವಲೋಕಮ್** = ತಮ್ಮ ಲೋಕವನ್ನು.

ಕೃಷ್ಣನಿಗೆ ಮರದ ದಿಮ್ಮಿಯ ಸಂಬಂಧ ಬಂಧನದ ಮೂಲಕ ಆಗಿತ್ತು. ಇದರಿಂದಾಗಿ ಇಡೀ ವೃಕ್ಷಸಮೂಹಕ್ಕೆ ಪುಣ್ಯ ಬಂದಿತ್ತು. ಈ ಪುಣ್ಯದ ಪ್ರಭಾವದಿಂದ ಮರದ ವಂಶದಲ್ಲಿ ಬಂದಿರುವ ಈ ಎರಡು ಮರಗಳ ಉದ್ಧಾರವಾಯಿತು. ಅಲ್ಲಿಂದ ಎದ್ದ ನಲಕೂಬರ, ಮಣಿಗ್ರೀವರು ಕೃಷ್ಣನನ್ನು ಸ್ತುತಿಸಿ ಧ್ಯಾನಿಸುತ್ತಾ ತಮ್ಮ ಲೋಕಕ್ಕೆ ಹೋದರು.

**ಬೃಹದ್ವನೇ ಸ್ವಸ್ಯ ಹಿ ಸನ್ನಿಧಾನಾತ್**
**ಮಹಾಪುರೀ ಸಾಮ್ಯಮುಪೇಯುಷೀತ್ಥಮ್ ।**
**ವನಪ್ರಿಯೋಽಸೌ ಚಕಮೇ ರಮೇಶೋ**
**ಮನೋಜ್ಞವೃಂದಾವನ ಏವ ವಾಸಮ್ ॥ ೧೬ ॥**

**ಬೃಹದ್ವನೇ** = ಗೋಕುಲವು, **ಸ್ವಸ್ಯ** = ತನ್ನ, **ಸನ್ನಿಧಾನಾತ್** = ಇರುವಿಕೆಯಿಂದ, **ಮಹಾಪುರೀ** = ದೊಡ್ಡ ಪಟ್ಟಣದ, **ಸಾಮ್ಯಂ** = ಹೋಲಿಕೆಯನ್ನು, **ಉಪೇಯುಷಿ** = ಹೊಂದುತ್ತಿರಲು, **ಇತ್ಥಂ** = ಈ ರೀತಿಯಾಗಿ, **ವನಪ್ರಿಯಃ** = ಅರಣ್ಯವನ್ನು ಪ್ರೀತಿಸುವ, **ಅಸೌ** = ಈ ಕೃಷ್ಣನು, **ಚಕಮೇ** = ಇಚ್ಛಿಸಿದನು, **ರಮೇಶಃ** = ಲಕ್ಷ್ಮೀಪತಿಯಾದ, **ಮನೋಜ್ಞ** = ಚಂದದ, **ವೃಂದಾವನೇ ಏವ** = ಅರಣ್ಯದಲ್ಲಿ, **ವಾಸಮ್** = ವಸತಿ-ಯನ್ನು.

ಕೃಷ್ಣನು ಗೋಪಾಲನು. ಆತನು ವನಪ್ರಿಯನು. ಗೋವುಗಳು ಕಾಡುಗಳನ್ನು ಪ್ರೀತಿ-ಸುವುದರಿಂದ ಕೃಷ್ಣನಿಗೂ ಕಾಡು ಇಷ್ಟ. ಪ್ರಕೃತ ಈಗ ಈ ನಂದಗೋಕುಲವು ಲಕ್ಷ್ಮೀಪತಿಯ ವಾಸದಿಂದ ದೊಡ್ಡ ಶ್ರೀಮಂತಪಟ್ಟಣವೇ ಆಗಿದೆ. ಆದ್ದರಿಂದ ಕೃಷ್ಣನು ಇಲ್ಲಿಂದ ವೃಂದಾವನಕ್ಕೆ ತೆರಳಲು ಇಚ್ಛಿಸಿದನು.

ಹೀಗೆ ಒಂದೊಂದೇ ಊರನ್ನು ಸಮೃದ್ಧವನ್ನಾಗಿ ಮಾಡುವುದೇ ಕೃಷ್ಣನ ಉದ್ದೇಶ.

**ವಿರೋಧಿದೈತೇಯಪರಾಭವೇನ**
**ಸ್ಥಿರೇಹ ನೋತ್ಥಾಸ್ಯತಿ ಬಂಧುತೇಯಮ್ ।**

**ಇತಿ ಪ್ರಭುಃ ಸ್ವಪ್ರಿಯಸಾಧ್ವಸಾಯ**
**ವೃಕಾನನೇಕಾಂಶ್ಚ ಸಸರ್ಜ ರೋಮ್ಣಃ ॥೧೭॥**

**ವಿರೋಧಿ** = ಶತ್ರುಗಳಾದ, **ದೈತೇಯ** = ದೈತ್ಯರ, **ಪರಾಭವೇನ** = ಸೋಲಿನಿಂದ, **ಸ್ಥಿರ** = ದೃಢವಾದ, **ಇಹ** = ಇಲ್ಲಿ, **ನ ಉತ್ಥಾಸ್ಯತಿ** = ಹೊರಡುವುದಿಲ್ಲ, **ಬಂಧುತಾ** = ಬಂಧುಗಳು, **ಇಯಂ** = ಈ, **ಇತಿ** = ಆದ್ದರಿಂದ, **ಪ್ರಭುಃ** = ಕೃಷ್ಣನು, **ಸ್ವ** = ತನ್ನ, **ಪ್ರಿಯ** = ಅಭೀಷ್ಟದ, **ಸಾಧ್ವಸಾಯ** = ಸಾಧಿಸಲು, **ವೃಕಾನ್** = ತೋಳಗಳನ್ನು, **ಅನೇಕಾನ್ ಚ** = ಬಹಳ, **ಸಸರ್ಜ** = ನಿರ್ಮಿಸಿದನು, **ರೋಮ್ಣಃ** = ರೋಮಗಳಿಂದ.

ಆದರೆ ಗೋಪರಿಗೆ ಇಲ್ಲಿಂದ ಹೊರಡಲು ಇಚ್ಛೆ ಇಲ್ಲ. ಇದು ಗೋಪಾಲರಿಗೆ ಒಳ್ಳೆಯ ರಕ್ಷಣೆಯನ್ನು ಕೊಡುತ್ತಿದೆ. ಇಲ್ಲಿಗೆ ಬಂದಿರುವ ದುಷ್ಟರು ಯಾರೂ ಬದುಕಿ ಉಳಿಯಲಿಲ್ಲ. ಆದ್ದರಿಂದ ಗೋಪರು ಇಲ್ಲೇ ಉಳಿಯಲು ಅಪೇಕ್ಷಿಸಿದ್ದರು. ಇಲ್ಲಿಂದ ಇವರನ್ನು ಹೊರಡಿಸಲು ದೇವರು ಒಂದು ಉಪಾಯ ಮಾಡಿದ. ತನ್ನ ರೋಮಗಳಿಂದ ಅನೇಕ ತೋಳಗಳನ್ನು ಸೃಷ್ಟಿಸಿದನು. ಅವುಗಳು ನಂದಗೋಕುಲಕ್ಕೆ ಬಹಳ ಪೀಡೆ ಕೊಡಲು ಆರಂಭಿಸಿದವು. ಈ ತೋಳಗಳಿಗೆ ಹೆದರಿ ಗೊಲ್ಲರು ಹೊರಡಲು ಅಣಿಯಾದರು.

**ಇಹ ಸ್ವಕೀಯಾನ್ನಿಹತಾನ್ ನಿಶಮ್ಯ**
**ನ ಮಾಂ ವ್ರಜಸ್ಥಂ ಪ್ರತಿ ಯಾಂತಿ ದೈತ್ಯಾಃ।**
**ಸ ಇತ್ಥಮಾಲೋಚ್ಯ ವಿಭುಃ ಸ್ವಕೀಯಾನ್**
**ನ್ಯಯುಂಕ್ತ ವೃಂದಾವನಮೇವ ಗಂತುಮ್ ॥೧೮॥**

**ಸ್ವಕೀಯಾನ್** = ತನ್ನವರನ್ನು, **ನಿಹತಾನ್** = ಸತ್ತವರನ್ನು, **ನಿಶಮ್ಯ** = ಕೇಳಿ, **ಮಾಂ** = ನನ್ನನ್ನು, **ವ್ರಜಸ್ಥಂ** = ಗೋಕುಲದಲ್ಲಿರುವ, **ಪ್ರತಿ** = ಎದುರಾಗಿ, **ನ ಯಾಂತಿ** = ಬರುವುದಿಲ್ಲ, **ದೈತ್ಯಾಃ** = ದೈತ್ಯರು, **ಸಃ** = ಆ, **ಇತ್ಥಂ** = ಈ ರೀತಿಯಾಗಿ, **ಆಲೋಚ್ಯ** = ಯೋಚಿಸಿ, **ವಿಭುಃ** = ಕೃಷ್ಣನು, **ಸ್ವಕೀಯಾನ್** = ತನ್ನವರನ್ನು, **ನ್ಯಯುಂಕ್ತ** = ಪ್ರೇರಿಸಿದನು, **ವೃಂದಾವನಮೇವ** = ಕಾಡನ್ನೇ (ಕುರಿತು), **ಗಂತುಂ** = ಹೋಗಲು.

ಕೆಲವು ದೈತ್ಯರು ಈ ಗೋಕುಲದಲ್ಲಿ ಕೃಷ್ಣನಿಂದ ಹತರಾದರು. ಇನ್ನೂ ಬಹಳ ಉಳಿದಿದ್ದಾರೆ. ಇವರು ಯಾರೂ ಇನ್ನು ಮುಂದೆ ಇಲ್ಲಿಗೆ ಬರಲಿಕ್ಕಿಲ್ಲ. ಯಾಕೆಂದರೆ, ಇಲ್ಲಿಗೆ ಬಂದವರು ಯಾರೂ ಬದುಕಿ ಉಳಿಯಲಿಲ್ಲ. ಉಳಿದ ದೈತ್ಯರನ್ನು ಕೊಲ್ಲಬೇಕಾಗಿದೆ. ಅದಕ್ಕಾಗಿ ಕೃಷ್ಣ ಜಾಗ ಬದಲಾಯಿಸಿದ. ಈಗ ದೈತ್ಯರು ಗೋಕುಲವು ತಮಗೆ ಪರಾಜಯದ ಜಾಗ, ವೃಂದಾವನವು ಜಯದ ಜಾಗ ಎಂದು ನಿಶ್ಚಯಿಸಿ, ಪುನಃ ಕೃಷ್ಣನಿದ್ದಲ್ಲಿಗೆ ಬರಲು

**ಪುಣ್ಯಬಲೇನ** = ಪುಣ್ಯದ ಬಲದಿಂದ, **ಸಿದ್ಧೌ** = ಜ್ಞಾನಾದಿಗಳಿಂದ ಕೂಡಿದ, **ತತಃ** = ಅದರಿಂದ, **ಉತ್ಥಿತೌ** = ಎದ್ದರು, **ದ್ವೌ** = ಇಬ್ಬರು, **ಪ್ರಶಂಸ್ಯ** = ಹೊಗಳಿ, **ವೃಂದಾವನ** = ವೃಂದಾವನಕ್ಕೆ, **ವಲ್ಲಭಂ** = ಪ್ರಿಯನಾದ, **ತಂ** = ಕೃಷ್ಣನನ್ನು, **ತದಾ** = ಆಗ, **ಈಯತುಃ** = ಹೊರಟರು, **ತತ್** = ಕೃಷ್ಣನಲ್ಲಿ, **ಮನಸೌ** = ಮನಸ್ಸುಳ್ಳವರಾಗಿ, **ಸ್ವಲೋಕಮ್** = ತಮ್ಮ ಲೋಕವನ್ನು.

ಕೃಷ್ಣನಿಗೆ ಮರದ ದಿಮ್ಮಿಯ ಸಂಬಂಧ ಬಂಧನದ ಮೂಲಕ ಆಗಿತ್ತು. ಇದರಿಂದಾಗಿ ಇಡೀ ವೃಕ್ಷಸಮೂಹಕ್ಕೆ ಪುಣ್ಯ ಬಂದಿತ್ತು. ಈ ಪುಣ್ಯದ ಪ್ರಭಾವದಿಂದ ಮರದ ವಂಶದಲ್ಲಿ ಬಂದಿರುವ ಈ ಎರಡು ಮರಗಳ ಉದ್ಧಾರವಾಯಿತು. ಅಲ್ಲಿಂದ ಎದ್ದ ನಲಕೂಬರ, ಮಣಿಗ್ರೀವರು ಕೃಷ್ಣನನ್ನು ಸ್ತುತಿಸಿ ಧ್ಯಾನಿಸುತ್ತಾ ತಮ್ಮ ಲೋಕಕ್ಕೆ ಹೋದರು.

**ಬೃಹದ್ವನೇ ಸ್ವಸ್ಯ ಹಿ ಸನ್ನಿಧಾನಾತ್**
**ಮಹಾಪುರೀ ಸಾಮ್ಯಮುಪೇಯುಷೀತ್ಥಮ್ ।**
**ವನಪ್ರಿಯೋಽಸೌ ಚಕಮೇ ರಮೇಶೋ**
**ಮನೋಜ್ಞವೃಂದಾವನ ಏವ ವಾಸಮ್ ॥ ೧೬ ॥**

**ಬೃಹದ್ವನೇ** = ಗೋಕುಲವು, **ಸ್ವಸ್ಯ** = ತನ್ನ, **ಸನ್ನಿಧಾನಾತ್** = ಇರುವಿಕೆಯಿಂದ, **ಮಹಾಪುರೀ** = ದೊಡ್ಡ ಪಟ್ಟಣದ, **ಸಾಮ್ಯಂ** = ಹೋಲಿಕೆಯನ್ನು, **ಉಪೇಯುಷಿ** = ಹೊಂದುತ್ತಿರಲು, ಇತ್ಥಂ = ಈ ರೀತಿಯಾಗಿ, ವನಪ್ರಿಯಃ = ಅರಣ್ಯವನ್ನು ಪ್ರೀತಿಸುವ, **ಅಸೌ** = ಈ ಕೃಷ್ಣನು, **ಚಕಮೇ** = ಇಚ್ಛಿಸಿದನು, **ರಮೇಶಃ** = ಲಕ್ಷ್ಮೀಪತಿಯಾದ, **ಮನೋಜ್ಞ** = ಚಂದದ, **ವೃಂದಾವನೇ ಏವ** = ಅರಣ್ಯದಲ್ಲಿ, **ವಾಸಮ್** = ವಸತಿಯನ್ನು.

ಕೃಷ್ಣನು ಗೋಪಾಲನು. ಆತನು ವನಪ್ರಿಯನು. ಗೋವುಗಳು ಕಾಡುಗಳನ್ನು ಪ್ರೀತಿಸುವುದರಿಂದ ಕೃಷ್ಣನಿಗೂ ಕಾಡು ಇಷ್ಟ. ಪ್ರಕೃತ ಈಗ ಈ ನಂದಗೋಕುಲವು ಲಕ್ಷ್ಮೀಪತಿಯ ವಾಸದಿಂದ ದೊಡ್ಡ ಶ್ರೀಮಂತಪಟ್ಟಣವೇ ಆಗಿದೆ. ಆದ್ದರಿಂದ ಕೃಷ್ಣನು ಇಲ್ಲಿಂದ ವೃಂದಾವನಕ್ಕೆ ತೆರಳಲು ಇಚ್ಛಿಸಿದನು.

ಹೀಗೆ ಒಂದೊಂದೇ ಊರನ್ನು ಸಮೃದ್ಧವನ್ನಾಗಿ ಮಾಡುವುದೇ ಕೃಷ್ಣನ ಉದ್ದೇಶ.

**ವಿರೋಧಿದೈತೇಯಪರಾಭವೇನ**
**ಸ್ಥಿರೇಹ ನೋತ್ಥಾಸ್ಯತಿ ಬಂಧುತೇಯಮ್ ।**

**ಇತಿ ಪ್ರಭುಃ ಸ್ವಪ್ರಿಯಸಾಧ್ವಸಾಯ**
**ವೃಕಾನನೇಕಾಂಶ್ಚ ಸಸರ್ಜ ರೋಮ್ಣಃ ॥೧೭॥**

**ವಿರೋಧಿ** = ಶತ್ರುಗಳಾದ, **ದೈತೇಯ** = ದೈತ್ಯರ, **ಪರಾಭವೇನ** = ಸೋಲಿನಿಂದ, **ಸ್ಥಿರ** = ದೃಢವಾದ, **ಇಹ** = ಇಲ್ಲಿ, **ನ ಉತ್ಸ್ಥಾಸ್ಯತಿ** = ಹೊರಡುವುದಿಲ್ಲ, **ಬಂಧುತಾ** = ಬಂಧುಗಳು, **ಇಯಂ** = ಈ, **ಇತಿ** = ಆದ್ದರಿಂದ, **ಪ್ರಭುಃ** = ಕೃಷ್ಣನು, **ಸ್ವ** = ತನ್ನ, **ಪ್ರಿಯ** = ಅಭೀಷ್ಟದ, **ಸಾಧ್ವಸಾಯ** = ಸಾಧಿಸಲು, **ವೃಕಾನ್** = ತೋಳಗಳನ್ನು, **ಅನೇಕಾನ್ ಚ** = ಬಹಳ, **ಸಸರ್ಜ** = ನಿರ್ಮಿಸಿದನು, **ರೋಮ್ಣಃ** = ರೋಮಗಳಿಂದ.

ಆದರೆ ಗೋಪರಿಗೆ ಇಲ್ಲಿಂದ ಹೊರಡಲು ಇಚ್ಛೆ ಇಲ್ಲ. ಇದು ಗೋಪಾಲರಿಗೆ ಒಳ್ಳೆಯ ರಕ್ಷಣೆಯನ್ನು ಕೊಡುತ್ತಿದೆ. ಇಲ್ಲಿಗೆ ಬಂದಿರುವ ದುಷ್ಟರು ಯಾರೂ ಬದುಕಿ ಉಳಿಯಲಿಲ್ಲ. ಆದ್ದರಿಂದ ಗೋಪರು ಇಲ್ಲೇ ಉಳಿಯಲು ಅಪೇಕ್ಷಿಸಿದ್ದರು. ಇಲ್ಲಿಂದ ಇವರನ್ನು ಹೊರಡಿಸಲು ದೇವರು ಒಂದು ಉಪಾಯ ಮಾಡಿದ. ತನ್ನ ರೋಮಗಳಿಂದ ಅನೇಕ ತೋಳಗಳನ್ನು ಸೃಷ್ಟಿಸಿದನು. ಅವುಗಳು ನಂದಗೋಕುಲಕ್ಕೆ ಬಹಳ ಪೀಡೆ ಕೊಡಲು ಆರಂಭಿಸಿದವು. ಈ ತೋಳಗಳಿಗೆ ಹೆದರಿ ಗೊಲ್ಲರು ಹೊರಡಲು ಅಣಿಯಾದರು.

**ಇಹ ಸ್ವಕೀಯಾನ್ನಿಹತಾನ್ ನಿಶಮ್ಯ**
**ನ ಮಾಂ ವ್ರಜಸ್ಥಂ ಪ್ರತಿ ಯಾಂತಿ ದೈತ್ಯಾಃ।**
**ಸ ಇತ್ಥಮಾಲೋಚ್ಯ ವಿಭುಃ ಸ್ವಕೀಯಾನ್**
**ನ್ಯಯುಂಕ್ತ ವೃಂದಾವನಮೇವ ಗಂತುಮ್ ॥೧೮॥**

**ಸ್ವಕೀಯಾನ್** = ತನ್ನವರನ್ನು, **ನಿಹತಾನ್** = ಸತ್ತವರನ್ನು, **ನಿಶಮ್ಯ** = ಕೇಳಿ, **ಮಾಂ** = ನನ್ನನ್ನು, **ವ್ರಜಸ್ಥಂ** = ಗೋಕುಲದಲ್ಲಿರುವ, **ಪ್ರತಿ** = ಎದುರಾಗಿ, **ನ ಯಾಂತಿ** = ಬರುವುದಿಲ್ಲ, **ದೈತ್ಯಾಃ** = ದೈತ್ಯರು, **ಸಃ** = ಆ, **ಇತ್ಥಂ** = ಈ ರೀತಿಯಾಗಿ, **ಆಲೋಚ್ಯ** = ಯೋಚಿಸಿ, **ವಿಭುಃ** = ಕೃಷ್ಣನು, **ಸ್ವಕೀಯಾನ್** = ತನ್ನವರನ್ನು, **ನ್ಯಯುಂಕ್ತ** = ಪ್ರೇರಿಸಿದನು, **ವೃಂದಾವನಮೇವ** = ಕಾಡನ್ನೇ (ಕುರಿತು), **ಗಂತುಂ** = ಹೋಗಲು.

ಕೆಲವು ದೈತ್ಯರು ಈ ಗೋಕುಲದಲ್ಲಿ ಕೃಷ್ಣನಿಂದ ಹತರಾದರು. ಇನ್ನೂ ಬಹಳ ಉಳಿದಿದ್ದಾರೆ. ಇವರು ಯಾರೂ ಇನ್ನು ಮುಂದೆ ಇಲ್ಲಿಗೆ ಬರಲಿಕ್ಕಿಲ್ಲ. ಯಾಕೆಂದರೆ, ಇಲ್ಲಿಗೆ ಬಂದವರು ಯಾರೂ ಬದುಕಿ ಉಳಿಯಲಿಲ್ಲ. ಉಳಿದ ದೈತ್ಯರನ್ನು ಕೊಲ್ಲಬೇಕಾಗಿದೆ. ಆದಕ್ಕಾಗಿ ಕೃಷ್ಣ ಜಾಗ ಬದಲಾಯಿಸಿದ. ಈಗ ದೈತ್ಯರು ಗೋಕುಲವು ತಮಗೆ ಪರಾಜಯದ ಜಾಗ, ವೃಂದಾವನವು ಜಯದ ಜಾಗ ಎಂದು ನಿಶ್ಚಯಿಸಿ, ಪುನಃ ಕೃಷ್ಣನಿದ್ದಲ್ಲಿಗೆ ಬರಲು

ಆರಂಭಿಸುತ್ತಾರೆ. ಈ ಉದ್ದೇಶದಿಂದ ಕೃಷ್ಣನು ತಾನು ವೃಂದಾವನಕ್ಕೆ ಹೊರಟು ನಂದಾದಿಗಳನ್ನು ಹೊರಡಿಸಲು ಅಣಿಯಾದನು. ದೇವರು ಏನು ಮಾಡಿದರೂ ಅದರ ಉದ್ದೇಶ ದುಷ್ಟಶಿಕ್ಷಣ; ಶಿಷ್ಟರಕ್ಷಣ.

**ಭಾರಾನ್ ಸ್ವಾನ್ ಅಧಿರೋಪ್ಯ ಚಾರುಶಕಟಶ್ರೇಣ್ಯಾಮರಣ್ಯಾಲಯಾ**
**ಗೋಪಾ ಗೋಧನವೃದ್ಧಮುಗ್ಧಲಲನಾಬಾಲಾದಿಭಿಃ ಸಂಯುತಾಃ।**
**ವೀಣಾವೇಣುಮೃದಂಗಶೃಂಗನಿನದೈಃ ಸಂಪೂರಿತಾಶಾಃ ಶನೈಃ**
**ರಾಮಶ್ರೀರಮಣಾಶ್ರಯಾಃ ಪ್ರತಿಯಯುರ್ವೃಂದಾವನಂ ಪಾವನಮ್ ॥೧೯॥**

**ಭಾರಾನ್** = ಹೊರೆಗಳನ್ನು, **ಸ್ವಾನ್** = ತಮ್ಮ, **ಅಧಿರೋಪ್ಯ** = ಏರಿಸಿ, **ಚಾರು** = ಚಂದದ, **ಶಕಟ** = ಬಂಡಿಗಳ, **ಶ್ರೇಣ್ಯಾಂ** = ಸಾಲುಗಳಲ್ಲಿ, **ಅರಣ್ಯ** = ಕಾಡಿನಲ್ಲಿ, **ಆಲಯಾಃ** = ಮನೆಗಳುಳ್ಳ, **ಗೋಪಾಃ** = ಗೊಲ್ಲರು, **ಗೋ** =ಆಕಳು, **ಧನ** = ಸಂಪತ್ತು, **ವೃದ್ಧ** = ಮುದುಕರು, **ಮುಗ್ಧ** = ಚಂದದ, **ಲಲನಾ** = ಸ್ತ್ರೀಯರು, **ಬಾಲ** = ಮಕ್ಕಳು, **ಆದಿಭಿಃ** = ಮೊದಲಾದವರಿಂದ, **ಸಂಯುತಾಃ** = ಕೂಡಿ, **ವೀಣಾ** = ವೀಣೆಯು, **ವೇಣು** = ಕೊಳಲು, **ಮೃದಂಗ** = ಮೃದಂಗವು, **ಶೃಂಗ** = ಕಹಳೆಯು ಇವುಗಳ, **ನಿನದೈಃ** = ಶಬ್ದಗಳಿಂದ, **ಸಂಪೂರಿತ** = ತುಂಬಿದ, **ಆಶಾಃ** = ದಿಕ್ಕುಗಳುಳ್ಳ, **ಶನೈಃ** = ಮೆಲ್ಲನೆ, **ರಾಮ** = ಬಲರಾಮನು, **ಶ್ರೀರಮಣ** = ಕೃಷ್ಣನು, ಇವರನ್ನು, **ಆಶ್ರಯಾಃ** = ಆಶ್ರಯಿಸಿದವರಾಗಿ, **ಪ್ರತಿ** = ಕುರಿತು, **ಯಯುಃ** = ಹೊರಟರು, **ವೃಂದಾವನಂ** = ಕಾಡನ್ನು, **ಪಾವನಂ** = ಪವಿತ್ರವಾದ.

ಈ ಗೋಪಾಲಕರು ಕಾಡನ್ನೇ ಹೆಚ್ಚಾಗಿ ಆಶ್ರಯಿಸಿರುವವರು. ಇವರು ಹೊರಡುವಾಗ ತಮ್ಮ ಹಿರಿಯರನ್ನು, ಚಿಕ್ಕ ಚಿಕ್ಕ ಗೋಪಿಯರನ್ನು, ಆಕಳನ್ನು ಸಂಪತ್ತನ್ನು ಹಾಗೂ ಮಕ್ಕಳನ್ನು ಕಟ್ಟಿಕೊಂಡು ಹೊರಟರು. ಕೃಷ್ಣ ಬಲರಾಮರನ್ನು ಮುಂದೆ ಮಾಡಿಕೊಂಡರು. ತಮ್ಮ ಚರವಸ್ತುಗಳನ್ನು ಗಾಡಿಗಳಲ್ಲಿ ಏರಿಸಿದರು. ವೀಣೆ, ಕೊಳಲು, ಮೃದಂಗ, ರಣಕಹಳೆ ಇವೇ ಮೊದಲಾದ ವಾದ್ಯಗಳನ್ನು ನುಡಿಸಿದರು. ಇದರ ಸದ್ದು ಎಲ್ಲ ಕಡೆಗೆ ತುಂಬಿತು. ಈ ರೀತಿಯಾಗಿ ಗೋಪರು ವೈಭವದಿಂದ ಪವಿತ್ರವಾದ ವೃಂದಾವನವನ್ನು ಪ್ರವೇಶಿಸಿದರು.

**ಜೃಂಭಚ್ಚಂಪಕಗುಂಫಿತೋಚ್ಚಕಬರೀಭಾರಾಶ್ಚಲತ್ಕಂಚುಕಾಃ**
**ಸಿಂಜನ್ಮಂಜುಲಭೂರಿಭೂಷಣಧರಾಃ ಗೋಪ್ಯಃ ಸಮಾಪ್ಯ ಕ್ರಿಯಾಃ।**
**ಕೃಷ್ಣಸ್ಯಾದ್ಭುತಕರ್ಮ ರಾಮಚರಿತ್ರೈಃ ಸಾಕಂ ಜಗುಃ ಕೃತ್ಸ್ನಶಃ**
**ಸ್ವಾಭೀಷ್ಟಾಪ್ತ್ಯುಚಿತಸ್ಥಲೀಗತಿಮಿವ ಪ್ರೇಕ್ಷ್ಯ ಪ್ರಹೃಷ್ಟಾಃ ಪಥಿ ॥ ೨೦ ॥**

**ಜೃಂಭತ್** = ಅರಳಿದ, **ಚಂಪಕ** = ಸಂಪಿಗೆಯಿಂದ, **ಗುಂಫಿತ** = ಕೂಡಿದ, **ಉಚ್ಚ** = ದೊಡ್ಡದಾದ, **ಕಬರೀಭಾರಾಃ** = ತಲೆಸೂಡಿಯುಳ್ಳ, **ಚಲತ್** = ಅಲುಗಾಡುವ, **ಕಂಚುಕಾಃ** = ರವಿಕೆಗಳುಳ್ಳ, **ಸಿಂಜತ್** = ಶಬ್ದಮಾಡುವ, **ಮಂಜುಲ** = ಚಂದದ, **ಭೂರಿ** = ಬಹಳ, **ಭೂಷಣ** = ಆಭರಣಗಳನ್ನು, **ಧರಾಃ** = ಧರಿಸಿದ, **ಗೋಪ್ಯಃ** = ಗೋಪಿಯರು, **ಸಮಾಪ್ಯ** = ಮುಗಿಸಿ, **ಕ್ರಿಯಾಃ** = ಕೆಲಸಗಳನ್ನು, **ಕೃಷ್ಣಸ್ಯ** = ಕೃಷ್ಣನ, **ಅದ್ಭುತ** = ಅಶ್ಚರ್ಯದ, **ಕರ್ಮ** = ಕೆಲಸಗಳನ್ನು, **ರಾಮ** = ಬಲರಾಮನ, **ಚರಿತ್ರೈಃ** = ಚರಿತ್ರೆಗಳಿಂದ, **ಸಾಕಂ** = ಕೂಡಿ, **ಜಗುಃ** = ಹೊಗಳಿದರು, **ಕೃತ್ಸ್ನಶಃ** = ಸಮಗ್ರವಾಗಿ, **ಸ್ವ** = ತಮ್ಮ, **ಅಭೀಷ್ಟ** = ಇಷ್ಟದ, **ಆಪ್ತಿ** = ಪ್ರಾಪ್ತಿಗೆ, **ಉಚಿತ** = ಒಳ್ಳೆಯ, **ಸ್ಥಲೀ** = ಸ್ಥಳದ, **ಗತಿಮಿವ** = ಗಮನದಂತೆ, **ಪ್ರೇಕ್ಷ್ಯ** = ನೋಡಿ, **ಪ್ರಹೃಷ್ಟಾಃ** = ಸಂತುಷ್ಟರಾಗಿ, **ಪಥಿ** = ದಾರಿಯಲ್ಲಿ.

ನಂದಗೋಕುಲದ ಸ್ತ್ರೀಯರೂ ಹೊರಟರು – ಈ ಸ್ತ್ರೀಯರು ದೊಡ್ಡ ತಲೆಸೂಡಿಗಳಿಂದ ಕೂಡಿದ್ದಾರೆ. ಆ ಸೂಡಿಗಳಲ್ಲಿ ಅರಳಿದ ಸಂಪಿಗೆಗಳನ್ನು ಮುಡಿದುಕೊಂಡಿದ್ದಾರೆ. ಈ ಸೂಡಿಯ ಭಾರದಿಂದಾಗಿ ನಡೆಯುವಾಗ ತಾವು ಧರಿಸಿದ ರವಿಕೆಗಳು ಬಹಳಷ್ಟು ಅಲುಗಾಡುತ್ತಿವೆ. ನಖಶಿಖಾಂತ ಬಹಳ ಆಭರಣಗಳನ್ನು ಧರಿಸಿದ್ದಾರೆ. ಅವುಗಳೆಲ್ಲಾ ತುಂಬಾ ಶಬ್ದ ಮಾಡುತ್ತಿವೆ. ತಮ್ಮ ಆ ದಿನದ ಮನೆಕೆಲಸಗಳನ್ನು ಬೇಗನೆ ಪೂರೈಸಿ ಹೊರಟರು. ಹೋಗುವಾಗ ಶ್ರೀರಾಮಕೃಷ್ಣರ ಚರಿತ್ರೆಯನ್ನು ಬಾಯಿ ತುಂಬಾ ಹೊಗಳುತ್ತಿದ್ದಾರೆ. ಬಹಳ ಸಂತೋಷದಿಂದ ಇದ್ದಾರೆ. ಏಕೆಂದರೆ, ಕೃಷ್ಣನು ತಮ್ಮ ಅಭೀಷ್ಟಗಳನ್ನು ಈ ವೃಂದಾವನದಲ್ಲೇ ಪೂರ್ಣಮಾಡುತ್ತಾನೆ ಎಂದು.

**ಗವಾಂ ಖುರೈರ್ಗೋಪಪದೈರನೋಭಿಃ**
**ಸಮುತ್ಥಧೂಲೀ ಸವಿತುಃ ಕರೌಘಮ್ ।**
**ರುರೋಧ ದೂರೇ ಕಿಲ ತಾಂ ಸ್ವಮೂರ್ಧ್ನಿ**
**ಸ ಏವ ವೋಢುಂ ಧ್ರುವಮುನ್ನಿನಾಯ ॥ ೨೧ ॥**

**ಗವಾಂ** = ಗೋವುಗಳ, **ಖುರೈಃ** = ಗೊರಸುಗಳಿಂದ, **ಗೋಪ** = ಗೊಲ್ಲರ, **ಪದೈಃ** = ಕಾಲುಗಳಿಂದ, **ಅನೋಭಿಃ** = ಬಂಡಿಗಳಿಂದ, **ಸಮುತ್ಥ** = ಎದ್ದ, **ಧೂಲೀಃ** = ಧೂಳುಗಳು, **ಸವಿತುಃ** = ಸೂರ್ಯನ, **ಕರೌಘಂ** = ಕಿರಣಗಳ ಸಮೂಹವನ್ನು, **ರುರೋಧ** = ತಡೆಯಿತು, **ದೂರೇ** = ದೂರದಲ್ಲಿ, **ಕಿಲ** = ಪ್ರಸಿದ್ಧ, **ತಾಂ** = ಆ ಧೂಳಿಯನ್ನು, **ಸ್ವಮೂರ್ಧ್ನಿ** = ತನ್ನ ತಲೆಯಲ್ಲಿ, **ಸ ಏವ** = ಸೂರ್ಯನೇ, **ವೋಢುಂ** = ಧರಿಸಲು, **ಧ್ರುವಂ** = ನಿಶ್ಚಯವಾಗಿಯೂ, **ಉನ್ನಿನಾಯ** = ಎತ್ತಿದನು.

ವೈಭವದ ಮೆರವಣಿಗೆ ಹೊರಟಾಗ ಆಕಳುಗಳ, ಗೋಪರ ಪಾದಗಳಿಂದ ಬಂಡಿಗಳ ಚಕ್ರಗಳಿಂದ ಬಹಳ ಧೂಳು ಎದ್ದಿತು. ಧೂಳುಗಳಿಂದ ಸೂರ್ಯನ ಕಿರಣಗಳು ಭೂಮಿಗೆ ಬರುವುದು ತಡೆಯಲ್ಪಟ್ಟವು. ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ – ಧೂಳುಗಳು ಕಿರಣ-ಗಳನ್ನು ತಡೆದದ್ದಲ್ಲ. ಸೂರ್ಯನೇ ತನ್ನ ಕಿರಣಗಳೆಂಬ ಕೈಗಳಿಂದ ಈ ಧೂಳುಗಳನ್ನು ತನ್ನ ತಲೆಯಲ್ಲಿ ಇಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಆದ್ದರಿಂದ ಕಿರಣಗಳು ಕೆಳಗೆ ಭೂಮಿಗೆ ಬರಲಿಲ್ಲ ಎಂದು. ಇದರಿಂದ ಈ ಆಕಳು ಗೋಪರು ಇವರೆಲ್ಲ ಸಾಮಾನ್ಯ ಜೀವರಲ್ಲ. ದೇವಮಾನ್ಯರು ಎಂದು ತಿಳಿಯುತ್ತದೆ. ದೇವಭಕ್ತರು ಎಲ್ಲರೂ ಮಾನ್ಯರು ಎಂದೂ ಸೂಚಿತವಾಗುತ್ತದೆ.

**ಪುಷ್ಪೈಃ ವೃಕ್ಷಗಣಾ ಮನೋಜ್ಞವಚನೈಃ ಕೀರಾಃ ಸ್ವರೈಃ ಕೋಕಿಲಾ**
**ನೃತ್ತೈಃ ಕೇಕಿವರಾಃ ಗಜಾಶ್ಚ ಗತಿಭಿಃ ಶೈಲಾಃ ಸ್ರವನ್ನಿರ್ಝರೈಃ।**
**ಸುಚ್ಛಾಯೈಃ ಮಣಿಕುಟ್ಟಿಮಸ್ಥಲಚಯೈಃ ಸಾ ಭೂರ್ಮೃಗಾಹೀಕ್ಷಣೈಃ**
**ತದ್ವೃಂದಾವನಮಚ್ಯುತಾರ್ಹಭವನಂ ನೂನಂ ತದಾ ತೇನಿರೇ ॥ ೨೨ ॥**

**ಪುಷ್ಪೈಃ** = ಹೂಗಳಿಂದ, **ವೃಕ್ಷಗಣಾಃ** = ಮರಗಳ ಸಮೂಹಗಳು, **ಮನೋಜ್ಞ** = ಚಂದದ, **ವಚನೈಃ** = ಮಾತುಗಳಿಂದ, **ಕೀರಾಃ** = ಗಿಳಿಗಳು, **ಸ್ವರೈಃ** = ಧ್ವನಿಗಳಿಂದ, **ಕೋಕಿಲಾಃ** = ಕೋಗಿಲೆಗಳು, **ನೃತ್ತೈಃ** = ನರ್ತನಗಳಿಂದ, **ಕೇಕಿವರಾಃ** = ಶ್ರೇಷ್ಠ ನವಿಲುಗಳು, **ಗಜಾಃ ಚ** = ಆನೆಗಳು, **ಗತಿಭಿಃ** = ಗಮನಗಳಿಂದ, **ಶೈಲಾಃ** = ಪರ್ವತ-ಗಳು, **ಸ್ರವತ್** = ಹರಿಯುವ, **ನಿರ್ಝರೈಃ** = ಝುರಿಗಳಿಂದ, **ಸುಚ್ಛಾಯೈಃ** = ಒಳ್ಳೆಯ ನೆರಳುಗಳುಳ್ಳ, **ಮಣಿ** = ಮಣಿಗಳಿಂದ, **ಕುಟ್ಟಿಮ** = ನಿಬದ್ಧವಾದ, **ಸ್ಥಲಚಯೈಃ** = ಜಾಗಗಳಿಂದ, **ಸಾ** = ಆ, **ಭೂಃ** = ಭೂಮಿಯು, **ಮೃಗಾಃ** = ಜಿಂಕೆಗಳು, **ವೀಕ್ಷಣೈಃ** = ನೋಟಗಳಿಂದ, **ತತ್** = ಆ, **ವೃಂದಾವನಂ** = ಕಾಡು, **ಅಚ್ಯುತ** = ದೇವರಿಗೆ, **ಅರ್ಹ** = ಯೋಗ್ಯವಾದ, **ಭವನಂ** = ಭೂಮಿಯನ್ನಾಗಿ, **ನೂನಂ** = ನಿಶ್ಚಯವಾಗಿಯೂ, **ತದಾ** = ಆಗ, **ತೇನಿರೇ** = ಮಾಡಿದವು.

ಕೃಷ್ಣನು ರಾಜಾಧಿರಾಜನು. ರಾಜನು ಒಂದೂರಿಗೆ ಹೋಗಬೇಕಾದರೆ ಅಲ್ಲಿ ಸಮಸ್ತ ರಾಜವೈಭವಗಳು – ಪುಷ್ಪವೃಷ್ಟಿ, ಜಯಕಾರ, ಸಂಗೀತ, ನೃತ್ಯ , ಪನ್ನೀರು ಸಮಾನವಾಗಿ ಹೆಜ್ಜೆ ಹಾಕುವವರು ಇತ್ಯಾದಿಗಳು ಇರಬೇಕು. ಇವೆಲ್ಲಾ ಇಲ್ಲಿ ವೃಂದಾವನದಲ್ಲಿ ಇದ್ದವು. ಎಲ್ಲವೂ ಪ್ರಕೃತಿ ನಿರ್ಮಿತವಾಗಿತ್ತು.

ವೃಂದಾವನದಲ್ಲಿದ್ದ ಮರಗಳು ತಮ್ಮಲ್ಲಿರುವ ಪುಷ್ಪಗಳಿಂದ, ಗಿಳಿಗಳು ಒಳ್ಳೆಯ

ಮಾತುಗಳಿಂದ, ಕೋಗಿಲೆಗಳು ಹಾಡುಗಳಿಂದ, ನವಿಲುಗಳು ನರ್ತನದಿಂದ, ಆನೆಗಳು ಸಮಾನ ಹೆಜ್ಜೆ ಹಾಕುವ ಮೂಲಕ ಗಂಭೀರ ನಡಿಗೆಯಿಂದ, ಪರ್ವತಗಳು ತಮ್ಮಲ್ಲಿರುವ ನೀರಿನ ಝುರಿಗಳೆಂಬ ಪನ್ನೀರುಗಳಿಂದ, ಜಿಂಕೆಗಳು ಪ್ರೇಕ್ಷಕವರ್ಗದಂತೆ ನೋಡುವುದರಿಂದ ಈ ವೃಂದಾವನವನ್ನು ರಾಜಭವನದಂತೆ ಮಾಡಿದವು. ಭೂಮಿಯಲ್ಲಿ ಅಲ್ಲಲ್ಲಿ ಮರಗಳ ನೆರಳು ಬಿದ್ದಿತ್ತು. ಅದು ರತ್ನಗಂಬಳಿಯನ್ನು ಹಾಸಿದಂತೆ ತೋರುತ್ತಿತ್ತು. ಇದನ್ನೆಲ್ಲಾ ಮಾಡಿದ್ದು ಪ್ರಕೃತಿ. ಪ್ರಕೃತಿ ಎಂದರೆ ಪರಮಾತ್ಮನ ಪತ್ನಿ. ದೇವರಿಗೆ ಎಲ್ಲಾ ರೀತಿಯ ರಾಜೋಪಚಾರವನ್ನು ಮಾಡುವವಳು ಲಕ್ಷ್ಮಿಯೇ ಎಂದು ಶಾಸ್ತ್ರವು ಹೇಳುತ್ತದೆ. ದಾಸರು ಇದನ್ನು 'ಏನು ಧನ್ಯಳೋ ಲಕುಮಿ ಎಂಥ ಮಾನ್ಯಳೋ' ಎಂಬ ಹಾಡಿನಲ್ಲಿ ತೋರಿಸಿ-ದ್ದಾರೆ.

ದೇವರ ಜ್ಞಾನವುಳ್ಳವರು ಎಲ್ಲಿರುತ್ತಾರೋ ಅಲ್ಲಿ ಸಕಲ ಪುರುಷಾರ್ಥಗಳೂ ಸಿದ್ಧಿಸುತ್ತವೆ ಎಂದು ವ್ಯಾಸರು 'ಪುರುಷಾರ್ಥೋಽತಃ ಶಬ್ದಾತ್ ಇತಿ ಬಾದರಾಯಣಃ' ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಹೀಗಿರುವಾಗ ದೇವರೇ ಇರುವ ಜಾಗದಲ್ಲಿ ಎಲ್ಲ ರೀತಿಯ ಅಭಿವೃದ್ಧಿಯೂ ಇರುವುದು ಸ್ವಾಭಾವಿಕ.

**ಸ ಲಬ್ಧಜನ್ಮಾ ಮಧುರಾಖ್ಯಪುರ್ಯಾಂ**
**ವ್ರಜೇಽಭಿವೃದ್ಧಃ ಕತಿಚಿದ್ದಿನಾನಿ ।**
**ಉಪೇತ್ಯ ವೃಂದಾವನಮೇಷ ಕೃಷ್ಣಃ**
**ತ್ರಿಧಾಮತಾಂ ದರ್ಶಯತೀವ ದೇವಃ ॥ ೨೩ ॥**

**ಸಃ** = ಕೃಷ್ಣನು, **ಲಬ್ಧ** = ಹೊಂದಿದ, **ಜನ್ಮಾ** = ಉತ್ಪತ್ತಿಯುಳ್ಳವನಾಗಿ, **ಮಧುರಾಖ್ಯ** = ಮಧುರಾ ಎಂಬ, **ಪುರ್ಯಾಂ** = ಊರಿನಲ್ಲಿ, **ವ್ರಜೇ** = ಗೋಕುಲದಲ್ಲಿ, **ಅಭಿವೃದ್ಧಃ** = ಬೆಳೆದವನಾಗಿ, **ಕತಿಚಿತ್** = ಕೆಲವು, **ದಿನಾನಿ** = ದಿವಸಗಳನ್ನು, **ಉಪೇತ್ಯ** = ಹೊಂದಿ, **ವೃಂದಾವನಂ** = ವೃಂದಾವನವನ್ನು, **ಏಷಃ** = ಇವನು, **ಕೃಷ್ಣಃ** = ಕೃಷ್ಣನು, **ತ್ರಿಧಾಮತಾಂ** = ಮೂರು ಮನೆ ಇರುವಿಕೆಯನ್ನು, **ದರ್ಶಯತಿಇವ** = ತೋರಿಸುವವನಂತೆ, **ದೇವಃ** = ದೇವನು.

ದೇವರಿಗೆ ತ್ರಿಧಾಮಾ ಎಂಬ ಹೆಸರಿದೆ. ಶ್ವೇತದ್ವೀಪ, ಅನಂತಾಸನ ಹಾಗೂ ವೈಕುಂಠ. ಇವು ಮೂರು ದೇವರ ಮನೆಗಳು. ಕೃಷ್ಣನು ಕೂಡಾ ಮಧುರೆಯಲ್ಲಿ ಹುಟ್ಟಿದನು. ಬೆಳೆದದ್ದು ಗೋಕುಲದಲ್ಲಿ. ಜಲಕ್ರೀಡೆಯಾಡಿದ್ದು ಯಮುನಾತೀರದ ವೃಂದಾವನದಲ್ಲಿ. ಈ ರೀತಿ ತಾನೂ ತ್ರಿಧಾಮನಾಗಿ ದೇವರ ಅವತಾರ ತಾನು ಎಂದು ತೋರಿಸಿದನು.

**ಫಲೈಃ ಪ್ರಸೂನೈಃ ಪಯಸಾ ತೃಣೇನ**
**ವಿಧಾಯ ಗೋಗೋಪನಿಕಾಯರಕ್ಷಾಮ್ ।**
**ವನಂ ಸ್ವನಾಮಾನುಗುಣಂ ಬಭಾಜ**
**ಹರೌ ಪ್ರಸನ್ನೇ ಕಿಮಿಹಾಸ್ತ್ಯಸಾಧ್ಯಮ್ ॥ ೨೪ ॥**

**ಫಲೈಃ** = ಹಣ್ಣುಗಳಿಂದ, **ಪ್ರಸೂನೈಃ** = ಪುಷ್ಪಗಳಿಂದ, **ಪಯಸಾ** = ನೀರಿನಿಂದ, **ತೃಣೇನ** = ಹುಲ್ಲಿನಿಂದ, **ವಿಧಾಯ** = ಮಾಡಿ, **ಗೋ** = ಗೋವುಗಳ, **ಗೋಪ** = ಗೊಲ್ಲರ, **ನಿಕಾಯ** = ಸಮೂಹದ, **ರಕ್ಷಾಂ** = ರಕ್ಷಣೆಯನ್ನು, **ವನಂ** = ಕಾಡು, **ಸ್ವ** = ತನ್ನ, **ನಾಮ** = ಹೆಸರಿಗೆ, **ಅನುಗುಣಂ** = ಯೋಗ್ಯತೆಯನ್ನು, **ಬಭಾಜ** = ಹೊಂದಿತು, **ಹರೌ** = ದೇವರು, **ಪ್ರಸನ್ನೇ** = ತುಷ್ಟನಾಗಲು, **ಕಿಂ** = ಏನು? **ಇಹ** = ಇಲ್ಲಿ, **ಅಸ್ತಿ** = ಇದೆ, **ಅಸಾಧ್ಯಂ** = ಅಸಾಧ್ಯವು.

ಈ ಜಾಗಕ್ಕೆ ವೃಂದಾವನ ಎಂದು ಹೆಸರು. ಅಂದರೆ ಸಮೂಹವನ್ನು ರಕ್ಷಣೆ ಮಾಡುವುದು. ವೃಂದ = ಸಮೂಹ, ಅವನ = ರಕ್ಷಣೆ. ಈ ಹೆಸರು ಈಗ ಸಾರ್ಥಕವಾಗಿದೆ. ಈ ಕಾಡು ತನ್ನ ಹಣ್ಣುಗಳಿಂದ, ಪುಷ್ಪಗಳಿಂದ, ನೀರಿನಿಂದ, ಹುಲ್ಲುಗಳಿಂದ, ನೆರಳಿನಿಂದ ಎಲ್ಲರನ್ನೂ ರಕ್ಷಣೆ ಮಾಡುತ್ತಿದೆ. ದೇವರ ಸಂಪರ್ಕಕ್ಕೆ ಒಳಗಾದರೆ ದೇವರು ಪ್ರಸನ್ನನಾದರೆ ಎಂತಹ ಕ್ಷುಲ್ಲಕವಸ್ತುವೂ ಸಾರ್ಥಕವಾಗುತ್ತದೆ.

**ತತಃ ಸಃ ಗೋರೂಪಧರೈರ್ನಿಯುಧ್ಯನ್**
**ಚಚಾರ ಚಾರೂಪಲಮುತ್ಕ್ಷಿಪಂಶ್ಚ ।**
**ವನೇಽನುಶಿಕ್ಷನ್ನಿವ ವತ್ಸದೈತ್ಯ-**
**ರಣಂ ತಥೋತ್ಕ್ಷೇಪಣಮೇವ ತನ್ವಾಃ ॥ ೨೫ ॥**

**ತತಃ** = ಅನಂತರ, **ಸಃ** = ಕೃಷ್ಣನು, **ಗೋ** = ಆಕಳಿನ, **ರೂಪ** = ರೂಪವನ್ನು, **ಧರೈಃ** = ಧರಿಸಿದವರಿಂದ, **ನಿಯುಧ್ಯನ್** = ಹೋರಾಡುತ್ತಾ, **ಚಚಾರ** = ಸಂಚರಿಸಿದನು, **ಚಾರು** = ಚಂದದ, **ಉಪಲಂ** = ಕಲ್ಲನ್ನು, **ಉತ್ಕ್ಷಿಪನ್ ಚ** = ಬಿಸಾಡುತ್ತಾ, **ವನೇ** = ಕಾಡಲ್ಲಿ, **ಅನುಶಿಕ್ಷನ್ನಿವ** = ಅಭ್ಯಾಸಮಾಡುವವನಂತೆ, **ವತ್ಸದೈತ್ಯರಣಂ** = ವತ್ಸಾಸುರಯುದ್ಧವನ್ನು, **ತಥಾ** = ಹಾಗೆಯೇ, **ಉತ್ಕ್ಷೇಪಣಮೇವ** = ಮೇಲೆ ಬಿಸಾಡುವಿಕೆಯನ್ನು, **ತನ್ವಾಃ** = ಶರೀರದ.

ಇಲ್ಲಿ ಕೃಷ್ಣನು ಗೋಪಾಲರಿಂದ ಕೂಡಿ ಆಡಿದನು. ಕೆಲವು ಬಾಲರು ಗೋವುಗಳ ವೇಷ ತೊಟ್ಟರು. ಕೃಷ್ಣನು ಅವರ ಜೊತೆ ಕಾದಾಡುವಂತೆ ನಟಿಸಿದ. ಇದು ಯಾಕೆಂದರೆ,

ಮುಂದೆ ಒಬ್ಬ ದೈತ್ಯನು ಹಸುವಿನ ರೂಪದಲ್ಲಿ ಬರುವವನಿದ್ದಾನೆ. ಆತನ ನಾಶಕ್ಕೆ ಅಭ್ಯಾಸ-ಮಾಡುವುದು. ಹಾಗೆಯೇ ಪುಟ್ಟ ಕಲ್ಲುಗಳನ್ನು ಆಕಾಶಕ್ಕೆ ಬಿಸಾಡುತ್ತಿದ್ದನು. ಏಕೆಂದರೆ ಅಸುರನ ಶರೀರವನ್ನು ಮೇಲಕ್ಕೆ ಬಿಸಾಡಿ ಆತನನ್ನು ಕೊಲ್ಲಲು ತರಬೇತಿ ಪಡೆಯುವುದು.

**ಪ್ಲವಂಗವೇಷೈರನುಗೈಃ ಸಮೇತಃ**
**ಸ ಸೇತುಬಂಧಾದಿವಿಹಾರಲೀಲಃ ।**
**ಚರನ್ ಅರಣ್ಯೇ ರಘುರಾಮರೂಪಂ**
**ಸ್ವಕೀಯಮಾಜ್ಞಾಪಯತಿ ಸ್ಮ ದೇವಃ ॥೨೬॥**

**ಪ್ಲವಂಗ** = ಕಪಿಗಳ, **ವೇಷೈಃ** = ರೂಪಗಳಿಂದ, **ಅನುಗೈಃ** = ಗೆಳೆಯರಿಂದ, **ಸಮೇತಃ** = ಕೂಡಿ, **ಸಃ** = ಕೃಷ್ಣನು, **ಸೇತುಬಂಧಾದಿ** = ಸೇತುವೆ ಕಟ್ಟುವಿಕೆ ಮೊದಲಾದ, **ವಿಹಾರ** = ಕ್ರೀಡೆಯ, **ಲೀಲಃ** = ಸ್ವಭಾವವುಳ್ಳವನಾಗಿ, **ಚರನ್** = ಸಂಚರಿಸುತ್ತಾ, **ಅರಣ್ಯೇ** = ಕಾಡಲ್ಲಿ, **ರಘುರಾಮರೂಪಂ** = ರಾಮಾವತಾರವನ್ನು, **ಸ್ವಕೀಯಂ** = ತನ್ನ, **ಆಜ್ಞಾಪ-ಯತಿ ಸ್ಮ** = ತಿಳಿಸುತ್ತಿದ್ದನು, **ದೇವಃ** = ದೇವನಾದ.

ಅದೇ ರೀತಿ ಕೆಲವರು ಕಪಿಗಳ ವೇಷ ತೊಟ್ಟರು. ಈತನು ರಾಮನಂತೆ ನಟಿಸಿದನು. ಯಮುನೆಗೆ ಸೇತುವೆಯನ್ನು ಕಟ್ಟುವವನಂತೆ, ಕಾಡಿನಲ್ಲಿ ಸಂಚರಿಸುವವನಂತೆ ಆಡಿದನು. ಇದರಿಂದ ತನ್ನ ರಾಮಾವತಾರವನ್ನು ಗೋಪರಿಗೆ ತಿಳಿಸಿದನು. ಇದರಿಂದ ಆಗಿನ ಕಾಲದ ಕಪಿಗಳೇ ಈಗ ಗೋ, ಗೋಪರಾಗಿ ಹುಟ್ಟಿದ್ದಾರೆ ಎಂದು ತಿಳಿದು ಬರುತ್ತದೆ.

**ಸಹಾನುಗೈಃ ಗಾಃ ಕಿಲ ಚಾರಯಂತಂ**
**ಖಲೋಽಭ್ಯಗಾತ್ ತಂ ಪಶುವೇಷಧಾರೀ ।**
**ಅಹಂ ಮಹಾಂತಂ ಪ್ರತಿ ಯಾಸ್ಯತೋಽಸ್ಯ**
**ಪಶುತ್ವಮಾಜಾನಜಮೇವ ಮನ್ಯೇ ॥೨೭॥**

**ಸಹ** = ಕೂಡಿಕೊಂಡು, **ಅನುಗೈಃ** = ಸೇವಕರಿಂದ, **ಗಾಃ** = ದನಗಳನ್ನು, **ಕಿಲ** = ಪ್ರಸಿದ್ಧ, **ಚಾರಯಂತಂ** = ಮೇಯಿಸುವ, **ಖಲಃ** = ದೈತ್ಯನು, **ಅಭ್ಯಗಾತ್** = ಬಂದನು, **ತಂ** = ಕೃಷ್ಣನನ್ನು, **ಪಶುವೇಶ** = ಆಕಳಿನ ರೂಪವನ್ನು, **ಧಾರೀ** = ಧರಿಸಿದ, **ಅಹಂ** = ನಾನು, **ಮಹಾಂತಂ** = ದೊಡ್ಡವರನ್ನು, **ಪ್ರತಿಯಾಸ್ಯತಃ** = ಎದುರುಗೊಳ್ಳುವ, **ಅಸ್ಯ** = ಈ ದುಷ್ಟನಿಗೆ, **ಪಶುತ್ವಂ** = ಪಶುತ್ವವು, **ಆಜಾನಜಮೇವ** = ಸ್ವಾಭಾವಿಕವನ್ನಾಗಿಯೇ, **ಮನ್ಯೇ** = ತಿಳಿಯುತ್ತೇನೆ.

ಕೃಷ್ಣನು ಗೋಪರಿಂದ ಕೂಡಿಕೊಂಡು ಪಶುಗಳನ್ನು ಮೇಯಿಸುತ್ತಿದ್ದ. ಆಗ ಒಬ್ಬ ಅಸುರನು ಪಶುರೂಪ ತಾಳಿಯೇ ಬಂದ. ಈತ ನಿಜವಾಗಿಯೂ ಪಶುಬುದ್ಧಿಯವನು. ಯಾಕೆಂದರೆ, ತನಗಿಂತ ಬಲಿಷ್ಠರ ಬಳಿಗೆ ಜಗಳಕ್ಕೆ ಹೋಗುತ್ತಿದ್ದಾನೆ.

**ತದ್ವೃಂದಾವನಭೂಗಣಂ ಪದರುಚಾ ಪ್ರಾಗಂಕಯನ್ ಸೋಽಸಕೃತ್**
**ಪಶ್ಚಾತ್ತದ್ಗಮರುದ್ಗಣಂ ಚ ವರಯನ್ ಕುರ್ವನ್ನಿವಾಂತರ್ವನಮ್ ।**
**ಸದ್ಭಾಸ್ವದ್ಗಣಶೋಭಿಲೇಖಸವಯೋಹೃದ್ದ್ಯೋಗಣೌ ಚಾಶ್ರಯನ್**
**ಲಕ್ಷ್ಮೀಶೋಽನುಕರೋತಿ ತತ್ರ ವಿಚರನ್ ಶಾರ್ದೂಲವಿಕ್ರೀಡಿತಮ್ ॥೨೮॥**

**ತದ್** = ಆ, **ವೃಂದಾವನ** = ಕಾಡಿನ, **ಭೂಗಣಂ** = ಭೂಮಿಗಳನ್ನು, **ಪದ** = ಕಾಲಿನ, **ರುಚಾ** = ಕಾಂತಿಯಿಂದ, **ಪ್ರಾಕ್** = ಮೊದಲು, **ಅಂಕಯನ್** = ಅಲಂಕರಿಸುತ್ತಾ, **ಸಃ** = ಆ, **ಅಸಕೃತ್** = ಪುನಃ ಪುನಃ, **ಪಶ್ಚಾತ್** = ಅನಂತರ, **ತದ್ಗ** = ಕಾಡಿನಲ್ಲಿರುವ, **ಮರುದ್** = ಗಾಳಿಗಳ, **ಗಣಂ** = ಸಮೂಹವನ್ನು, **ಚ ವರಯನ್** = ಸ್ವೀಕರಿಸುತ್ತಾ, **ಕುರ್ವನ್ ಇವ** = ಮಾಡುವವನಂತೆ, **ಅಂತರ್ವನಮ್** = ವನಮಧ್ಯವನ್ನು, **ಸತ್** = ಒಳ್ಳೆಯ, **ಭಾಸ್ವದ್** = ಸೂರ್ಯರ, **ಗಣ** = ಸಮೂಹದಿಂದ, **ಶೋಭಿ** = ಶೋಭಿಸುವಂತೆ, **ಲೇಖ** = ದೇವತೆಗಳ, **ಸವಯ** = ಗೆಳೆಯರ, **ಹೃತ್** = ಹೃದಯವೆಂಬ, **ದ್ಯೋ** = ಆಕಾಶಗಳ, **ಗಣೌ** = ಸಮೂಹಗಳನ್ನು, **ಆಶ್ರಯನ್** = ಆಶ್ರಯಿಸಿದ, **ಲಕ್ಷ್ಮೀಶಃ** = ಕೃಷ್ಣನು, **ಅನುಕರೋತಿ** = ಅನುಕರಿಸುತ್ತಾನೆ, **ತತ್ರ** = ಕಾಡಲ್ಲಿ, **ವಿಚರನ್** = ಸಂಚರಿಸುತ್ತಾ, **ಶಾರ್ದೂಲ** = ಹುಲಿಯ, **ವಿಕ್ರೀಡಿತಮ್** = ನರ್ತನವನ್ನು.

ಕೃಷ್ಣನು ವತ್ಸಾಸುರನನ್ನು ಕೊಲ್ಲುವ ಸಂದರ್ಭದಲ್ಲಿ ಶಾರ್ದೂಲವಿಕ್ರೀಡಿತವನ್ನು ಅಂದರೆ ಹುಲಿಕುಣಿತವನ್ನು ಅನುಸರಿಸಿದನು. ಆಕಳಿನ ರೂಪದ ಅಸುರನನ್ನು ಕೊಲ್ಲಲು ಹುಲಿಕುಣಿತವು ಯೋಗ್ಯವಾಗಿದೆ.

ಶಾರ್ದೂಲವಿಕ್ರೀಡಿತ ಎಂದು ಒಂದು ವೃತ್ತವೂ ಇದೆ. ಸಂಸ್ಕೃತದಲ್ಲಿ ಶ್ಲೋಕಗಳಿಗೆ ನಾನಾ ವೃತ್ತಗಳಿವೆ. ಅವುಗಳು ಗಣಗಳನ್ನು ಹೊಂದಿಕೊಂಡು ಇರುತ್ತವೆ. ಪ್ರಕೃತ ಈ ಶ್ಲೋಕದ ವೃತ್ತವು ೧ ಮಗಣ, ೨ ಸಗಣ, ಈ ೨ ಸಗಣಗಳ ಮಧ್ಯದಲ್ಲಿ ಒಂದು ಜಗಣ, ಹಾಗೂ ೨ ತಗಣಗಳಿಂದ ಕೂಡಿದ್ದರಿಂದ ಇದು ಶಾರ್ದೂಲವಿಕ್ರೀಡಿತವಾಯಿತು. ಕೃಷ್ಣನ ಶಾರ್ದೂಲ- ವಿಕ್ರೀಡಿತವೂ ಇವುಗಳಿಂದ ಕೂಡಿದ್ದರಿಂದ ಸಾಮ್ಯವು ಇದೆ. ಈ ಶ್ಲೋಕವೂ ಇದೇ ವೃತ್ತದಲ್ಲಿದೆ.

ಕೃಷ್ಣನು ವೃಂದಾವನದ ಭೂಭಾಗವನ್ನು ತನ್ನ ಪಾದದ ಕಾಂತಿಯಿಂದ ಅಲಂಕರಿಸಿದನು.

ಮೊದಲು ಭೂಮಿಯನ್ನು ಅಲಂಕರಿಸಿದ್ದು. ಶಾರ್ದೂಲವಿಕ್ರೀಡಿತದಲ್ಲಿಯೂ ಮೊದಲು ಮಗಣ ಇರುವುದು. ಈ ಮಗಣಕ್ಕೆ ಭೂಮಿ ದೇವತೆ ಎಂದು ಹಿರಿಯರು ಹೇಳಿದ್ದಾರೆ. ಈ ರೀತಿಯಾಗಿ ವೃತ್ತದಲ್ಲಿ ಮೊದಲು ಅಭಿಮನ್ಯಮಾನ ಮಗಣ. ಕೃಷ್ಣನ ನೃತ್ಯದಲ್ಲಿ ಮೊದಲು ಅಭಿಮಾನಿನಿಯಾದ ಭೂಮಿ. ಅಭಿಮಾನಿ, ಅಭಿಮನ್ಯಗಳಿಗೆ ಐಕ್ಯ ವ್ಯವಹಾರವಿದೆ. ಆದ್ದರಿಂದ ಎರಡು ವಿಕ್ರೀಡಿತದಲ್ಲಿ ಸಾಮ್ಯವಿದೆ.

ಅನಂತರ ಕೃಷ್ಣನು ವೃಂದಾವನದಲ್ಲಿ ಗಾಳಿಯನ್ನು ಸ್ವೀಕರಿಸಿದನು. ಕುಣಿದು ಶ್ರಮವಾದಾಗ ಗಾಳಿಯು ಬೇಕಾಗುವುದು. ವೃತ್ತದಲ್ಲಿಯೂ ಎರಡನೆಯದ್ದು ಮತ್ತು ನಾಲ್ಕನೆಯದ್ದು ಸಗಣಗಳು. ಇವುಗಳಿಗೆ ವಾಯುದೇವರು ಅಭಿಮಾನಿ. ಈ ರೀತಿ ಎರಡು ಬದಿಯಲ್ಲಿಯೂ ಗಾಳಿ ಬೇಕಾದ್ದರಿಂದ ಎರಡು ಸಗಣಗಳಿವೆ. ಈ ರೀತಿ ನೃತ್ಯಕ್ಕೆ ಸಗಣಗಳಿಂದ ಸಾಮ್ಯ ಇದೆ.

ಕಾಡಿನ ಮಧ್ಯದಲ್ಲಿ ಕತ್ತಲು ಇದೆ. ಆದರೆ ಕೃಷ್ಣನ ಪಾದಗಳು ಅನೇಕ ಸೂರ್ಯರ ಪ್ರಕಾಶವುಳ್ಳದ್ದಾದ್ದರಿಂದ ಒಳ್ಳೆಯ ಬೆಳಕಾಯಿತು. ಕೃಷ್ಣನು ತನ್ನ ನೃತ್ಯದಿಂದ ಈ ಕಾಡನ್ನು ಸೂರ್ಯನಂತೆ ಬೆಳಗಿಸಿದ. ಇದು ೩ನೆಯ ಕೆಲಸ. ವೃತ್ತದಲ್ಲಿಯೂ ಮೂರನೆಯದ್ದು ಜಗಣ. ಜಗಣಕ್ಕೆ ಸೂರ್ಯನು ದೇವತೆ.

ಈ ರೀತಿ ನರ್ತಿಸುವ ಕೃಷ್ಣನನ್ನು ದೇವತೆಗಳು ಯಾದವರು ಸ್ಮರಿಸುತ್ತಿದ್ದರು. ಕೃಷ್ಣನು ಅವರ ಹೃದಯಾಕಾಶದಲ್ಲಿ ವಾಸಿಸಿದನು. ಹೀಗೆ ಸುರರು, ಮಾನವರು ಇವರ ೨ ರೀತಿಯ ಆಕಾಶದಲ್ಲಿ ನೆಲೆಸಿದ. ವೃತ್ತದಲ್ಲಿಯೂ ಅನಂತರದಲ್ಲಿ ೨ ತಗಣಗಳು. ತಗಣಗಳಿಗೆ ಆಕಾಶವು ದೇವತೆ. ಈ ರೀತಿಯಾಗಿ ವೃತ್ತದ ಎಲ್ಲಾ ಲಕ್ಷಣಗಳೂ ಶ್ರೀಕೃಷ್ಣನ ಶಾರ್ದೂಲವಿಕ್ರೀಡಿತದಲ್ಲಿ ಇದೆ. ಈ ಶ್ಲೋಕವೂ ಅದೇ ವೃತ್ತದಲ್ಲಿದೆ. ಇದು ಶ್ರೀರಾಜರ ಅದ್ಭುತಪ್ರತಿಭೆ.

ಉದಕ್ಷಿಪತ್ತಂ ಹರಿರಾತ್ಮದೋರ್ಭ್ಯಾ-
ಮಧಃ ಪಪಾತಾಶು ಸ ವತ್ಸದೈತ್ಯಃ ।
ವ್ರಜಾಧಿನಾಥಸ್ಯ ಸ ಏಷ ಧರ್ಮಃ
ಗೃಹೀತಮಾಯಸ್ಯ ಚ ತಸ್ಯ ಪಾತಃ ॥೨೯॥

**ಉದಕ್ಷಿಪತ್** = ಮೇಲೆ ಬಿಸಾಡಿದನು, **ತಂ** = ದೈತ್ಯನನ್ನು, **ಹರಿಃ** = ದೇವರು, **ಆತ್ಮ** = ತನ್ನ, **ದೋರ್ಭ್ಯಾಂ** = ಕೈಗಳಿಂದ, **ಅಧಃ** = ಕೆಳಗೆ, **ಪಪಾತ** = ಬಿದ್ದನು, **ಆಶು** =

ಕೂಡಲೇ, **ಸಃ** = ಆ, **ವತ್ಸದೈತ್ಯಃ** = ವತ್ಸಾಸುರನು, **ವ್ರಜ** = ಗೋಕುಲದ, **ಅಧಿನಾಥಸ್ಯ** = ಒಡೆಯನ, **ಸ ಏಷಃ** = ಅದು, **ಧರ್ಮಃ** = ಧರ್ಮವು, **ಗೃಹೀತ** = ಹಿಡಿದ, **ಮಾಯಸ್ಯ** = ಮಾಯೆಯುಳ್ಳ, **ತಸ್ಯ** = ದೈತ್ಯನ, **ಪಾತಃ** = ಬೀಳುವಿಕೆಯು.

ಆ ವತ್ಸದೈತ್ಯನನ್ನು ಕೃಷ್ಣನು ಎತ್ತರಕ್ಕೆ ಬಿಸಾಡಿದನು. ಆದರೆ ಆತನು ಕೂಡಲೇ ಕೆಳಗೆ ಬಿದ್ದನು.

ರಾಜರು ಹೇಳುತ್ತಾರೆ – ಇದು ಎರಡೂ ಸರಿ. ದೇವರ ಸ್ವಭಾವ – ತನ್ನ ಬಳಿ ಯಾರು ಬಂದರೂ ಅವರನ್ನು ಮೇಲಕ್ಕೆ ಎತ್ತುವುದು. ಆದರೆ ದೇವರ ಬಳಿಗೆ ಬರುವವರು ವಂಚಕರಾದರೆ ಕೆಳಗೆ ಬೀಳುವುದೇ ಸ್ವಭಾವ. ಈ ಅಸುರನು ವಂಚಕನಾದ್ದರಿಂದ ಕೆಳಗೆ ಬಿದ್ದ.

**ಸ ಪಾತಯಾಮಾಸ ಪತನ್ ಕಪಿತ್ಥ-**
**ಫಲಾನಿ ಲೋಲದ್ರುಮಸಂಚಯೇಭ್ಯಃ।**
**ತಥಾಹಿ ಕೃಷ್ಣಪ್ರತಿಪಕ್ಷಿಪಕ್ಷಃ**
**ಕಥಂ ನ ಪಾತೈಕಫಲಸ್ತ್ರಿಲೋಕ್ಯಾಮ್ ॥೩೦॥**

**ಸಃ** = ದೈತ್ಯನು, **ಪಾತಯಾಮಾಸ** = ಬೀಳಿಸಿದನು, **ಪತನ್** = ಬೀಳುತ್ತಾ, **ಕಪಿತ್ಥ** = ಬೇಲದ, **ಫಲಾನಿ** = ಫಲಗಳನ್ನು, **ಲೋಲ** = ಅಲುಗಾಡುವ, **ದ್ರುಮ** = ಮರಗಳ, **ಸಂಚಯೇಭ್ಯಃ** = ಗುಂಪುಗಳಿಂದ, **ತಥಾ ಹಿ** = ಅದು ಸರಿ, **ಕೃಷ್ಣ** = ದೇವರ, **ಪ್ರತಿಪಕ್ಷಿ** = ಶತ್ರುಗಳ, **ಪಕ್ಷಃ** = ಪಕ್ಷದವನು, **ಕಥಂ** = ಹೇಗೆ? **ನ** = ಅಲ್ಲ, **ಪಾತೈಕಫಲಃ** = ಬೀಳುವುದೇ ಫಲವಾಗಿ ಉಳ್ಳವನು, **ತ್ರಿಲೋಕ್ಯಾಮ್** = ಮೂರು ಲೋಕಗಳಲ್ಲಿ.

ಆ ದೈತ್ಯನು ತಾನು ಒಂದು ಮರಕ್ಕೆ ತಾಗಿ ಕೆಳಗೆ ಬಿದ್ದನು. ಬೀಳುವಾಗ ಆ ಮರದ ಫಲಗಳನ್ನೂ ಉದುರಿಸಿದನು. ರಾಜರು ಈ ರೀತಿ ಹೇಳುತ್ತಾರೆ – ಕೃಷ್ಣನ ವಿರೋಧಿಯು ಎತ್ತರಕ್ಕೆ ಮರದ ಸಮೀಪಕ್ಕೆ ಹೋದಾಗ ಆ ಮರವು ಇವನನ್ನು ಸ್ವೀಕರಿಸಿತು. ತನ್ನ ಬಳಿಗೆ ಕರೆದುಕೊಂಡಿತು. ಆತನ ಪಕ್ಷವನ್ನು, ಸಂಪರ್ಕವನ್ನು ಮಾಡಿತು. ತನಗೆ ಬೇಡದಿದ್ದರೆ ದೂರದಿಂದಲೇ ಆತನನ್ನು ಕಳಿಸಬೇಕಿತ್ತು. ಆದರೆ ವೃಕ್ಷವು ಹಾಗೆ ಮಾಡಲಿಲ್ಲ. ಆದ್ದರಿಂದ ಮರವು ತನ್ನ ಫಲಗಳನ್ನು ಕಳೆದುಕೊಂಡಿತು.

ದೇವರ ವಿರೋಧಿಗಳಿಗೆ ನಾವು ಆಶ್ರಯ ಕೊಟ್ಟರೆ ಸಂಪಾದನೆ ಮಾಡಿದ ಪುಣ್ಯ-ಫಲವನ್ನು ಕಳೆದುಕೊಳ್ಳುತ್ತೇವೆ.

••••

ಸಂದೇಶ

**ಲಕ್ಷ್ಮೀನಯನಾಂತಭಾಜಾಂ ಅಸಹ್ಯದೋಷೋಽಪಿ ಭವೇತ್ ಗುಣಾಯ**

ಲಕ್ಷ್ಮೀಕಟಾಕ್ಷವುಳ್ಳವರು ಏನು ತಪ್ಪು ಮಾಡಿದರೂ
ಅದು ಗುಣವೇ ಆಗುತ್ತದೆ

---

**ಅನ್ಯೋನ್ಯಾಶ್ರಿತರಾಗರಜ್ಜುವಿತತೇ ಸಂಸೃತ್ಯಭೇದ್ಯದ್ರುಮೇ**
**ಸಂಗೃಹ್ಯ ಪ್ರತಿಕಲ್ಪಮಬ್ಜಜಮುಖಾನ್ ಭುಂಕ್ತೇ ಸುಪರ್ಣಾನಿಹ ।**
**ತಂ ವಿಶ್ವಾದ್ಭುತಲುಬ್ಧಕಂ ದಿತಿಸುತಃ ಶ್ರುತ್ವಾ ಬಕೋಽಭ್ಯಾಯಯೌ**
**ನೂನಂ ಮೀನತನುಂ ತಿಮಿಂಗಿಲಮಿವ ವ್ಯತ್ಯಸ್ತಬುದ್ಧಿರ್ಬಕಃ ॥೩೧॥**

**ಅನ್ಯೋನ್ಯ** = ಪರಸ್ಪರವಾಗಿ, **ಆಶ್ರಿತ** = ಆಶ್ರಯಿಸಿರುವ, **ರಾಗ** = ಪ್ರೀತಿ ಎಂಬ, **ರಜ್ಜು** = ಹಗ್ಗದಿಂದ, **ವಿತತೇ** = ವಿಸ್ತೃತವಾದ, **ಸಂಸೃತಿ** = ಸಂಸಾರವೆಂಬ, **ಅಭೇದ್ಯ** = ದೃಢವಾದ, **ದ್ರುಮೇ** = ಮರದಲ್ಲಿ, **ಸಂಗೃಹ್ಯ** = ಹಿಡಿದು, **ಪ್ರತಿಕಲ್ಪಂ** = ಪ್ರತಿಕಲ್ಪದಲ್ಲಿಯೂ, **ಅಬ್ಜಜ** = ಬ್ರಹ್ಮನೇ, **ಮುಖಾನ್** = ಮೊದಲಾದವರನ್ನು, **ಭುಂಕ್ತೇ** = ತಿನ್ನುತ್ತಾನೆ, **ಸುಪರ್ಣಾನ್** = ಪಕ್ಷಿಗಳನ್ನು, **ಇಹ** = ಇಲ್ಲಿ, **ತಂ** = ಅಂತಹ, **ವಿಶ್ವ** = ಲೋಕದಲ್ಲಿ, **ಅದ್ಭುತ** = ಆಶ್ಚರ್ಯದ, **ಲುಬ್ಧಕಂ** = ಬೇಡನನ್ನು, **ದಿತಿಸುತಃ** = ದೈತ್ಯನು, **ಶ್ರುತ್ವಾ** = ಕೇಳಿ, **ಬಕಃ** = ಬಕನು, **ಅಭ್ಯಾಯಯೌ** = ಬಂದನು, **ನೂನಂ** = ನಿಶ್ಚಯ, **ಮೀನತನುಂ** = ಮೀನಿನ ರೂಪವನ್ನು, **ತಿಮಿಂಗಿಲಮಿವ** = ತಿಮಿಂಗಿಲವನ್ನೆಂಬಂತೆ, **ವ್ಯತ್ಯಸ್ತಬುದ್ಧಿಃ** = ವಿಪರೀತವಾದ ಬುದ್ಧಿಯುಳ್ಳ, **ಬಕಃ**= ಬಕನು.

ದೇವರು ಬೇಡರ ಕೆಲಸ ಮಾಡುವವನು. ಸಂಸಾರ ಎಂಬುದು ಒಂದು ಮರ. ಸಂಸಾರದಲ್ಲಿ ಪರಸ್ಪರ ಪ್ರೀತಿಸುವುದು ಸಹಜ. ಈ ಪ್ರೀತಿ ಎಂಬುದೇ ಒಂದು ಬಲೆ. ಈ ಪ್ರೀತಿ ಎಂಬ ಬಲೆಯು ದೇವರ ಇಚ್ಛೆಯಿಂದಾಗಿ ಸಂಸಾರವೆಂಬ ಮರದಲ್ಲಿ ಹರಡಿದೆ. ಈ ಬಲೆಯಲ್ಲಿ ಬ್ರಹ್ಮಾದಿ ಸಮಸ್ತಜೀವರೆಂಬ ಪಕ್ಷಿಗಳು ಸಿಲುಕಿವೆ. ವೇದವು ಜೀವರನ್ನು ಪಕ್ಷಿಗಳು ಎಂದು ಹೇಳಿದೆ. ಪ್ರಳಯಕಾಲ ಬಂದಾಗ ದೇವರು ಈ ಪಕ್ಷಿಗಳನ್ನು ಕಬಳಿಸುತ್ತಾನೆ. ಇಂತಹ ಅದ್ಭುತನಾದ ಬೇಡನು ಈ ಕೃಷ್ಣನು. ಇಂತಹ ಕೃಷ್ಣನಲ್ಲಿಗೆ ಒಬ್ಬ ದೈತ್ಯನು ಬಕಪಕ್ಷಿಯ ರೂಪದಿಂದ ಬಂದನು. ಈತನಿಗೆ ಬುದ್ಧಿಭ್ರಮಣೆಯಾಗಿದೆ. ಯಾಕೆಂದರೆ ಕೃಷ್ಣನು ಈ ಪಕ್ಷಿಯನ್ನು ಕೊಲ್ಲುವ ವ್ಯಾಧನು. ಆದರೆ ಬಕಾಸುರನು ಈತನು ತನ್ನ ಆಹಾರವಾದ ಮೀನು ಎಂದು ತಿಳಿದಿದ್ದನು. ಬಕಪಕ್ಷಿಯು ಮೀನನ್ನೇ ತಿನ್ನುವುದು ತಾನೇ? ಇಲ್ಲಿ ಇನ್ನೂ ಬುದ್ಧಿ

ಭ್ರಮಣೆ ಆಯಿತು. ಚಿಕ್ಕ ಮೀನು ಎಂದು ತಿಳಿದಿದ್ದ. ಆದರೆ ಇದು ತಿಮಿಂಗಿಲ ಎಂಬ ಮೀನು. ಬಕವನ್ನೇ ನುಂಗತಕ್ಕದ್ದು. 'ವಿನಾಶಕಾಲೇ ವಿಪರೀತ ಬುದ್ಧಿಃ'. ಈ ಶ್ಲೋಕದಲ್ಲಿ ದೇವರ ಮತ್ಸ್ಯಾವತಾರದ ಸೂಚನೆ ಇದೆ. ಹಾಗೆಯೇ ಸಂಸಾರದಲ್ಲಿ ಹುಟ್ಟು-ಸಾವುಗಳಿಗೆ ಮಾನಸಿಕವಾದ ರಾಗವೇ ಮೂಲ ಕಾರಣ ಎಂಬ ಸೂಚನೆಯೂ ಇದೆ.

**ಕೃಷ್ಣ ತ್ವನ್ನಾಮ ಜಿಹ್ವಾ ನ ಕಥಯತಿ ಮಮೇತ್ಯಾಸ್ಯಮಾದರ್ಶಯನ್ ಸ್ವೌ**
**ಪಕ್ಷೌ ನೋ ಕೃಷ್ಣಪಕ್ಷಸ್ತ್ವಿತಿ ವಿಶದಯಿತುಂ ಪ್ರೋಕ್ಷಿಪನ್ ಅಂಘ್ರಿಯುಗ್ಮಮ್ ।**
**ಪಶ್ಚಾದ್ಭಾಗೇ ವಿಧುನ್ವನ್ ಹರಿನಿಲಯಮಹೀಸಂಗಭೀತ್ಯೇಶಕೇಶಂ**
**ಮತ್ವಾ ವ್ಯೋಮಾಧ್ವನಾಽಸೌ ಯದುಕುಲತಿಲಕಂ ಸತ್ವರೋಽಭ್ಯಾಜಗಾಮ ॥೩೨**

**ಕೃಷ್ಣ** = ಕೃಷ್ಣನೇ, **ತ್ವನ್ನಾಮ** = ನಿನ್ನ ಹೆಸರನ್ನು, **ಜಿಹ್ವಾ** = ನಾಲಿಗೆಯು, **ನ ಕಥಯತಿ** = ಹೇಳುವುದಿಲ್ಲ, **ಮಮ** = ನನ್ನ, **ಇತಿ** = ಎಂದು, **ಆಸ್ಯಮ್** = ಬಾಯಿಯನ್ನು, **ಆದರ್ಶಯನ್** = ತೋರಿಸುತ್ತಾ, **ಸ್ವೌ** = ತನ್ನ, **ಪಕ್ಷೌ** = ರೆಕ್ಕೆಗಳು, **ನೋ ಕೃಷ್ಣಪಕ್ಷ** = ಕಪ್ಪಾದದ್ದು ಅಲ್ಲ, **ಇತಿ** = ಎಂದು, **ವಿಶದಯಿತುಂ** = ತಿಳಿಸಲು, **ಪ್ರೋಕ್ಷಿಪನ್** = ಬಿಡಿಸುತ್ತಾ, **ಅಂಘ್ರಿಯುಗ್ಮಂ** = ಎರಡು ಕಾಲುಗಳನ್ನು, **ಪಶ್ಚಾತ್ ಭಾಗೇ** = ಹಿಂದಕ್ಕೆ, **ವಿಧುನ್ವನ್** = ಮಾಡುತ್ತಾ, **ಹರಿ** = ದೇವರ, **ನಿಲಯ** = ಮನೆಯಾದ, **ಮಹೀ** = ಭೂಮಿಯ, **ಸಂಗ** = ಸಂಬಂಧದ, **ಭೀತ್ಯಾ** = ಹೆದರಿಕೆಯಿಂದ, **ಈಶಕೇಶಂ** = ರುದ್ರನ ಕೂದಲನ್ನಾಗಿ, **ಮತ್ವಾ** = ತಿಳಿದು, **ವ್ಯೋಮಾಧ್ವನಾ** = ಆಕಾಶದ ಹಾದಿಯಿಂದ, **ಅಸೌ** = ಇವನು, **ಯದುಕುಲ** = ಯದುಕುಲವಂಶಕ್ಕೆ, **ತಿಲಕಂ** = ಶ್ರೇಷ್ಠನಾದ ಶ್ರೀಹರಿಯನ್ನು, **ಸತ್ವರಃ** = ವೇಗವುಳ್ಳವನಾಗಿ, **ಅಭ್ಯಾಜಗಾಮ** = ಬಂದನು.

ಈ ಬಕಪಕ್ಷಿಯು ತನ್ನ ಬಿಳಿಯ ರೆಕ್ಕೆಗಳನ್ನು ಬಿಡಿಸಿಕೊಂಡು, ಬಾಯಿ ತೆರೆಯುತ್ತಾ ಬರುತ್ತಿದೆ. ಕಾಲುಗಳನ್ನು ಹಿಂದೆ ಮಾಡಿದೆ. ಆಕಾಶದಲ್ಲಿ ಹಾರಿಕೊಂಡು ಬರುತ್ತಿದೆ. ಇದು ಬಕಪಕ್ಷಿಯ ಸ್ವಭಾವ. ಇದನ್ನು ರಾಜರು ಈ ರೀತಿ ವರ್ಣಿಸುತ್ತಾರೆ – ಬಕನು ಬಾಯಿ ತೆರೆದ ಕಾರಣ 'ಕೃಷ್ಣ! ನಿನ್ನ ನಾಮ ಎನ್ನ ನಾಲಿಗೆಯಲ್ಲಿ ಇಲ್ಲ' ಎಂದು ತಿಳಿಸಲು. ಬಿಳಿ ರೆಕ್ಕೆಗಳನ್ನು ಬಿಡಿಸಿದ್ದು 'ನನ್ನ ಪಕ್ಷ(ರೆಕ್ಕೆ) ಕೃಷ್ಣಪಕ್ಷವಲ್ಲ. ಈ ಪಕ್ಷಿಯ ರೆಕ್ಕೆ ಬಿಳಿ. ಕೃಷ್ಣ ಎಂದರೆ ಕಪ್ಪು. ಕೃಷ್ಣ ಎಂದರೆ ದೇವರೂ ಹೌದು. ಆದ್ದರಿಂದ ರೆಕ್ಕೆಗಳನ್ನು ಬಿಡಿಸಿ ತನ್ನದು ಕೃಷ್ಣಪಕ್ಷ ಅಲ್ಲ ಎಂದು ತೋರಿಸಿದರೆ ದೇವರ ಪಕ್ಷ ಅಲ್ಲ ಎಂಬ ಅರ್ಥವೂ ಬರುತ್ತದೆ. ತನ್ನ ಕಾಲು ಹಿಂದೆ ಮಾಡಿದ ಕಾರಣ 'ದೇವರಿದ್ದ ಭೂಮಿಯಲ್ಲಿ ತಾನು ಕಾಲೂರುವುದಿಲ್ಲ' ಎಂದು ತಿಳಿಸಲು. ಕೃಷ್ಣನಲ್ಲಿ ಈತನಿಗೆ ಇಷ್ಟು ದ್ವೇಷ ಇರುವುದಾದರೆ ಈತನು ವಿಷ್ಣುಪದ(ಆಕಾಶ)ದಲ್ಲಿ ಹೇಗೆ ಬಂದನು? ಈತನು ಆಕಾಶವನ್ನು ವ್ಯೋಮಕೇಶ ಎಂದು ಭ್ರಮಿಸಿದನು. ಆಕಾಶಕ್ಕೆ ವಿಷ್ಣು

ಪದ ಎಂಬ ಹೆಸರಿರುವಂತೆ ರುದ್ರದೇವರಿಗೆ ವ್ಯೋಮಕೇಶ ಎಂಬ ಹೆಸರಿದೆ. ರುದ್ರದೇವರು ತಾಂಡವ ನೃತ್ಯ ಮಾಡುವಾಗ ಅವರ ತಲೆ ಕೂದಲು ಇಡೀ ಆಕಾಶದಲ್ಲಿ ಹರಡುತ್ತದೆ. ಆಗ ಆಕಾಶ ಮತ್ತು ಕೂದಲು ಭಿನ್ನವಾಗಿ ತೋರುವುದಿಲ್ಲ. ಆದ್ದರಿಂದ 'ಆಕಾಶವೇ ತಲೆ ಕೂದಲಾಗಿವುಳ್ಳವರು' ಎಂದು ಹೆಸರು ಬಂದಿತು. ವ್ಯೋಮ ಅಂದರೆ ಆಕಾಶ, ಕೇಶ ಎಂದರೆ ಕೂದಲು. ಆದ್ದರಿಂದ ಈ ಅಸುರನು ವಿಷ್ಣುಪದದಲ್ಲಿ ಬರಲಿಲ್ಲ. ಬದಲಾಗಿ ರುದ್ರನನ್ನು ಆಶ್ರಯಿಸಿ ಬಂದನು. ಈ ರೀತಿಯಾಗಿ ತನ್ನ ನಾಶಕ್ಕೆ ಬೇಕಾದ ಎಲ್ಲಾ ಕಾರಣ-ಗಳನ್ನೂ ಕೃಷ್ಣನ ಮುಂದಿಟ್ಟುಕೊಂಡು ಕೃಷ್ಣನಿಂದ ಹತನಾದನು.

ಇವುಗಳಲ್ಲಿ ಒಂದೊಂದು ಕಾರಣವೂ ನಮ್ಮ ನಾಶಕ್ಕೆ ಸಾಕು. ನಾಲ್ಕೂ ಸೇರಿದಾಗ ಏನು ಹೇಳತಕ್ಕದ್ದು!!

**ಹರಿಂ ಪ್ರಜಗ್ರಾಸ ತತಃ ಖಲೋಽಸೌ**
**ರುರೋಧ ಕಂಠಶ್ವಸನಂ ಜ್ವಲನ್ ಸಃ ।**
**ಪುನಶ್ಚ ಚಚ್ಛರ್ದ ಸ ಏವ ನೂನಂ**
**ನಿರಕ್ರಮೀತ್ ತಸ್ಯ ಹೃದೋಽಘಪೂರ್ಣಾತ್ ॥ ೩೩ ॥**

**ಹರಿಂ** = ದೇವರನ್ನು, **ಪ್ರಜಗ್ರಾಸ** = ನುಂಗಿದನು, **ತತಃ** = ಅನಂತರ, **ಖಲಃ** = ದುಷ್ಟನಾದ, **ಅಸೌ** = ಇವನು, **ರುರೋಧ** = ತಡೆದನು, **ಕಂಠಶ್ವಸನಂ** = ಕುತ್ತಿಗೆಯ ಗಾಳಿಯನ್ನು, **ಜ್ವಲನ್** = ಉರಿಯುತ್ತಾ, **ಸಃ** = ಕೃಷ್ಣನು, **ಪುನಃ ಚ** = ಅನಂತರ, **ಚಚ್ಛರ್ದ** = ಕಾರಿದನು, **ಸ ಏವ** = ಕೃಷ್ಣನೇ, **ನೂನಂ** = ನಿಶ್ಚಯವಾಗಿ, **ನಿರಕ್ರಮೀತ್** = ಹೊರಗೆ ಬಂದನು, **ತಸ್ಯ** = ಆ ಬಕನ, **ಹೃದಃ** = ಹೊಟ್ಟೆಯಿಂದ, **ಅಘಪೂರ್ಣಾತ್**= ಪಾಪದಿಂದ ತುಂಬಿದ.

ಈ ಬಕನು ಕೃಷ್ಣನನ್ನು ನುಂಗಿದನು. ಬಕನ ಹೊಟ್ಟೆಗೆ ಹೋದ ಕೃಷ್ಣನು ಬೆಂಕಿಯಂತೆ ಉರಿಯುತ್ತಾ ಬಕನ ಶ್ವಾಸವನ್ನು ತಡೆದನು. ಉರಿ ತಡೆಯಲಾರದೆ ಬಕನು ಕೃಷ್ಣನನ್ನು ವಾಂತಿ ಮಾಡಿದನು. ರಾಜರು ಹೇಳುತ್ತಾರೆ – ಬಕನು ವಾಂತಿ ಮಾಡಿದ್ದಲ್ಲ. ಕೃಷ್ಣನೇ ಆತನ ಹೊಟ್ಟೆಯಿಂದ ಹೊರಬಂದನು. ಯಾಕೆಂದರೆ, ಆತನ ಹೊಟ್ಟೆಯಲ್ಲಿರುವ ಪಾಪಗಳನ್ನು ನೋಡಲಾಗದೆ.

**ಪ್ರಾಗ್ಬಾಲಗ್ರಹರೂಪಿಣೀಂ ಸ ಶಕಟೇ ಸಂಕಲ್ಪ್ಯ ರಜ್ಜುಗ್ರಹಾಂ**
**ತದ್ವಾಹಾನ್ ಖರಕೇಶಿವತ್ಸವೃಷಭಾನ್ನಿಃಶೇಷದೈತ್ಯಾಸುವತ್ ।**

**ಸಂಯೋಜ್ಯಾನಿಲರೂಪದೈತ್ಯಮಧುನಾ ತಚ್ಚಿಹ್ನಮತ್ಯದ್ಭುತಂ**
**ಕೃಷ್ಣಃ ಪ್ರೇಷಯತೀವ ಹಸ್ತಗಬಕೋ ಗಾಢಂ ತಮಃ ಪ್ರಾಪಯನ್ ॥ ೩೪ ॥**

**ಪ್ರಾಕ್** = ಮೊದಲು, **ಬಾಲಗ್ರಹ** = ಮಕ್ಕಳನ್ನು ಅಪಹರಿಸುವ, **ರೂಪಿಣೀಂ** = ಸ್ವರೂಪಳಾದ ಪೂತನಿಯನ್ನು, **ಸಃ** = ಕೃಷ್ಣನು, **ಶಕಟೇ** = ಬಂಡಿಯಲ್ಲಿ, **ಸಂಕಲ್ಪ್ಯ** = ನಿಶ್ಚಯಿಸಿ, **ರಜ್ಜು** = ಹಗ್ಗವನ್ನು, **ಗ್ರಹಾಂ** = ಹಿಡಿಯುವವಳನ್ನಾಗಿ, **ತದ್** = ಆ, **ವಾಹಾನ್** = ಬಂಡಿಗೆ, **ಖರ** = ಕತ್ತೆಯು, **ಕೇಶಿ** = ಕುದುರೆಯು, **ವತ್ಸ** = ಕರುವು, **ವೃಷಭಾನ್** = ಎತ್ತು ಮೊದಲಾದವನ್ನು, **ನಿಃಶೇಷ** = ಎಲ್ಲಾ, **ದೈತ್ಯ** = ದೈತ್ಯರಿಗೆ, **ಅಸುವತ್** = ಪ್ರಾಣದಂತೆ, **ಸಂಯೋಜ್ಯ** = ಇಟ್ಟು, **ಅನಿಲರೂಪ** = ಗಾಳಿರೂಪದ, **ದೈತ್ಯಂ** = ಅಸುರನನ್ನು, **ಅಧುನಾ** = ಈಗ, **ತತ್** = ಆ ಗಾಡಿಗೆ, **ಚಿಹ್ನಂ** = ಧ್ವಜವನ್ನು, **ಅತ್ಯದ್ಭುತಂ** = ಭಯಾನಕವಾದ, **ಕೃಷ್ಣಃ** = ಕೃಷ್ಣನು, **ಪ್ರೇಷಯತಿ ಇವ** = ಕಳುಹಿಸುವವನಂತೆ, **ಹಸ್ತ** = ಕೈಯ್ಯಲ್ಲಿ, **ಗ** = ಇರುವ, **ಬಕಃ** = ಬಕನಾದ, **ಗಾಢಂ** = ನಿಬಿಡವಾದ, **ತಮಃ** = ನರಕವನ್ನು, **ಪ್ರಾಪಯನ್**= ಕಳುಹಿಸುತ್ತಾ.

ಕೃಷ್ಣನಿಂದ ಈ ತನಕ ಸತ್ತಿರುವ ದೈತ್ಯರನ್ನು ರಾಜರು ಸಂಗ್ರಹಿಸಿ ಒಂದು ಯಾತ್ರೆಯ ಚಿತ್ರಣವನ್ನು ಕೊಡುತ್ತಾರೆ – ಶಕಟಾಸುರನೇ ಬಂಡಿ. ಇದರ ಸಾರಥಿ ಪೂತನಾ. ಈಕೆ ಬಾಲಗ್ರಹಳು. ಒಂದರ್ಥ ಬಾಲಕರನ್ನು ಪೀಡಿಸುವವಳು. ಇನ್ನೊಂದರ್ಥ ಬಂಡಿ ಓಡಿಸುವವಳು. ಬಂಡಿ ಓಡಿಸುವವರು ಪ್ರಾಯಃ ಬಂಡಿಯ ಎತ್ತುಗಳಿಗೆ ಹೊಡೆಯುವುದಿಲ್ಲ. ಅವುಗಳ ಬಾಲವನ್ನು ಹಿಡಿದು ತಿರುವುತ್ತಾರೆ. ಆಗ ಎತ್ತುಗಳು ಚಲಿಸುತ್ತವೆ. ಮುಂದೆ ಸಾಯಲಿರುವ ಕತ್ತೆ, ಕುದುರೆ, ಗೂಳಿಯ ರೂಪದ ಹಾಗೂ ಈಗ ತಾನೇ ಸತ್ತಿರುವ ವತ್ಸಾಸುರನು ಬಂಡಿಯನ್ನು ಎಳೆಯುವ ಪ್ರಾಣಿಗಳ ಸ್ಥಾನದಲ್ಲಿ. ಇವರೆಲ್ಲಾ ಸತ್ತವರು. ಹೆಣಗಳು. ಹೀಗಿರುವಾಗ ಸಂಚಾರ ಹೇಗೆ? ಅಂದರೆ ಕೃಷ್ಣನಿಂದ ಸತ್ತಿರುವ ಗಾಳಿ ಎಂಬ ದೈತ್ಯನು ಇವರಿಗೆಲ್ಲಾ ಪ್ರಾಣದಂತೆ ಇದ್ದಾನೆ. ಇಷ್ಟೆಲ್ಲಾ ಆದ ಮೇಲೆ ಈ ರಥಕ್ಕೆ ಧ್ವಜದಂತೆ ಬಕಾಸುರನನ್ನು ಕೊಂದು ಇಟ್ಟನು. ರಥ ಯಾರದ್ದು ಎಂದು ತಿಳಿಯುವುದು ಧ್ವಜದಿಂದ. ಅರ್ಜುನನ ರಥಕ್ಕೆ ಕಪಿ ಧ್ವಜ. ಕೃಷ್ಣನ ರಥದ ಚಿಹ್ನೆ ಗರುಡ. ಹಾಗೆಯೇ ಇದು ಕಂಸನ ರಥ ಎಂದು ತಿಳಿಯಲು ಬಕನನ್ನು ಧ್ವಜದ ಸ್ಥಾನದಲ್ಲಿಟ್ಟು ಹಾಗೆಯೇ ರಥವನ್ನು ಅಂಧಂತಮಸ್ಸಿಗೆ ಕಳುಹಿಸಿದನು.

ಪತತ್ರಿಣಂ ತಂ ಪರಿಗೃಹ್ಯ ದೋರ್ಭ್ಯಾಂ
ವಿಭಿದ್ಯ ತುಂಡಂ ವಿನಿಪಾತ್ಯ ಭೂಮೌ ।

**ಸ ಯಾತನಾಮೀನಭುಜಂ ವಿಧಾತುಂ**

**ನ್ಯಯೋಜಯನ್ ನಾರಕವಾಪಿಕಾಸು ॥ ೩೫ ॥**

**ಪತತ್ರಿಣಂ** = ಹಕ್ಕಿಯನ್ನು, **ತಂ** = ಆ, **ಪರಿಗೃಹ್ಯ** = ಹಿಡಿದು, **ದೋರ್ಭ್ಯಾಂ** = ಕೈಗಳಿಂದ, **ವಿಭಿದ್ಯ** = ಸೀಳಿ, **ತುಂಡಂ** = ಕೊಕ್ಕನ್ನು, **ವಿನಿಪಾತ್ಯ** = ಬೀಳಿಸಿ, **ಭೂಮೌ** = ಭೂಮಿಯಲ್ಲಿ, **ಸ** = ಕೃಷ್ಣನು, **ಯಾತನಾ** = ದುಃಖವೆಂಬ, **ಮೀನ** = ಮೀನನ್ನು, **ಭುಜಂ** = ತಿನ್ನುವವನನ್ನಾಗಿ, **ವಿಧಾತುಂ** = ಮಾಡಲು, **ನ್ಯಯೋಜಯನ್** = ಕಳುಹಿಸಿದನು, **ನಾರಕ** = ನರಕದಲ್ಲಿರುವ, **ವಾಪಿಕಾಸು** = ಬಾವಿಗಳಲ್ಲಿ.

ಈತನ ಎರಡು ಕೊಕ್ಕುಗಳಲ್ಲಿ ಹಿಡಿದು ಕೃಷ್ಣನು ಸೀಳಿ ಭೂಮಿಯಲ್ಲಿ ಬಿಸಾಡಿದನು. ಈತನು ಕೃಷ್ಣನೆಂಬ ಮೀನನ್ನು ತಿನ್ನಲು ಬಂದವನು. ಅದಕ್ಕೆ ಕೃಷ್ಣನು ದುಃಖವೆಂಬ ಮೀನನ್ನು ತಿನ್ನುವಂತೆ ಮಾಡಿದನು. ಎಲ್ಲಿ ಅಂದರೆ ನರಕವೆಂಬ ಬಾವಿಯಲ್ಲಿ.

**ತತಃ ಸ ಪಶ್ಯನ್ ಪರಿತೋ ವಸಂತ-**

**ಶ್ರಿಯಂ ಮರುನ್ಮರ್ದಿತಘರ್ಮಬಿಂದುಃ ।**

**ಚಚಾರ ಚಾಮೀಕರಚಾರುವಾಸಾಃ**

**ಪ್ರಸೂನಮೃದ್ವಂಘ್ರಿತಲೋऽಂಬುಜಾಕ್ಷಃ ॥ ೩೬ ॥**

**ತತಃ** = ಅನಂತರ, **ಸಃ** = ಆ, **ಪಶ್ಯನ್** = ನೋಡುತ್ತಾ, **ಪರಿತಃ** = ಸುತ್ತಲೂ, **ವಸಂತಶ್ರಿಯಂ** = ವಸಂತ ಋತುವಿನ ವೈಭವವನ್ನು, **ಮರುತ್** = ಗಾಳಿಯಿಂದ, **ಮರ್ದಿತ** = ನಷ್ಟವಾದ, **ಘರ್ಮ** = ಬೆವರಿನ, **ಬಿಂದುಃ** = ಹನಿಯುಳ್ಳ, **ಚಚಾರ** = ಅಡ್ಡಾಡಿದನು, **ಚಾಮೀಕರ** = ಬಂಗಾರದಂತೆ, **ಚಾರು** = ಚಂದದ, **ವಾಸಾಃ** = ಬಟ್ಟೆಯುಳ್ಳ, **ಪ್ರಸೂನ** = ಪುಷ್ಪದಂತೆ, **ಮೃದು** = ಮೆತ್ತಗಾದ, **ಅಂಘ್ರಿತಲಃ** = ಪಾದವುಳ್ಳ, **ಅಂಬುಜ** = ಕಮಲದಂತೆ, **ಅಕ್ಷಃ** = ಕಣ್ಣುಳ್ಳ ಕೃಷ್ಣನು.

ವಸಂತ ಋತುವನ್ನು ವರ್ಣಿಸಲು ಆರಂಭಿಸುತ್ತಾರೆ – ಕೃಷ್ಣನ ದೇಹದಲ್ಲಿ ಕಣ್ಣಿಗೆ ಕಾಣುವ ಬೆವರನ್ನು ನಿಧಾನವಾಗಿ ಬೀಸುವ ಗಾಳಿಯು ತೆಗೆದಿದೆ. ಕೃಷ್ಣನು ಪೀತಾಂಬರವನ್ನು ಧರಿಸಿದ್ದಾನೆ. ಪುಷ್ಪದಷ್ಟು ಮೃದುವಾದ ಪಾದಗಳುಳ್ಳವನು. ಕಮಲದಂತೆ ಕಣ್ಣುಗಳುಳ್ಳವನು. ಇಂತಹ ಕೃಷ್ಣನು ವಸಂತ ಋತುವಿನ ವೈಭವವನ್ನು ಸವಿಯಲು ಆರಂಭಿಸಿದನು.

ವಸಂತ ಋತು ಅಂದರೆ ಮಂದವಾದ ಹಿತಕರ ಗಾಳಿ. ಅರಳಿದ ನಾನಾ ರೀತಿಯ ಪುಷ್ಪಗಳು. ಇವೆಲ್ಲಾ ಕೃಷ್ಣನಲ್ಲೇ ಇವೆ. ಪ್ರಕೃತಿಗೆ ಕೃಷ್ಣನಿಂದಲೇ ಬಂದದ್ದು ಎಂದು ತಿಳಿಸಲು ಕೃಷ್ಣನನ್ನು ಈ ರೀತಿ ವರ್ಣಿಸಿದರು.

**ಸಂಯೋಜ್ಯಾನಿಲರೂಪದೈತ್ಯಮಧುನಾ ತಚ್ಚಿಹ್ನಮತ್ಯದ್ಭುತಂ**
**ಕೃಷ್ಣಃ ಪ್ರೇಷಯತೀವ ಹಸ್ತಗಬಕೋ ಗಾಢಂ ತಮಃ ಪ್ರಾಪಯನ್ ॥ ೩೪ ॥**

**ಪ್ರಾಕ್** = ಮೊದಲು, **ಬಾಲಗ್ರಹ** = ಮಕ್ಕಳನ್ನು ಅಪಹರಿಸುವ, **ರೂಪಿಣೀಂ** = ಸ್ವರೂಪಳಾದ ಪೂತನಿಯನ್ನು, **ಸಃ** = ಕೃಷ್ಣನು, **ಶಕಟೇ** = ಬಂಡಿಯಲ್ಲಿ, **ಸಂಕಲ್ಪ್ಯ** = ನಿಶ್ಚಯಿಸಿ, **ರಜ್ಜು** = ಹಗ್ಗವನ್ನು, **ಗ್ರಹಾಂ** = ಹಿಡಿಯುವವಳನ್ನಾಗಿ, **ತದ್** = ಆ, **ವಾಹಾನ್** = ಬಂಡಿಗೆ, **ಖರ** = ಕತ್ತೆಯು, **ಕೇಶಿ** = ಕುದುರೆಯು, **ವತ್ಸ** = ಕರುವು, **ವೃಷಭಾನ್** = ಎತ್ತು ಮೊದಲಾದವನ್ನು, **ನಿಃಶೇಷ** = ಎಲ್ಲಾ, **ದೈತ್ಯ** = ದೈತ್ಯರಿಗೆ, **ಅಸುವತ್** = ಪ್ರಾಣದಂತೆ, **ಸಂಯೋಜ್ಯ** = ಇಟ್ಟು, **ಅನಿಲರೂಪ** = ಗಾಳಿರೂಪದ, **ದೈತ್ಯಂ** = ಅಸುರನನ್ನು, **ಅಧುನಾ** = ಈಗ, **ತತ್** = ಆ ಗಾಡಿಗೆ, **ಚಿಹ್ನಂ** = ಧ್ವಜವನ್ನು, **ಅತ್ಯದ್ಭುತಂ** = ಭಯಾನಕವಾದ, **ಕೃಷ್ಣಃ** = ಕೃಷ್ಣನು, **ಪ್ರೇಷಯತಿ ಇವ** = ಕಳುಹಿಸುವವನಂತೆ, **ಹಸ್ತ** = ಕೈಯ್ಯಲ್ಲಿ, **ಗ** = ಇರುವ, **ಬಕಃ** = ಬಕನಾದ, **ಗಾಢಂ** = ನಿಬಿಡವಾದ, **ತಮಃ** = ನರಕವನ್ನು, **ಪ್ರಾಪಯನ್**= ಕಳುಹಿಸುತ್ತಾ.

ಕೃಷ್ಣನಿಂದ ಈ ತನಕ ಸತ್ತಿರುವ ದೈತ್ಯರನ್ನು ರಾಜರು ಸಂಗ್ರಹಿಸಿ ಒಂದು ಯಾತ್ರೆಯ ಚಿತ್ರಣವನ್ನು ಕೊಡುತ್ತಾರೆ – ಶಕಟಾಸುರನೇ ಬಂಡಿ. ಇದರ ಸಾರಥಿ ಪೂತನಾ. ಈಕೆ ಬಾಲಗ್ರಹಳು. ಒಂದರ್ಥ ಬಾಲಕರನ್ನು ಪೀಡಿಸುವವಳು. ಇನ್ನೊಂದರ್ಥ ಬಂಡಿ ಓಡಿಸುವವಳು. ಬಂಡಿ ಓಡಿಸುವವರು ಪ್ರಾಯಃ ಬಂಡಿಯ ಎತ್ತುಗಳಿಗೆ ಹೊಡೆಯುವುದಿಲ್ಲ. ಅವುಗಳ ಬಾಲವನ್ನು ಹಿಡಿದು ತಿರುವುತ್ತಾರೆ. ಆಗ ಎತ್ತುಗಳು ಚಲಿಸುತ್ತವೆ. ಮುಂದೆ ಸಾಯಲಿರುವ ಕತ್ತೆ, ಕುದುರೆ, ಗೂಳಿಯ ರೂಪದ ಹಾಗೂ ಈಗ ತಾನೇ ಸತ್ತಿರುವ ವತ್ಸಾಸುರನು ಬಂಡಿಯನ್ನು ಎಳೆಯುವ ಪ್ರಾಣಿಗಳ ಸ್ಥಾನದಲ್ಲಿ. ಇವರೆಲ್ಲಾ ಸತ್ತವರು. ಹೆಣಗಳು. ಹೀಗಿರುವಾಗ ಸಂಚಾರ ಹೇಗೆ? ಅಂದರೆ ಕೃಷ್ಣನಿಂದ ಸತ್ತಿರುವ ಗಾಳಿ ಎಂಬ ದೈತ್ಯನು ಇವರಿಗೆಲ್ಲಾ ಪ್ರಾಣದಂತೆ ಇದ್ದಾನೆ. ಇಷ್ಟೆಲ್ಲಾ ಆದ ಮೇಲೆ ಈ ರಥಕ್ಕೆ ಧ್ವಜದಂತೆ ಬಕಾಸುರನನ್ನು ಕೊಂದು ಇಟ್ಟನು. ರಥ ಯಾರದ್ದು ಎಂದು ತಿಳಿಯವುದು ಧ್ವಜದಿಂದ. ಅರ್ಜುನನ ರಥಕ್ಕೆ ಕಪಿ ಧ್ವಜ. ಕೃಷ್ಣನ ರಥದ ಚಿಹ್ನೆ ಗರುಡ. ಹಾಗೆಯೇ ಇದು ಕಂಸನ ರಥ ಎಂದು ತಿಳಿಯಲು ಬಕನನ್ನು ಧ್ವಜದ ಸ್ಥಾನದಲ್ಲಿಟ್ಟು ಹಾಗೆಯೇ ರಥವನ್ನು ಅಂಧಂತಮಸ್ಸಿಗೆ ಕಳುಹಿಸಿದನು.

**ಪತತ್ರಿಣಂ ತಂ ಪರಿಗೃಹ್ಯ ದೋರ್ಭ್ಯಾಂ**
**ವಿಭಿದ್ಯ ತುಂಡಂ ವಿನಿಪಾತ್ಯ ಭೂಮೌ ।**

**ಸ ಯಾತನಾಮೀನಭುಜಂ ವಿಧಾತುಂ**
**ನ್ಯಯೋಜಯನ್ ನಾರಕವಾಪಿಕಾಸು ॥ ೩೫ ॥**

**ಪತತ್ರಿಣಂ** = ಹಕ್ಕಿಯನ್ನು, **ತಂ** = ಆ, **ಪರಿಗೃಹ್ಯ** = ಹಿಡಿದು, **ದೋರ್ಭ್ಯಾಂ** = ಕೈಗಳಿಂದ, **ವಿಭಿದ್ಯ** = ಸೀಳಿ, **ತುಂಡಂ** = ಕೊಕ್ಕನ್ನು, **ವಿನಿಪಾತ್ಯ** = ಬೀಳಿಸಿ, **ಭೂಮೌ** = ಭೂಮಿಯಲ್ಲಿ, **ಸ** = ಕೃಷ್ಣನು, **ಯಾತನಾ** = ದುಃಖವೆಂಬ, **ಮೀನ** = ಮೀನನ್ನು, **ಭುಜಂ** = ತಿನ್ನುವವನನ್ನಾಗಿ, **ವಿಧಾತುಂ** = ಮಾಡಲು, **ನ್ಯಯೋಜಯನ್** = ಕಳುಹಿಸಿದನು, **ನಾರಕ** = ನರಕದಲ್ಲಿರುವ, **ವಾಪಿಕಾಸು** = ಬಾವಿಗಳಲ್ಲಿ.

ಈತನ ಎರಡು ಕೊಕ್ಕುಗಳಲ್ಲಿ ಹಿಡಿದು ಕೃಷ್ಣನು ಸೀಳಿ ಭೂಮಿಯಲ್ಲಿ ಬಿಸಾಡಿದನು. ಈತನು ಕೃಷ್ಣನೆಂಬ ಮೀನನ್ನು ತಿನ್ನಲು ಬಂದವನು. ಅದಕ್ಕೆ ಕೃಷ್ಣನು ದುಃಖವೆಂಬ ಮೀನನ್ನು ತಿನ್ನುವಂತೆ ಮಾಡಿದನು. ಎಲ್ಲಿ ಅಂದರೆ ನರಕವೆಂಬ ಬಾವಿಯಲ್ಲಿ.

**ತತಃ ಸ ಪಶ್ಯನ್ ಪರಿತೋ ವಸಂತ-**
**ಶ್ರಿಯಂ ಮರುನ್ಮರ್ದಿತಘರ್ಮಬಿಂದುಃ ।**
**ಚಚಾರ ಚಾಮೀಕರಚಾರುವಾಸಾಃ**
**ಪ್ರಸೂನಮೃದ್ವಂಘ್ರಿತಲೋऽಂಬುಜಾಕ್ಷಃ ॥ ೩೬ ॥**

**ತತಃ** = ಅನಂತರ, **ಸಃ** = ಆ, **ಪಶ್ಯನ್** = ನೋಡುತ್ತಾ, **ಪರಿತಃ** = ಸುತ್ತಲೂ, **ವಸಂತಶ್ರಿಯಂ** = ವಸಂತ ಋತುವಿನ ವೈಭವವನ್ನು, **ಮರುತ್** = ಗಾಳಿಯಿಂದ, **ಮರ್ದಿತ** = ನಷ್ಟವಾದ, **ಘರ್ಮ** = ಬೆವರಿನ, **ಬಿಂದುಃ** = ಹನಿಯುಳ್ಳ, **ಚಚಾರ** = ಅಡ್ಡಾಡಿದನು, **ಚಾಮೀಕರ** = ಬಂಗಾರದಂತೆ, **ಚಾರು** = ಚಂದದ, **ವಾಸಾಃ** = ಬಟ್ಟೆಯುಳ್ಳ, **ಪ್ರಸೂನ** = ಪುಷ್ಪದಂತೆ, **ಮೃದು** = ಮೆತ್ತಗಾದ, **ಅಂಘ್ರಿತಲಃ** = ಪಾದವುಳ್ಳ, **ಅಂಬುಜ** = ಕಮಲದಂತೆ, **ಅಕ್ಷಃ** = ಕಣ್ಣುಳ್ಳ ಕೃಷ್ಣನು.

ವಸಂತ ಋತುವನ್ನು ವರ್ಣಿಸಲು ಆರಂಭಿಸುತ್ತಾರೆ – ಕೃಷ್ಣನ ದೇಹದಲ್ಲಿ ಕಣ್ಣಿಗೆ ಕಾಣುವ ಬೆವರನ್ನು ನಿಧಾನವಾಗಿ ಬೀಸುವ ಗಾಳಿಯು ತೆಗೆದಿದೆ. ಕೃಷ್ಣನು ಪೀತಾಂಬರವನ್ನು ಧರಿಸಿದ್ದಾನೆ. ಪುಷ್ಪದಷ್ಟು ಮೃದುವಾದ ಪಾದಗಳುಳ್ಳವನು. ಕಮಲದಂತೆ ಕಣ್ಣುಗಳುಳ್ಳವನು. ಇಂತಹ ಕೃಷ್ಣನು ವಸಂತ ಋತುವಿನ ವೈಭವವನ್ನು ಸವಿಯಲು ಆರಂಭಿಸಿದನು.

ವಸಂತ ಋತು ಅಂದರೆ ಮಂದವಾದ ಹಿತಕರ ಗಾಳಿ. ಅರಳಿದ ನಾನಾ ರೀತಿಯ ಪುಷ್ಪಗಳು. ಇವೆಲ್ಲಾ ಕೃಷ್ಣನಲ್ಲೇ ಇವೆ. ಪ್ರಕೃತಿಗೆ ಕೃಷ್ಣನಿಂದಲೇ ಬಂದದ್ದು ಎಂದು ತಿಳಿಸಲು ಕೃಷ್ಣನನ್ನು ಈ ರೀತಿ ವರ್ಣಿಸಿದರು.

**ಬರ್ಹಾಕ್ಷೀಂ ಪ್ರಸವಾನನಾಮಲಿಕುಲೋತ್ಫುಲ್ಲಾಲಕಾಂ ಪಲ್ಲವ-**
**ಪ್ರಾಂತಸ್ಕಂಧಭುಜಾಂ ಲತಾಮೃದುತನುಂ ರಕ್ತಾಂಬರಾರಂಜಿತಾಮ್ ।**
**ಮಾದ್ಯತ್ಕೋಕಿಲಸುಸ್ವನಾಂ ಶುಕವಚಶ್ಚಾಟುಂ ಪಲಾಶಾಧರಾಂ**
**ಶಕ್ತೋऽಭೂದ್ವನದೇವತಾಮೃತುಮತೀಮಪ್ಯುಜ್ಝಿತುಂ ನೋ ಹರಿಃ ॥ ೩೭ ॥**

**ಬರ್ಹಾಕ್ಷೀಂ** = ನವಿಲುಗಳೆಂಬ ಕಣ್ಣುಗಳುಳ್ಳ, **ಪ್ರಸವ** = ಪುಷ್ಪಗಳೆಂಬ, **ಆನನಾಂ** = ಮುಖವುಳ್ಳ, **ಅಲಿಕುಲ** = ಭ್ರಮರಗಳ ಗುಂಪೆಂಬ, **ಉತ್‌ಫುಲ್ಲ** = ಚಂದದ, **ಅಲಕಾಂ** = ಮುಂಗುರುಗಳುಳ್ಳ, **ಪಲ್ಲವ** = ಚಿಗುರುಗಳು, **ಪ್ರಾಂತ** = ಕೊನೆಯಲ್ಲಿ ಉಳ್ಳ, **ಸ್ಕಂಧ** = ಗೆಲ್ಲುಗಳೆಂಬ, **ಭುಜಾಂ** = ಕೈಗಳುಳ್ಳ, **ಲತಾ** = ಬಳ್ಳಿಗಳೆಂಬ, **ಮೃದು** = ಮೆತ್ತಗಿನ, **ತನುಂ** = ಶರೀರವುಳ್ಳ, **ರಕ್ತ** = ಕೆಂಪಾದ, **ಅಂಬರ** = ಆಕಾಶವೆಂಬ ಬಟ್ಟೆಯಿಂದ, **ರಂಜಿತಾಂ** = ಶೋಭಿತಳಾದ, **ಮಾದ್ಯತ್** = ಮದಭರಿತಗಳಾದ, **ಕೋಕಿಲ** = ಕೋಗಿಲೆಗಳ, **ಸುಸ್ವನಾಂ** = ಧ್ವನಿಯುಳ್ಳ, **ಶುಕ** = ಗಿಳಿಗಳ, **ವಚ** = ಮಾತುಗಳೆಂಬ, **ಚಾಟುಂ** = ಪ್ರಿಯವಾದ ಮಾತುಳ್ಳ, **ಪಲಾಶ** = ಪಲಾಶದ ಪುಷ್ಪಗಳೆಂಬ, **ಅಧರಾಂ** = ತುಟಿಗಳುಳ್ಳ, **ಶಕ್ತಃ** = ಸಮರ್ಥನು, ನ **ಅಭೂತ್** = ಆಗಲಿಲ್ಲ, **ವನದೇವತಾಂ** = ವನದೇವತೆಯನ್ನು, **ಋತುಮತೀಂ** = ಋತುಮತಿಯಾದ, **ಉಜ್ಝಿತುಂ** = ಬಿಡಲು, **ಹರಿಃ** = ದೇವರು.

ಈ ವನದೇವತೆಯು ಹೆಣ್ಣಿನಂತೆ ಇದ್ದಾಳೆ. ಹೆಣ್ಣು ಒಳ್ಳೆಯ ಕಣ್ಣು, ಮುಖ, ಮುಂಗುರುಳು, ಕೆಂಪಾದ ಅಂಗೈ, ಪುಷ್ಪವಾದ ತೋಳು, ಕೋಮಲವಾದ ಶರೀರ, ಚಿತ್ರವಾದ ವಸ್ತ್ರ, ಕೋಗಿಲೆಯಂತೆ ಇಂಪಾದ ಧ್ವನಿ, ಕಾಮುಕವಶೀಕರಣಕ್ಕೆ ಬೇಕಾದ ಮಾತುಗಳು, ಕೆಂಪಾದ ತುಟಿ - ಇವುಗಳಿಂದ ಕೂಡಿದ್ದರೆ ಆಗ ಕಾಮುಕನು ಈಕೆ ರಜಸ್ವಲೆ (ಋತುಮತಿ)ಯಾಗಿದ್ದರೂ ಆಕೆಯನ್ನು ಬಿಡಲು ಶಕ್ತನಾಗುವುದಿಲ್ಲ. ಅದೇ ರೀತಿ ಕೃಷ್ಣನೂ ಕೂಡಾ ಈ ವನದೇವತೆಯು 'ಋತುಮತಿ'ಯಾಗಿದ್ದರೂ (ನಿಜವಾದ ಅರ್ಥದಲ್ಲಿ ವಸಂತ ಋತುವಿನಿಂದ ಕೂಡಿದ್ದರೂ) ಬಿಡಲು ಶಕ್ತನಾಗುವುದಿಲ್ಲ. (ಋತುಮತಿಯ ಗಮನವು ನಿಷಿದ್ಧ).

ಹೆಣ್ಣಿನ ಹೋಲಿಕೆ ಇದೆ. ಕಾಡಿನಲ್ಲಿ ಅಲ್ಲಲ್ಲಿ ನವಿಲಿನ ಗರಿಗಳು ಬಿದ್ದಿರುತ್ತವೆ. ಆ ಗರಿಗಳಲ್ಲಿ ಕಣ್ಣುಗಳಂತೆ ಚಿತ್ರಗಳಿವೆ. ಇವುಗಳು ವನದೇವತೆಯ ಕಣ್ಣುಗಳು. ಬಹಳ ಪುಷ್ಪಗಳು ಚೆನ್ನಾಗಿ ಅರಳಿರುತ್ತವೆ. ಇವುಗಳೇ ಮುಖಗಳು. ಭ್ರಮರಗಳು ಕಪ್ಪುಗಳು. ಯಾವಾಗಲೂ ಹಾರಾಡುತ್ತಾ ಪುಷ್ಪಗಳಲ್ಲಿ ಕುಳಿತಿರುತ್ತವೆ. ಮುಂಗುರುಳು ಮುಖದಲ್ಲಿ ಹಣೆಯ ಮೇಲೆ ಹಾರಾಡುತ್ತಿರುತ್ತವೆ. ಆದ್ದರಿಂದ ಭ್ರಮರಗಳೇ ಮುಂಗುರುಳುಗಳು.

ಕಿಸಲಯಗಳು ಕೆಂಪು. ಮರದ ಕಾಂಡದ ತುದಿಯಲ್ಲಿರುತ್ತವೆ. ಮರದ ಕಾಂಡಗಳು ಪುಷ್ಟವಾಗಿರುತ್ತವೆ. ಆದ್ದರಿಂದ ಕಾಂಡಗಳೇ ಸ್ಕಂಧಗಳು. ಸ್ಕಂಧ ಎಂಬ ಶಬ್ದವು ಕಾಂಡಕ್ಕೂ ಭುಜಕ್ಕೂ ಇದೆ. ಎಳೆ ಚಿಗುರುಗಳು, ಕಿಸಲಯಗಳು ಹಸ್ತತಲಗಳು. ಬಳ್ಳಿಗಳು ವನದೇವತೆಯ ಬಳಕುವ, ನೀಳವಾದ ಶರೀರ. ಕಾಡಿನಲ್ಲಿ ಅಲ್ಲಲ್ಲಿ ಚೆಲ್ಲಿದ ಹವಳಾದಿಗಳ ಪ್ರಕಾಶವು ಆಕಾಶದಲ್ಲಿ ಹರಡಿದೆ. ಆದ್ದರಿಂದ ಆಕಾಶವು ಚಿತ್ರವಿಚಿತ್ರವಾಗಿ ತೋರುತ್ತದೆ. ಈ ಆಕಾಶವೇ ವನದೇವತೆಯ ಅಂಬರ. ಅಂಬರ ಅಂದರೆ ಆಕಾಶ, ವಸ್ತ್ರ ಎರಡೂ ಆಗುತ್ತದೆ. ಕೋಗಿಲೆಗಳ ಇಂಪಾದ ಧ್ವನಿಯೇ ವನದೇವತೆಯ ಸಂಗೀತ. ಗಿಳಿಗಳ ಮಾತು ವನದೇವತೆಯ ಕಾಮೋದ್ರೇಕದ ಮಾತುಗಳು. ಪಲಾಶ ಮರದ ಪುಷ್ಪಗಳೇ ಕೆಂಪಾದ, ಪುಷ್ಟವಾದ ತುಟಿಗಳು. ಈ ರೀತಿ ಒಂದು ಹೆಣ್ಣಿನ ಎಲ್ಲಾ ಧರ್ಮಗಳೂ ಈ ವನದೇವತೆಯಲ್ಲಿ ಇವೆ. ಈಕೆ ಈಗ ವಸಂತಋತುಮತಿ. ಹೀಗಿದ್ದರೂ ಇವಳ ಮಧ್ಯದಲ್ಲಿ ಸಂಚಾರ ಮಾಡುತ್ತಾ ಇವಳನ್ನು ಬಿಡಲು ಅಶಕ್ತನಾಗಿದ್ದಾನೆ.

ಪ್ರತಿಯೊಬ್ಬನೂ ತನ್ನ ತನ್ನ ಧರ್ಮದಿಂದ ಕೂಡಿದ್ದರೆ ದೇವರು ಆತನನ್ನು ಯಾವ ಸಂದರ್ಭದಲ್ಲಿಯೂ ಬಿಡುವುದಿಲ್ಲ ಎಂಬ ಸಂದೇಶ ಇಲ್ಲಿದೆ.

ಸಜಲಶೀಕರದಕ್ಷಿಣವಾಯುನಾ
ಕುಸುಮಸಂಚಯಕಂಪನಚುಂಚುನಾ ।
ವ್ಯಜನಪಾಣಿತಲೇವ ತಮನ್ವಗಾತ್
ವನರಮಾ ನರಮಾನಸಮಂಡನಮ್ ॥೩೮॥

ಸ = ಕೂಡಿದ, ಜಲ = ನೀರಿನ, ಶೀಕರ = ಹನಿಗಳಿಂದ, ದಕ್ಷಿಣ = ದಕ್ಷಿಣದಿಕ್ಕಿನ, ವಾಯುನಾ = ಗಾಳಿಯಿಂದ, ಕುಸುಮ = ಪುಷ್ಪಗಳ, ಸಂಚಯ = ಸಮೂಹದ, ಕಂಪನ = ಅಲುಗಾಡುವಿಕೆಯಿಂದ, ಚುಂಚುನಾ = ಚಂದದ, ವ್ಯಜನ = ಬೀಸಣಿಗೆಯು, ಪಾಣಿತಲೇ ಇವ = ಕೈಯಲ್ಲಿ ಉಳ್ಳವಳಂತೆ, ತಂ = ಕೃಷ್ಣನನ್ನು, ಅನ್ವಗಾತ್ = ಅನುಸರಿಸಿದಳು, ವನರಮಾ = ವನದೇವತೆಯು, ನರ = ಜನರ, ಮಾನಸ = ಮನಸ್ಸಿಗೆ, ಮಂಡನಂ = ಅಲಂಕಾರದಂತಿರುವ.

ಕೃಷ್ಣನು ಆ ಕಾಡಿನಲ್ಲಿ ಅಡ್ಡಾಡುವಲ್ಲಿ ಗಾಳಿಯು ನಿಧಾನವಾಗಿ ಬೀಸುತ್ತಿತ್ತು. ಈ ಗಾಳಿ ದಕ್ಷಿಣದಿಕ್ಕಿನ ಮಲಯಪರ್ವತದಿಂದ ಹೊರಟದ್ದು. ಹಾಗೆಯೇ ಕಾಡಿನಲ್ಲಿರುವ ಅರಳಿದ ಪುಷ್ಪಗಳನ್ನು ಅಲುಗಾಡಿಸುತ್ತಾ ಇದೆ. ಆದ್ದರಿಂದ ಮಂದವಾದ, ಪರಿಮಳಿತವಾದ ಗಾಳಿ. ಹಾಗೆಯೇ ನೀರಿನ ಕಣಗಳಿಂದ ಯುಕ್ತವಾದ್ದರಿಂದ ತಂಪಾಗಿಯೂ ಇದೆ. ಇಂತಹ ಗಾಳಿ-

ಯನ್ನು ವನದೇವತೆಯು ತಾನು ಮರಗಳೆಂಬ ಬೀಸಣಿಗೆಯ ಮೂಲಕ ಕೃಷ್ಣನಿಗೆ ಬೀಸುತ್ತಾ ಆತನನ್ನು ಅನುಸರಿಸುವಂತೆ ಇದ್ದಳು. ಕೃಷ್ಣನಾದರೋ ಎಲ್ಲರ ಹೃದಯ ದೇವತೆಯಾಗಿ-ದ್ದಾನೆ.

ಪ್ರಕೃತಿಯು ಪರಮಾತ್ಮನನ್ನು ಎಂದೂ ಬಿಟ್ಟಿರುವುದಿಲ್ಲ.

**ಪರಿಲಸತ್ ಸಹಕಾರನವಾಂಕುರೇ**
**ಪಿಕಗಣಃ ಶುಶುಭೇ ಶನಕೈರ್ಧ್ವನನ್ ।**
**ಸ್ಮರರಹಸ್ಯಮನೂನಿವ ಸಂಜಪನ್**
**ಅಖಿಲದರ್ಪಕದರ್ಪಕಸಾಯಕೇ ॥ ೩೯ ॥**

**ಪರಿಲಸತ್** = ಶೋಭಿಸುವ, **ಸಹಕಾರ** = ಮಾವಿನ, **ನವ** = ಹೊಸದಾದ, **ಅಂಕುರೇ** = ಚಿಗುರಿನಲ್ಲಿ, **ಪಿಕಗಣ** = ಗಿಳಿಗಳ ಸಮೂಹವು, **ಶುಶುಭೇ** = ಶೋಭಿಸಿತು, **ಶನಕೈಃ** = ಮೆಲ್ಲನೆ, **ಧ್ವನನ್** = ಧ್ವನಿಮಾಡುವ, **ಸ್ಮರ** = ಮನ್ಮಥನ, **ರಹಸ್ಯ** = ಗುಟ್ಟಿನ, **ಮನೂನ್** = ಮಂತ್ರಗಳನ್ನು, **ಸಂಜಪನ್ ಇವ** = ಜಪಿಸುವಂತೆ, **ಅಖಿಲ** = ಎಲ್ಲರನ್ನೂ, **ದರ್ಪಕ** = ಮರ್ದಿಸುವ, **ದರ್ಪಕ** = ಮನ್ಮಥನ, **ಸಾಯಕೇ**= ಬಾಣವಾದ.

● ● ● ●

**ಸಂದೇಶ**

**ಪ್ರಭೋಃ ಕ್ರಿಯೈಕಾಽಪಿ ಉರುಕಾರ್ಯಸಾಧಿಕಾ**

ದೊಡ್ಡವರ ಒಂದು ಕೆಲಸವೂ ಅನೇಕ ಫಲಪ್ರದವು

---

ಕೋಗಿಲೆಗಳು ಮಾವಿನ ಮರದ ಹೊಸ ಚಿಗುರುಗಳಲ್ಲಿ ಕುಳಿತು ಕೂಗುತ್ತಿವೆ. ಚಿಗುರುಗಳು ಮನ್ಮಥನ ಬಾಣಗಳು. ಮನ್ಮಥನು ಎಲ್ಲ ಕಾಮುಕರನ್ನೂ ಬಡಿದೆಬ್ಬಿಸುವವ. ಈ ಕೋಗಿಲೆಗಳು ಮನ್ಮಥನ ಬಾಣಗಳಲ್ಲಿ ಕುಳಿತು ಕಾಮುಕರನ್ನು ಎಬ್ಬಿಸಲು ಬೇಕಾದ ಮಂತ್ರಗಳನ್ನು ಜಪಿಸುವಂತೆ ತೋರುತ್ತಿತ್ತು. ಕೋಗಿಲೆಯ ಧ್ವನಿ, ಮಾವಿನ ಮರದ ಚಿಗುರು ಇವುಗಳ ದರ್ಶನವಾದರೆ ಕಾಮವು ಉದ್ದೀಪನಗೊಳ್ಳುತ್ತದೆ ಎಂದು ಅಭಿ-ಪ್ರಾಯ.

**ಕುಸುಮಚುಂಬನಕೃನ್ಮಧುರಧ್ವನಿಃ**
**ಪ್ರಿಯಜನಾನಿತಿ ಶಿಕ್ಷತಿ ಷಟ್‌ಪದಃ ।**
**ಮೃದುಗಿರಾಽಬ್ಜಮುಖೀಸರಸಾಧರಂ**
**ಪಿಬತ ಮಾ ಬತ ಮಾನ ಇಹೋಚಿತಃ ॥೪೦॥**

**ಕುಸುಮ** = ಪುಷ್ಪಗಳ, **ಚುಂಬನ** = ಮುದ್ದಿಡುವಿಕೆಯನ್ನು, **ಕೃತ್** = ಮಾಡುವ, **ಮಧುರ** = ಇಂಪಾದ, **ಧ್ವನಿಃ** = ಧ್ವನಿಯುಳ್ಳ, **ಪ್ರಿಯಜನಾನ್** = ಇಷ್ಟಜನರನ್ನು, **ಇತಿ** = ಈ ರೀತಿಯಾಗಿ, **ಶಿಕ್ಷತಿ** = ಉಪದೇಶಿಸುತ್ತದೆ, **ಷಟ್‌ಪದಃ** = ಭ್ರಮರವು, **ಮೃದು** = ಮೆತ್ತಗಿನ, **ಗಿರಾ** = ಮಾತಿನಿಂದ, **ಅಬ್ಜಮುಖೀ** = ಕಮಲಮುಖಿಯ, **ಸರಸ** = ರಸದಿಂದ ಕೂಡಿದ, **ಅಧರಂ** = ತುಟಿಯನ್ನು, **ಪಿಬತ** = ಕುಡಿಯಿರಿ, **ಬತ** = ಆಶ್ಚರ್ಯ, **ಮಾನಃ** = ಗರ್ವವು, **ಇಹ** = ಇಲ್ಲಿ, **ಮಾ ಉಚಿತಃ** = ಯೋಗ್ಯವಲ್ಲ.

ಭ್ರಮರಗಳು ಪುಷ್ಪಗಳಲ್ಲಿ ಕುಳಿತು ಮಧುರವಾಗಿ ಶಬ್ದ ಮಾಡುತ್ತಿವೆ. ಇದನ್ನು ನೋಡಿದಾಗ ಭ್ರಮರಗಳು ಕಾಮುಕರನ್ನು ಕುರಿತು ಈ ರೀತಿ ಹೇಳುವಂತೆ ತೋರುತ್ತಿದೆ – ಎಲೈ ಕಾಮುಕರೇ, ನೀವು ದುರಭಿಮಾನದಿಂದ ಬೀಗಬೇಡಿರಿ. ಯೋಗ್ಯವಾದ ಭೋಗ ವಿಷಯದಲ್ಲಿ ಅಂಜಬೇಡಿರಿ. ನೀವೂ ಕೂಡಾ ನನ್ನಂತೆಯೇ ಪತ್ನಿಯ ತುಟಿಯ ರಸವನ್ನು ಒಳ್ಳೆಯ ಮಾತಿನಿಂದ ಕುಡಿಯಿರಿ ಎಂದು ಹೇಳುವಂತೆ ಇದೆ.

ಈ ಭ್ರಮರಗಳು ಪುಷ್ಪಗಳಲ್ಲಿ ಕುಳಿತಿದ್ದರಿಂದ ಹಾಗೆಯೇ ರಸವನ್ನು ಹೀರುವುದರಿಂದ ಕಾಂತೆಯ ತುಟಿಯ ರಸವನ್ನು ಪಾನ ಮಾಡಬೇಕು ಎಂದೂ, ಧ್ವನಿ ಮಾಡುವುದರಿಂದ ಒಳ್ಳೆಯ ಮಾತುಗಳಿಂದ ಆಕೆಯನ್ನು ಒಲಿಸಿಕೊಳ್ಳಬೇಕೆಂದೂ ತಿಳಿಯುತ್ತದೆ.

ಶಾಸ್ತ್ರವಿಹಿತವಾದ ಸುಖವನ್ನು ತ್ಯಜಿಸುವವನು ಪಶುಸಮಾನನು ಎಂಬ ಮಾತು ಇಲ್ಲಿ ಪ್ರಕಟವಾಗುತ್ತದೆ.

**ಮರುತಿ ವಾತಿ ಶುಚಾ ಪಥಿಕಾಂಗನಾ**
**ನಯನವಾರಿ ಯುಯೋಜ ಪಥಿ ಸ್ಪೃಶನ್ ।**
**ಅಮುಮವೈತು ಪತಿರ್ಮಮ ವೇದನಾ**
**ಮಲಿಕುಲಾಲಿಕುಲಾಭ್ಯುದಿತಾಮಿತಿ ॥ ೪೧ ॥**

**ಮರುತಿ** = ಗಾಳಿಯು, **ವಾತಿ** = ಬೀಸುತ್ತಿರಲು, **ಶುಚಾ** = ದುಃಖದಿಂದ, **ಪಥಿಕ** = ಪ್ರವಾಸಿಗನ, **ಅಂಗನಾ** = ಪತ್ನಿಯು, **ನಯನವಾರಿ** = ಕಣ್ಣೀರನ್ನು, **ಯುಯೋಜ** = ಸೇರಿಸಿದಳು, **ಪಥಿ** = ದಾರಿಯಲ್ಲಿ, **ಸ್ಪೃಶನ್** = ಮುಟ್ಟುತ್ತಾ, **ಅಮುಂ** = ಈ ಗಾಳಿಯನ್ನು, **ಅವೈತು** = ತಿಳಿಯಲಿ, **ಪತಿಃ** = ಪತಿಯು, **ಮಮ** = ನನ್ನ, **ವೇದನಾಂ** = ದುಃಖವನ್ನು, **ಅಲಿ** = ಭ್ರಮರಗಳ, **ಕುಲಾನಿ** = ಸಮೂಹಗಳೆಂಬ, **ಆಲಿ** = ಗೆಳತಿಯರ, **ಕುಲ** = ಸಮೂಹದಿಂದ, **ಅಭ್ಯುದಿತಾಂ** = ತಿಳಿಸಲ್ಪಡುವ, **ಇತಿ**= ಈ ರೀತಿಯಾಗಿ.

ಒಬ್ಬಳ ಪತಿಯು ಪರ ಊರಿಗೆ ಹೋಗಿದ್ದಾನೆ. ಈಕೆಗೆ ಆತನ ವಿರಹವನ್ನು ಸಹಿಸಲು

ಯನ್ನು ವನದೇವತೆಯು ತಾನು ಮರಗಳೆಂಬ ಬೀಸಣಿಗೆಯ ಮೂಲಕ ಕೃಷ್ಣನಿಗೆ ಬೀಸುತ್ತಾ ಆತನನ್ನು ಅನುಸರಿಸುವಂತೆ ಇದ್ದಳು., ಕೃಷ್ಣನಾದರೋ ಎಲ್ಲರ ಹೃದಯ ದೇವತೆಯಾಗಿ-ದ್ದಾನೆ.

ಪ್ರಕೃತಿಯು ಪರಮಾತ್ಮನನ್ನು ಎಂದೂ ಬಿಟ್ಟಿರುವುದಿಲ್ಲ.

**ಪರಿಲಸತ್ ಸಹಕಾರನವಾಂಕುರೇ**
**ಪಿಕಗಣಃ ಶುಶುಭೇ ಶನಕೈರ್ಧ್ವನನ್ ।**
**ಸ್ಮರರಹಸ್ಯಮನೂನಿವ ಸಂಜಪನ್**
**ಅಖಿಲದರ್ಪಕದರ್ಪಕಸಾಯಕೇ ॥ ೩೯ ॥**

**ಪರಿಲಸತ್** = ಶೋಭಿಸುವ, **ಸಹಕಾರ** = ಮಾವಿನ, **ನವ** = ಹೊಸದಾದ, **ಅಂಕುರೇ** = ಚಿಗುರಿನಲ್ಲಿ, **ಪಿಕಗಣ** = ಗಿಳಿಗಳ ಸಮೂಹವು, **ಶುಶುಭೇ** = ಶೋಭಿಸಿತು, **ಶನಕೈಃ** = ಮೆಲ್ಲನೆ, **ಧ್ವನನ್** = ಧ್ವನಿಮಾಡುವ, **ಸ್ಮರ** = ಮನ್ಮಥನ, **ರಹಸ್ಯ** = ಗುಟ್ಟಿನ, **ಮನೂನ್** = ಮಂತ್ರಗಳನ್ನು, **ಸಂಜಪನ್ ಇವ** = ಜಪಿಸುವಂತೆ, **ಅಖಿಲ** = ಎಲ್ಲರನ್ನೂ, **ದರ್ಪಕ** = ಮರ್ದಿಸುವ, **ದರ್ಪಕ** = ಮನ್ಮಥನ, **ಸಾಯಕೇ**= ಬಾಣವಾದ.

••••

**ಸಂದೇಶ**

**ಪ್ರಭೋಃ ಕ್ರಿಯೈಕಾಽಪಿ ಉರುಕಾರ್ಯಸಾಧಿಕಾ**

ದೊಡ್ಡವರ ಒಂದು ಕೆಲಸವೂ ಅನೇಕ ಫಲಪ್ರದವು

ಕೋಗಿಲೆಗಳು ಮಾವಿನ ಮರದ ಹೊಸ ಚಿಗುರುಗಳಲ್ಲಿ ಕುಳಿತು ಕೂಗುತ್ತಿವೆ. ಚಿಗುರುಗಳು ಮನ್ಮಥನ ಬಾಣಗಳು. ಮನ್ಮಥನು ಎಲ್ಲ ಕಾಮುಕರನ್ನೂ ಬಡಿದೆಬ್ಬಿಸುವವ. ಈ ಕೋಗಿಲೆಗಳು ಮನ್ಮಥನ ಬಾಣಗಳಲ್ಲಿ ಕುಳಿತು ಕಾಮುಕರನ್ನು ಎಬ್ಬಿಸಲು ಬೇಕಾದ ಮಂತ್ರಗಳನ್ನು ಜಪಿಸುವಂತೆ ತೋರುತ್ತಿತ್ತು. ಕೋಗಿಲೆಯ ಧ್ವನಿ, ಮಾವಿನ ಮರದ ಚಿಗುರು ಇವುಗಳ ದರ್ಶನವಾದರೆ ಕಾಮವು ಉದ್ದೀಪನಗೊಳ್ಳುತ್ತದೆ ಎಂದು ಅಭಿ-ಪ್ರಾಯ.

**ಕುಸುಮಚುಂಬನಕೃನ್ಮಧುರಧ್ವನಿಃ**
**ಪ್ರಿಯಜನಾನಿತಿ ಶಿಕ್ಷತಿ ಷಟ್‌ಪದಃ ।**
**ಮೃದುಗಿರಾಽಬ್ಜಮುಖೀಸರಸಾಧರಂ**
**ಪಿಬತ ಮಾ ಬತ ಮಾನ ಇಹೋಚಿತಃ ॥೪೦॥**

**ಕುಸುಮ** = ಪುಷ್ಪಗಳ, **ಚುಂಬನ** = ಮುದ್ದಿಡುವಿಕೆಯನ್ನು, **ಕೃತ್** = ಮಾಡುವ, **ಮಧುರ** = ಇಂಪಾದ, **ಧ್ವನಿಃ** = ಧ್ವನಿಯುಳ್ಳ, **ಪ್ರಿಯಜನಾನ್** = ಇಷ್ಟಜನರನ್ನು, **ಇತಿ** = ಈ ರೀತಿಯಾಗಿ, **ಶಿಕ್ಷತಿ** = ಉಪದೇಶಿಸುತ್ತದೆ, **ಷಟ್ಪದಃ** = ಭ್ರಮರವು, **ಮೃದು** = ಮೆತ್ತಗಿನ, **ಗಿರಾ** = ಮಾತಿನಿಂದ, **ಅಬ್ಜಮುಖೀ** = ಕಮಲಮುಖಿಯ, **ಸರಸ** = ರಸದಿಂದ ಕೂಡಿದ, **ಅಧರಂ** = ತುಟಿಯನ್ನು, **ಪಿಬತ** = ಕುಡಿಯಿರಿ, **ಬತ** = ಆಶ್ಚರ್ಯ, **ಮಾನಃ** = ಗರ್ವವು, **ಇಹ** = ಇಲ್ಲಿ, **ಮಾ ಉಚಿತಃ** = ಯೋಗ್ಯವಲ್ಲ.

ಭ್ರಮರಗಳು ಪುಷ್ಪಗಳಲ್ಲಿ ಕುಳಿತು ಮಧುರವಾಗಿ ಶಬ್ದ ಮಾಡುತ್ತಿವೆ. ಇದನ್ನು ನೋಡಿದಾಗ ಭ್ರಮರಗಳು ಕಾಮುಕರನ್ನು ಕುರಿತು ಈ ರೀತಿ ಹೇಳುವಂತೆ ತೋರುತ್ತಿದೆ – ಎಲೈ ಕಾಮುಕರೇ, ನೀವು ದುರಭಿಮಾನದಿಂದ ಬೀಗಬೇಡಿರಿ. ಯೋಗ್ಯವಾದ ಭೋಗ ವಿಷಯದಲ್ಲಿ ಅಂಜಬೇಡಿರಿ. ನೀವೂ ಕೂಡಾ ನನ್ನಂತೆಯೇ ಪತ್ನಿಯ ತುಟಿಯ ರಸವನ್ನು ಒಳ್ಳೆಯ ಮಾತಿನಿಂದ ಕುಡಿಯಿರಿ ಎಂದು ಹೇಳುವಂತೆ ಇದೆ.

ಈ ಭ್ರಮರಗಳು ಪುಷ್ಪಗಳಲ್ಲಿ ಕುಳಿತಿದ್ದರಿಂದ ಹಾಗೆಯೇ ರಸವನ್ನು ಹೀರುವುದರಿಂದ ಕಾಂತೆಯ ತುಟಿಯ ರಸವನ್ನು ಪಾನ ಮಾಡಬೇಕು ಎಂದೂ, ಧ್ವನಿ ಮಾಡುವುದರಿಂದ ಒಳ್ಳೆಯ ಮಾತುಗಳಿಂದ ಆಕೆಯನ್ನು ಒಲಿಸಿಕೊಳ್ಳಬೇಕೆಂದೂ ತಿಳಿಯುತ್ತದೆ.

ಶಾಸ್ತ್ರವಿಹಿತವಾದ ಸುಖವನ್ನು ತ್ಯಜಿಸುವವನು ಪಶುಸಮಾನನು ಎಂಬ ಮಾತು ಇಲ್ಲಿ ಪ್ರಕಟವಾಗುತ್ತದೆ.

**ಮರುತಿ ವಾತಿ ಶುಚಾ ಪಥಿಕಾಂಗನಾ**
**ನಯನವಾರಿ ಯುಯೋಜ ಪಥಿ ಸ್ಪೃಶನ್ ।**
**ಅಮುಮವೈತು ಪತಿರ್ಮಮ ವೇದನಾ**
**ಮಲಿಕುಲಾಲಿಕುಲಾಭ್ಯುದಿತಾಮಿತಿ ॥ ೪೧ ॥**

**ಮರುತಿ** = ಗಾಳಿಯು, **ವಾತಿ** = ಬೀಸುತ್ತಿರಲು, **ಶುಚಾ** = ದುಃಖದಿಂದ, **ಪಥಿಕ** = ಪ್ರವಾಸಿಗನ, **ಅಂಗನಾ** = ಪತ್ನಿಯು, **ನಯನವಾರಿ** = ಕಣ್ಣೀರನ್ನು, **ಯುಯೋಜ** = ಸೇರಿಸಿದಳು, **ಪಥಿ** = ದಾರಿಯಲ್ಲಿ, **ಸ್ಪೃಶನ್** = ಮುಟ್ಟುತ್ತಾ, **ಅಮುಂ** = ಈ ಗಾಳಿಯನ್ನು, **ಅವೈತು** = ತಿಳಿಯಲಿ, **ಪತಿಃ** = ಪತಿಯು, **ಮಮ** = ನನ್ನ, **ವೇದನಾಂ** = ದುಃಖವನ್ನು, **ಅಲಿ** = ಭ್ರಮರಗಳ, **ಕುಲಾನಿ** = ಸಮೂಹಗಳೆಂಬ, **ಅಲಿ** = ಗೆಳತಿಯರ, **ಕುಲ** = ಸಮೂಹದಿಂದ, **ಅಭ್ಯುದಿತಾಂ** = ತಿಳಿಸಲ್ಪಡುವ, **ಇತಿ**= ಈ ರೀತಿಯಾಗಿ.

ಒಬ್ಬಳ ಪತಿಯು ಪರ ಊರಿಗೆ ಹೋಗಿದ್ದಾನೆ. ಈಕೆಗೆ ಆತನ ವಿರಹವನ್ನು ಸಹಿಸಲು

ಆಗುತ್ತಿಲ್ಲ. ತನ್ನ ದುಃಖವನ್ನು ಆತನಿಗೆ ತಿಳಿಸಬೇಕಾಗಿದೆ. ಆ ಸಮಯದಲ್ಲಿ ಗಾಳಿಯು ಮಂದವಾಗಿ ಬೀಸುತ್ತಿದೆ. ಭ್ರಮರಗಳು ಗಾಳಿಯನ್ನು ಅನುಸರಿಸಿ ಹೋಗುತ್ತಿವೆ. ಈಕೆ ಒಂದು ಉಪಾಯವನ್ನು ಮಾಡಿದಳು. ತನ್ನ ಕಣ್ಣೀರನ್ನು ಗಾಳಿಯಲ್ಲಿ ಇಟ್ಟಳು. ಈ ಗಾಳಿ ಪತಿಯಿದ್ದಲ್ಲಿಗೆ ಹೋಗುತ್ತದೆ. ಗಾಳಿ ಸದಾ ಗತಿ(ಗಮನ) ಉಳ್ಳದ್ದು ತಾನೇ? ಗಾಳಿ ಯಾಕೆ ಒದ್ದೆಯಾಗಿದೆ ಎಂದು ಆಲೋಚನೆ ಮಾಡುತ್ತಾನೆ. ಆಗ ಈ ಭ್ರಮಗಳು ವಿಷಯವನ್ನು ತಿಳಿಸುತ್ತವೆ. ದುಂಬಿಗಳು ಈಕೆಯ ಗೆಳತಿಯರು.

ಲೋಕದಲ್ಲಿಯೂ ಇದು ಸಹಜ. ಪತಿಯ ವಿರಹ ಸಹಿಸಲಾರದ ಹೆಣ್ಣು ತನ್ನ ದುಃಖವನ್ನು ಒಂದು ಪತ್ರದಲ್ಲಿ ಬರೆದು ಅದನ್ನು ಗೆಳತಿಯ ಮೂಲಕ ಪತಿಗೆ ತಲುಪಿಸುವುದು.

ಪ್ರಕೃತಿಸಹಜವಾದ ವಸ್ತುಗಳನ್ನು, ಅವುಗಳ ಕ್ರಿಯೆಗಳನ್ನು ಇಟ್ಟುಕೊಂಡು ರಾಜರು ಬಹಳ ಚಮತ್ಕಾರವಾಗಿ ವರ್ಣಿಸಿರುವುದು ಅವರ ಚತುರಾನನತ್ವಕ್ಕೆ ಸಾಕ್ಷಿ.

ಮಧುನಿಯುಕ್ತಭುಜಂಗಚಯಃ ಸ್ತನೇ
ರಹಸಿ ನೂತ್ನಶಿವಂ ರಚಯನ್ನಿವ ।
ನಖಪದೇಂದುಕಲಾಂ ವಸನಚ್ಯುತಿಂ
ವಿತನುತೇಽತನುತೇಜಸಿ ಯೋಷಿತಾಮ್ ॥ ೪೨ ॥

**ಮಧು**= ವಸಂತಮಾಸದಿಂದ, **ನಿಯುಕ್ತ** = ಹೇಳಲ್ಪಟ್ಟ, **ಭುಜಂಗ** = ಸರ್ಪಗಳ, ವಿಟಪುರುಷರ, **ಚಯಃ** = ಸಮೂಹವು, **ಸ್ತನೇ** = ಸ್ತನದಲ್ಲಿ, **ರಹಸಿ** = ಗುಟ್ಟಾಗಿ, **ನೂತ್ನ ಶಿವಂ** = ಹೊಸ ಶಿವನನ್ನು, **ರಚಯನ್ ಇವ** = ಮಾಡುವಂತೆ, **ನಖ** = ಉಗುರಿನ, **ಪದ** = ಚಿಹ್ನೆ ಎಂಬ, **ಇಂದು** = ಚಂದ್ರನ, **ಕಲಾಂ** = ಕಲೆಯನ್ನು, **ವಸನ** = ವಸ್ತ್ರದ, **ಚ್ಯುತಿಂ** = ತೆಗೆಯು- ವಿಕೆಯನ್ನು, **ವಿತನುತೇ** = ಮಾಡುತ್ತದೆ, **ಅತನು** = ಬಹಳ, **ತೇಜಸಿ** = ಕಾಂತಿಯುಳ್ಳ, **ಯೋಷಿತಾಮ್** = ಸ್ತ್ರೀಯರ.

ವಸಂತ ಋತುವಿನ ಮಿತ್ರ ಮನ್ಮಥ. ಆತನನ್ನು ದಹಿಸಿದವನು ರುದ್ರ. ಈ ಸಿಟ್ಟಿನಿಂದ ವಸಂತಮಾಸವು ತಾನು ಭುಜಂಗಗಳ ಸಮೂಹವನ್ನು ಉಪಯೋಗಿಸಿಕೊಂಡು ಇನ್ನೊಂದು ಶಿವನನ್ನು ರಚಿಸಲು ಹೊರಟಿವೆ ಎಂಬಂತಿದೆ ದಂಪತಿಗಳ ರತಿಕ್ರೀಡೆಯು ಎಂದು ಈ ಶ್ಲೋಕದಲ್ಲಿ ವರ್ಣಿಸುತ್ತಾರೆ.

ಭಜಂಗಚಯ ಎಂದರೆ ಕಾಮುಕರ ಸಮೂಹ ಹಾಗೂ ಸರ್ಪಗಳ ಗುಂಪು ಎಂಬ ಅರ್ಥ ಇದೆ. ಈ ಕಾಮುಕರು ವಸಂತ ಋತುವಿನಿಂದಾಗಿ ಉದ್ರಿಕ್ತರಾಗುತ್ತಾರೆ. ಏಕಾಂತದಲ್ಲಿ ಪತ್ನಿಯ ಸ್ತನಗಳಿಗೆ ಕೈಯಿಕ್ಕುತ್ತಾರೆ. ಆಗ ಕೈಯ ಚಂದ್ರಾಕಾರದ ಉಗುರಿನಿಂದ ಸ್ತನದಲ್ಲಿ

ಚಂದ್ರಾಕಾರದ ಗಾಯ ಆಗುತ್ತದೆ. ಇದೇ ಚಂದ್ರ. ವಸ್ತ್ರವನ್ನೂ ಸರಿಸುತ್ತಾರೆ. ಇದು ದಿಗಂಬರತ್ವಕ್ಕೆ ಕಾರಣ. ರುದ್ರನು ಕೂಡಾ ಚಂದ್ರಚೂಡ, ಹಾಗೂ ದಿಗಂಬರ. ಸರ್ಪಗಳು ರುದ್ರನ ಆಭರಣಗಳು. ಆದ್ದರಿಂದ ಅವುಗಳಿಗೆ ತಿಳಿದಿದೆ ರುದ್ರನನ್ನು ಹೇಗೆ ತಯಾರು ಮಾಡಬೇಕೆಂದು. ಅದಕ್ಕಾಗಿ ರಾಜರು ಕಾಮುಕರು ಎಂಬ ಪದದ ಬದಲು ಭುಜಂಗ ಸಮೂಹ ಎಂಬ ಪದ ಬಳಸಿದ್ದಾರೆ. ಕಾಮಕ್ರೀಡೆ ಏಕಾಂತದಲ್ಲಿ ನಡೆಯುವುದು. ಇನ್ನೊಬ್ಬ ರುದ್ರನನ್ನು ತಯಾರು ಮಾಡುವುದೂ ಏಕಾಂತದಲ್ಲೇ. ಯಾಕೆಂದರೆ, ಈ ಕೆಲಸಕ್ಕೆ ಶಾಸ್ತ್ರದ ಕಾನೂನಿನ ತಡೆ ಇದೆ. ಈ ರುದ್ರನ ಸ್ಥಾನ ಎತ್ತರವಾದ ಸ್ತನ. ಯಾಕೆಂದರೆ ಕಾಮಹರ ರುದ್ರನ ಸ್ಥಾನ ಎತ್ತರವಾದ ಕೈಲಾಸವಾದ್ದರಿಂದ. ಈ ರೀತಿ ಅನೇಕ ರೀತಿಯಲ್ಲಿ ಪ್ರತಿ-ರುದ್ರನಿಗೆ ಆ ರುದ್ರನಿಂದ ಸಾಮ್ಯವಿದೆ. ರತಿಕ್ರೀಡೆಯಲ್ಲಿ ನಡೆಯುವ ಸಹಜವಾದ ಪ್ರಕ್ರಿಯೆಗಳಿಂದ ರಾಜರು ಈ ರತಿಕ್ರೀಡೆಯನ್ನು ವೈರಾಗ್ಯಪತಿಯ ಬಳಿಗೆ ಒಯ್ಯುತ್ತಿದ್ದಾರೆ.

**ಮೃಗಮದೇನ ಸಿತೇತರಕಂಠತಾಂ**
**ಕರಯುಗಾಂಬುಜವೇಷ್ಟಿತಮೂರ್ಧತಾಮ್ ।**
**ಹೃದಯಮಂದಿರತಾಂ ಸಮದೃಶ್ಯತಾಂ**
**ರುಚಿರತಾಂ ಚಿರತಾಂತಮುಖೈಃ ಸ್ವಕೈಃ ॥ ೪೩ ॥**

**ಮೃಗಮದೇನ** = ಕಸ್ತೂರಿಯಿಂದ, **ಸಿತೇತರ** = ನೀಲವಾದ, **ಕಂಠತಾಂ** = ಕುತ್ತಿಗೆ-ಯನ್ನೂ, **ಕರ** = ಕೈಗಳ, **ಯುಗ** = ಎರಡೆಂಬ, **ಅಂಬುಜ** = ತಾವರೆಯಿಂದ, **ವೇಷ್ಟಿತ** = ಆವೃತವಾದ, **ಮೂರ್ಧತಾಂ** = ತಲೆಯನ್ನು, **ಹೃದಯ** = ಎದೆಯೆಂಬ, **ಮಂದಿರತಾಂ** = ಮನೆ ಇರುವಿಕೆಯನ್ನು, **ಸಮ್** = ಚೆನ್ನಾಗಿ, **ಅದೃಶ್ಯತಾಂ** = ಕಾಣದಿರುವಿಕೆಯನ್ನು, **ರುಚಿರತಾಂ** = ಮನೋಹರತ್ವವನ್ನು, **ಚಿರ** = ಬಹಳ ಕಾಲದ ರತಿಯಿಂದ, **ತಾಂತ** = ಬಳಲಿದ, **ಮುಖೈಃ** = ಮುಖವುಳ್ಳ, **ಸ್ವಕೈಃ**= ತನ್ನವರ.

ಇಲ್ಲಿಯೂ ಶಿವನ ಸಾಮ್ಯವು ವರ್ಣಿತವಾಗಿದೆ. ಸ್ತನಗಳನ್ನು ಕಸ್ತೂರಿಯಿಂದ ಅಲಂಕರಿಸಿದ್ದಾರೆ. ಇದು ಶಿವನ ಕಪ್ಪಾದ ಕಂಠವನ್ನು ಹೋಲುತ್ತದೆ. ಕಾಮುಕರು ತಮ್ಮ ಕರ-ಕಮಲಗಳಿಂದ ಕುಚಗಳನ್ನು ಹಿಡಿದಿದ್ದಾರೆ. ಇದರಿಂದ ಕಮಲಪುಷ್ಪಗಳಿಂದ ಅಲಂಕೃತವಾದ ಶಿರಸ್ಸಿನಂತೆ ತೋರುತ್ತದೆ. ಶಿವನನ್ನು ಅರ್ಚಕರು ಪುಷ್ಪಗಳಿಂದ ಅರ್ಚಿಸುತ್ತಾರೆ. ಕುಚಗ್ರಹಣ ಎಂಬುದು ರತಿಕ್ರೀಡೆಯ ಮೊದಲ ಹಂತ. ಕಾಮುಕರ ಹೃದಯದಲ್ಲಿ ಈ ಸ್ತನಗಳು ಇರುತ್ತವೆ. ಅಂದರೆ ಈ ಸ್ತ್ರೀಯರನ್ನು ಆಲಂಗಿಸುತ್ತಾರೆ ಎಂದರ್ಥ. ಇದು ಎರಡನೆಯ ಹಂತ. ಕಾಮುಕರು ಆಲಿಂಗಿಸುವಾಗ ಈ ಸ್ತನಗಳು ಕಾಣಿಸುವುದಿಲ್ಲ. ಶಿವನೂ ಅಯೋಗ್ಯ-ರಿಗೆ ಕಾಣಿಸದೆ ಇರುವವನು. ಕೊನೆಗೆ ಬಳಲಿದ ಪುರುಷರು ತಮ್ಮ ತಲೆಗಳನ್ನು ಇವರ

ಸ್ತನಗಳಲ್ಲಿ ಇಟ್ಟು ವಿಶ್ರಾಂತಿ ಪಡೆಯುತ್ತಾರೆ. ಇದು ರತಿಕ್ರೀಡೆಯ ಕೊನೆಯ ಹಂತ. ಇದರಿಂದ ಸ್ತ್ರೀಯರು ಅಲಂಕೃತರಾದಂತೆ. ಶಿವನೂ ತನ್ನವುಗಳಾದ ಸರ್ಪಗಳ ತಲೆಗಳಿಂದ ಅಲಂಕೃತನಾಗುತ್ತಾನೆ. ಈ ರೀತಿ ರಾಜರು ನಿರ್ಮಾಣ ಮಾಡಿದ ಶಿವನು ಆ ಶಿವನಿಗೆ ಸಮಾನನು. ಶಿವನ ತಂದೆ ಚತುರಾನನ. ಈ ಶಿವನ ತಂದೆ ಭಾವಿ ಚತುರಾನನ.

**ಮದನವಹ್ನಿಸಖಃ ಪ್ರಿಯಶೀತಲಃ**
**ಕುಸುಮಗಂಧವಹಃ ಕಿಲ ಸೇವ್ಯತೇ ।**
**ಮರುದುಪಾರತಮನ್ಮಥಸಂಗರೈಃ**
**ಸ ಪರಿತಃ ಪರಿತಪ್ತಮುಖೈರ್ನರೈಃ ॥ ೪೪ ॥**

**ಮದನ** = ಕಾಮನೆಂಬ, **ವಹ್ನಿ** = ಬೆಂಕಿಯ, **ಸಖಃ** = ಗೆಳೆಯನಾದ, **ಪ್ರಿಯಶೀತಲಃ** = ಯೋಗ್ಯವಾಗಿ ತಂಪಾದ, **ಕುಸುಮ** = ಪುಷ್ಪಗಳ, **ಗಂಧ** = ಪರಿಮಳವನ್ನು, **ವಹಃ** = ಹೊತ್ತಿರುವ, **ಸೇವ್ಯತೇ ಕಿಲ** = ಸೇವಿಸಲ್ಪಡುತ್ತಾನೆ, **ಮರುತ್** = ಗಾಳಿಯು, **ಉಪಾರತ** = ಮುಗಿಸಿದ, **ಮನ್ಮಥ** = ಮನ್ಮಥನ, **ಸಂಗರೈಃ** = ಯುದ್ಧವುಳ್ಳ, **ಸಃ** = ಆ, **ಪರಿತಃ** = ಸುತ್ತಲೂ, **ಪರಿತಪ್ತ** = ಸುಸ್ತಾದ, **ಮುಖೈಃ** = ಮುಖವುಳ್ಳ, **ನರೈಃ** = ಜನರಿಂದ.

ಈ ರೀತಿ ಕಾಮಕೇಳಿಯನ್ನು ಮುಗಿಸಿದ ಪುರುಷರು ಬಹಳ ಬಳಲಿದ್ದಾರೆ. ಇಂತಹವರು ಗಾಳಿಯನ್ನು ಸೇವಿಸುತ್ತಿದ್ದಾರೆ. ಈ ಗಾಳಿಯು ಕಾಮಾಗ್ನಿಯನ್ನು ಉದ್ದೀಪನಗೊಳಿಸುವ ಮೂಲಕ ಕಾಮಾಗ್ನಿಯ ಮಿತ್ರನು. ತಣ್ಣಗಿದೆ. ಪುಷ್ಪಗಳ ಪರಿಮಳವನ್ನು ಹೊತ್ತುಕೊಂಡು ನಿಧಾನವಾಗಿ ಬೀಸುತ್ತಿದೆ. ಈ ಎಲ್ಲಾ ಧರ್ಮಗಳಿಂದ ಕೂಡಿದ ಗಾಳಿಯು ಇನ್ನಷ್ಟು ರತಿಕ್ರೀಡೆ ಎಂಬ ಯುದ್ಧಕ್ಕೆ ಸಹಾಯಕವು. ಇಂತಹ ಗಾಳಿಯನ್ನು ಸೇವಿಸಿದರೆ ಪುನಃ ಯುದ್ಧವಾಗಿ ಬಳಲುವುದೇ ಜಾಸ್ತಿ. ಆದರೂ ಸೇವಿಸುತ್ತಾರೆ.

**ದಾಕ್ಷಿಣ್ಯಂ ಪ್ರಕಟೀಕರೋತಿ ಮರುತಾ ರಾಗಂ ಪ್ರವಾಲೈಃ ಪಿಕೈಃ**
**ಮಾಧುರ್ಯಂ ಪ್ರಿಯಭಾಷಣಂ ಶುಕಚಯೈರ್ಗೀತಾನಿ ಭೃಂಗೈರ್ಮಧುಃ ।**
**ಸ್ನಾನಂ ಸನ್ಮಧುನಾಽರ್ಚನಂ ಚ ಕುಸುಮೈಶ್ಛತ್ರಂ ತರುಚ್ಛಾಯಯಾ**
**ಸ್ವಾಧೀಶಂ ಜನಯಿಷ್ಯತೋಽಸ್ಯ ಹೃದಯಂ ವ್ಯಗ್ರಂ ವಿಧಾಸ್ಯನ್ನಿವ ॥ ೪೫ ॥**

**ದಾಕ್ಷಿಣ್ಯಂ** = ಸರಲತ್ವವನ್ನು, **ಪ್ರಕಟೀಕರೋತಿ** = ತಿಳಿಸುತ್ತದೆ, **ಮರುತಾ** = ಗಾಳಿಯಿಂದ, **ರಾಗಂ** = ಅನುರಾಗವನ್ನು, **ಪ್ರವಾಲೈಃ** = ಹವಳಗಳಿಂದ, **ಪಿಕೈಃ** = ಕೋಗಿಲೆಗಳಿಂದ, **ಮಾಧುರ್ಯಂ** = ಇಂಪನ್ನು, **ಪ್ರಿಯಭಾಷಣಂ** = ಇಷ್ಟವಾದ ಮಾತನ್ನು, **ಶುಕಚಯೈಃ** = ಗಿಳಿಗಳ ಸಮೂಹದಿಂದ, **ಗೀತಾನಿ** = ಹಾಡುಗಳನ್ನು, **ಭೃಂಗೈಃ** =

ಭ್ರಮರಗಳಿಂದ, **ಮಧುಃ** = ವಸಂತವು, **ಸ್ನಾನಂ** = ಸ್ನಾನವನ್ನು, **ಸನ್** = ಒಳ್ಳೆಯ, **ಮಧುನಾ** = ಜೇನಿನಿಂದ, **ಅರ್ಚನಂ ಚ** = ಪೂಜೆಯನ್ನು, **ಕುಸುಮೈಃ** = ಹೂಗಳಿಂದ, **ಛತ್ರಂ** = ಕೊಡೆಯನ್ನು, **ತರು** = ಮರಗಳ, **ಛಾಯಯಾ** = ನೆರಳಿನಿಂದ, **ಸ್ವಾಧೀಶಂ** = ತನ್ನ ಒಡೆಯನಾದ ಕಾಮನನ್ನು, **ಜನಯಿಷ್ಯತಃ** = ಮುಂದೆ ಸೃಷ್ಟಿಸುವ, **ಅಸ್ಯ** = ಕೃಷ್ಣನ, **ಹೃದಯಂ** = ಮನಸ್ಸನ್ನು, **ವ್ಯಗ್ರಂ** = ಕದಡಿದ್ದನ್ನಾಗಿ, **ವಿಧಾಸ್ಯನ್ ಇವ**= ಮಾಡುವವನಂತೆ.

ವಸಂತ ಋತುವಿನ ಅಧಿಪತಿ ಕಾಮ. ಈತನ ಇನ್ನೊಂದು ಅವತಾರ ಪ್ರದ್ಯುಮ್ನ. ಪ್ರದ್ಯುಮ್ನನ ಜನಕ ಕೃಷ್ಣ. ಈ ಪ್ರದ್ಯುಮ್ನನನ್ನು ಇನ್ನು ಮೇಲೆ ರುಗ್ಮಿಣಿಯಲ್ಲಿ ಹುಟ್ಟಿಸಬೇಕಾಗಿದೆ. ಅದಕ್ಕಾಗಿ ಕೃಷ್ಣನ ಮನಸ್ಸನ್ನು ವ್ಯಗ್ರವನ್ನಾಗಿ ಮಾಡಿ, ಆದಷ್ಟು ಬೇಗ ರುಗ್ಮಿಣಿಯಲ್ಲಿ ಪ್ರದ್ಯುಮ್ನನನ್ನು ಪಡೆದರೆ ತನಗೊಬ್ಬ ನಾಯಕ ಲಭಿಸುತ್ತಾನೆ ಎಂದು ಈ ವಸಂತವು ನಾನಾ ರೀತಿಯಲ್ಲಿ ಕೃಷ್ಣನ ಸೇವೆ ಮಾಡುತ್ತಿದೆ ಎಂದು ರಾಜರು ತಿಳಿಸುತ್ತಾರೆ. ವಸಂತದ ಗಾಳಿಯು ಕೃಷ್ಣನನ್ನು ಅನುಸರಿಸುತ್ತದೆ. ಹೇಗೆಂದರೆ ಜೋರಾಗಿ ಅಲ್ಲ. ಬಹಳ ನಿಧಾನವಾಗಿ ತುಂಬಾ ದಾಕ್ಷಿಣ್ಯದಿಂದ. ದಕ್ಷಿಣದಲ್ಲಿರುವ ಮಲಯಪರ್ವತದ ಗಾಳಿ ಇದು. ದಕ್ಷಿಣ ಸಂಬಂಧಿಯಾದ್ದರಿಂದ ದಾಕ್ಷಿಣ್ಯ. ಚಿಗುರುಗಳಿಂದ ಅನುರಾಗವನ್ನೂ, ಕೋಗಿಲೆಗಳಿಂದ ಮಾಧುರ್ಯವನ್ನೂ, ಗಿಳಿಗಳಿಂದ ಒಳ್ಳೆಯ ಮಾತುಗಳನ್ನೂ, ಭ್ರಮರಗಳಿಂದ ಹಾಡುಗಳನ್ನೂ, ಜೇನಿನಿಂದ ಸ್ನಾನವನ್ನೂ, ಪುಷ್ಪಗಳಿಂದ ಅರ್ಚನೆಯನ್ನೂ, ಮರಗಳ ನೆರಳಿನಿಂದ ಕೊಡೆಯನ್ನೂ ಕೃಷ್ಣನಿಗೆ ವಸಂತಮಾಸವು ಅರ್ಪಿಸುತ್ತಿದೆ. ಇವುಗಳೆಲ್ಲಾ ವಸಂತ ಮಾಸದ ಸಹಜಧರ್ಮಗಳು. ಒಬ್ಬ ವ್ಯಕ್ತಿ ತನ್ನ ಕೆಲಸ ಆಗಬೇಕಾದರೆ ಏನು ಬೇಕಾದರೂ ಮಾಡುತ್ತಾನೆ ಎಂದು ಇಲ್ಲಿಯ ಅಭಿಪ್ರಾಯ.

**ವಸಂತಕಾಲೇ ವನಿತಾಸಹಾಯಂ**
**ಲಷಂತಿ ಮರ್ತ್ಯಾ ಇತಿ ಕಿಂ ವಿಚಿತ್ರಮ್ ।**
**ಯತಃ ಸರಾಗಾಃ ತರವೋಽಪಿ ತನ್ವೀಃ**
**ಲತಾ ನ ವಾತಾಚಲಿತಾಃ ತ್ಯಜಂತಿ ॥೪೬॥**

**ವಸಂತಕಾಲೇ** = ವಸಂತಕಾಲದಲ್ಲಿ, **ವನಿತಾ** = ಸ್ತ್ರೀಯರ, **ಸಹಾಯಂ** = ಸಹಾಯವನ್ನು, **ಲಷಂತಿ** = ಆಶಿಸುತ್ತಾರೆ, **ಮರ್ತ್ಯಾಃ** = ಮಾನವರು, **ಇತಿ** = ಎಂದು, **ಕಿಂ** = ಏನು, **ವಿಚಿತ್ರಮ್** = ಆಶ್ಚರ್ಯವು, **ಯತಃ** = ಯಾವ ಕಾರಣದಿಂದ, **ಸರಾಗಾಃ** = ರಾಗದಿಂದ ಕೂಡಿದ, **ತರವಃ** = ಮರಗಳು, **ಅಪಿ** = ಕೂಡಾ, **ತನ್ವೀಃ** = ಕೃಶಗಳಾದ, **ಲತಾಃ** = ಬಳ್ಳಿಗಳನ್ನು, **ವಾತ** = ಗಾಳಿಯಿಂದ, **ಅಚಲಿತಾಃ** = ಅಲುಗಾಡಿದ, **ನ ತ್ಯಜಂತಿ** = ಬಿಡುವುದಿಲ್ಲ.

ವಸಂತ ಋತುವಿನಲ್ಲಿ ಜನರು ಸ್ತ್ರೀಯರ ಜೊತೆಗೆ ಇರುವುದನ್ನು ಬಯಸುತ್ತಾರೆ ಎಂಬುದು ಆಶ್ಚರ್ಯವಲ್ಲ. ಏಕೆಂದರೆ ಮರಗಳೇ ಬಳ್ಳಿಗಳಿಂದ ಚೆನ್ನಾಗಿ ತಬ್ಬಲ್ಪಟ್ಟಿರುತ್ತವೆ. ಈ ಮರಗಳು ಕಿಸಲಯಗಳಿಂದಾಗಿ ರಾಗಿಗಳಾಗಿವೆ. ರಾಗ ಎಂದರೆ ಕೆಂಪು. ಮರಗಳು ಚಿಗುರೆಲೆಗಳಿಂದ ಕೆಂಪಾಗಿ ಕಾಣುತ್ತವೆ. ಹಾಗೆಯೇ ಅನುರಾಗ. ಗಾಳಿಯಿಂದಾಗಿ ಮರಗಳು ಅತ್ತಿತ್ತ ಅಲುಗುತ್ತಿರುತ್ತಿರುತ್ತವೆ. ಈ ರೀತಿ ಸ್ಥಾವರಗಳೇ ಇರುವಾಗ ಜಂಗಮರ ಪಾಡೇನು? ಎಂದು ಅಭಿಪ್ರಾಯ.

**ಅಧರಪಾಣಿಪದೂರ್ಜಿತಪಲ್ಲವೋ**
**ಮಧುರವೇಣುರವಃ ಕಲಭಾಷಣಃ ।**
**ವದನಗಂಧವಹಶ್ವಸನೋಽಜಯತ್**
**ಸಕುಸುಮಃ ಕುಸುಮಾಕರಮಚ್ಯುತಃ ॥೪೭॥**

**ಅಧರ** = ತುಟಿಯು, **ಪಾಣಿ** = ಕೈಯು, **ಪತ್** = ಕಾಲುಗಳೆಂಬ, **ಊರ್ಜಿತ** = ಶ್ರೇಷ್ಠವಾದ, **ಪಲ್ಲವಃ** = ಕಿಲಸಯವುಳ್ಳ, **ಮಧುರ** = ಇಂಪಾದ, **ವೇಣು** = ಕೊಳಲಿನ, **ರವಃ** = ಧ್ವನಿಯುಳ್ಳ, **ಕಲ** = ಅಸ್ಪಷ್ಟವಾದ, **ಭಾಷಣಃ** = ಮಾತುಳ್ಳ, **ವದನ** = ಬಾಯಿಯ, **ಗಂಧವಹ** = ಗಾಳಿ ಎಂಬ, **ಶ್ವಸನಃ** = ಮಂದಮಾರುತವುಳ್ಳ, **ಅಜಯತ್** = ಗೆದ್ದನು, **ಸಕುಸುಮಃ** = ಹೂಗಳಿಂದ ಕೂಡಿದ, **ಕುಸುಮಾಕರಂ** = ಕಾಮನನ್ನು, **ಅಚ್ಯುತಃ**= ಕೃಷ್ಣನು.

ವಸಂತದ ಎಲ್ಲಾ ಧರ್ಮಗಳೂ ಕೃಷ್ಣನಲ್ಲಿವೆ. ವಸಂತದಲ್ಲಿ ಕೆಂಪಾದ ಚಿಗುರುಗಳಿಂದ ಕೂಡಿದ ಮರಗಳಿವೆ. ಕೃಷ್ಣನಲ್ಲಿಯೂ ಕೆಂಪಾದ ತುಟಿ, ಹಸ್ತತಲ, ಪಾದತಲಗಳಿವೆ. ವಸಂತದಲ್ಲಿ ಕೋಗಿಲೆಯ ಇಂಪಾದ ಧ್ವನಿ. ಕೃಷ್ಣನಲ್ಲಿ ಕೊಳಲ ಧ್ವನಿ. ವಸಂತದಲ್ಲಿ ಗಿಳಿಗಳ ಒಳ್ಳೆಯ ಮಾತು. ಕೃಷ್ಣನಲ್ಲಿಯೂ ಮಧುರವಾದ ಮಾತು. ವಸಂತದಲ್ಲಿ ಪರಿಮಳಿತವಾದ ಗಾಳಿ, ಕೃಷ್ಣನ ಬಾಯಿಯಿಂದ ಪರಿಮಳಯುಕ್ತವಾದ ಗಾಳಿಯು ಬರುತ್ತಿದೆ. ವಸಂತ ಮಾಸದಲ್ಲಿ ಪುಷ್ಪಗಳು ಅರಳುತ್ತವೆ. ಕೃಷ್ಣನೂ ಪುಷ್ಪಗಳಿಂದ ಕೂಡಿದವನು. ಹೀಗಿದ್ದರೂ ಕೃಷ್ಣನೇ ಗೆದ್ದವನು. ವಸಂತವು ಸೋತಿದೆ. ಯಾಕೆಂದರೆ ವಸಂತವು ಎರಡು ತಿಂಗಳು ಮಾತ್ರ ಈ ರೀತಿ ಇರುವುದು. ಕೃಷ್ಣನು ೧೨ ತಿಂಗಳೂ ಈ ರೀತಿ ಇರುತ್ತಾನೆ.

**ವಿತತಪಲ್ಲವಫುಲ್ಲವನೇ ಕ್ವಚಿತ್**
**ತರುತಟೇ ವಸತೋಽಸ್ಯ ಪದಾಂಬುಜಮ್ ।**

ಉಪಚಚಾರ ವರಾನುಗಮಂಡಲೀ-
ಭುಜಗತೋ ಜಗತೋऽಭಯಸಿದ್ಧಯೇ ॥ ೪೮ ॥

**ವಿತತ** = ವಿಸ್ತೃತವಾದ, **ಪಲ್ಲವ** = ಚಿಗುರುಗಳುಳ್ಳ, **ಫುಲ್ಲ** = ಅರಳಿದ, **ವನೇ** = ಕಾಡಲ್ಲಿ, **ಕ್ವಚಿತ್** = ಒಂದು ಕಡೆ, **ತರು** = ಮರದ, **ತಟೀ** = ಬುಡದಲ್ಲಿ, **ವಸತಃ** = ಇರುವ, **ಅಸ್ಯ** = ಕೃಷ್ಣನ, **ಪದಾಂಬುಜಂ** = ಪಾದಕಮಲವನ್ನು, **ಉಪಚಚಾರ** = ಉಪಚರಿಸಿತು, **ವರ** = ಶ್ರೇಷ್ಠವಾದ, **ಅನುಗ** = ಸೇವಕರ, **ಮಂಡಲೀ** = ಸಮೂಹವು, **ಭುಜಗತಃ** = ಸರ್ಪದಿಂದ, **ಜಗತಃ** = ಲೋಕಕ್ಕೆ, **ಅಭಯಸಿದ್ಧಯೇ** = ಅಭಯದ ಲಾಭಕ್ಕೋಸ್ಕರ.

ವನಗಳಲ್ಲಿ ಮರಗಳಲ್ಲಿ ಚಿಗುರುಗಳು ಹುಲುಸಾಗಿ ಬೆಳೆದಿವೆ. ಅಂತಹ ಒಂದು ಮರದ ಬುಡದಲ್ಲಿ ಕೃಷ್ಣನು ಕುಳಿತಿದ್ದನು. ಆಗ ಬಾಲಕರು ಕೃಷ್ಣನ ಪಾದ ಒತ್ತುವ ಮೂಲಕ ಸೇವೆಯನ್ನು ಮಾಡಿದರು. ಮುಂದೆ ಕೃಷ್ಣನು ಕಾಳಿಂಗನನ್ನು ಮರ್ದಿಸಿ ಜಗತ್ತಿಗೆ ಅಭಯವನ್ನು ಕೊಡುವವನಿದ್ದಾನೆ. ಕಾಳಿಂಗನನ್ನು ಕೃಷ್ಣನ ಪಾದವು ಮರ್ದಿಸುವುದು. ಆದ್ದರಿಂದ ಪಾದಗಳಿಗೆ ಪೂಜೆಯು ಉಚಿತವಾಗಿದೆ.

ಫಣಿಫಣಾಂಕಣನರ್ತನಕೌಶಲಾ-
ಭ್ಯಸನಧೀರಿವ ಸರ್ವವಿದಾಂ ವರಃ ।
ಸ ಶಿಖಿತಾಂಡವಮನ್ವಕರೋತ್ಕ್ವಚಿತ್
ಧೃತಶಿಖಂಡಶಿಖಂಡಸುಮಂಡಿತಃ ॥೪೯॥

**ಫಣಿ** = ಸರ್ಪದ, **ಫಣ** = ಹೆಡೆಗಳೆಂಬ, **ಅಂಕಣ** = ಅಂಗಳದಲ್ಲಿ, **ನರ್ತಕ** = ನೃತ್ಯದ, **ಕೌಶಲ** = ಪ್ರಾವೀಣ್ಯದ, **ಅಭ್ಯಸನ** = ಅಭ್ಯಾಸದಲ್ಲಿ, **ಧೀರಿವ** = ಮನಸ್ಸುಳ್ಳವನಂತೆ, **ಸರ್ವವಿದಾಂ** = ಎಲ್ಲವನ್ನೂ ತಿಳಿದವರಲ್ಲಿ, **ವರಃ** = ಶ್ರೇಷ್ಠನಾದ, **ಸಃ** = ಕೃಷ್ಣನು, **ಶಿಖಿ** = ನವಿಲಿನ, **ತಾಂಡವಮ್** = ನರ್ತನವನ್ನು, **ಅನ್ವಕರೋತ್** = ಮಾಡಿದನು, **ಕ್ವಚಿತ್** = ಒಂದು ಕಡೆ, **ಧೃತ** = ಧರಿಸಿದ, **ಶಿಖಂಡ** = ನವಿಲಿನ ಗರಿಯುಳ್ಳ, **ಶಿಖಂಡ** = ಚೂಡಾದಿಂದ, **ಸುಮಂಡಿತಃ** = ಅಲಂಕೃತನಾದ.

ಕೃಷ್ಣನು ತನ್ನ ತಲೆಯ ಕೂದಲಿನಲ್ಲಿ ನವಿಲಿನ ಗರಿಯನ್ನು ಕಟ್ಟಿಕೊಂಡಿದ್ದಾನೆ. ಇದರಿಂದಾಗಿ ಕೃಷ್ಣನು ಬಾಹ್ಯದೃಷ್ಟಿಗೆ ಚಂದ ಕಾಣುತ್ತಿದ್ದಾನೆ. ಈತನು ಕಾಡಿನಲ್ಲಿ ನವಿಲಿನಂತೆ ನರ್ತನವನ್ನು ಮಾಡುತ್ತಿದ್ದಾನೆ. ಈ ದೃಶ್ಯವು ಮುಂದೆ ಕಾಳಿಂಗನ ತಲೆಯ ಮೇಲೆ ಮಾಡುವ ನೃತ್ಯದ ಅಭ್ಯಾಸದಂತೆ ಇತ್ತು. ಕೃಷ್ಣನು ಸರ್ವಜ್ಞ. ಆತನಿಗೆ ಅಭ್ಯಾಸದ ಅಗತ್ಯ ಇಲ್ಲ ಎಂದು ತಿಳಿಸಲು 'ಸರ್ವವಿದಾಂ ವರಃ' ಎಂದು ತಿಳಿಸಿದ್ದಾರೆ.

**ಮುನಿಮನಃ ಸರಸೀರುಹಹಂಸರಾಟ್**
**ತದುಚಿತಸ್ವರಶಿಕ್ಷಣಧೀರಿವ ।**
**ಅನುನನಾದ ಸ ಹಂಸಕದಂಬಕ-**
**ಶ್ರುತಿಮನೋಽತಿಮನೋರಮಕೂಜಿತಮ್ ॥ ೫೦ ॥**

**ಮುನಿ** = ಋಷಿಗಳ, **ಮನಃ** = ಮನಸ್ಸೆಂಬ, **ಸರಸೀರುಹ** = ತಾವರೆಗಳಲ್ಲಿ, **ಹಂಸರಾಟ್** = ಹಂಸದಂತೆ ಇರುವ, **ತತ್** = ಹಂಸಗಳಿಗೆ, **ಉಚಿತ** = ಯೋಗ್ಯವಾದ, **ಸ್ವರ** = ಧ್ವನಿಯ, **ಶಿಕ್ಷಣ** = ಅಭ್ಯಾಸದಲ್ಲಿ, **ಧೀರಿವ** = ಮನಸ್ಸುಳ್ಳವನಂತೆ, **ಅನುನನಾದ** = ಅನುಸರಿಸಿದನು, **ಸಃ** = ಕೃಷ್ಣನು, **ಹಂಸ** = ಹಂಸಗಳ, **ಕದಂಬಕ** = ಸಮೂಹದ, **ಶ್ರುತಿ** = ಕಿವಿಗಳಿಗೆ, **ಮನಃ** = ಮನಸ್ಸಿಗೆ, **ಅತಿಮನೋರಮ** = ತುಂಬ ಇಂಪಾದ, **ಕೂಜಿತಂ**= ಧ್ವನಿಯನ್ನು.

ಋಷಿಗಳ ಮನಸ್ಸೆಂಬ ಕಮಲಗಳಲ್ಲಿ ಕೃಷ್ಣನು ಪರಮಹಂಸನಾಗಿ ಇದ್ದಾನೆ. (ವ್ಯಾಸ-ರೂಪದಲ್ಲಿ ಕೃಷ್ಣನು ಪರಮಹಂಸಸನ್ಯಾಸಕ್ಕೆ ನಾಂದಿ ಹಾಕಿದವನು). ಹಂಸದಂತೆ ಇದ್ದರೆ ಸಾಲದು. ಅದರ ಧರ್ಮಗಳೂ ಬೇಕು. ಅದಕ್ಕಾಗಿ ತಾನೂ ಕೂಡ ಹಂಸದಂತೆ ಧ್ವನಿ ಮಾಡುತ್ತಿದ್ದ. ಈ ಧ್ವನಿ ಹೇಗಿತ್ತುಅಂದರೆ ಸ್ವತಃ ಹಂಸಪಕ್ಷಿಗಳೇ ಆನಂದಪಟ್ಟವಂತೆ – ನಮ್ಮಂತೆಯೇ ಧ್ವನಿ ಮಾಡುತ್ತಾನೆ ಎಂದು. (ಲೋಕದಲ್ಲಿ ನಾವು ಈಗ ಕಾಣುವ ಧ್ವನಿ-ಯನ್ನು ಅನುಕರಿಸುವ ಕಲೆಗೆ ನಾಂದಿ ಹಾಕಿದವ ಕೃಷ್ಣನು).

**ಮಧುವಶೀಕೃತಚಿತ್ತ ಇವೋಷ್ಣಭಾಃ**
**ವರುಣಪಾಲಿತದಿಙ್‌ಮೃಗಲೋಚನಾಮ್ ।**
**ಸಮಧಿಗಮ್ಯ ದಿವಃ ಸ್ವಮಪೀಪತತ್**
**ದುರಿತವಾರಿತವಾಜಿಮನಾ ಇವ ॥ ೫೧ ॥**

**ಮಧು** = ಮದ್ಯದಿಂದ, **ವಶೀಕೃತ** = ಎಳೆಯಲ್ಪಟ್ಟ, **ಚಿತ್ತ ಇವ** = ಮನಸ್ಸಿನಂತೆ, **ಉಷ್ಣ** = ಬಿಸಿಯಾದ, **ಭಾಃ** = ಕಿರಣವುಳ್ಳ ಸೂರ್ಯನು, **ವರುಣ** = ವರುಣನಿಂದ, **ಪಾಲಿತ** = ರಕ್ಷಿಸಲ್ಪಟ್ಟ, **ದಿಕ್** = ದಿಕ್ಕೆಂಬ, **ಮೃಗಲೋಚನಾಂ** = ಸ್ತ್ರೀಯನ್ನು, **ಸಮಧಿಗಮ್ಯ** = ಹೊಂದಿ, **ದಿವಃ** = ಸ್ವರ್ಗದಿಂದ, **ಸ್ವಂ** = ತನ್ನನ್ನು, **ಅಪೀಪತತ್** = ಬೀಳಿಸಿದನು, **ದುರಿತ** = ಪಾಪದಿಂದ, **ವಾರಿತ** = ತಡೆಯಲ್ಪಟ್ಟ, **ವಾಜಿ** = ಕದುರೆಗಳ, **ಮನಾ ಇವ** = ಮನಸ್ಸಿನಂತೆ.

ಸೂರ್ಯಾಸ್ತವನ್ನು ವರ್ಣಿಸುತ್ತಾರೆ – ಅಸ್ತಮಿಸುವಾಗ ಕೆಂಪಗಿರುವುದು ಸಹಜ.

ರಾಜರು ಇದನ್ನು ಮಧುವಿನ ಸಂಬಂಧದಿಂದ ಕೆಂಪಾಗಿದ್ದಾನೆ ಎಂದು ಉತ್ಪ್ರೇಕ್ಷಿಸುತ್ತಾರೆ. ಸೂರ್ಯನಿಗೆ ಮಧುವಿಗೆ ಅಂದರೆ ವಸಂತಮಾಸದ ಸಂಬಂಧವಿದೆ. ಇನ್ನೊಂದು ಅರ್ಥ ಮಧು ಅಂದರೆ ಮದ್ಯ. ಮದ್ಯಪಾನ ಮಾಡಿದವರ ಕಣ್ಣು ಕೆಂಪಗಿರುತ್ತದೆ. ಈ ಸೂರ್ಯನು ವರುಣಸಂಬಂಧಿಯಾದ ಪಶ್ಚಿಮದಿಕ್ಕು ಎಂಬ ಪರಸ್ತ್ರೀಯನ್ನು ಸಂಪರ್ಕಿಸುತ್ತಿದ್ದಾನೆ. ಸಂಸ್ಕೃತದಲ್ಲಿ ದಿಕ್ ಶಬ್ದವು ಸ್ತ್ರೀಲಿಂಗದಲ್ಲಿದೆ. ಈ ಪಾಪದ ಫಲವಾಗಿ ಆತನ ರಥದ ಕುದುರೆಗಳು ಮುಂದುವರೆಯಲಿಲ್ಲ. ರಥವು ನಿಂತಿತು. ಸೂರ್ಯನು ಆಕಾಶದಿಂದ ಸಮುದ್ರಕ್ಕೆ ಬಿದ್ದ ಎಂದು ರಾಜರು ಕಾವ್ಯಶೈಲಿಯಲ್ಲಿ ವರ್ಣಿಸುತ್ತಾರೆ.

ಅನ್ಯಾಯ ಮಾಡುವವರಿಗೆ ಪತನವು ಸಿದ್ಧ ಎಂದು ಇದರ ಅಭಿಪ್ರಾಯ.

**ಮುದಿತಗೋನಿಕರೈಃ ಪರಿವಾರಿತಃ**
**ಸಖಿಜನೈಃ ಸಹ ವೇಣುಮುದೀರಯನ್ ।**
**ನಿಜಗೃಹಂ ಪ್ರವಿಶನ್ ಸ ನಿಶಾಮುಖೇ**
**ನರಮಣೀ ರಮಣೀಃ ಸಮಹರ್ಷಯತ್** ॥ ೫೨ ॥

**ಮುದಿತ** = ತೃಪ್ತಗಳಾದ, **ಗೋ** = ಆಕಳುಗಳ, **ನಿಕರೈಃ** = ಗುಂಪುಗಳಿಂದ, **ಪರಿವಾರಿತಃ** = ಕೂಡಿದ, **ಸಖಿಜನೈಃ** = ಗೆಳತಿಯರಿಂದ, **ಸಹ** = ಕೂಡಿ, **ವೇಣುಂ** = ಕೊಳಲನ್ನು, **ಉದೀರಯನ್** = ಊದುತ್ತಾ, **ನಿಜಗೃಹಂ** = ತನ್ನ ಮನೆಯನ್ನು, **ಪ್ರವಿಶನ್** = ಪ್ರವೇಶಿಸುತ್ತಾ, **ಸಃ** = ಕೃಷ್ಣನು, **ನಿಶಾಮುಖೇ** = ಸಾಯಂಕಾಲದಲ್ಲಿ, **ನರಮಣಿಃ** = ಪುರುಷರತ್ನನಾದ, **ರಮಣೀಃ** = ಸ್ತ್ರೀಯರನ್ನು, **ಸಮಹರ್ಷಯತ್**= ಆನಂದಗೊಳಿಸಿದನು.

ಸಾಯಂಕಾಲವಾದ್ದರಿಂದ ಕೃಷ್ಣನು ಆಕಳುಗಳಿಂದ ಹಾಗೂ ಗೊಲ್ಲರಿಂದ ಕೂಡಿಕೊಂಡು ಕೊಳಲನ್ನು ಊದುತ್ತಾ ತನ್ನ ಮನೆಯನ್ನು ಪ್ರವೇಶಿಸಿದನು. ಆಗ ಊರಿನ ಎಲ್ಲಾ ಸ್ತ್ರೀಯರು ಈ ವೇಣುಗಾನದಿಂದ ಆನಂದಪಟ್ಟರು.

**ಪ್ರತಿಗೃಹಂ ಪ್ರಮದಾಭಿರಿತಸ್ತತಃ**
**ಸಕುತುಕಾಭಿರಸೌ ಪರಿಸೇವಿತಃ ।**
**ಸ್ಮಿತಕಟಾಕ್ಷಮನೋರಮವಿಭ್ರಮಃ**
**ಸ್ಮರಜನೀರಜನೀಶ ಇವಾಬಭೌ** ॥ ೫೩ ॥

**ಪ್ರತಿಗೃಹಂ** = ಪ್ರತಿಮನೆಯಲ್ಲಿಯೂ, **ಪ್ರಮದಾಭಿಃ** = ಸ್ತ್ರೀಯರಿಂದ, **ಇತಃ ತತಃ** =

ಅತ್ರಿತ್ರ, **ಸಕುತುಕಾಭಿಃ** = ಕುತೂಹಲದಿಂದ, **ಅಸೌ** = ಕೃಷ್ಣನು, **ಪರಿಸೇವಿತಃ** = ಸೇವಿಸಲ್ಪಟ್ಟ, **ಸ್ಮಿತ** = ನಗುವಿನಿಂದ, **ಕಟಾಕ್ಷ** = ಕಡೆಗಣ್ಣಿನ, **ಮನೋರಮ** = ಚಂದದ, **ವಿಭ್ರಮಃ** = ವಿಲಾಸವುಳ್ಳ, **ಸ್ಮರಜನಿಃ** = ಕಾಮನ ತಂದೆಯಾದ, ರಜನೀಶ ಇವ = ಚಂದ್ರನಂತೆ, **ಆಬಭೌ** = ಶೋಭಿಸಿ- ದನು.

ಈ ಕೊಳಲಿನ ಧ್ವನಿಗೆ ಆಶ್ಚರ್ಯವನ್ನು ಪ್ರಕಟಿಸುವ ಸ್ತ್ರೀಯರು ತಮ್ಮ ಮನೆಗಳಲ್ಲಿಯೇ ಕೃಷ್ಣನ ಸೇವೆಯನ್ನು ಬಹಳವಾಗಿ ಮಾಡಿದರು. ಕೃಷ್ಣನು ತನ್ನ ಮುಖದಲ್ಲಿ ನಗುವುಳ್ಳವನಾದ. ತನ್ನ ಕಟಾಕ್ಷವನ್ನು ಚೆನ್ನಾಗಿ ಕುಣಿಸುತ್ತಿದ್ದ. ಮನ್ಮಥನ ಜನಕನಾದ ಅಂದರೆ ಸಹಜವಾಗಿ ಮನೋಹರನಾದ ಕೃಷ್ಣನು ಈ ಸ್ತ್ರೀಯರಿಗೆ ಚಂದ್ರನಂತೆ ಆನಂದದಾಯಕನಾಗಿ ಕಂಡನು.

**ಯದುಪತಿಃ ಸ ನಿಜೈಃ ಸಹ ನಿರ್ಮಲಂ**
**ಸ್ವಗೃಹಮೇತ್ಯ ಶನೈರಲಸಾಂ ನಿಶಾಮ್ ।**
**ತನುರುಚಾ ಬಹುದೂರಪಲಾಯಿತಾಂ**
**ಮಹಿತಯಾ ಹಿತಯಾ ವ್ಯತನೋತ್ ಸತಾಮ್ ॥ ೫೪ ॥**

**ಯದುಪತಿಃ** = ಯದುಪತಿಯಾದ, **ಸಃ** = ಕೃಷ್ಣನು, **ನಿಜೈಃ** = ತನ್ನವರಿಂದ, **ಸಹ** = ಕೂಡಿ, **ನಿರ್ಮಲಂ** = ನಿರ್ಮಲವಾದ, **ಸ್ವಗೃಹಂ** = ತನ್ನ ಮನೆಯನ್ನು, **ಏತ್ಯ** = ಹೊಂದಿ, **ಶನೈಃ** = ಮೆಲ್ಲನೆ, **ಅಲಸಾಂ** = ಜಡವಾದ, **ನಿಶಾಂ** = ರಾತ್ರಿಯನ್ನು, **ತನು** = ಶರೀರದ, **ರುಚಾ** = ಕಾಂತಿಯಿಂದ, **ಬಹುದೂರ** = ಬಹಳ ದೂರ, **ಮಹಿತಯಾ** = ಪೂಜ್ಯವಾದ, **ಹಿತಯಾ** = ಯೋಗ್ಯವಾದ, **ವ್ಯತನೋತ್** = ಮಾಡಿದನು, **ಸತಾಂ** = ಸಜ್ಜನರಿಗೆ.

ಮರುದಿನ ಬೆಳಗಾಯಿತು – ಕೃಷ್ಣನು ರಾತ್ರಿಯಲ್ಲಿ ತನ್ನವರಿಂದ ಕೂಡಿಕೊಂಡು ತನ್ನ ಮನೆಯನ್ನು ಪ್ರವೇಶಿಸಿದನು. ಸ್ವಲ್ಪಸಮಯದ ಅನಂತರ ರಾತ್ರಿಯನ್ನು ಬಹಳ ದೂರ ಓಡಿಸಿದನು. ಈ ರಾತ್ರಿಯು ಜನರಿಗೆ ಆಲಸ್ಯವನ್ನು ತಂದು ಕೊಡುತ್ತದೆ. ಆದ್ದರಿಂದ ತನ್ನ ಶರೀರದ ಕಾಂತಿಯಿಂದಲೇ ಓಡಿಸಿದನು. ಹಗಲಿಗೆ ಅಂಧಕಾರವು ಮೇರು ಪರ್ವತದ ಹಿಂಭಾಗಕ್ಕೆ ಹೋಗುತ್ತದೆ ಎಂದು ಪ್ರತೀತಿ. ದೇವರ ಶರೀರದ ಬೆಳಕು ಸಜ್ಜನರಿಗೆ ಹಿತಕಾರಿ. ಸರ್ವತ್ರ ಹರಡಿದೆ.

ನಿತ್ಯದಲ್ಲಿ ನಾವು ಸೂರ್ಯನ ಬೆಳಕನ್ನು ಕಾಣುತ್ತೇವೆ. ಇದು ದೇವರದ್ದೇ ಬೆಳಕು. ಸೂರ್ಯನಿಗೆ ಸ್ವಯಂ ಬೆಳಗುವ ಶಕ್ತಿ ಇಲ್ಲ ಎಂಬ ಸಂದೇಶ ಇಲ್ಲಿ ಅಡಗಿದೆ. ಈ ವಿಷಯದಲ್ಲಿ –

ಯತ್ ಆದಿತ್ಯಗತಂ ತೇಜಃ ಜಗತ್ ಭಾಸಯತೇಽಖಿಲಮ್ ।
ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ॥

ಎಂಬ ಗೀತಾವಾಕ್ಯವು ಪ್ರಮಾಣ.

ಸ್ವತನಯಾಂ ಸರಿತಂ ವಿಷವರ್ಜಿತಾಂ
ಕರುಣಯಾ ಹರಿರದ್ಯ ಕರಿಷ್ಯತಿ ।
ಇತಿ ಮುದೇವ ಗಿರಿಂ ರವಿರೀಕ್ಷಿತುಂ
ಪರವಶೋ ರವಶೋಭಿತಮಾರುಹತ್ ॥ ೫೫ ॥

**ಸ್ವತನಯಾಂ** = ತನ್ನ ಮಗಳಾದ, **ಸರಿತಂ** = ನದಿಯಾದ ಯಮುನೆಯನ್ನು, **ವಿಷ** = ವಿಷದಿಂದ, **ವರ್ಜಿತಾಂ** = ರಹಿತಳನ್ನಾಗಿ, **ಕರುಣಯಾ** = ಕರುಣೆಯಿಂದ, **ಹರಿಃ** = ದೇವರು, **ಅದ್ಯ** = ಈ ದಿನ, **ಕರಿಷ್ಯತಿ** = ಮಾಡುತ್ತಾನೆ, **ಇತಿ** = ಎಂದು, **ಮುದಾ ಇವ** = ತೋಷದಿಂದ ಎಂಬಂತೆ, **ಗಿರಿಂ** = ಉದಯಪರ್ವತವನ್ನು, **ರವಿಃ** = ಸೂರ್ಯನು, **ಈಕ್ಷಿತುಂ** = ನೋಡಲು, **ಪರವಶಃ** = ಪರಾಧೀನನಾದ, **ರವ** = ಹಕ್ಕಿಗಳ ಧ್ವನಿಯಿಂದ, **ಶೋಭಿತಂ** = ಶೋಭಿಸುವ, **ಆರುಹತ್** = ಏರಿದನು.

ಕವಿಗಳ ಕಲ್ಪನೆ – ಸೂರ್ಯನು ಉದಯಾದ್ರಿಯನ್ನು ಹತ್ತಿ ಕುಳಿತನು ಎಂದು. ಈತ ದೇವರ ಅಧೀನನು. ಈತನಿಗೆ ಈ ದಿನ ಸಂತೋಷ. ತನ್ನ ಮಗಳಾದ ಯಮುನೆಯನ್ನು ಕೃಷ್ಣನು ಕಾಳಿಂಗದ ವಿಷದಿಂದ ಬಿಡಿಸುತ್ತಾನೆ ಎಂದು. ಈ ದೃಶ್ಯವನ್ನು ನೋಡಲು ಆತನು ಎತ್ತರದ ಜಾಗದಲ್ಲಿ ಕುಳಿತಂತೆ ತೋರುತ್ತದೆ. ಈ ಬೆಟ್ಟವು ಪಕ್ಷಿಗಳಿಂದ ಮೊದಲೇ ತುಂಬಿದೆ. ಲೋಕದಲ್ಲಿ ನಡೆಯುವ ಕಾರ್ಯಕ್ರಮಗಳನ್ನು ನೋಡಲು ಎತ್ತರವಾದ ಜಾಗವನ್ನು ಏರುವಂತೆ.

ತದನು ಭೋಗಿಕುಲಾಗ್ರಗಮಗ್ರಜಂ
ಸ ಹಿ ವಿಸೃಜ್ಯ ತದನ್ವಯಸಂಭವಮ್ ।
ನಮಯಿತುಂ ಯಮುನಾಮಗಮದ್ವಿಭುಃ
ಸಭುಜಗಾಂ ಭುಜಗಾಂತಕವಾಹನಃ ॥೫೬॥

**ತದನು** = ಅನಂತರ, **ಭೋಗಿ** = ಸರ್ಪಗಳ, **ಕುಲ** = ವಂಶಕ್ಕೆ, **ಅಗ್ರಗಂ** = ನಾಯಕನಾದ, **ಅಗ್ರಜಂ** = ಅಣ್ಣನನ್ನು, **ಸಹಿ** = ಆ ಕೃಷ್ಣನು, **ವಿಸೃಜ್ಯ** = ಬಿಟ್ಟು, **ತತ್** = ಶೇಷನ, **ಅನ್ವಯ** = ವಂಶದಲ್ಲಿ, **ಸಂಭವಂ** = ಹುಟ್ಟಿದವನನ್ನು, **ನಮಯಿತುಂ** = ಮರ್ದಿಸಲು, **ಯಮುನಾಂ** = ಯಮುನೆಯನ್ನು, **ಅಗಮತ್** = ಹೊರಟನು, **ವಿಭುಃ**

= ಸಮರ್ಥನಾದ, **ಸಭುಜಗಾಂ** = ಸರ್ಪದಿಂದ ಕೂಡಿದ, **ಭುಜಗ** = ಸರ್ಪಗಳಿಗೆ, **ಅಂತಕ** = ಮಾರಕನಾದ ಗರುಡನೇ, **ವಾಹನಃ** = ವಾಹನವಾಗಿಯುಳ್ಳ.

ಈ ದಿನ ಕೃಷ್ಣನು ಆಕಳುಗಳ ಜೊತೆಗೆ ಮನೆಯಿಂದ ಹೊರಟಾಗ ಅಣ್ಣನಾದ ಬಲರಾಮನನ್ನು ಬಿಟ್ಟು ಹೊರಟನು. ಈ ಬಲರಾಮನು ಶೇಷನ ಅವತಾರ. ಈ ದಿನ ಈತನ ವಂಶದವನಾದ ಕಾಳಿಂಗನ ಮರ್ದನ ಆಗಬೇಕಿದೆ. ಬಲರಾಮನು ಜೊತೆಗಿದ್ದರೆ ಬಿಡಲಿಕ್ಕಿಲ್ಲ ಎಂಬ ಅಭಿಪ್ರಾಯ. ಕೃಷ್ಣನು ಯಮುನೆಯ ಬಳಿಗೆ ಬಂದನು. ಯಮುನೆಯಲ್ಲಿ ಕಾಳಿಂಗನು ಇದ್ದಾನೆ. ಸರ್ಪಗಳಿಗೆ ಮಾರಕನಾದ ಗರುಡನು ಕೃಷ್ಣನ ವಾಹನ. ಆದ್ದರಿಂದ ಕಾಳಿಂಗನ ವಿಷ ಕೃಷ್ಣನಿಗೆ ಉಪದ್ರವಕಾರಿಯಲ್ಲ.

**ಯದಿ ರಸಾತಲಮೇತಿ ತದೈಮ್ಯಹಂ**
**ದಮಯಿತುಂ ತಮಿತೀವ ಸ ಪಾದಪಾತ್ ।**
**ಅಪತದಂಬುನಿ ವಿಸ್ಮಯಕಾರಕಃ**
**ಸವಯಸಾಂ ವಯಸಾಮಿವ ವಲ್ಲಭಃ ॥೫೭॥**

**ಯದಿ** = ಒಂದು ವೇಳೆ, **ರಸಾತಲಂ** = ರಸಾತಲವನ್ನು, **ಏತಿ** = ಹೋದರೂ, **ತದಾ** = ಆಗ, **ಏಮಿ** = ಹೋಗುತ್ತೇನೆ, **ಅಹಂ** = ನಾನು, **ದಮಯಿತುಂ** = ಮರ್ದಿಸಲು, **ತಂ** = ಅವನನ್ನು, **ಇತೀವ** = ಎಂಬಂತೆ, **ಸಃ** = ಕೃಷ್ಣನು, **ಪಾದಪಾತ್** = ಮರದಿಂದ, **ಅಪತತ್** = ಹಾರಿದನು, **ಅಂಬುನಿ** = ನೀರಿನಲ್ಲಿ, **ವಿಸ್ಮಯಕಾರಕಃ** = ಆಶ್ಚರ್ಯವನ್ನು ಮಾಡುವವನಾಗಿ, **ಸವಯಸಾಂ** = ಗೆಳೆಯರಿಗೆ, **ವಯಸಾಂ** = ಪಕ್ಷಿಗಳಿಗೆ, **ವಲ್ಲಭ ಇವ** = ಪ್ರಿಯನಾದ ಗರುಡನಂತೆ.

ಕೃಷ್ಣನು ಯಮುನಾದ ದಡದ ಒಂದು ಮರವನ್ನು ಹತ್ತಿದ. ಈ ಕಾಳಿಂಗನು ಪಾತಾಳದಲ್ಲಿದ್ದರೂ ಮರ್ದಿಸುವೆನು ಎಂಬ ಅಭಿಪ್ರಾಯದಿಂದ. ನೀರಿನ ಒಳಗಿರುವ ವಸ್ತುವನ್ನು ಪಡೆಯಲು ಎತ್ತರದಿಂದ ಧುಮುಕುವುದು ಲೋಕರೂಢಿ. ಕೃಷ್ಣನ ಈ ಕೆಲಸವು ಕೃಷ್ಣನಷ್ಟೇ ವಯಸ್ಸಿನ ಗೊಲ್ಲರಿಗೆ ಆಶ್ಚರ್ಯಜನಕ. ಗೊಲ್ಲರಿಂದ ಮಾಡಲು ಸಾಧ್ಯವಿಲ್ಲದ ಕೆಲಸ ಇದು.

• • • •

ಸಂದೇಶ

ಫಲಾರ್ಥಿನಾಂ ಕಿಂ ನ ವಿಷಹ್ಯಮ್ ಅಸ್ತಿ

ಫಲಾಕಾಂಕ್ಷಿಗಳು ಎಂತಹ ಕ್ಲೇಶಗಳನ್ನೂ ಸಹಿಸುತ್ತಾರೆ

---

**ಕೃಷ್ಣಾಲಿಂಗನಕಾತರೈಃ ಕರಸಮೈಃ ಓಘೈರ್ನಿವೃತ್ತೈರಿವ**
**ಸ್ವಪ್ರಾಂತಸ್ಥಿತತತ್ಪದಾಂಕಮುರಸಾ ಧರ್ತುಂ ಧಿಯೇವಾರ್ಕಜಾ ।**

**ಸುಪ್ರೇಮಾಂಬುಧಿಮಿಶ್ರಣಾದಿವ ಜಗದ್ವಂದ್ಯಸ್ಯ ಪಾತಾದಿವ**
**ಸ್ನಿಗ್ಧಾ ತಂ ಮದನಾಕೃತಿಂ ಸ್ವಹೃದಯೇನಾಶ್ಲಿಷ್ಯ ಸಾಽವರ್ಧತ ॥ ೫೮ ॥**

**ಕೃಷ್ಣ** = ದೇವರ, **ಆಲಿಂಗನ** = ಅಪ್ಪುವಿಕೆಯಲ್ಲಿ, **ಕಾತರೈಃ** = ಉತ್ಸುಕಗಳಾದ, **ಕರಸಮ್ಮೈಃ** = ಕೈಯಂತಿರುವ, **ಓಘೈಃ** = ಪ್ರವಾಹಗಳಿಂದ, **ನಿವೃತ್ತೈಃ ಇವ** = ಹಿಂದಿರುಗಿದ, **ಸ್ವ** = ತನ್ನ, **ಪ್ರಾಂತ** = ದಡದಲ್ಲಿ, **ಸ್ಥಿತ** = ಇರುವ, **ತತ್** = ಕೃಷ್ಣನ, **ಪದ** = ಪಾದದ, **ಅಂಕಂ** = ಚಿಹ್ನೆಯನ್ನು, **ಉರಸಾ** = ಎದೆಯಿಂದ, **ಧರ್ತುಂ** = ಧರಿಸಲು, **ಧಿಯಾ ಇವ** = ಮನಸ್ಸಿನಿಂದ ಎಂಬಂತೆ, **ಅರ್ಕಜಾ** = ಸೂರ್ಯಪುತ್ರಿಯಾದ ಯಮುನೆಯು, **ಸು** = ಬಹಳ, **ಪ್ರೇಮ** = ಪ್ರೀತಿ ಎಂಬ, **ಅಂಬುಧಿ** = ಸಮುದ್ರದ, **ಮಿಶ್ರಣಾತ್ ಇವ** = ಸಂಯೋಗದಿಂದ ಎಂಬಂತೆ, **ಜಗತ್** = ಲೋಕದಿಂದ, **ವಂದ್ಯಸ್ಯ** = ನಮಸ್ಕೃತನಾದ ಕೃಷ್ಣನ, **ಪಾತಾತ್ ಇವ** = ಹಾರುವಿಕೆಯಿಂದ, **ಸ್ನಿಗ್ಧಾ** = ಪ್ರೀತಿಯಿಂದ, ಕೂಡಿದ, **ತಂ** = ಆ, **ಮದನ** = ಮನ್ಮಥನಂತೆ, **ಆಕೃತಿಂ** = ಶರೀರವುಳ್ಳ ಕೃಷ್ಣನನ್ನು, **ಸ್ವ** = ತನ್ನ, **ಹೃದಯೇನ** = ಎದೆಯಿಂದ, **ಆಶ್ಲಿಷ್ಯ** = ಆಲಿಂಗಿಸಿ, **ಸಾ** = ಅವಳು, **ಅವರ್ಧತ**= ಬೆಳೆದಳು.

ಕೃಷ್ಣ ನದಿಗೆ ಹಾರಿದ ಕ್ಷಣದಲ್ಲಿ ನದಿಯ ನೀರು ಏರಿತು. ಇದನ್ನು ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ – ಕೃಷ್ಣನು ನದಿಯನ್ನು ಪ್ರವೇಶಿಸಿದಾಗ ಯಮುನೆಗೆ ಕೃಷ್ಣನನ್ನು ಆಲಿಂಗಿಸ ಬೇಕೆಂದು ತೋರಿತು. ಅದಕ್ಕಾಗಿ ಪ್ರವಾಹ ಎಂಬ ತನ್ನ ಕೈಗಳನ್ನು ಮುಂದೆ ಹೋಗ-ಗೊಡಲಿಲ್ಲ. ನದಿಗೆ ಪ್ರವಾಹಗಳೇ ಕೈಗಳು. ಪ್ರವಾಹವು ಮುಂದೆ ಹೋದರೆ ದೇವರನ್ನು ಆಲಂಗಿಸಲು ಆಗುವುದಿಲ್ಲ ಎಂದು ಪ್ರವಾಹವನ್ನು ತಡೆಹಿಡಿದಳು. ಪ್ರವಾಹವು ನಿಂತರೆ ನೀರು ಏರುವುದು ಸಹಜ. ನೀರು ಎಷ್ಟು ಏರಿತು ಅಂದರೆ ನದೀದಡದಲ್ಲಿರುವ ಕೃಷ್ಣನ ಪಾದದ ಚಿಹ್ನೆಗಳನ್ನು ತನ್ನಲ್ಲಿ ತುಂಬಿಸಿಕೊಳ್ಳುತ್ತಾಳೋ ಎಂದು ತೋರುತ್ತಿತ್ತು. ಇದು ಒಂದು ಕಾರಣ. ಎರಡನೆಯದಾಗಿ, ನದಿಯು ಸಮುದ್ರವನ್ನು ಸೇರುವಲ್ಲಿ ತುಂಬಾ ನೀರುಳ್ಳವಳು ಆಗುತ್ತಾಳೆ. ಪ್ರಕೃತ ಯಮುನೆಯು ಕೃಷ್ಣನಲ್ಲಿ ಪ್ರೇಮದಿಂದ ಕೂಡಿದ್ದಾಳೆ. ಆ ಪ್ರೇಮ ಎಂಬ ಸಮುದ್ರದ ಸಂಗ ಈಕೆಗೆ ಆಗುವುದರಿಂದ ಈಕೆ ಬೆಳೆದಳು. ಮೂರು – ಕೃಷ್ಣನು ಬಹಳ ದೊಡ್ಡ ವ್ಯಕ್ತಿ. ಅಂತಹ ಕೃಷ್ಣನು ಯಮುನೆಯ ಮನೆಯ ಬಳಿಗೆ ಬಂದಿದ್ದಾನೆ. ದೊಡ್ಡವರು ನಮ್ಮಲ್ಲಿಗೆ ಬಂದಾಗ ನಾವು ಉಬ್ಬುವುದು ಸಹಜ. ಆದ್ದ-ರಿಂದಲೂ ಯಮುನೆ ಉಕ್ಕಿದಳು. ಈ ರೀತಿ ಯಮುನೆಯು ಕೃಷ್ಣನನ್ನು ಪ್ರೀತಿಯಿಂದ ತಬ್ಬಿಕೊಂಡು ಬೆಳೆದಳು. ಯಮುನೆಯಲ್ಲಿ ಷಣ್ಮಹಿಷಿಯರಲ್ಲಿ ಒಬ್ಬಳಾದ ಕಾಳಿಂದಿಯ ಸನ್ನಿಧಾನವು ಇದೆ ಎಂದು ವ್ಯಕ್ತವಾಗುತ್ತದೆ.

= ಸಮರ್ಥನಾದ, **ಸಭುಜಗಾಂ** = ಸರ್ಪದಿಂದ ಕೂಡಿದ, **ಭುಜಗ** = ಸರ್ಪಗಳಿಗೆ, **ಅಂತಕ** = ಮಾರಕನಾದ ಗರುಡನೇ, **ವಾಹನಃ** = ವಾಹನವಾಗಿಯುಳ್ಳ.

ಈ ದಿನ ಕೃಷ್ಣನು ಆಕಳುಗಳ ಜೊತೆಗೆ ಮನೆಯಿಂದ ಹೊರಟಾಗ ಅಣ್ಣನಾದ ಬಲರಾಮನನ್ನು ಬಿಟ್ಟು ಹೊರಟನು. ಈ ಬಲರಾಮನು ಶೇಷನ ಅವತಾರ. ಈ ದಿನ ಈತನ ವಂಶದವನಾದ ಕಾಳಿಂಗನ ಮರ್ದನ ಆಗಬೇಕಿದೆ. ಬಲರಾಮನು ಜೊತೆಗಿದ್ದರೆ ಬಿಡಲಿಕ್ಕಿಲ್ಲ ಎಂಬ ಅಭಿಪ್ರಾಯ. ಕೃಷ್ಣನು ಯಮುನೆಯ ಬಳಿಗೆ ಬಂದನು. ಯಮುನೆಯಲ್ಲಿ ಕಾಳಿಂಗನು ಇದ್ದಾನೆ. ಸರ್ಪಗಳಿಗೆ ಮಾರಕನಾದ ಗರುಡನು ಕೃಷ್ಣನ ವಾಹನ. ಆದ್ದರಿಂದ ಕಾಳಿಂಗನ ವಿಷ ಕೃಷ್ಣನಿಗೆ ಉಪದ್ರವಕಾರಿಯಲ್ಲ.

**ಯದಿ ರಸಾತಲಮೇತಿ ತದೈಮ್ಯಹಂ**
**ದಮಯಿತುಂ ತಮಿತೀವ ಸ ಪಾದಪಾತ್ ।**
**ಅಪತದಂಬುನಿ ವಿಸ್ಮಯಕಾರಕಃ**
**ಸವಯಸಾಂ ವಯಸಾಮಿವ ವಲ್ಲಭಃ ॥೫೭॥**

**ಯದಿ** = ಒಂದು ವೇಳೆ, **ರಸಾತಲಂ** = ರಸಾತಲವನ್ನು, **ಏತಿ** = ಹೋದರೂ, **ತದಾ** = ಆಗ, **ಏಮಿ** = ಹೋಗುತ್ತೇನೆ, **ಅಹಂ** = ನಾನು, **ದಮಯಿತುಂ** = ಮರ್ದಿಸಲು, **ತಂ** = ಅವನನ್ನು, **ಇತೀವ** = ಎಂಬಂತೆ, **ಸಃ** = ಕೃಷ್ಣನು, **ಪಾದಪಾತ್** = ಮರದಿಂದ, **ಅಪತತ್** = ಹಾರಿದನು, **ಅಂಬುನಿ** = ನೀರಿನಲ್ಲಿ, **ವಿಸ್ಮಯಕಾರಕಃ** = ಆಶ್ಚರ್ಯವನ್ನು ಮಾಡುವವನಾಗಿ, **ಸವಯಸಾಂ** = ಗೆಳೆಯರಿಗೆ, **ವಯಸಾಂ** = ಪಕ್ಷಿಗಳಿಗೆ, **ವಲ್ಲಭ ಇವ** = ಪ್ರಿಯನಾದ ಗರುಡನಂತೆ.

ಕೃಷ್ಣನು ಯಮುನಾದ ದಡದ ಒಂದು ಮರವನ್ನು ಹತ್ತಿದ. ಈ ಕಾಳಿಂಗನು ಪಾತಾಳದಲ್ಲಿದ್ದರೂ ಮರ್ದಿಸುವೆನು ಎಂಬ ಅಭಿಪ್ರಾಯದಿಂದ. ನೀರಿನ ಒಳಗಿರುವ ವಸ್ತುವನ್ನು ಪಡೆಯಲು ಎತ್ತರದಿಂದ ಧುಮುಕುವುದು ಲೋಕರೂಢಿ. ಕೃಷ್ಣನ ಈ ಕೆಲಸವು ಕೃಷ್ಣನಷ್ಟೇ ವಯಸ್ಸಿನ ಗೊಲ್ಲರಿಗೆ ಆಶ್ಚರ್ಯಜನಕ. ಗೊಲ್ಲರಿಂದ ಮಾಡಲು ಸಾಧ್ಯವಿಲ್ಲದ ಕೆಲಸ ಇದು.

• • • •

ಸಂದೇಶ

ಫಲಾರ್ಥಿನಾಂ ಕಿಂ ನ ವಿಷಹ್ಯಮ್ ಅಸ್ತಿ

ಫಲಾಕಾಂಕ್ಷಿಗಳು ಎಂತಹ ಕ್ಲೇಶಗಳನ್ನೂ ಸಹಿಸುತ್ತಾರೆ

---

**ಕೃಷ್ಣಾಲಿಂಗನಕಾತರೈಃ ಕರಸಮೈಃ ಓಘೈರ್ನಿವೃತ್ತೈರಿವ**
**ಸ್ವಪ್ರಾಂತಸ್ಥಿತತತ್ಪದಾಂಕಮುರಸಾ ಧರ್ತುಂ ಧಿಯೇವಾರ್ಕಜಾ ।**

**ಸುಪ್ರೇಮಾಂಬುಧಿಮಿಶ್ರಣಾದಿವ ಜಗದ್ವಂದ್ಯಸ್ಯ ಪಾತಾದಿವ**
**ಸ್ನಿಗ್ಧಾ ತಂ ಮದನಾಕೃತಿಂ ಸ್ವಹೃದಯೇನಾಶ್ಲಿಷ್ಯ ಸಾऽವರ್ಧತ ॥ ೫೮ ॥**

**ಕೃಷ್ಣ** = ದೇವರ, **ಆಲಿಂಗನ** = ಅಪ್ಪುವಿಕೆಯಲ್ಲಿ, **ಕಾತರ್ಯೈಃ** = ಉತ್ಸುಕಗಳಾದ, **ಕರಸಮೈಃ** = ಕೈಯಂತಿರುವ, **ಓಘೈಃ** = ಪ್ರವಾಹಗಳಿಂದ, **ನಿವೃತ್ತೈಃ ಇವ** = ಹಿಂದಿರುಗಿದ, **ಸ್ವ** = ತನ್ನ, **ಪ್ರಾಂತ** = ದಡದಲ್ಲಿ, **ಸ್ಥಿತ** = ಇರುವ, **ತತ್** = ಕೃಷ್ಣನ, **ಪದ** = ಪಾದದ, **ಅಂಕಂ** = ಚಿಹ್ನೆಯನ್ನು, **ಉರಸಾ** = ಎದೆಯಿಂದ, **ಧರ್ತುಂ** = ಧರಿಸಲು, **ಧಿಯಾ ಇವ** = ಮನಸ್ಸಿನಿಂದ ಎಂಬಂತೆ, **ಅರ್ಕಜಾ** = ಸೂರ್ಯಪುತ್ರಿಯಾದ ಯಮುನೆಯು, **ಸು** = ಬಹಳ, **ಪ್ರೇಮ** = ಪ್ರೀತಿ ಎಂಬ, **ಅಂಬುಧಿ** = ಸಮುದ್ರದ, **ಮಿಶ್ರಣಾತ್ ಇವ** = ಸಂಯೋಗದಿಂದ ಎಂಬಂತೆ, **ಜಗತ್** = ಲೋಕದಿಂದ, **ವಂದ್ಯಸ್ಯ** = ನಮಸ್ಕೃತನಾದ ಕೃಷ್ಣನ, **ಪಾತಾತ್ ಇವ** = ಹಾರುವಿಕೆಯಿಂದ, **ಸ್ನಿಗ್ಧಾ** = ಪ್ರೀತಿಯಿಂದ, ಕೂಡಿದ, **ತಂ** = ಆ, **ಮದನ** = ಮನ್ಮಥನಂತೆ, **ಆಕೃತಿಂ** = ಶರೀರವುಳ್ಳ ಕೃಷ್ಣನನ್ನು, **ಸ್ವ** = ತನ್ನ, **ಹೃದಯೇನ** = ಎದೆಯಿಂದ, **ಆಶ್ಲಿಷ್ಯ** = ಆಲಿಂಗಿಸಿ, **ಸಾ** = ಅವಳು, **ಅವರ್ಧತ**= ಬೆಳೆದಳು.

ಕೃಷ್ಣ ನದಿಗೆ ಹಾರಿದ ಕ್ಷಣದಲ್ಲಿ ನದಿಯ ನೀರು ಏರಿತು. ಇದನ್ನು ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ – ಕೃಷ್ಣನು ನದಿಯನ್ನು ಪ್ರವೇಶಿಸಿದಾಗ ಯಮುನೆಗೆ ಕೃಷ್ಣನನ್ನು ಆಲಿಂಗಿಸ ಬೇಕೆಂದು ತೋರಿತು. ಅದಕ್ಕಾಗಿ ಪ್ರವಾಹ ಎಂಬ ತನ್ನ ಕೈಗಳನ್ನು ಮುಂದೆ ಹೋಗ-ಗೊಡಲಿಲ್ಲ. ನದಿಗೆ ಪ್ರವಾಹಗಳೇ ಕೈಗಳು. ಪ್ರವಾಹವು ಮುಂದೆ ಹೋದರೆ ದೇವರನ್ನು ಆಲಂಗಿಸಲು ಆಗುವುದಿಲ್ಲ ಎಂದು ಪ್ರವಾಹವನ್ನು ತಡೆಹಿಡಿದಳು. ಪ್ರವಾಹವು ನಿಂತರೆ ನೀರು ಏರುವುದು ಸಹಜ. ನೀರು ಎಷ್ಟು ಏರಿತು ಅಂದರೆ ನದೀದಡದಲ್ಲಿರುವ ಕೃಷ್ಣನ ಪಾದದ ಚಿಹ್ನೆಗಳನ್ನು ತನ್ನಲ್ಲಿ ತುಂಬಿಸಿಕೊಳ್ಳುತ್ತಾಳೋ ಎಂದು ತೋರುತ್ತಿತ್ತು. ಇದು ಒಂದು ಕಾರಣ. ಎರಡನೆಯದಾಗಿ, ನದಿಯು ಸಮುದ್ರವನ್ನು ಸೇರುವಲ್ಲಿ ತುಂಬಾ ನೀರುಳ್ಳವಳು ಆಗುತ್ತಾಳೆ. ಪ್ರಕೃತ ಯಮುನೆಯು ಕೃಷ್ಣನಲ್ಲಿ ಪ್ರೇಮದಿಂದ ಕೂಡಿದ್ದಾಳೆ. ಆ ಪ್ರೇಮ ಎಂಬ ಸಮುದ್ರದ ಸಂಗ ಈಕೆಗೆ ಆಗುವುದರಿಂದ ಈಕೆ ಬೆಳೆದಳು. ಮೂರು – ಕೃಷ್ಣನು ಬಹಳ ದೊಡ್ಡ ವ್ಯಕ್ತಿ. ಅಂತಹ ಕೃಷ್ಣನು ಯಮುನೆಯ ಮನೆಯ ಬಳಿಗೆ ಬಂದಿದ್ದಾನೆ. ದೊಡ್ಡವರು ನಮ್ಮಲ್ಲಿಗೆ ಬಂದಾಗ ನಾವು ಉಬ್ಬುವುದು ಸಹಜ. ಆದ್ದ-ರಿಂದಲೂ ಯಮುನೆ ಉಕ್ಕಿದಳು. ಈ ರೀತಿ ಯಮುನೆಯು ಕೃಷ್ಣನನ್ನು ಪ್ರೀತಿಯಿಂದ ತಬ್ಬಿಕೊಂಡು ಬೆಳೆದಳು. ಯಮುನೆಯಲ್ಲಿ ಷಣ್ಮಹಿಷಿಯರಲ್ಲಿ ಒಬ್ಬಳಾದ ಕಾಳಿಂದಿಯ ಸನ್ನಿಧಾನವು ಇದೆ ಎಂದು ವ್ಯಕ್ತವಾಗುತ್ತದೆ.

**ಕಲಿಲಯಂತಮಪಃ ಪುರುಷೋತ್ತಮಂ**
**ಫಣಿಪತಿಃ ಕಿಲ ದಂಶಿತುಮಗ್ರಹೀತ್ ।**
**ನಹಿ ಸ ವೇತ್ತಿ ಬಲಂ ಶ್ರವಣೋಜ್ಝಿತಃ**
**ಪರಮಯಾ ರಮಯಾ ಶ್ರುತಿಭಿಃ ಸ್ತುತಮ್ ॥೫೯॥**

**ಕಲಿಲಯಂತಂ** = ಕದಡುವ, **ಅಪಃ** = ನೀರನ್ನು, **ಪುರುಷೋತ್ತಮಂ** = ದೇವರನ್ನು, **ಫಣಿಪತಿಃ** = ಸರ್ಪವು, **ದಂಶಿತುಂ** = ಕಚ್ಚಲು, **ಅಗ್ರಹೀತ್ ಕಿಲ** = ಸ್ವೀಕರಿಸಿದನು. **ಸಃ** = ಸರ್ಪವು, **ನ ಹಿ ವೇತ್ತಿ** = ತಿಳಿಯುವುದಿಲ್ಲ, **ಬಲಂ** = ಶಕ್ತಿಯನ್ನು, **ಶ್ರವಣ** = ಕಿವಿ-ಯಿಂದ, **ಉಜ್ಝಿತಃ** = ರಹಿತನಾದ, **ಪರಮಯಾ** = ಶ್ರೇಷ್ಠಳಾದ, **ರಮಯಾ** = ಲಕ್ಷ್ಮಿಯಿಂದ, **ಶ್ರುತಿಭಿಃ** = ವೇದಗಳಿಂದ, **ಸ್ತುತಂ** = ಹೊಗಳಲ್ಪಟ್ಟ.

ಕೃಷ್ಣನು ನೀರನ್ನು ಕದಡಿಸಲು ಆರಂಭಿಸಿದನು. ಕಾಳಿಂಗನು ಕೃಷ್ಣನನ್ನು ಕಚ್ಚಲು ಆರಂಭಿಸಿದನು. ಸರ್ವೋತ್ತಮನಾದ ಕೃಷ್ಣನನ್ನು ಹೇಗೆ ಕಚ್ಚಿದ ಎಂದರೆ, ಈತನಿಗೆ ಕೃಷ್ಣನು ದೇವರು ಎಂಬ ಜ್ಞಾನ ಇಲ್ಲ. ಸಮಸ್ತವೇದಗಳು ಕೃಷ್ಣನನ್ನು ದೇವರೆಂದು ಹೊಗಳುತ್ತಿವೆ. ಅದನ್ನು ಕೇಳಿಸಿಕೊಳ್ಳಲು ಬೇಕಾದ ಕಿವಿಗಳು ಈತನಿಗೆ ಇಲ್ಲ. ಸರ್ಪಗಳಿಗೆ ಕಿವಿಗಳಿಲ್ಲ ಎಂದು ಮಾತು ಇದೆ.

**ಉತ್ಪಾತಚಕಿತಾ ಗೋಪಾಃ ಕೃಷ್ಣಸಂದರ್ಶನಾರ್ಥಿನಃ ।**
**ಪುರೋಧಾಯ ಯಯೂ ರಾಮಂ ಶೇಷಮಾರ್ಗಗತಾ ಇವ ॥೬೦॥**

**ಉತ್ಪಾತ** = ಅಪಶಕುನದಿಂದ, **ಚಕಿತಾಃ** = ಕಳವಳಗೊಂಡ, **ಗೋಪಾಃ** = ಗೊಲ್ಲರು, **ಕೃಷ್ಣ** = ಕೃಷ್ಣದೇವರ, **ಸಂದರ್ಶನ** = ನೋಡುವಿಕೆಯಲ್ಲಿ, **ಅರ್ಥಿನಃ** = ಆಸೆಯುಳ್ಳವರಾಗಿ, **ಪುರೋಧಾಯ** = ಮುಂದೆ ಇಟ್ಟು, **ಯಯುಃ** = ಹೊರಟರು, **ರಾಮಂ** = ಬಲರಾಮನನ್ನು, **ಶೇಷಮಾರ್ಗ** = ಶೇಷಮಾರ್ಗದಲ್ಲಿ, **ಗತಾ ಇವ** = ಹೊರಟವರಂತೆ.

ಇತ್ತ ಗೊಲ್ಲರ ಕೇರಿಯಲ್ಲಿ ಅಪಶಕುನಗಳು ಆರಂಭವಾದವು. ಕೃಷ್ಣನನ್ನು ಕಾಣುವ ತವಕ ಗೊಲ್ಲರಲ್ಲಿ ಉಂಟಾಯಿತು. ಅವರೆಲ್ಲಾ ಒಟ್ಟಾಗಿ ಬಲರಾಮನನ್ನು ಮುಂದೆ ಮಾಡಿಕೊಂಡು ಯಮುನೆಯ ಬಳಿಗೆ ಬಂದರು. ದೇವರ ಬಳಿಗೆ ಹೋಗಲು ಶಾಸ್ತ್ರವು ಶೇಷಮಾರ್ಗ, ಗರುಡಮಾರ್ಗ ಎಂದು ಎರಡು ಮಾರ್ಗಗಳನ್ನು ಹೇಳುತ್ತದೆ. ಈ ಬಲರಾಮನು ಶೇಷನ ಅವತಾರ. ಆದ್ದರಿಂದ ಗೊಲ್ಲರು ಶೇಷಮಾರ್ಗದಲ್ಲಿ ಹೊರಟಂತೆ ಇತ್ತು.

**ವ್ರಜಾಮ ವ್ರಜಗೋಪಾಲಾ ಯಮುನಾಮಮುನಾಽಧ್ವನಾ ।**
**ಪದಾನಿ ಪಥಿ ಕೃಷ್ಣಸ್ಯ ಲಕ್ಷ್ಯಂತೇ ಲಕ್ಷಣೈಃ ಸಹ ॥ ೬೧ ॥**

**ವ್ರಜಾಮ** = ಹೋಗುವ, **ವ್ರಜಗೋಪಾಲಾಃ** = ಗೊಲ್ಲರೇ, **ಯಮುನಾಮ್** = ಯಮುನೆಯನ್ನು, **ಅಮುನಾ** = ಈ, **ಅಧ್ವನಾ** = ದಾರಿಯಿಂದ, **ಪದಾನಿ** = ಹೆಜ್ಜೆಗಳು, **ಪಥಿ** = ದಾರಿಯಲ್ಲಿ, **ಕೃಷ್ಣಸ್ಯ** = ಹರಿಯ, **ಲಕ್ಷ್ಯಂತೇ** = ಕಾಣುತ್ತಿವೆ, **ಲಕ್ಷಣೈಃ** = ಲಕ್ಷಣಗಳಿಂದ, **ಸಹ** = ಕೂಡಿಕೊಂಡು.

ಕೃಷ್ಣನು ಹೋದ ದಾರಿಯಲ್ಲಿ ಹೆಜ್ಜೆಯ ಗುರುತು ಮೂಡಿತ್ತು. ಅದರಲ್ಲಿ ಧ್ವಜ, ಅಂಕುಶಾದಿ ಚಿಹ್ನೆಗಳಿತ್ತು. ಬಲರಾಮನು ಆ ಗುರುತುಗಳನ್ನು ಗೊಲ್ಲರಿಗೆ ತೋರಿಸುತ್ತಾ ಸರಿಯಾದ ದಾರಿಯಲ್ಲಿ ಕರೆದುಕೊಂಡು ಹೋದನು.

**ಇತ್ಥಂ ವಿಮರ್ಶತಃ ಪ್ರಾಪ್ತಾನ್ ದೃಷ್ಟ್ವಾ ಸ್ವಾನ್ ಸರ್ಪಮೂರ್ಧ್ನಿ ಸಃ ।**
**ನನರ್ತ ಕಿಲ ನರ್ನರ್ತಿ ಸುಹೃದಾಗಮನೇ ನ ಕಃ ॥ ೬೨ ॥**

**ಇತ್ಥಂ** = ಈ ರೀತಿಯಾಗಿ, **ವಿಮರ್ಶತಃ** = ವಿಚಾರ ಮಾಡುವ, **ಪ್ರಾಪ್ತಾನ್** = ಬಂದಿರುವ, **ದೃಷ್ಟ್ವಾ** = ನೋಡಿ, **ಸ್ವಾನ್** = ತನ್ನವರನ್ನು, **ಸರ್ಪಮೂರ್ಧ್ನಿ** = ಸರ್ಪದ ತಲೆಯಲ್ಲಿ, **ಸಃ** = ಕೃಷ್ಣನು, **ನನರ್ತ** = ಕುಣಿದನು, **ಕಿಲ** = ಪ್ರಸಿದ್ಧವು, **ಕಃ ನ ನರ್ನರ್ತಿ** = ಯಾರು ತಾನೇ ಕುಣಿಯುವುದಿಲ್ಲ, **ಸುಹೃದಾಗಮನೇ** = ಮಿತ್ರರ ಬರುವಿಕೆಯಲ್ಲಿ.

ಈ ರೀತಿ ವಿಮರ್ಶೆ ಮಾಡುತ್ತಾ ಗೊಲ್ಲರು ಯಮುನೆಯ ಬಳಿಗೆ ಬಂದರು. ಬಂದ ತನ್ನ ಬಂಧುಗಳನ್ನು ಕಂಡ ಕೃಷ್ಣನು ಸರ್ಪದ ತಲೆಯಲ್ಲಿ ಕುಣಿದನು. ಬಹಳ ಸಮಯದಿಂದ ಕಾಣದ ಬಂಧುಗಳನ್ನು ಕಂಡಾಗ ಯಾರಾದರೂ ಕುಣಿಯುವುದು ಸಹಜ.

**ಸರತ್ನಕೃಷ್ಣಾಹಿಫಣಾಂಕಣೇಷು**
**ನನರ್ತ ಕೃಷ್ಣಃ ಕಿಲ ಲೋಕವಂದ್ಯಃ ।**
**ಪದಂ ಗರುತ್ಮತ್ಕರಮುಖ್ಯದೈವ-**
**ಮಿವೌಷಧಂ ತದ್ದಮನೇ ವಿಧಿತ್ಸನ್ ॥ ೬೩ ॥**

**ಸರತ್ನ** = ರತ್ನಗಳಿಂದ ಕೂಡಿದ, **ಕೃಷ್ಣ** = ಕಾಳಿಯನೆಂಬ, **ಅಹಿ** = ಸರ್ಪದ, **ಫಣ** = ಹೆಡೆಗಳೆಂಬ, **ಅಂಕಣೇಷು** = ಅಂಗಳದಲ್ಲಿ, **ನನರ್ತ** = ಕುಣಿದನು, **ಕೃಷ್ಣಃ** = ಹರಿಯು, **ಲೋಕವಂದ್ಯಃ** = ಜಗತ್ತಿನಿಂದ ವಂದ್ಯನಾದ, **ಪದಂ** = ಕಾಲನ್ನು, **ಗರುತ್ಮತ್** = ಗರುಡನ, **ಕರ** = ಕೈಯ, **ಮುಖ್ಯದೈವಂ** = ಮುಖ್ಯದೇವತೆಯಾದ, **ಔಷಧಮಿವ** = ಔಷಧವನ್ನೆಂಬಂತೆ, **ತದ್ದಮನೇ** = ಆತನ ನಿಗ್ರಹದಲ್ಲಿ, **ವಿಧಿತ್ಸನ್**= ಮಾಡುತ್ತಾ.

ಕಾಳಿಂಗನ ಹೆಡೆಗಳಲ್ಲಿ ರತ್ನಗಳಿವೆ. ಹೆಡೆಗಳು ಬಹಳ ವಿಶಾಲಗಳಾಗಿವೆ. ಆದ್ದರಿಂದಲೇ ಅಂಗಳದಂತಿವೆ. ಇಲ್ಲಿ ಕೃಷ್ಣನು ಕುಣಿದನು. ಯದ್ಯಪಿ ಕೃಷ್ಣನು ಬಹಳ ದೊಡ್ಡವನು. ತಾನು ದೊಡ್ಡವ ಎಂದು ಬೀಗದೆ ತನ್ನ ಭಕ್ತನ ಅಂಗಳದಲ್ಲಿ ಕುಣಿದನು. ಯಾರೂ ನೋಡು-ವುದಿಲ್ಲ. ಆದ್ದರಿಂದ ಕುಣಿದನು ಎನ್ನಲು ಸಾಧ್ಯವಿಲ್ಲ. ಅಲ್ಲಿ ಸರ್ಪದ ಹೆಡೆಗಳ ರತ್ನಗಳಿಂದ ಒಳ್ಳೆಯ ಬೆಳಕಿತ್ತು. ನೋಡುವ ಜನ ಬಹಳ ಇದ್ದರು. ಈ ಸರ್ಪದ ವಿಷವನ್ನು ಮರ್ದಿಸಲು ಬೇಕಾದ ಔಷಧಿ ಕೃಷ್ಣನ ಪಾದದ ಅಡಿಯಲ್ಲಿ ಇತ್ತು. ಗರುಡನು ಸದಾ ಕೃಷ್ಣನನ್ನು ಹೊತ್ತುಕೊಂಡು ತಿರುಗುವವನು. ಕೃಷ್ಣನ ಪಾದವನ್ನು ತನ್ನ ಕೈಯಲ್ಲಿ ಇಟ್ಟು-ಕೊಳ್ಳುವವನು. ಈ ರೀತಿ ಗರುಡನ ಕೈಯ ಸಂಬಂಧ ಕೃಷ್ಣನ ಪಾದಕ್ಕೆ ಆಗಿದೆ. ಅಂತಹ ಪಾದವನ್ನು ಕಾಳಿಂಗ ತಲೆಯ ಮೇಲಿಟ್ಟಾಗ ಸಹಜವಾಗಿ ಆತನ ದಮನ ಆಗುತ್ತದೆ. ಗರುಡನ ಸ್ಮರಣೆ ಮಾಡಿದರೂ ವಿಷ ಪರಿಹಾರವಾಗುತ್ತದೆ. ಇನ್ನು ಗರುಡನ ಸಂಪರ್ಕಕ್ಕೆ ಒಳಗಾದ ಪಾದದ ಸಂಬಂಧವಾದರೆ ವಿಷ ಪರಿಹಾರವಾಗುತ್ತದೆ ಎಂಬುದು ಏನು ಹೇಳ-ತಕ್ಕದ್ದು ?

• • • •

**ಸಂದೇಶ**

**ವಿನಾಶಶೂನ್ಯಸ್ಯ ಹಿ ಕಿಂ ನ ಕಾರ್ಯಮ್**

ಮರಣಭಯವಿಲ್ಲದವರು ಏನು ಮಾಡಲೂ ಹೆದರುವುದಿಲ್ಲ

---

**ಉನ್ನೀಯ ಕಾಲಿಯಫಣೀಂದ್ರವಿರಾಜಿಪುಚ್ಛಂ**
**ಸ್ವಿನ್ನಂ ಮಮರ್ದ ವಿಷದೂಷಿತಮಸ್ಯ ವಕ್ತ್ರಮ್ ।**
**ತಸ್ಯಾಂತರಾಶ್ರಿತಮಶೇಷಮಸಾವಸಹ್ಯಂ**
**ನಿಷ್ಕಾಸಯನ್ನಿವ ವಿಷಂ ವಿನತಾನನೇನ ॥ ೬೪ ॥**

**ಉನ್ನೀಯ** = ಎತ್ತಿ, **ಕಾಲಿಯ** = ಕಾಲಿಯನೆಂಬ, **ಫಣೀಂದ್ರ** = ಸರ್ಪದ, **ವಿರಾಜಿತ** = ಶೋಭಿಸುವ, **ಪುಚ್ಛಂ** = ಬಾಲವನ್ನು, **ಸ್ವಿನ್ನಂ** = ಬಳಲಿದ, **ಮಮರ್ದ** = ಮೆಟ್ಟಿದನು, **ವಿಷದೂಷಿತಂ** = ವಿಷದಿಂದ ಕಲುಷಿತವಾದ, **ಅಸ್ಯ** = ಇವನ, **ವಕ್ತ್ರಂ** = ತಲೆಯನ್ನು, **ತಸ್ಯ** = ಸರ್ಪದ, **ಅಂತರ** = ಒಳಗೆ, **ಆಶ್ರಿತಂ** = ಇರುವ, **ಅಶೇಷಂ** = ಎಲ್ಲಾ, **ಅಸೌ** = ಕೃಷ್ಣನು, **ಅಸಹ್ಯಂ** = ಭಯಾನಕವಾದ, **ನಿಷ್ಕಾಸಯನ್ ಇವ** = ಹೊರಗೆ ಹಾಕುವವನಂತೆ, **ವಿಷಂ** = ವಿಷವನ್ನು, **ವಿನತ** = ಬಗ್ಗಿದ, **ಆನನೇನ**= ಮುಖದಿಂದ.

ಕಾಳಿಂಗನ ಬಾಲವನ್ನು ಕೃಷ್ಣನು ಎತ್ತಿ ಹಿಡಿದನು. ಕಾಳಿಂಗನು ಬಹಳ ಬಳಲಿದ್ದಾನೆ. ಬಾಯಿಯಲ್ಲಿ ಅಸಹ್ಯವಾದ ವಿಷವಿದೆ. ತಲೆಯನ್ನು ಕೆಳಗೆ ಮಾಡಿದ್ದಾನೆ. ಇಂತಹ ತಲೆಯನ್ನು ಮೆಟ್ಟುತ್ತಿದ್ದಾನೆ. ಇದು ಯಾಕೆ ಹೀಗೆ? ಅಂದರೆ ಈ ಸರ್ಪದಲ್ಲಿ ಸೇರಿದ ಎಲ್ಲಾ ವಿಷವನ್ನೂ

ಹೊರಗೆ ಹಾಕಬೇಕಾಗಿದೆ. ಅದಕ್ಕಾಗಿ ಬಾಲವನ್ನು ಎತ್ತಿ ಹಿಡಿದು ತಲೆಯನ್ನು ತಗ್ಗಿಸಿದ. ಚೀಲದಲ್ಲಿ ತುಂಬಿದ ವಸ್ತುವನ್ನು ಸಮಗ್ರವಾಗಿ ಹೊರಹಾಕಲು ಅದರ ಬುಡವನ್ನು ಹಿಡಿದು ಮೇಲೆ ಎತ್ತುವಂತೆ.

**ಸ ದಂದಶೂಕಸ್ಯ ಮುಖಂ ವಿಭಿಂದನ್**
**ತದೀಯಪುಚ್ಛಂ ಜಗೃಹೇ ಕರೇಣ ।**
**ಯಥಾಪರಾಧಂ ನನು ದಂಡದಾತಾ**
**ನಿರಾಗಸಂ ಕಂ ವರಯೇನ್ನ ಶೌರಿಃ ॥೬೫॥**

**ಸಃ** = ಆ, **ದಂದಶೂಕಸ್ಯ** = ಸರ್ಪದ, **ಮುಖಂ** = ತಲೆಯನ್ನು, **ವಿಭಿಂದನ್** = ಮರ್ದಿಸುತ್ತಾ, **ತದೀಯ** = ಅದರ, **ಪುಚ್ಛಂ** = ಬಾಲವನ್ನು, **ಜಗೃಹೇ** = ಹಿಡಿದನು, **ಕರೇಣ** = ಕೈಯಿಂದ, **ಯಥಾ ಅಪರಾಧಂ** = ತಪ್ಪಿಗೆ ಸರಿಯಾಗಿ, **ದಂಡ** = ಶಿಕ್ಷೆಯನ್ನು, **ದಾತಾ ನನು** = ಕೊಡುತ್ತಾನೆ, **ನಿರಾಗಸಂ** = ನಿರಪರಾಧಿಯನ್ನು, **ಕಂ** = ಯಾರುತಾನೇ, **ವರಯೇತ್ ನ** = ಸ್ವೀಕರಿಸುವುದಿಲ್ಲ, **ಶೌರಿಃ** = ಕೃಷ್ಣನು.

ಬಹಳಷ್ಟು ಜನರನ್ನು ಕಚ್ಚಿದ ಈ ಸರ್ಪದ ತಲೆಯನ್ನು ಮೆಟ್ಟಿ ಬಾಲವನ್ನು ತಾನು ಕೈಯಿಂದ ಸ್ವೀಕರಿಸಿದನು. ದೇವರು ಅನ್ಯಾಯ ಮಾಡಿದವರಿಗೆ ತತ್ರಾಪಿ(ಅದರಲ್ಲೂ) ಅನ್ಯಾಯ ಮಾಡಿದ ಭಾಗವನ್ನು ಮಾತ್ರ ಶಿಕ್ಷಿಸುವನು. ಬೇರೆಯದನ್ನು ಉದ್ಧರಿಸುವನು. ಅಪರಾಧ ಮಾಡಿದ್ದು ಸರ್ಪದ ಬಾಯಿ, ಬಾಲ ಅಲ್ಲ. ಆದ್ದರಿಂದ ತಲೆಯನ್ನು ತುಳಿದ. ಬಾಲವನ್ನು ಉದ್ಧರಿಸಿದ.

• • • •

**ಸಂದೇಶ**

**ಭಕ್ತ್ಯೈಕವಶ್ಯಃ ಪ್ರಭುಃ**

ದೇವರು ಭಕ್ತಿಗೆ ಮಾತ್ರ ಒಲಿಯುವನು

---

**ವಿದಾರಯನ್ನಪ್ಯಹಿರಾಜಮೌಲಿಂ**
**ಕರೇಣ ಪಸ್ಪರ್ಶ ತಮಾರ್ತಬಂಧುಃ ।**
**ನಿಜೇಷು ಶಿಕ್ಷಾಽಪಿ ಹಿ ತಸ್ಯ ವಿಷ್ಣೋಃ**
**ಪರಂ ಪರಾನುಗ್ರಹಹೇತುರೇವ ॥೬೬ ॥**

**ವಿದಾರಯನ್ನಪಿ** = ಮರ್ದಿಸಿದರೂ, **ಅಹಿ ರಾಜ** = ಸರ್ಪದ, **ಮೌಲಿಂ** = ತಲೆಯನ್ನು, **ಕರೇಣ** = ಕೈಯಿಂದ, **ಪಸ್ಪರ್ಶ** = ಸವರಿದನು, **ತಂ** = ಅವನನ್ನು, **ಆರ್ತ** = ದುಃಖಿತರ, **ಬಂಧುಃ** = ಮಿತ್ರನಾದ ಕೃಷ್ಣನು, **ನಿಜೇಷು** = ತನ್ನವರಲ್ಲಿ, **ಶಿಕ್ಷಾ ಅಪಿ** = ಶಿಕ್ಷೆಯೂ

**ಕೂಡಾ**, **ತಸ್ಯ** = ಆ, **ವಿಷ್ಣೋಃ** = ದೇವರಿಗೆ, **ಪರಂ** = ಉತ್ತಮವಾಗಿ, **ಪರ** = ಶ್ರೇಷ್ಠವಾದ, **ಅನುಗ್ರಹ** = ಅನುಗ್ರಹಕ್ಕೆ, **ಹೇತುಃ** ಏವ = ಕಾರಣವೇ.

ಕೃಷ್ಣನು ಕಾಳಿಂಗನ ತಲೆಯನ್ನು ಮೆಟ್ಟಿದರೂ ತನ್ನ ಕೈಯಿಂದ ಆತನ ತಲೆಯನ್ನು ತಡವಿದನು. ಕೃಷ್ಣನು ದುಃಖಿತರಾದ ತನ್ನ ಭಕ್ತರ ಬಂಧು ತಾನೇ? ದೇವರು ತನ್ನ ಭಕ್ತರನ್ನು ಶಿಕ್ಷಿಸುತ್ತಾನೆ. ಅದು ಭಕ್ತರಿಗೆ ಅನುಕೂಲವಾಗುತ್ತದೆ. ತಂದೆ ತಾಯಿಗಳು ಮಕ್ಕಳನ್ನು ಶಿಕ್ಷಿಸು-ವಂತೆ.

**ನೃತ್ಯಂತಮೇನಂ ನಿಜನಾಥಮೇತ್ಯ**
**ಭೃತ್ಯಾಃ ಭವಾಬ್ಜಾಸನಮುಖ್ಯದೇವಾಃ ।**
**ವಿಷ್ವಕ್ ಗೃಣಂತಃ ಕಿಲ ತಸ್ಥುರಾರ್ತ-**
**ಸರ್ಪಾಶ್ರಿತಾಜ್ಞಾನಮಿವಾಪಹರ್ತುಮ್ ॥ ೬೭॥**

**ನೃತ್ಯಂತಂ** = ಕುಣಿಯುವ, **ಏನಂ** = ಈ, **ನಿಜ ನಾಥಮ್** = ತಮ್ಮ ಒಡೆಯನನ್ನು, **ಏತ್ಯ** = ಬಂದು, **ಭೃತ್ಯಾಃ** = ಸೇವಕರಾದ, **ಭವ** = ರುದ್ರನು, **ಅಬ್ಜಾಸನ** = ಬ್ರಹ್ಮ, **ಮುಖ್ಯ** = ಮೊದಲಾದ, **ದೇವಾಃ** = ದೇವತೆಗಳು, **ವಿಷ್ವಕ್** = ಚೆನ್ನಾಗಿ, **ಗೃಣಂತಃ** = ಹೊಗಳುತ್ತಾ, **ತಸ್ಥುಃ ಕಿಲ** = ನಿಂತರು, **ಆರ್ತ** = ದುಃಖಗೊಂಡ, **ಸರ್ಪ** = ಹಾವಲ್ಲಿ, **ಆಶ್ರಿತ** = ಇರುವ, **ಅಜ್ಞಾನಂ** = ಅಜ್ಞಾನವನ್ನು, **ಅಪಹರ್ತುಂ ಇವ** = ನಾಶ ಮಾಡುವಂತೆ.

ಈ ಸಮಯದಲ್ಲಿ ಬ್ರಹ್ಮಾದಿ ದೇವತೆಗಳು ಇಲ್ಲಿಗೆ ಬಂದರು. ತಮ್ಮ ಒಡೆಯನಾದ ಕೃಷ್ಣನ ಸುತ್ತಲೂ ನಿಂತು ಹೊಗಳಿದರು. ಯಾಕೆಂದರೆ, ದೇವತೆಗಳಾದ ಇವರು ಕೃಷ್ಣನ ಸೇವೆಯನ್ನು ಮಾಡುತ್ತಿರುವುದನ್ನು ನೋಡಿ ಈ ಕಾಳಿಯನು, ಕೃಷ್ಣನು ಸಾಕ್ಷಾತ್ ದೇವರು ಎಂದು ತಿಳಿಯಲಿ ಎಂದು.

**ಅನೀನದತ್ ಪದ್ಮಭವೋ ಮೃದಂಗಂ**
**ಜಗೌ ಹನೂಮಾನ್ ಜಗತಾಮಧೀಶಮ್ ।**
**ಅದರ್ಶಯತ್ ತಾಲಗತೀಃ ಕಪರ್ದೀ**
**ನನರ್ತ ಗೋಪಾಲಕಬಾಲಮೌಲಿಃ ॥ ೬೮ ॥**

**ಅನೀನದತ್** = ಬಾರಿಸಿದನು, **ಪದ್ಮಭವಃ** = ಬ್ರಹ್ಮನು, **ಮೃದಂಗಂ** = ಮೃದಂಗವನ್ನು, **ಜಗೌ** = ಹಾಡಿದನು, **ಹನೂಮಾನ್** = ಆಂಜನೇಯನು, **ಜಗತಾಂ** = ಲೋಕಕ್ಕೆ, **ಅಧೀಶಮ್** = ಒಡೆಯನನ್ನು, **ಅದರ್ಶಯತ್** = ತಿಳಿಸಿದನು, **ತಾಲಗತೀಃ** = ತಾಳದ

ಕ್ರಮವನ್ನು, **ಕಪರ್ದೀ** = ರುದ್ರನು, **ನನರ್ತ** = ಕುಣಿದನು, **ಗೋಪಾಲಕ** = ಗೊಲ್ಲರೆಂಬ, **ಬಾಲ** = ಬಾಲಕರಿಗೆ, **ಮೌಲಿಃ**= ಶ್ರೇಷ್ಠನಾದ ಕೃಷ್ಣನು.

ಹರಿಯು ಕಾಳೀಯನ ತಲೆಯಲ್ಲಿ ಕುಣಿದಾಗ ಚತುರ್ಮುಖನು ಮೃದಂಗವನ್ನು ಬಾರಿಸಿದನು. ವಾಯುದೇವರು ಹಾಡಿದರು. ರುದ್ರದೇವರು ತಾಳವನ್ನು ತಟ್ಟಿದರು.

ಈ ಶ್ಲೋಕದಲ್ಲಿ ದೇವತಾತಾರತಮ್ಯವು ನಿರೂಪಿತವಾಗಿದೆ. ನೃತ್ಯಮಾಡುವ ದೇವರು ಸರ್ವೋತ್ತಮ. ಅನಂತರ ಮೃದಂಗದವರು, ಹಾಡುವವರು ಸಮಾನರು. ಅನಂತರದ ಸ್ಥಾನ ತಾಳ ತಟ್ಟುವ ರುದ್ರದೇವರದ್ದು. ಲೋಕದಲ್ಲಿಯೂ ಇದೇ ನ್ಯಾಯವನ್ನು ಕಾಣ-ಬಹುದು.

ತತೋऽಹಿಪತ್ನೀಪ್ರಿಯಮಂಜುವಾಕ್ಯಂ
ನಿಶಮ್ಯ ತಂ ನಿರ್ಭಯಮಾಶು ಚಕ್ರೇ ।
ತಥಾಹಿ ನಾರೀಮೃದುಭಾಷಣೇನ
ನ ಕಸ್ಯ ಚಿತ್ತಂ ಮೃದುತಾಮುಪೈತಿ ॥ ೬೯ ॥

**ತತಃ** = ಅನಂತರ, **ಅಹಿಪತ್ನೀ** = ಹಾವಿನ ಪತ್ನಿಯರ, **ಪ್ರಿಯ** = ಇಷ್ಟವಾದ, **ಮಂಜು** = ಚಂದದ, **ವಾಕ್ಯಂ** = ಮಾತನ್ನು, **ನಿಶಮ್ಯ** = ಕೇಳಿ, **ತಂ** = ಹಾವನ್ನು, **ನಿರ್ಭಯಂ** = ಭಯರಹಿತನನ್ನಾಗಿ, **ಆಶು** = ಕೂಡಲೇ, **ಚಕ್ರೇ** = ಮಾಡಿದನು. **ತಥಾಹಿ** = ಅದು ಸರಿ, **ನಾರೀ** = ಸ್ತ್ರೀಯರ, **ಮೃದು** = ಮೆತ್ತಗಿನ, **ಭಾಷಣೇನ** = ಮಾತಿನಿಂದ, **ಕಸ್ಯ** = ಯಾರ, **ಚಿತ್ತಂ** = ಮನಸ್ಸು, **ಮೃದುತಾಂ** = ಮೃದುತ್ವವನ್ನು, **ನ ಉಪೈತಿ** = ಹೊಂದುವುದಿಲ್ಲ.

ಈ ಸರ್ಪದ ಪತ್ನಿಯರು ಕೃಷ್ಣನನ್ನು ಬಹಳವಾಗಿ ಪ್ರಾರ್ಥಿಸಿದರು. ಇವರ ಪ್ರಾರ್ಥನೆಗೆ ಒಲಿದ ದೇವರು ಕಾಳಿಂಗನ ಭಯವನ್ನು ಪರಿಹರಿಸಿದನು. ಸ್ತ್ರೀಯರ ಕಣ್ಣೀರು ಅಥವಾ ಮೆತ್ತಗಾದ ಮಾತು ಎಂತಹ ವ್ಯಕ್ತಿಗಳನ್ನೂ ಮಣಿಸುತ್ತದೆ.

ವಿಷಾಶ್ರಯತ್ವೇನ ಗುಣೇನ ನಾಮ್ನಾ
ದ್ವಯೋಃ ಸ ಸಾಮ್ಯೇऽಪಿ ಭುಜಂಗಮಂ ತಮ್ ।
ನಿಪೀಡ್ಯ ಭಾಸ್ವತ್ತನಯಾಂ ಜುಗೋಪ
ನ ಕಸ್ಯ ಯೋಷಿತ್ಸು ಹಿ ಪಕ್ಷಪಾತಃ ॥೭೦॥

**ವಿಷಾಶ್ರಯತ್ವೇನ** = ವಿಷದ ಇರುವಿಕೆಯಿಂದ, **ಗುಣೇನ** = ನೀಲಿಬಣ್ಣದಿಂದ, **ನಾಮ್ನಾ** = ಹೆಸರಿನಿಂದ,**ದ್ವಯೋಃ** = ಹಾವು (ಕಾಳಿಂದಿಗಳಿಗೆ), **ಸಃ** = ಕೃಷ್ಣನು, **ಸಾಮ್ಯೇ ಅಪಿ** = ಹೋಲಿಕೆ ಇದ್ದರೂ, **ಭುಜಂಗಮಂ** = ಹಾವನ್ನು, **ತಂ** = ಆ, **ನಿಪೀಡ್ಯ** = ಮರ್ದಿಸಿ,

**ಕೂಡಾ**, **ತಸ್ಯ** = ಆ, **ವಿಷ್ಣೋಃ** = ದೇವರಿಗೆ, **ಪರಂ** = ಉತ್ತಮವಾಗಿ, **ಪರ** = ಶ್ರೇಷ್ಠವಾದ, **ಅನುಗ್ರಹ** = ಅನುಗ್ರಹಕ್ಕೆ, **ಹೇತುಃ** ಏವ = ಕಾರಣವೇ.

ಕೃಷ್ಣನು ಕಾಳಿಂಗನ ತಲೆಯನ್ನು ಮೆಟ್ಟಿದರೂ ತನ್ನ ಕೈಯಿಂದ ಆತನ ತಲೆಯನ್ನು ತಡವಿದನು. ಕೃಷ್ಣನು ದುಃಖಿತರಾದ ತನ್ನ ಭಕ್ತರ ಬಂಧು ತಾನೇ? ದೇವರು ತನ್ನ ಭಕ್ತರನ್ನು ಶಿಕ್ಷಿಸುತ್ತಾನೆ. ಅದು ಭಕ್ತರಿಗೆ ಅನುಕೂಲವಾಗುತ್ತದೆ. ತಂದೆ ತಾಯಿಗಳು ಮಕ್ಕಳನ್ನು ಶಿಕ್ಷಿಸು-ವಂತೆ.

**ನೃತ್ಯಂತಮೇನಂ ನಿಜನಾಥಮೇತ್ಯ**
**ಭೃತ್ಯಾಃ ಭವಾಬ್ಜಾಸನಮುಖ್ಯದೇವಾಃ ।**
**ವಿಷ್ವಕ್ ಗೃಣಂತಃ ಕಿಲ ತಸ್ಥುರಾರ್ತ-**
**ಸರ್ಪಾಶ್ರಿತಾಜ್ಞಾನಮಿವಾಪಹರ್ತುಮ್ ॥ ೬೭॥**

**ನೃತ್ಯಂತಂ** = ಕುಣಿಯುವ, **ಏನಂ** = ಈ, **ನಿಜ ನಾಥಮ್** = ತಮ್ಮ ಒಡೆಯನನ್ನು, **ಏತ್ಯ** = ಬಂದು, **ಭೃತ್ಯಾಃ** = ಸೇವಕರಾದ, **ಭವ** = ರುದ್ರನು, **ಅಬ್ಜಾಸನ** = ಬ್ರಹ್ಮ, **ಮುಖ್ಯ** = ಮೊದಲಾದ, **ದೇವಾಃ** = ದೇವತೆಗಳು, **ವಿಷ್ವಕ್** = ಚೆನ್ನಾಗಿ, **ಗೃಣಂತಃ** = ಹೊಗಳುತ್ತಾ, **ತಸ್ಥುಃ ಕಿಲ** = ನಿಂತರು, **ಆರ್ತ** = ದುಃಖಗೊಂಡ, **ಸರ್ಪ** = ಹಾವಲ್ಲಿ, **ಆಶ್ರಿತ** = ಇರುವ, **ಅಜ್ಞಾನಂ** = ಅಜ್ಞಾನವನ್ನು, **ಅಪಹರ್ತುಂ ಇವ** = ನಾಶ ಮಾಡುವಂತೆ.

ಈ ಸಮಯದಲ್ಲಿ ಬ್ರಹ್ಮಾದಿ ದೇವತೆಗಳು ಇಲ್ಲಿಗೆ ಬಂದರು. ತಮ್ಮ ಒಡೆಯನಾದ ಕೃಷ್ಣನ ಸುತ್ತಲೂ ನಿಂತು ಹೊಗಳಿದರು. ಯಾಕೆಂದರೆ, ದೇವತೆಗಳಾದ ಇವರು ಕೃಷ್ಣನ ಸೇವೆಯನ್ನು ಮಾಡುತ್ತಿರುವುದನ್ನು ನೋಡಿ ಈ ಕಾಳಿಯನು, ಕೃಷ್ಣನು ಸಾಕ್ಷಾತ್ ದೇವರು ಎಂದು ತಿಳಿಯಲಿ ಎಂದು.

**ಅನೀನದತ್ ಪದ್ಮಭವೋ ಮೃದಂಗಂ**
**ಜಗೌ ಹನೂಮಾನ್ ಜಗತಾಮಧೀಶಮ್ ।**
**ಅದರ್ಶಯತ್ ತಾಲಗತೀಃ ಕಪರ್ದೀ**
**ನನರ್ತ ಗೋಪಾಲಕಬಾಲಮೌಲಿಃ ॥ ೬೮ ॥**

**ಅನೀನದತ್** = ಬಾರಿಸಿದನು, **ಪದ್ಮಭವಃ** = ಬ್ರಹ್ಮನು, **ಮೃದಂಗಂ** = ಮೃದಂಗವನ್ನು, **ಜಗೌ** = ಹಾಡಿದನು, **ಹನೂಮಾನ್** = ಆಂಜನೇಯನು, **ಜಗತಾಂ** = ಲೋಕಕ್ಕೆ, **ಅಧಿ ಈಶಮ್** = ಒಡೆಯನನ್ನು, **ಅದರ್ಶಯತ್** = ತಿಳಿಸಿದನು, **ತಾಲಗತೀಃ** = ತಾಳದ

ಕ್ರಮವನ್ನು, **ಕಪರ್ದೀ** = ರುದ್ರನು, **ನನರ್ತ** = ಕುಣಿದನು, **ಗೋಪಾಲಕ** = ಗೊಲ್ಲರೆಂಬ, **ಬಾಲ** = ಬಾಲಕರಿಗೆ, **ಮೌಲಿಃ**= ಶ್ರೇಷ್ಠನಾದ ಕೃಷ್ಣನು.

ಹರಿಯು ಕಾಳೀಯನ ತಲೆಯಲ್ಲಿ ಕುಣಿದಾಗ ಚತುರ್ಮುಖನು ಮೃದಂಗವನ್ನು ಬಾರಿಸಿದನು. ವಾಯುದೇವರು ಹಾಡಿದರು. ರುದ್ರದೇವರು ತಾಳವನ್ನು ತಟ್ಟಿದರು.

ಈ ಶ್ಲೋಕದಲ್ಲಿ ದೇವತಾತಾರತಮ್ಯವು ನಿರೂಪಿತವಾಗಿದೆ. ನೃತ್ಯಮಾಡುವ ದೇವರು ಸರ್ವೋತ್ತಮ. ಅನಂತರ ಮೃದಂಗದವರು, ಹಾಡುವವರು ಸಮಾನರು. ಅನಂತರದ ಸ್ಥಾನ ತಾಳ ತಟ್ಟುವ ರುದ್ರದೇವರದ್ದು. ಲೋಕದಲ್ಲಿಯೂ ಇದೇ ನ್ಯಾಯವನ್ನು ಕಾಣ-ಬಹುದು.

**ತತೋऽಹಿಪತ್ನೀಪ್ರಿಯಮಂಜುವಾಕ್ಯಂ**
**ನಿಶಮ್ಯ ತಂ ನಿರ್ಭಯಮಾಶು ಚಕ್ರೇ ।**
**ತಥಾಹಿ ನಾರೀಮೃದುಭಾಷಣೇನ**
**ನ ಕಸ್ಯ ಚಿತ್ತಂ ಮೃದುತಾಮುಪೈತಿ ॥ ೬೯ ॥**

**ತತಃ** = ಅನಂತರ, **ಅಹಿಪತ್ನೀ** = ಹಾವಿನ ಪತ್ನಿಯರ, **ಪ್ರಿಯ** = ಇಷ್ಟವಾದ, **ಮಂಜು** = ಚಂದದ, **ವಾಕ್ಯಂ** = ಮಾತನ್ನು, **ನಿಶಮ್ಯ** = ಕೇಳಿ, **ತಂ** = ಹಾವನ್ನು, **ನಿರ್ಭಯಂ** = ಭಯರಹಿತನನ್ನಾಗಿ, **ಆಶು** = ಕೂಡಲೇ, **ಚಕ್ರೇ** = ಮಾಡಿದನು. **ತಥಾಹಿ** = ಅದು ಸರಿ, **ನಾರೀ** = ಸ್ತ್ರೀಯರ, **ಮೃದು** = ಮೆತ್ತಗಿನ, **ಭಾಷಣೇನ** = ಮಾತಿನಿಂದ, **ಕಸ್ಯ** = ಯಾರ, **ಚಿತ್ತಂ** = ಮನಸ್ಸು, **ಮೃದುತಾಂ** = ಮೃದುತ್ವವನ್ನು, **ನ ಉಪೈತಿ** = ಹೊಂದುವುದಿಲ್ಲ.

ಈ ಸರ್ಪದ ಪತ್ನಿಯರು ಕೃಷ್ಣನನ್ನು ಬಹಳವಾಗಿ ಪ್ರಾರ್ಥಿಸಿದರು. ಇವರ ಪ್ರಾರ್ಥನೆಗೆ ಒಲಿದ ದೇವರು ಕಾಳಿಂಗನ ಭಯವನ್ನು ಪರಿಹರಿಸಿದನು. ಸ್ತ್ರೀಯರ ಕಣ್ಣೀರು ಅಥವಾ ಮೆತ್ತಗಾದ ಮಾತು ಎಂತಹ ವ್ಯಕ್ತಿಗಳನ್ನೂ ಮಣಿಸುತ್ತದೆ.

**ವಿಷಾಶ್ರಯತ್ವೇನ ಗುಣೇನ ನಾಮ್ನಾ**
**ದ್ವಯೋಃ ಸ ಸಾಮ್ಯೇऽಪಿ ಭುಜಂಗಮಂ ತಮ್ ।**
**ನಿಪೀಡ್ಯ ಭಾಸ್ವತ್ತನಯಾಂ ಜುಗೋಪ**
**ನ ಕಸ್ಯ ಯೋಷಿತ್ಸು ಹಿ ಪಕ್ಷಪಾತಃ ॥೭೦॥**

**ವಿಷಾಶ್ರಯತ್ವೇನ** = ವಿಷದ ಇರುವಿಕೆಯಿಂದ, **ಗುಣೇನ** = ನೀಲಿಬಣ್ಣದಿಂದ, **ನಾಮ್ನಾ** = ಹೆಸರಿನಿಂದ,**ದ್ವಯೋಃ** = ಹಾವು (ಕಾಳಿಂದಿಗಳಿಗೆ), **ಸಃ** = ಕೃಷ್ಣನು, **ಸಾಮ್ಯೇ ಅಪಿ** = ಹೋಲಿಕೆ ಇದ್ದರೂ, **ಭುಜಂಗಮಂ** = ಹಾವನ್ನು, **ತಂ** = ಆ, **ನಿಪೀಡ್ಯ** = ಮರ್ದಿಸಿ,

**ಭಾಸ್ವತ್** = ಸೂರ್ಯನ, **ತನಯಾಂ** = ಮಗಳನ್ನು, **ಜುಗೋಪ** = ರಕ್ಷಿಸಿದನು, **ಕಸ್ಯ** = ಯಾರಿಗೆ, **ಯೋಷಿತ್ಸು** = ಸ್ತ್ರೀಯರಲ್ಲಿ, **ನ ಹಿ ಪಕ್ಷಪಾತಃ** = ಪಕ್ಷಪಾತ ಇಲ್ಲ.

ಕಾಳಿಂಗನಲ್ಲಿ ಹಾಗೂ ಯಮುನೆಯಲ್ಲಿ ಇಬ್ಬರಲ್ಲೂ ವಿಷ ಇದೆ. ನೀರಿಗೂ ವಿಷ ಎಂದು ಹೆಸರಿದೆ. ಇಬ್ಬರೂ ನೀಲಬಣ್ಣದವರು. ಯಮುನೆಯ ನೀರು ಕಪ್ಪು. ಇಬ್ಬರಿಗೂ ಕೃಷ್ಣ ಎಂಬ ಹೆಸರಿದೆ. ಕಾಳಿಂಗನನ್ನು ಕೃಷ್ಣಸರ್ಪ ಎಂದು ಕರೆಯುತ್ತಾರೆ. ಇವಳಿಗೆ ಕೃಷ್ಣಾ ಎಂಬ ಹೆಸರು ಪ್ರಸಿದ್ಧಿ. ಹೀಗಿದ್ದರೂ ಕೃಷ್ಣನು ಒಬ್ಬನನ್ನು ಮರ್ದಿಸಿದ. ಒಬ್ಬಳನ್ನು ಉದ್ಧರಿಸಿದನು. ಲೋಕದಲ್ಲಿ ಎಲ್ಲರೂ ಸ್ತ್ರೀಯರ ಪಕ್ಷದಲ್ಲೇ ಇರುವವರು ಎಂದು ಕೃಷ್ಣ ತೋರಿಸಿದನು. ಒಂದು ಮನೆಯಲ್ಲಿ ಒಬ್ಬಳು ಸ್ತ್ರೀ ಚೆನ್ನಾಗಿದ್ದರೆ ಇಡೀ ಮನೆ ಚೆನ್ನಾಗಿರುತ್ತದೆ. ಆದಕ್ಕಾಗಿ ಕೃಷ್ಣನು ಯಮುನೆಯನ್ನು ಮರ್ದಿಸಲಿಲ್ಲ.

> ಆಗಸ್ಕೃತಂ ನಾಗಪತಿಂ ಸ ಕೃಷ್ಣಃ
> ಪಾದೇನ ಶಿಕ್ಷನ್ನಪಿ ತತ್ಕೃತಾಂಕೈಃ।
> ತಾರ್ಕ್ಷ್ಯಾದ್ಭಯಂ ತಸ್ಯ ಜಹಾರ ಭಕ್ತೇ
> ಕ್ರೋಧೋಽಪಿ ದೇವಸ್ಯ ವರೇಣ ತುಲ್ಯಃ ॥೭೧॥

**ಆಗಸ್ಕೃತಂ** = ಅಪರಾಧಿಯಾದ, **ನಾಗಪತಿಂ** = ಹಾವನ್ನು, **ಸಃ** = ಆ, **ಕೃಷ್ಣಃ** = ಹರಿಯು, **ಪಾದೇನ** = ಕಾಲಿನಿಂದ, **ಶಿಕ್ಷನ್ ಅಪಿ** = ಶಿಕ್ಷಿಸಿದರೂ, **ತತ್** = ಪಾದದಿಂದ, **ಕೃತ** = ಮಾಡಿದ, **ಅಂಕೈಃ** = ಗುರುತುಗಳಿಂದ, **ತಾರ್ಕ್ಷ್ಯಾತ್** = ಗರುಡನಿಂದ, **ಭಯಂ** = ಭಯವನ್ನು, **ತಸ್ಯ** = ಹಾವಿಗೆ, **ಜಹಾರ** = ಪರಿಹರಿಸಿದನು, **ಭಕ್ತೇ** = ಭಕ್ತನಲ್ಲಿ, **ಕ್ರೋಧೋಽಪಿ** = ಸಿಟ್ಟುಕೂಡಾ, **ದೇವಸ್ಯ** = ದೇವರ, **ವರೇಣ** = ವರದಿಂದ, **ತುಲ್ಯಃ** = ಸಮಾನವಾಗಿದೆ.

ಈ ನಾಗನು ಅಪರಾಧಿಯಾಗಿದ್ದನು. ಆತನ ತಲೆಯನ್ನು ದೇವನು ತನ್ನ ಪಾದಗಳಿಂದ ಮೆಟ್ಟಿದನು. ತನ್ನ ಪಾದದ ಚಿಹ್ನೆ ಆತನ ತಲೆಯಲ್ಲಿ ನಾಟಿತು. ಈ ಸರ್ಪವು ಗರುಡನ ಭಯದಿಂದ ಇಲ್ಲಿಗೆ ಬಂದಿತ್ತು. ಈ ಚಿಹ್ನೆಯಿಂದಾಗಿ ಇನ್ನು ಮುಂದೆ ಗರುಡನಿಗೆ ಹೆದರಬೇಕಾಗಿಲ್ಲ.

> ಸ್ವಪಕ್ಷಪಾತಿಪ್ರಿಯಮಕ್ಷಿಕರ್ಣ
> ವಿಮರ್ದನಾತ್ ನೂನಮಸೌ ಪ್ರಸಾಧ್ಯ।
> ವಿಧಾಯ ಚಾಸ್ಯಾಭಯಮಂಜಸಾಽಂತೇ
> ಮುದಂ ಸ್ವತಲ್ಪಾಯ ದದಾವನಲ್ಪಾಮ್ ॥೭೨॥

**ಸ್ವ** = ತನ್ನ, **ಪಕ್ಷಪಾತಿ** = ಗರುಡನಿಗೆ, **ಪ್ರಿಯಂ** = ಇಷ್ಟವನ್ನು, **ಅಕ್ಷಿಕರ್ಣ** = ಕಣ್ಣೇ ಕಿವಿಯಾಗಿ ಉಳ್ಳ ಹಾವಿನ, **ವಿಮರ್ದನಾತ್** = ಮರ್ದನದಿಂದ, **ನೂನಂ** = ನಿಶ್ಚಯವಾಗಿ, **ಅಸೌ** = ಕೃಷ್ಣನು, **ಪ್ರಸಾದ್ಯ** = ಉಂಟುಮಾಡಿ, **ವಿಧಾಯ** = ಮಾಡಿ, **ಅಸ್ಯ** = ಹಾವಿಗೆ, **ಅಭಯಂ** = ಅಭಯವನ್ನು, **ಅಂಜಸಾ** = ಚೆನ್ನಾಗಿ, **ಅಂತೇ** = ಕೊನೆಯಲ್ಲಿ, **ಮುದಂ** = ನೆಮ್ಮದಿಯನ್ನು, **ಸ್ವ** = ತನ್ನ, **ತಲ್ಪಾಯ** = ಹಾಸಿಗೆಯಾದ ಶೇಷನಿಗೆ, **ದದೌ** = ಕೊಟ್ಟನು, **ಅನಲ್ಪಾಂ** = ಬಹಳ.

ಕೃಷ್ಣನು ಕಾಳಿಂಗನನ್ನು ಮರ್ದಿಸಿದನು. ಇದರಿಂದ ಗರುಡನಿಗೆ ಸಂತೋಷವಾಯಿತು. ಸರ್ಪಗಳಿಗೆ ಗರುಡನ ದ್ವೇಷ ಇದೆ ಎಂದು ಪ್ರಸಿದ್ಧ. ಈ ಕಾಳಿಂಗನಿಗೆ ಕೃಷ್ಣನು ಅಭಯ-ವನ್ನು ಕೊಟ್ಟಿದ್ದರಿಂದ ಕೃಷ್ಣನಿಗೆ ಹಾಸಿಗೆಯಾದ ಶೇಷನಿಗೂ ಸಂತೋಷವಾಯಿತು. ಶೇಷ, ಕಾಳಿಂಗರದ್ದು ಒಂದೇ ಜಾತಿ. ಗರುಡನು ತನ್ನ ಪಕ್ಷಗಳಿಂದ ಹಾರುವವ ಎಂದು ಸ್ವಪಕ್ಷಪಾತಿ ಎಂಬ ಶಬ್ದದಿಂದ ತಿಳಿಯುತ್ತದೆ. ಇದರ ಅಂತರ್ಯಾರ್ಥ ಕೃಷ್ಣನ ಪಕ್ಷಪಾತಿ ಎಂದು. ಆದ್ದರಿಂದ ಆತನಿಗೆ ಸಂತೋಷವನ್ನು ಮಾಡಲೇಬೇಕು. ಗರುಡ, ಶೇಷರು ಸಮಾನ-ರಾದ್ದರಿಂದ ಇಬ್ಬರಿಗೂ ಒಂದೇ ರೀತಿಯಾದ ಆದರಾತಿಥ್ಯಗಳನ್ನು ಮಾಡಿದನು ಎಂದು ತಾತ್ಪರ್ಯ.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಶ್ಚತುರ್ಥೋ ಮುದಾಮ್ ॥೭೩**

**॥ ಶ್ರೀವಾದಿರಾಜತೀರ್ಥಪ್ರಣೀತರುಕ್ಮಿಣೀಶವಿಜಯೇ ಚತುರ್ಥಃ ಸರ್ಗಃ ॥ ೪ ॥**

ಈ ಗ್ರಂಥವು ರೋಮಾಂಚಕಾರಿ. ಶ್ರವಣದಿಂದ ಪಾಪವನ್ನು ಪರಿಹರಿಸುತ್ತದೆ. ಭಕ್ತಿಯಿಂದ ಚಿಂತಿಸುವವರಿಗೆ ನಾನಾ ರೀತಿಯ ಒಳ್ಳೆಯ, ಯೋಗ್ಯವಾದ ಅರ್ಥವನ್ನು ಕೊಡುತ್ತದೆ. ಕೃಷ್ಣಾವತಾರ ಆದಾಗ ಒಂದು ಸಂತೋಷ ದೇವತೆಗಳಿಗೆ ಆಗಿತ್ತು. ದೇವತೆ-ಗಳಿಗೆ ನಾಲ್ಕನೆಯ ಆನಂದವಾಯಿತು. ಕಾವ್ಯದಲ್ಲಿ ನಾಲ್ಕನೆಯ ಸರ್ಗವೂ ಮುಗಿಯಿತು.

* * * * *

## ಪಂಚಮಃ ಸರ್ಗಃ

ಸ ಯಾಮುನಾಂಭಸ್ಯವಗಾಹನೋತ್ಥಂ
ಶರೀರಶೈತ್ಯಂ ಶಮಯನ್ನಿವೇಶಃ।
ನಿಶಿ ಪ್ರವೃದ್ಧಂ ನವಕಾನನಾಗ್ನಿಂ
ಪಪೌ ದಯಾಲುಃ ಸ್ವಜನಸ್ಯ ಗುಪ್ತ್ಯೈ ॥ ೧ ॥

**ಸಃ** = ಆ, **ಯಾಮುನ** = ಯಮುನೆಯ, **ಅಂಭಸಿ** = ನೀರಿನಲ್ಲಿ, **ಅವಗಾಹನ** = ಸ್ನಾನದಿಂದ, **ಉತ್ಥಂ** = ಉಂಟಾದ, **ಶರೀರ** = ಶರೀರದ, **ಶೈತ್ಯಂ** = ಶೀತವನ್ನು, **ಶಮಯನ್ ಇವ** = ಪರಿಹರಿಸುವವನಂತೆ, **ಈಶಃ** = ಹರಿಯು, **ನಿಶಿ** = ರಾತ್ರಿಯಲ್ಲಿ, **ಪ್ರವೃದ್ಧಂ** = ಉಂಟಾದ, **ನವ** = ಹೊಸ, **ಕಾನನ** = ಕಾಡಿನ, **ಅಗ್ನಿಂ** = ಬೆಂಕಿಯನ್ನು, **ಪಪೌ** = ಕುಡಿದನು, **ದಯಾಲುಃ** = ದಯಾಪೂರ್ಣನಾದ, **ಸ್ವಜನಸ್ಯ** = ತನ್ನವರ, **ಗುಪ್ತ್ಯೈ**= ರಕ್ಷಣೆಗೋಸ್ಕರ.

ಯಮುನೆಯ ತಣ್ಣಗಿನ ನೀರಿನಲ್ಲಿ ಇಳಿದಿದ್ದರಿಂದ ಕೃಷ್ಣನಿಗೆ ಶೀತವಾಗಿದೆ. ಅದರ ಪರಿಹಾರಕ್ಕಾಗಿ ರಾತ್ರಿ ಕಾಣಿಸಿಕೊಂಡ ಕಾಡ್ಗಿಚ್ಚನ್ನು ಕುಡಿದು ದೇಹವನ್ನು ಬೆಚ್ಚಗೆ ಮಾಡಿ-ಕೊಂಡ ಎಂದು ರಾಜರು ಕಾವ್ಯದ ಶೈಲಿಯಲ್ಲಿ ವರ್ಣಿಸುತ್ತಾರೆ.

ಸ್ತುವಂತು ಸರ್ವೇ ವನವಹ್ನಿಪಾನ-
ಕೃತಾನುಭಾವಂ ನ ವಯಂ ಮುರಾರೇಃ।
ಸ್ವಜನ್ಮಭೂಮಿಂ ಶಿಖಿನಿ ಪ್ರವಿಷ್ಟೇ
ಕ ಈಶಿತುಸ್ತೇನ ಕೃತೋಽನುಭಾವಃ ॥ ೨ ॥

**ಸ್ತುವಂತು** = ಹೊಗಳಲಿ, **ಸರ್ವೇ** = ಎಲ್ಲರೂ, **ವನವಹ್ನಿ** = ಕಾಡ್ಗಿಚ್ಚಿನ, **ಪಾನ** = ಪಾನದಿಂದ, **ಕೃತ** = ಮಾಡಿದ, **ಅನುಭಾವಂ** = ಶಕ್ತಿಯನ್ನು, **ನ** = ಇಲ್ಲ, **ವಯಂ** = ನಾವು, **ಮುರಾರೇಃ** = ಮುರಾರೇ, **ಸ್ವ** = ತನ್ನ, **ಜನ್ಮ** = ಉತ್ಪತ್ತಿಯ, **ಭೂಮಿಂ** = ಸ್ಥಳವನ್ನು, **ಶಿಖಿನಿ** = ಬೆಂಕಿಯು, **ಪ್ರವಿಷ್ಟೇ** = ಪ್ರವೇಶಿಸಲು, **ಕಃ** = ಏನು, **ಈಶಿತುಃ** = ದೇವರ, **ತೇನ** = ಅದರಿಂದ, **ಕೃತಃ** = ಮಾಡಲ್ಪಟ್ಟಿತು, **ಅನುಭಾವಃ** = ಶಕ್ತಿಯು.

ಕೃಷ್ಣನು ಬೆಂಕಿಯನ್ನು ಕುಡಿದ. ದೇವರ ಶಕ್ತಿ ಬಹಳ ಎಂದು ಯಾರು ಬೇಕಾದರೂ ಹೊಗಳಲಿ. ನಾನು ಮಾತ್ರ ಹೊಗಳುವುದಿಲ್ಲ. ಏಕೆಂದರೆ 'ಮುಖಾದಿಂದ್ರಶ್ಚಾಗ್ನಿಶ್ಚ' ಎಂದು ಪುರುಷಸೂಕ್ತ ತಿಳಿಸುವಂತೆ ಕೃಷ್ಣನ ಮುಖ ಅಗ್ನಿಯ ಮನೆ. ತನ್ನ ಮನೆಗೆ ಅಗ್ನಿ

ಪ್ರವೇಶ ಮಾಡಿದಾಗ ಕೃಷ್ಣನನ್ನು ಯಾಕೆ ಹೊಗಳಬೇಕು? ಎಂದು. ಈ ಚಮತ್ಕಾರದಿಂದ ರಾಜರು ತನ್ನ ಮಾತಿಗೆ ವೇದದ ಬೆಂಬಲವನ್ನೇ ಕೊಡುತ್ತಿದ್ದಾರೆ. ಇದು ಬಹಳ ಅದ್ಭುತಶಕ್ತಿ.

**ಸ್ವಜನೈರ್ನಿಜಪಾದಾಬ್ಜಭಜನೈಃ ಸಹಿತಸ್ತತಃ।**
**ವ್ರಜಮಾರ್ಜಿತಸರ್ವಾರ್ಥವ್ರಜಂ ನಿವಿವಿಶೇಽಚ್ಯುತಃ ॥ ೩ ॥**

**ಸ್ವಜನೈಃ** = ತನ್ನ ಜನರಿಂದ, ನಿಜ = ತನ್ನ, **ಪಾದಾಬ್ಜ** = ಚರಣವೆಂಬ ಕಮಲದ, **ಭಜನೈಃ** = ಭಜನೆ ಮಾಡುವ, **ಸಹಿತಃ** = ಕೂಡಿದ, **ತತಃ** = ಆದ್ದರಿಂದ, **ವ್ರಜಂ** = ಗೋಕುಲ-ವನ್ನು, **ಆರ್ಜಿತ** = ಸಂಪಾದಿತವಾದ, **ಸರ್ವಾರ್ಥ** = ಎಲ್ಲಾ ಅಪೇಕ್ಷೆಗಳ, **ವ್ರಜಂ** = ಸಮೂಹವುಳ್ಳ, **ನಿವಿವಿಶೇ** = ಪ್ರವೇಶಿಸಿದನು, **ಅಚ್ಯುತಃ**= ದೇವನು.

ಅನಂತರ ಕೃಷ್ಣನು ತನ್ನ ಗೊಲ್ಲರಿಂದ ಕೂಡಿಕೊಂಡು ತನ್ನ ಕೇರಿಯನ್ನು ಪ್ರವೇಶಿಸಿ-ದನು. ಈ ಗೊಲ್ಲರು ಸದಾಕಾಲ ಕೃಷ್ಣನ ಭಜನೆಯಲ್ಲೇ ನಿರತರು. ಈ ಕೇರಿಯು ಮೊದಲು ಕಾಳಿಂಗನಿಂದಾಗಿ ನಾನಾ ರೀತಿಯ ಉಪದ್ರವಗಳನ್ನು ಅನುಭವಿಸಿತ್ತು. ಈಗ ಎಲ್ಲದ್ದ-ರಿಂದಲೂ ಮುಕ್ತವಾಗಿದೆ.

**ನಿಜಬಲಕರಮಗ್ನಿಂ ಕೃಷ್ಣಪೀತಂ ನಿಶಮ್ಯ**
**ಜ್ವಲಿತ ಇವ ಸಸೂರ್ಯಃ ಪ್ರಾದುರಾಸೀನ್ನಿದಾಘಃ।**
**ಸ್ವಕೃತಿಮಥ ಸನಾಮ್ನಾ ನಿರ್ಣಿನೀಷುರ್ವಿಚಿಂತ್ಯ**
**ದ್ರುತಮೃತುಪತಿನೇವ ಪ್ರಾಪ ಗೋಪೋ ವನಾಂತಮ್ ॥ ೪ ॥**

ನಿಜ = ತನಗೆ, ಬಲ = ಶಕ್ತಿಯನ್ನು, **ಕರಂ** = ಉಂಟುಮಾಡುವ, **ಅಗ್ನಿಂ** = ಬೆಂಕಿಯನ್ನು, **ಕೃಷ್ಣ** = ಹರಿಯಿಂದ, **ಪೀತಂ** = ಕುಡಿದದ್ದನ್ನು, **ನಿಶಮ್ಯ** = ಕೇಳಿ, **ಜ್ವಲಿತ ಇವ** = ಉರಿದವನಂತೆ, **ಸಸೂರ್ಯಃ** = ರವಿಯಿಂದ ಕೂಡಿ, **ಪ್ರಾದುರಾಸೀತ್** = ಉದಿಸಿದನು, **ನಿದಾಘಃ** = ಬೇಸಿಗೆ ಕಾಲವು, **ಸ್ವಕೃತಿಂ** = ತನ್ನ ಕೆಲಸವನ್ನು, **ಅಥ** = ಅನಂತರ, **ಸನಾಮ್ನಾ** = ಸಮಾನವಾದ ಹೆಸರುಳ್ಳ, **ನಿರ್ಣಿನೀಷುಃ** = ನಿರ್ಧರಿಸಲು ಇಚ್ಛಿಸಿದವನಾಗಿ, **ವಿಚಿಂತ್ಯ** = ಆಲೋಚಿಸಿ, **ದ್ರುತಂ** = ಕೂಡಲೇ, **ಋತುಪತಿನಾ** = ವಸಂತಮಾಸದಿಂದ, **ಇವ** = ಎಂಬಂತೆ, **ಪ್ರಾಪ** = ಸೇರಿದನು, **ಗೋಪಃ** = ಕೃಷ್ಣನು, **ವನಾಂತಮ್** = ಕಾಡಿನ ಮಧ್ಯವನ್ನು.

ಗ್ರೀಷ್ಮ ಋತುವಿನ ಆರಂಭ. ಆದರ ವರ್ಣನೆ – ಗ್ರೀಷ್ಮಋತು ಸ್ವಯಂ ತಾಪದಾಯಕ. ಆ ಸಮಯದಲ್ಲಿ ಕಾಡ್ಗಿಚ್ಚು ಹೆಚ್ಚಾಗಿ ಇರುತ್ತದೆ. ಸೂರ್ಯನ ಪ್ರಖರತೆಯೂ ಜಾಸ್ತಿ.

ಇವೆರಡೂ ಗ್ರೀಷ್ಮಋತುವಿನ ಮಿತ್ರಗಳು. ಅದರಲ್ಲಿ ಒಬ್ಬ ಮಿತ್ರನಾದ ಅಗ್ನಿಯನ್ನು ಕೃಷ್ಣನು ತಿಂದು ಬಿಟ್ಟ. ಇದರಿಂದ ಗ್ರೀಷ್ಮಋತು ಕೋಪಗೊಂಡು ತನ್ನ ಇನ್ನೊಬ್ಬ ಮಿತ್ರನಾದ ಸೂರ್ಯನಿಂದ ಕೂಡಿಕೊಂಡು ಕೃಷ್ಣನನ್ನು ಪೀಡಿಸಲು ಆರಂಭಿಸಿದನು.

ಇದಕ್ಕೆ ಪ್ರತೀಕಾರ ಮಾಡಲು ಕೃಷ್ಣನು ತನ್ನ ಮಿತ್ರನಾದ ವಸಂತಋತುವಿನಿಂದ ಕೂಡಿಕೊಂಡು ವಿಚಾರ ವಿನಿಮಯ ಮಾಡಲು ವನದ ಮಧ್ಯವನ್ನು ಪ್ರವೇಶಿಸಿದನು. ವಸಂತ ಋತುವಿಗೆ ಮಾಧವ ಎಂಬ ಹೆಸರಿದೆ. ಕೃಷ್ಣನೂ ಮಾಧವನು. ಒಂದೇ ಹೆಸರು ಉಳ್ಳವರಾದ್ದರಿಂದ ಮಿತ್ರರು. ಇದರ ಅಭಿಪ್ರಾಯ ಹೀಗಿದೆ – ಕಾಡಿನ ಮಧ್ಯದಲ್ಲಿ ತಂಪು ಇರುವುದರಿಂದ ಕೃಷ್ಣನು ಅಲ್ಲಿಗೆ ಹೋದ. ಗ್ರೀಷ್ಮದ ಪ್ರಭಾವ ಕಾಡಿನ ಹೊರಬದಿಯಲ್ಲಿ ಮಾತ್ರ. ಕಾಡಿನ ಒಳಗೆ ಅರಳಿದ ಪುಷ್ಪ, ತಂಪಾದ ನೀರು ಮೊದಲಾದ ವಸಂತದ ಲಕ್ಷಣಗಳೂ ಇವೆ.

**ತಾಪೇ ತದ್ವನಮಾಧವೇನ ವಿಜಿತೇ ಭಾಸ್ವತ್ಪ್ರಭಾಸಂಭವೇ**
**ದಾವೇ ಚ ವ್ರಜಮಾಧವೇನ ದಮಿತೇ ಗ್ರೀಷ್ಮೋ ಜಜೃಂಭೇ ಕ್ಷಣಾತ್ ।**
**ಕೋಪೇನೇವ ವಸಂತಪುಷ್ಪನಿಚಯಂ ಶುಷ್ಕಂ ವಿಧಾಯಾನಿಲಂ**
**ತಪ್ತಂ ಚಂಪಕಕಂಪಿತಾಂಶ್ಚ ಮಧುಪಾನ್ ಮೂಕಾನ್ ಪಿಕಾದೀನ್ ಖಗಾನ್ ॥೫**

**ತಾಪೇ** = ಸೆಖೆಯು, **ತದ್** ವನ = ಕಾಡಿನ, **ಮಾಧವೇನ** = ವಸಂತಮಾಸದಿಂದ, **ವಿಜಿತೇ** = ಸೋಲುತ್ತಿರಲು, **ಭಾಸ್ವತ್** = ಸೂರ್ಯನ, **ಪ್ರಭಾ** = ಕಿರಣದಿಂದ, **ಸಂಭವೇ** = ಉಂಟಾದ, **ದಾವೇ ಚ** = ಕಾಡಿನ ಬೆಂಕಿಯು, **ವ್ರಜಮಾಧವೇನ** = ಗೋಕುಲದ ಮಾಧವನಿಂದ, **ದಮಿತೇ** = ಶಾಂತವಾಗಲು, **ಗ್ರೀಷ್ಮಃ** = ಗ್ರೀಷ್ಮಋತುವು, **ಜಜೃಂಭೇ** = ಬೆಳೆಯಿತು, **ಕ್ಷಣಾತ್** = ಕೂಡಲೇ, **ಕೋಪೇನ ಇವ** = ಕೋಪದಿಂದ ಎಂಬಂತೆ, **ವಸಂತ** = ವಸಂತಕಾಲದ, **ಪುಷ್ಪ** = ಹೂಗಳ, **ನಿಚಯಂ** = ಗುಂಪನ್ನು, **ಶುಷ್ಕಂ** = ಒಣಗಿದ್ದ-ನ್ನಾಗಿ, **ವಿಧಾಯ** = ಮಾಡಿ, **ಅನಿಲಂ** = ಗಾಳಿಯನ್ನು, **ತಪ್ತಂ** = ಬಿಸಿಯನ್ನಾಗಿ, **ಚಂಪಕ** = ಸಂಪಿಗೆಯಿಂದ, **ಕಂಪಿತಾನ್** = ನಡುಗಿದ್ದನ್ನಾಗಿ, **ಮಧುಪಾನ್** = ಭ್ರಮರಗಳನ್ನು, **ಮೂಕಾನ್** = ಮೂಕಗಳನ್ನಾಗಿ, **ಪಿಕಾದೀನ್** = ಗಿಳಿಯೇ ಮೊದಲಾದ, **ಖಗಾನ್** = ಪಕ್ಷಿಗಳನ್ನು.

ಸೂರ್ಯನು ತೀಕ್ಷ್ಣವಾಗಿ ಜ್ವಲಿಸುತ್ತಿದ್ದಾನೆ. ಆದರೆ ವೃಂದಾವನದ ಮರಗಳ ನೆರಳಿ-ನಿಂದಾಗಿ ಯಾರಿಗೂ ಬಿಸಿಲಿನ ತಾಪ ಬಾಧಕವಾಗಲೇ ಇಲ್ಲ. ಕಾಳ್ಗಿಚ್ಚನ್ನು ಕೃಷ್ಣನು ಶಾಂತ ಮಾಡಿದ್ದ. ಈ ರೀತಿ ಇಬ್ಬರು ಮಾಧವರು ಗ್ರೀಷ್ಮದ ಮಿತ್ರರನ್ನು ತಣಿಸಿದರು. ಫಲಿತಾಂಶ ಗ್ರೀಷ್ಮನು ಇನ್ನಷ್ಟು ಸಿಟ್ಟಾದನು. ಸೆಖೆ ಬಹಳವಾಯಿತು ಎಂದು ಅಭಿಪ್ರಾಯ. ವಸಂತ-

ಋತುವಿಗೆ ಪ್ರತೀಕಾರ ಮಾಡುತ್ತಿತ್ತು ಎಂಬಂತೆ ವಸಂತದ ಪುಷ್ಪಗಳೆಲ್ಲಾ ಈ ಬಿಸಿಲಿನ ತಾಪಕ್ಕೆ ಒಣಗಿದವು. ತಂಪಾದ ಗಾಳಿಯು ಬಿಸಿಯಾಯಿತು. ವಸಂತಕ್ಕೆ ಸಂಬಂಧಿಸಿದ ಭ್ರಮರಗಳು ಸಂಪಿಗೆ ಪುಷ್ಪಗಳ ಪರಿಮಳದಿಂದಾಗಿ ನಡುಗಿದವು. ಭ್ರಮರಗಳಿಗೆ ಸಂಪಿಗೆಯ ವಾಸನೆ ಆಗುವುದಿಲ್ಲ. ಗಿಳಿ ಮೊದಲಾದ ಪಕ್ಷಿಗಳು ಸ್ತಬ್ಧಗಳಾದವು. ಬಹಳ ಸೆಖೆಯಾದಾಗ ಪಕ್ಷಿಗಳೂ ಪೊಟರೆಗಳಲ್ಲಿ ತೆಪ್ಪಗೆ ಕುಳಿತಿರುತ್ತವೆ.

**ಪಾಥಃ ಶೀತಮಶೀತಲೋಷ್ಣಧರಣೀಂ ಭಾಸ್ವದ್ಬಲೇನೋಷ್ಣಯನ್**
**ಊರ್ಧ್ವಂ ಗಂಧವಹಂ ನಯನ್ ತ್ರಿವೃತಮಪ್ಯಮ್ಮಾತ್ರಪಾತ್ರಂ ವಪುಃ।**
**ಕುರ್ವನ್ ಕೃಷ್ಣಕೃತೇರ್ವಿರೋಧಮಪಿ ತದ್ವಾಸಂ ಚ ವಾಃ ಶೋಷಯನ್**
**ವಿಶ್ವಂ ತಸ್ಯ ವಶಂ ದವೇನ ಚ ದಹನ್ ವೈರೀವ ಸೋಽದೃಶ್ಯತ ॥ ೬ ॥**

**ಪಾಥಃ** = ನೀರನ್ನು, **ಶೀತಂ** = ತಣ್ಣಗಾದ, **ಅಶೀತಲ ಉಷ್ಣ ಧರಣೀಂ** = ತಣ್ಣಗೂ ಬಿಸಿಯೂ ಅಲ್ಲದ ಭೂಮಿಯನ್ನು, **ಭಾಸ್ವತ್** = ಸೂರ್ಯನ, **ಬಲೇನ** = ಶಕ್ತಿಯಿಂದ, **ಉಷ್ಣಯನ್** = ಬಿಸಿ ಮಾಡುತ್ತಾ, **ಊರ್ಧ್ವಂ** = ಮೇಲೆ, **ಗಂಧವಹಂ** = ಗಾಳಿಯನ್ನು, **ನಯನ್** = ಒಯ್ಯುತ್ತಾ, **ತ್ರಿವೃತಮಪಿ** = ಮಣ್ಣು- ನೀರು - ಬೆಂಕಿಯಿಂದ ಕೂಡಿ-ದ್ದರೂ, **ಅಮ್ಮಾತ್ರಪಾತ್ರಂ** = ಕೇವಲ ನೀರಿಗೆ ಆಶ್ರಯವನ್ನಾಗಿ, **ವಪುಃ** = ಶರೀರವನ್ನು, **ಕುರ್ವನ್** = ಮಾಡುತ್ತಾ, **ಕೃಷ್ಣಕೃತೇಃ** = ದೇವರ ಸೃಷ್ಟಿಗೆ, **ವಿರೋಧಮಿವ** = ವಿರೋಧದಂತೆ, **ತದ್ವಾಸಂ** = ದೇವರ ವಾಸಸ್ಥಳವಾದ, **ವಾಃ** = ನೀರನ್ನು, **ಶೋಷಯನ್** = ಒಣಗಿಸುತ್ತಾ, **ವಿಶ್ವಂ** = ಜಗತ್ತನ್ನು, **ತಸ್ಯ** =ಹರಿಯ, **ವಶಂ** = ಅಧೀನವಾದ, **ದವೇನ** = ಬೆಂಕಿಯಿಂದ, **ದಹನ್** = ಸುಡುತ್ತಾ, **ವೈರೀವ** = ವೈರಿಯಂತೆ, **ಸಃ** = ಬೇಸಿಗೆ ಕಾಲವು, **ಅದೃಶ್ಯತ**= ಕಂಡಿತು.

ಈ ಶ್ಲೋಕದಲ್ಲಿಯೂ ಗ್ರೀಷ್ಮದ ವರ್ಣನೆ ಮಾಡಿದ್ದಾರೆ – ದೇವರು ನೀರನ್ನು ತಣ್ಣಗಾಗಿಯೂ, ಭೂಮಿಯನ್ನು ಬಿಸಿ ಮತ್ತು ತಣ್ಣಗಾಗಿಯೂ, ಗಾಳಿಯನ್ನು ಅಡ್ಡವಾಗಿ ಸಂಚರಿಸುವವನನ್ನಾಗಿಯೂ, ದೇಹಗಳನ್ನು ಮಣ್ಣು- ನೀರು- ಬೆಂಕಿಗಳ ಮಿಶ್ರಣವುಳ್ಳ-ದ್ದನ್ನಾಗಿಯೂ ಮಾಡಿದ್ದನು. ಆದರೆ ಗ್ರೀಷ್ಮವು ದೇವರ ಈ ಸೃಷ್ಟಿಯನ್ನು ಪೂರಾ ವ್ಯತ್ಯಾಸ ಮಾಡುವಂತಿದೆ. ನೀರನ್ನು ಬಿಸಿಯನ್ನಾಗಿಯೂ ಭೂಮಿಯನ್ನು ಕೇವಲ ಬಿಸಿಯನ್ನಾಗಿಯೂ ಗಾಳಿಯನ್ನು ಮೇಲ್ಮುಖವಾಗಿ ಸಂಚಾರ ಮಾಡುವವನನ್ನಾಗಿಯೂ ಮಾಡಿದನು. ಬಿಸಿ-ಯಾದ ಗಾಳಿ ಮೇಲ್ಮುಖವಾಗಿ ಸಂಚರಿಸುವುದು ಸಹಜ. ದೇಹಗಳನ್ನು ಕೇವಲ ಜಲ-ಮಯಗಳನ್ನಾಗಿ ಮಾಡಿದನು. ಗ್ರೀಷ್ಮಋತುವಿನಲ್ಲಿ ಬೆವರುವುದು ಸಹಜ. ಇದೆಲ್ಲಾ ಸಾಲದೋ ಎಂಬಂತೆ ಕೃಷ್ಣನ ವಾಸಸ್ಥಳವಾದ ಸಮುದ್ರದ ನೀರನ್ನೇ ಒಣಗಿಸಲು

ಆರಂಭಿಸಿದನು. ಈ ರೀತಿ ಕೃಷ್ಣನ ಅಧೀನವಾದ ಜಗತ್ತನ್ನು ಸುಡುತ್ತಾ ಕೃಷ್ಣನಿಗೆ ಶತ್ರುವಿನಂತೆ ಗ್ರೀಷ್ಮ ಋತುವು ಕಂಡಿತು.

• • • •

**ಸಂದೇಶ**

**ಕ್ಷಿಣೋತಿ ನೂನಂ ಧನಲೋಭಭಾಜಾಂ ಧನಾನಿ ಅನರ್ಹತ್ಸು ಅತಿದಿಶ್ಯ ದೇವಃ**

ಲೋಭಿಗಳು ಕೂಡಿಟ್ಟ ಸಂಪತ್ತನ್ನು ದೇವರು ಅಯೋಗ್ಯರಿಗೆ ಹಂಚಿ ಮುಗಿಸುತ್ತಾನೆ

---

**ಸುಚ್ಛಾಯೈಃ ಶುಕಮಂಡಿತೈಃ ಶುಭಫಲೈರುದ್ಯತ್ಪ್ರಸೂನೋದ್ಗಮೈ-**
**ರ್ವೃಕ್ಷೈರ್ಮಾಧವಪಕ್ಷಗೈಃ ಪ್ರಶಮಿತೇ ಖೇದೇ ನಿದಾಘೋದ್ಭವೇ ।**
**ದೈತ್ಯಃ ಕೋऽಪಿ ತರುತ್ವಮೇತ್ಯ ವರತಸ್ತತ್ಪಕ್ಷಪಾತೀವ ತ-**
**ಚ್ಛಾಯಾವಾಸಸುಖಾತ್ ಸಹಸ್ರಗುಣಿತಂ ಶೋಕಂ ವಿತೇನೇ ವನೇ ॥ ೭ ॥**

**ಸುಚ್ಛಾಯೈಃ** = ಒಳ್ಳೆಯ ನೆರಳಿನಿಂದ, **ಶುಕ** = ಗಿಳಿಗಳಿಂದ, **ಮಂಡಿತೈಃ** = ಅಲಂಕೃತಗಳಾದ, **ಶುಭ** = ಒಳ್ಳೆಯ, **ಫಲೈಃ** = ಫಲಗಳಿಂದ, **ಉದ್ಯತ್** = ಶೋಭಿಸುವ, **ಪ್ರಸೂನ** = ಹೂಗಳ, **ಉದ್ಗಮೈಃ** = ಅರಳುವಿಕೆಯನ್ನು, **ವೃಕ್ಷೈಃ** = ಮರಗಳಿಂದ, **ಮಾಧವ** = ವಸಂತದ, **ಪಕ್ಷಗೈಃ** = ಪಕ್ಷದಲ್ಲಿರುವ, **ಪ್ರಶಮಿತೇ** = ಕಮ್ಮಿಯಾಗುತ್ತಿರಲು, **ಖೇದೇ** = ತಾಪವು, **ನಿದಾಘ** = ಗ್ರೀಷ್ಮದಿಂದ, **ಉದ್ಭವೇ** = ಉಂಟಾದ, **ದೈತ್ಯಃ** = ಅಸುರನು, **ಕೋऽಪಿ** = ಯಾರೋ ಒಬ್ಬ, **ತರುತ್ವಂ** = ವೃಕ್ಷಸ್ವರೂಪವನ್ನು, **ಏತ್ಯ** = ಹೊಂದಿ, **ವರತಃ** = ವರದಿಂದ, **ತತ್** = ಗ್ರೀಷ್ಮದ, **ಪಕ್ಷಪಾತೀವ** = ಪಕ್ಷಪಾತಿಯಂತೆ, **ತತ್** = ಮರಗಳ, **ಛಾಯಾ** = ನೆರಳಿನ, **ವಾಸ** = ವಾಸದ, **ಸುಖಾತ್** = ಸುಖಕ್ಕಿಂತ, **ಸಹಸ್ರಗುಣಿತಂ** = ಸಾವಿರಪಟ್ಟು, **ಶೋಕಂ** = ದುಃಖವನ್ನು, **ವಿತೇನೇ** = ಮಾಡಿದನು, **ವನೇ**= ಕಾಡಲ್ಲಿ.

ವೃಂದಾವನದ ಮರಗಳು ಮಾತ್ರ ಒಳ್ಳೆಯ ಫಲಪುಷ್ಪಗಳಿಂದ ತುಂಬಿತ್ತು. ಅದರ ತುಂಬಾ ಗಿಳಿಗಳು ಇದ್ದವು. ದಟ್ಟವಾದ ನೆರಳೂ ಇತ್ತು. ವಸಂತಮಾಸದ ಮರಗಳಂತೆ ಇದ್ದವು. ಇಂತಹ ಮರಗಳಿಂದ ಗ್ರೀಷ್ಮದ ತಾಪವು ಸ್ವಲ್ಪಮಟ್ಟಿಗೆ ಕಮ್ಮಿಯಾಗಿತ್ತು. ಇದೇ ಸಮಯದಲ್ಲಿ ಒಬ್ಬ ದೈತ್ಯನು ದೇವತೆಯ ವರಬಲದಿಂದ ಮರದ ರೂಪವನ್ನು ತಾಳಿ ವೃಂದಾವನದಲ್ಲಿ ಇದ್ದನು. ಇದನ್ನು ತಿಳಿಯದ ಗೊಲ್ಲರು ಆ ಮರದ ಬುಡದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಆದರೆ ಗೊಲ್ಲರಿಗೆ ಆಗ ನೆರಳಿನ ಸುಖಕ್ಕಿಂತ ಹೆಚ್ಚಾಗಿ ತಾಪವೇ ಆಗುತ್ತಿತ್ತು. ಗ್ರೀಷ್ಮನು ತನ್ನ ಮಿತ್ರರಾದ ಸೂರ್ಯ ಹಾಗೂ ಅಗ್ನಿಗಳನ್ನು ಕಳೆದುಕೊಂಡ ಮೇಲೆ ಈ ಅಸುರನನ್ನು ತನ್ನ ಸಹಾಯಕ್ಕಾಗಿ ಕರೆದುಕೊಂಡಂತೆ ಇತ್ತು.

**ತರುತ್ವಮಪ್ಯಾಪ್ಯ ವನಂ ಮುರಾರೇಃ**
**ಅದೂಷಯದ್ಧಂತ ವಿಷೈಃ ಸಮಂತಾತ್ ।**
**ಸ್ವನಾಸಿಕಾಚ್ಛೇದಮಪೀಹ ಸೋಢ್ವಾ**
**ಖಲೋ ನಿರುಂಧೇ ಖಲು ಸತ್ಪ್ರಯಾಣಮ್ ॥೮॥**

**ತರುತ್ವಮಪಿ** = ವೃಕ್ಷತ್ವವನ್ನೂ, **ಆಪ್ಯ** = ಹೊಂದಿ, **ವನಂ** = ಕಾಡನ್ನು, **ಮುರಾರೇಃ** = ಹರಿಯ, **ಅದೂಷಯತ್** = ಮಲಿನಗೊಳಿಸಿದನು, **ಹಂತ** = ಆಶ್ಚರ್ಯ, **ವಿಷೈಃ** = ವಿಷಗಳಿಂದ, **ಸಮಂತಾತ್** = ಸುತ್ತಲೂ, **ಸ್ವ** = ತನ್ನ, **ನಾಸಿಕಾ** = ಮೂಗಿನ, **ಛೇದಮಪಿ** = ನಾಶವನ್ನೂ, **ಇಹ** = ಇಲ್ಲಿ, **ಸೋಢ್ವಾ** = ಸಹಿಸಿ, **ಖಲಃ** = ದುಷ್ಟನು, **ನಿರುಂಧೇ** = ತಡೆಯುತ್ತಾನೆ, **ಖಲು** = ಪ್ರಸಿದ್ಧ, **ಸತ್** = ಸಜ್ಜನರ, **ಪ್ರಯಾಣಂ** = ಯಾತ್ರೆಯನ್ನು.

ವೃಕ್ಷದ ಜನ್ಮ ಅಂದರೆ ನಿಕೃಷ್ಟಜನ್ಮ. ಈ ಅಸುರನು ತನಗೆ ಕೆಳಮಟ್ಟದ ಜನ್ಮ ಬಂದರೂ ಅಡ್ಡಿಯಿಲ್ಲ. ಕೃಷ್ಣನಿಗೆ ಉಪದ್ರವ ಮಾಡಬೇಕು ಎಂಬ ಅಭಿಪ್ರಾಯದಿಂದ ತಾನು ಮರವಾಗಿ ಹುಟ್ಟಿದನು. ತನ್ನ ವಿಷಮಯ ಗಾಳಿಯಿಂದ ಇಡೀ ಕಾಡನ್ನು ಮಲಿನಗೊಳಿಸಿದನು.

ಪ್ರಯಾಣಕ್ಕೆ ಹೊರಟಾಗ ವಿಕಲಾಂಗನು ಎದುರು ಬಂದರೆ ಅಪಶಕುನ. ಕೆಟ್ಟವರು ಏನು ಮಾಡುತ್ತಾರೆ ಅಂದರೆ ಶಿಷ್ಟರ ಪ್ರಯಾಣಕ್ಕೆ ಅಡ್ಡಿಮಾಡಲು ತಮ್ಮ ಮೂಗನ್ನಾದರೂ ಕೊಯ್ದುಕೊಂಡು ಎದುರು ಬರುತ್ತಾರೆ. ತಮ್ಮ ಮೂಗು ಹೋದರೂ ಅಡ್ಡಿಯಿಲ್ಲ. ಈತನ ಕೆಲಸ ಆಗಬಾರದು ಎಂಬ ಅಭಿಪ್ರಾಯದಿಂದ.

**ವಿನಾಶ್ಯ ವೃಂದಾವನವಾಸಿಪಕ್ಷಿ-**
**ಮೃಗಾದಿನಾನಾವಿಧಜೀವವರ್ಗಮ್ ।**
**ವರಪ್ರದಾತುಸ್ತರಸಾ ವಿಧಾತುಃ**
**ಅಸೌ ವಿಶಂಕೋ ವಿದಧೇ ಪ್ರತೀಪಮ್ ॥ ೯ ॥**

**ವಿನಾಶ್ಯ** = ನಾಶ ಮಾಡಿ, **ವೃಂದಾವನ** = ಕಾಡಲ್ಲಿ, **ವಾಸಿ** = ಇರುವ, **ಪಕ್ಷಿ** = ಪಕ್ಷಿಗಳು, **ಮೃಗ** = ಪ್ರಾಣಿಗಳು, **ಆದಿ** = ಮೊದಲಾದ, **ನಾನಾವಿಧ** = ನಾನಾ ರೀತಿಯ, **ಜೀವ** = ಜೀವರ, **ವರ್ಗಂ** = ಗುಂಪನ್ನು, **ವರಪ್ರದಾತುಃ** = ವರವನ್ನು ಕೊಟ್ಟಿರುವ, **ತರಸಾ** = ಕೂಡಲೇ, **ವಿಧಾತುಃ** = ಬ್ರಹ್ಮನಿಗೆ, **ಅಸೌ** = ಇವನು, **ವಿಶಂಕಃ** = ಸಂಶಯವಿಲ್ಲದೇ, **ವಿದಧೇ** = ಮಾಡಿದನು, **ಪ್ರತೀಪಂ**= ವಿರೋಧವನ್ನು.

ಆ ವಿಷವೃಕ್ಷದ ಗಾಳಿಯಿಂದ ವೃಂದಾವನದ ಪ್ರಾಣಿವರ್ಗಗಳು ಸಾಯಲು ಆರಂಭಿಸಿ-ದವು. ಚತುರ್ಮುಖನ ಸೃಷ್ಟಿಯನ್ನು ವಿನಾಶದ ಅಂಚಿನತ್ತ ಒಯ್ಯುತ್ತಿದ್ದಾನೆ. ಈ ಅಸುರನಿಗೆ

ವರ ಕೊಟ್ಟು ಅನುಗ್ರಹಿಸಿದವನು ಚತುರ್ಮುಖನೇ. ಆತನಿಗೇ ವಿರೋಧ ಮಾಡಲು ತೊಡಗಿದ್ದಾನೆ. ಈತನಿಗೆ ಯಾವ ಸಂಕೋಚವೂ ಇಲ್ಲ. ದುಷ್ಟರ ಲಕ್ಷಣವೇ ಇದು. ತನಗೆ ಉಪಕಾರ ಮಾಡಿದವರಿಗೂ ಅಪಕಾರ ಮಾಡುವಿಕೆ.

> ತದೀಯಗಂಧೇನ ಫಲೇನ ಪುಷ್ಪ-
> ಕುಲೇನ ಮೂಲಾಶ್ರಯಣೇನ ಲೋಕಃ ।
> ತದೈವ ನಾಶಂ ಕಿಲ ಯಾತಿ ಕೃಷ್ಣ-
> ವಿಪಕ್ಷಮೈತ್ರೀ ಕಿಮು ಸೌಖ್ಯದಾತ್ರೀ ॥ ೧೦ ॥

ತದೀಯ = ಆ ಮರದ, ಗಂಧೇನ = ಪರಿಮಳದಿಂದ, ಫಲೇನ = ಫಲದಿಂದ, ಪುಷ್ಪಕುಲೇನ = ಹೂಗಳ ಸಮೂಹದಿಂದ, ಮೂಲ = ಬುಡವನ್ನು, ಆಶ್ರಯಣೇನ = ಆಶ್ರಯಿಸಿದ್ದರಿಂದ, ಲೋಕಃ = ಜನರು, ತದಾ ಏವ = ಆಗಲೇ, ನಾಶಂ = ನಾಶವನ್ನು, ಯಾತಿ ಕಿಲ = ಹೊಂದಿದರು, ಕೃಷ್ಣ = ಹರಿಯ, ವಿಪಕ್ಷ = ವಿರೋಧಿಗಳ, ಮೈತ್ರೀ = ಗೆಳೆತನವು, ಸೌಖ್ಯ= ಸುಖವನ್ನು, ದಾತ್ರೀ ಕಿಮು = ಕೊಡುತ್ತದೆಯೇ?

ಆ ಮರದ ಹಣ್ಣು, ಪುಷ್ಪ, ಗಾಳಿ, ನೆರಳನ್ನು ಅನುಭವಿಸಿದವರು ಆ ಕೂಡಲೇ ಸಾಯುತ್ತಿದ್ದರು. ದೇವರ ವಿರೋಧಿಗಳ ಮನೆಯಲ್ಲಿ ಯಾರು ಆಶ್ರಯ ಪಡೆಯುತ್ತಾರೋ ಅವರಿಗೆ ಉಳಿಗಾಲವಿಲ್ಲ ಎಂದು ಇದರಿಂದ ತಿಳಿಯುತ್ತದೆ.

> ಕಿಂ ವಾಚ್ಯಮಸ್ಯಾತಿವಿಷೋಲ್ಬಣತ್ವಂ
> ಯಸ್ಮಾತ್ಸ ದರ್ವೀಕರವರ್ಗಮೌಲಿಃ ।
> ರಾಮೋಽಪಿ ತತ್ಸಂಗತವಾಯುನೈವ
> ಗ್ಲಾನಿಂ ಸತಾಂ ಗ್ಲಾನಿಹರೋಽಪ್ಯವಾಪ ॥ ೧೧ ॥

ಕಿಂ ವಾಚ್ಯಂ = ಏನು ಹೇಳುವುದು? ಅಸ್ಯ = ಈ ಮರದ, ಅತಿ = ಬಹಳ, ವಿಷ = ವಿಷದ, ಉಲ್ಬಣತ್ವಂ = ತೀಕ್ಷ್ಣತೆಯನ್ನು, ಯಸ್ಮಾತ್ = ಯಾವ ಕಾರಣದಿಂದ, ಸಃ = ಆ, ದರ್ವೀಕರಃ = ಸರ್ಪಗಳ, ವರ್ಗ = ಸಮೂಹಕ್ಕೆ, ಮೌಲಿಃ = ಶಿಖರದಂತಿರುವ, ರಾಮೋಽಪಿ = ಬಲರಾಮನೂ, ತತ್ = ಆ ಮರದ, ಸಂಗತ = ಸಂಬಂಧವುಳ್ಳ, ವಾಯುನಾ ಏವ = ಗಾಳಿಯಿಂದಲೇ, ಗ್ಲಾನಿಂ = ದುಃಖವನ್ನು, ಸತಾಂ = ಸಜ್ಜನರ, ಗ್ಲಾನಿ = ದುಃಖವನ್ನು, ಹರೋಽಪಿ = ಪರಿಹರಿಸುವವನೂ, ಅವಾಪ = ಹೊಂದಿದನು.

ಸರ್ಪಗಳಲ್ಲಿ ಶ್ರೇಷ್ಠನು ಬಲರಾಮನು. ಏಕೆಂದರೆ ಆತನು ಸಂಕರ್ಷಣನು. ಎಲ್ಲಾ ಸಜ್ಜನರ ದುಃಖವನ್ನು ಪರಿಹರಿಸುವವನು. ಇಷ್ಟು ಶಕ್ತನಾದರೂ ಬಲರಾಮನು ಈ ಮರದ

ವಿಷವನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಅಷ್ಟು ತೀಕ್ಷ್ಣವಾದ ವಿಷವು ಈ ಮರದಿಂದ ಹೊರಡುತ್ತಿತ್ತು.

> **ಫಲೈಃ ಪ್ರಸೂನೈಃ ವಿಲಸತ್ ಪ್ರವಾಲೈಃ**
> **ದಲೈಃ ವಿಲೋಲೈಃ ಸ ಶುಭಾಯಿತೋಽಪಿ ।**
> **ಬಿಭರ್ತಿ ಹಾಲಾಹಲಮೇವ ಮಧ್ಯೇ**
> **ಖಲಃ ಪ್ರಕೃತ್ಯಾ ಖಲು ಗೂಢವೃತ್ತಿಃ ॥ ೧೨ ॥**

**ಫಲೈಃ** = ಹಣ್ಣುಗಳಿಂದ, **ಪ್ರಸೂನೈಃ** = ಪುಷ್ಪಗಳಿಂದ, **ವಿಲಸತ್** = ಶೋಭಿಸುವ, **ಪ್ರವಾಲೈಃ** = ಚಿಗುರುಗಳಿಂದ, **ದಲೈಃ** = ಎಲೆಗಳಿಂದ, **ವಿಲೋಲೈಃ** = ಅಲುಗಾಡುವ, **ಸಃ** = ಆ ಮರವು, **ಶುಭಾಯಿತಃ ಅಪಿ** = ಚಂದವಾಗಿ ಇದ್ದರೂ, **ಬಿಭರ್ತಿ** = ಧರಿಸಿದೆ, **ಹಾಲಾಹಲಂ ಏವ** = ವಿಷವನ್ನೇ, **ಮಧ್ಯೇ** = ತನ್ನಲ್ಲಿ, **ಖಲಃ** = ದುಷ್ಟನು, **ಪ್ರಕೃತ್ಯಾ** = ಸಹಜವಾಗಿ, **ಗೂಢ** = ಗುಟ್ಟಾದ, **ವೃತ್ತಿಃ ಖಲು** = ಕೆಲಸವುಳ್ಳವನು.

ಈ ಮರವು ಫಲಗಳಿಂದ, ಪುಷ್ಪಗಳಿಂದ, ಕಿಸಲಯಗಳಿಂದ, ನಿಧಾನವಾಗಿ ಅಲುಗಾಡುವ ಎಲೆಗಳಿಂದಾಗಿ ಬಹಳ ಸುಂದರವಾಗಿ ಕಾಣುತ್ತಿತ್ತು. ದುಷ್ಟರ ಕ್ರಮವೇ ಹೀಗೆ – ಎದುರಿಗೆ ಬಹಳ ವಿನಯವನ್ನು ಪ್ರದರ್ಶಿಸುತ್ತಾರೆ. ಒಳಗಿನಿಂದ ದ್ವೇಷ ಸಾಧಿಸುತ್ತಾರೆ. ಗೋಮುಖವ್ಯಾಘ್ರರಂತೆ ಇರುತ್ತಾರೆ.

> **ಪತತ್ರಿಣಾಂ ಪತ್ರಫಲಾಶನಾನಾಂ**
> **ವನೇಽತಿರಮ್ಯೇ ವಸತಾಂ ಸತಾಂ ಚ ।**
> **ನಿರಾಗಸಾಂ ದ್ರೋಹಮಹೋ ವ್ಯಧಾದ್ಯಃ**
> **ತಮುಗ್ರನಾಮಾರ್ಹಚರಿತ್ರಮೂಹೇ ॥ ೧೩ ॥**

**ಪತತ್ರಿಣಾಂ** = ಪಕ್ಷಿಗಳಿಗೆ, **ಪತ್ರ** = ಎಲೆಗಳು, **ಫಲ** = ಹಣ್ಣುಗಳು, **ಅಶನಾನಾಂ** = ಆಹಾರವಾಗಿ ಉಳ್ಳ, **ವನೇ** = ಕಾಡಿನಲ್ಲಿ, **ಅತಿರಮ್ಯೇ** = ಚಂದದ, **ವಸತಾಂ** = ವಾಸಿಸುವ, **ಸತಾಂ ಚ** = ಸಜ್ಜನರಿಗೂ, **ನಿರಾಗಸಾಂ** = ಪಾಪ ಇಲ್ಲದಿರುವ, **ದ್ರೋಹಂ** = ವಿರೋಧವನ್ನು, **ಅಹೋ** = ಆಶ್ಚರ್ಯ, **ವ್ಯಧಾತ್** = ಮಾಡಿದನು, **ಯಃ** = ಯಾರು, **ತಂ** = ಅವನನ್ನು, **ಉಗ್ರ** = ಉಗ್ರ ಎಂಬ, **ನಾಮ** = ಹೆಸರಿಗೆ, **ಅರ್ಹ** = ಯೋಗ್ಯವಾದ, **ಚರಿತ್ರಂ** = ಕೆಲಸವುಳ್ಳವನನ್ನಾಗಿ, **ಊಹೇ** = ತಿಳಿಯುತ್ತೇನೆ.

ಆ ಕಾಡಿನಲ್ಲಿ ತಮ್ಮ ಪಾಡಿಗೆ ಇರುವ ಪಕ್ಷಿಗಳು ಪ್ರಾಣಿಗಳು ಹಾಗೆಯೇ ತಪಸ್ಸು

ಮಾಡುವ ಋಷಿಗಳು ಇವರಿಗೆಲ್ಲಾ ಬಹಳ ಉಪಟಳ ಮಾಡಿದ ಈ ಅಸುರ. ಆದ್ದರಿಂದ ಈತನಿಗೆ ಉಗ್ರ ಎಂಬ ಹೆಸರು ಸಾರ್ಥಕ. ನಿರಪರಾಧಿಗಳನ್ನು ಪೀಡಿಸುವವರೇ ಉಗ್ರರು.

ನಗಂ ಸಮುತ್ಪಾಟ್ಯ ಸಮಂ ಸಮಾಧಿಕೃತ್
ಶ್ರಮಾಖ್ಯವೃಕ್ಷೇಣ ಸ ಗೋಸ್ವರೂಪಿಣಃ ।
ಖಲಾಂಶ್ಚ ತೇನೈವ ಜಘಾನ ಲೀಲಯಾ
ಪ್ರಭೋಃ ಕ್ರಿಯೈಕಾऽಪ್ಯುರುಕಾರ್ಯಸಾಧಿಕಾ ॥೧೪॥

**ನಗಂ** = ಮರವನ್ನು , **ಸಮುತ್ಪಾಟ್ಯ** = ಕಿತ್ತು , **ಸಮಂ** = ಜೊತೆಗೆ, **ಸಮಾಧಿಕೃತ್** = ತಪಸ್ಸನ್ನು ಮಾಡುವ ಋಷಿಗಳ, **ಶ್ರಮಾಖ್ಯ** = ಆಯಾಸವೆಂಬ, **ವೃಕ್ಷೇಣ** = ಮರದಿಂದ, **ಸಃ** = ಹರಿಯು, **ಗೋಸ್ವರೂಪಿಣಃ** = ಆಕಳಿನ ರೂಪವುಳ್ಳ, **ಖಲಾಂಶ್ಚ** = ದೈತ್ಯರನ್ನು ಕೂಡ, **ತೇನೈವ** = ಆ ಮರದಿಂದಲೇ, **ಜಘಾನ** = ಕೊಂದನು, **ಲೀಲಯಾ** = ಅನಾಯಾಸದಿಂದ, **ಪ್ರಭೋಃ** = ದೇವರ, **ಕ್ರಿಯಾ** = ಕೆಲಸವು, **ಏಕಾ** = ಒಂದು, **ಅಪಿ** = ಕೂಡಾ, **ಉರು** = ದೊಡ್ಡದಾದ, **ಕಾರ್ಯ** = ಕೆಲಸವನ್ನು , **ಸಾಧಿಕಾ** = ಮಾಡುತ್ತದೆ.

ಕೃಷ್ಣನು ಈ ಮರವನ್ನು ಕಡಿದನು. ಜೊತೆಗೆ ಈ ಮರದಿಂದ ಸಜ್ಜನರಿಗೆ ಉಂಟಾದ ದುಃಖವೆಂಬ ಮರವನ್ನೂ ನಾಶಮಾಡಿದನು. ಕೆಲವು ಅಸುರರು ಆಕಳುಗಳ ರೂಪದಲ್ಲಿ ಈ ಮರದ ಬುಡದಲ್ಲಿ ಇದ್ದರು. ಕೃಷ್ಣನು ಇದೇ ಮರದಿಂದ ಆ ಆಕಳುಗಳನ್ನು ಧ್ವಂಸ ಮಾಡಿದನು. ಈ ರೀತಿಯಾಗಿ ದೇವರ ಒಂದೇ ಕೆಲಸವು ಅನೇಕ ಪುರುಷಾರ್ಥಗಳನ್ನು ಸಾಧಿಸುತ್ತದೆ.

ಅಹೋ ನಿಧಾಘೋತ್ಥಭಯಾದಿವೇಶೋ
ಬಿಭರ್ತಿ ಗಂಗಾಂ ಜಲಧೌ ಸ ಶೇತೇ ।
ರಮಾಪತಿಃ ಪಂಕಜವಿಷ್ಟರಶ್ಚ
ಚತುರ್ಮುಖಸ್ತಂ ವಿಷಹೇತ ಕೋऽನ್ಯಃ ॥ ೧೫ ॥

**ಅಹೋ** = ಆಶ್ಚರ್ಯವು, **ನಿದಾಘ** = ತಾಪದಿಂದ, **ಉತ್ಥ** = ಉಂಟಾದ, **ಭಯಾದಿವ** = ಭಯದಿಂದ ಎಂಬಂತೆ, **ಈಶಃ** = ರುದ್ರನು, **ಬಿಭರ್ತಿ** = ಹೊತ್ತಿದ್ದಾನೆ, **ಗಂಗಾ** = ಗಂಗೆಯನ್ನು , **ಜಲಧೌ** = ಸಮುದ್ರದಲ್ಲಿ, **ಸಃ** = ಆ, **ಶೇತೇ** = ಮಲಗಿದ್ದಾನೆ, **ರಮಾಪತಿಃ** = ಲಕ್ಷ್ಮೀಪತಿಯು, **ಪಂಕಜ** = ಕಮಲವೇ, **ವಿಷ್ಟರಃ ಚ** = ಆಸನವಾಗಿ ಉಳ್ಳವನು, **ಚತುರ್ಮುಖಃ** = ಬ್ರಹ್ಮನು,**ತಂ** = ಈ ಋತುವನ್ನು , **ವಿಷಹೇತ** = ಸಹಿಸಿಯಾನು, **ಕಃ** = ಯಾರು? **ಅನ್ಯಃ**= ಬೇರೆ.

ಸೆಖೆಯನ್ನು ತಾಳಲಾರದೆ ರುದ್ರನು ಗಂಗೆಯನ್ನು ಧರಿಸಿದನು. ದೇವರು ನೀರಿನಲ್ಲಿ ಮಲಗಿದನು. ಬ್ರಹ್ಮನು ಕಮಲದಲ್ಲಿ ಕುಳಿತನು. ತ್ರಿಮೂರ್ತಿಗಳಿಂದಲೇ ಈ ಸೆಖೆಯನ್ನು ತಡೆಯಲಾಗದಿರುವಾಗ ಇನ್ನು ಬೇರೆಯವರ ಪಾಡೇನು?

ಯದ್ಯಪಿ ತ್ರಿಮೂರ್ತಿಗಳು ಈ ರೀತಿ ಇರಲು ಕಾರಣ ಶಾಸ್ತ್ರೀಯವಾಗಿ ಬೇರೆಯೇ ಇದೆ. ಆದರೂ ರಾಜರು ಕಾವ್ಯದ ಶೈಲಿಯಲ್ಲಿ ವರ್ಣಿಸುತ್ತಾರೆ.

> ತದಾಽಪಿ ಸಿದ್ಧಾಶ್ಚತುರಗ್ನಿಮಧ್ಯೇ
> ಪ್ರಹೃಷ್ಟರೋಮಾವಲಯಃ ಸ್ಮರಂತಿ ।
> ನಿಮೀಲಿತಾಕ್ಷಾಃ ಪರಮಂ ಪುಮಾಂಸಂ
> ಫಲಾರ್ಥಿನಾಂ ಕಿಂ ನ ವಿಷಹ್ಯಮಸ್ತಿ ॥೧೬॥

**ತದಾ ಅಪಿ** = ಆಗಲೂ, **ಸಿದ್ಧಾಃ** = ತಪಸ್ವಿಗಳು, **ಚತುರಗ್ನಿ ಮಧ್ಯೇ** = ನಾಲ್ಕು ಅಗ್ನಿಗಳ ಮಧ್ಯದಲ್ಲಿ, **ಪ್ರಹೃಷ್ಟ** = ಸಂತೋಷದ, **ರೋಮಾವಲಯಃ** = ರೋಮಾಂಚವುಳ್ಳ-ವರಾಗಿ, **ಸ್ಮರಂತಿ** = ಸ್ಮರಿಸುತ್ತಾರೆ, **ನಿಮೀಲಿತ** = ಮುಚ್ಚಿದ, **ಅಕ್ಷ** = ಕಣ್ಣುಳ್ಳವರಾಗಿ, **ಪರಮಂ** = ಶ್ರೇಷ್ಠನಾದ, **ಪುಮಾಂಸಂ** = ಪುರುಷನನ್ನು, **ಫಲಾರ್ಥಿನಾಂ** = ಫಲದ ಅಪೇಕ್ಷೆಯುಳ್ಳವರಿಗೆ, **ಕಿಂ** = ಯಾವುದು, **ವಿಷಹ್ಯಂ** = ಸಹಿಸಲು ಅಸಾಧ್ಯವಾದದ್ದು, **ನ ಅಸ್ತಿ** = ಇಲ್ಲ.

ಈ ರೀತಿ ಸೆಖೆ ಇದ್ದರೂ ಋಷಿಗಳು ನಾಲ್ಕು ಅಗ್ನಿಗಳ ಮಧ್ಯದಲ್ಲಿ ದೇವರನ್ನು ನಿರಂತರ ಧ್ಯಾನಿಸುತ್ತಲೇ ಇದ್ದಾರೆ. ದೇವರ ಧ್ಯಾನದಿಂದ ಮೈ ರೋಮಾಂಚಗೊಂಡಿದೆ. ಕಣ್ಣುಗಳನ್ನು ಮುಚ್ಚಿದ್ದಾರೆ. ನಮ್ಮ ಇಷ್ಟಸಿದ್ಧಿಯಾಗುವುದಕ್ಕೋಸ್ಕರ ನಾವು ಎಂತಹ ಕ್ಲೇಶ-ವನ್ನೂ ಸಹಿಸುತ್ತೇವೆ.

ದೇವರ ಚಿಂತನೆಯಲ್ಲಿ ಇರುವವರಿಗೆ ಯಾವ ಕ್ಲೇಶವೂ ಇಲ್ಲ ಎಂದು ಇದರ ಅಭಿಪ್ರಾಯ.

> ಸುಶೀತಲಃ ಕೃಷ್ಣಪದಾಬ್ಜಯುಗ್ಮ-
> ಮಿತಃ ಸ್ಪೃಶತ್ಯುಜ್ಜ್ವಲಕಾನನಾಗ್ನಿಮ್ ।
> ತತಃ ಸಮುತ್ಥಾಪಯತಿ ಸ್ಮ ವಾಯುಃ
> ಅಯಂ ಸ್ವಭಾವಃ ಖಲು ಚಂಚಲಾನಾಮ್ ॥೧೭॥

**ಸುಶೀತಲಃ** = ತಣ್ಣಗಿರುವ, **ಕೃಷ್ಣ** = ಹರಿಯ, **ಪದಾಬ್ಜ** = ಚರಣಕಮಲವೆಂಬ, **ಯುಗ್ಮಂ**

= ಎರಡನ್ನು, **ಇತಃ** = ಈ ಕಾಡಲ್ಲಿ, **ಸ್ಪೃಶತಿ** = ಮುಟ್ಟುತ್ತದೆ, **ಉಜ್ವಲ** = ಭಯಾನಕವಾದ, **ಕಾನನಾಗ್ನಿಂ** = ಕಾಡಿನ ಬೆಂಕಿಯನ್ನು, **ತತಃ** = ಹೊರಗೆ, **ಸಮುತ್ಥಾಪಯತಿ** = ಉಂಟು ಮಾಡುತ್ತದೆ, **ವಾಯುಃ** = ಗಾಳಿಯು, **ಅಯಂ** = ಈ, **ಸ್ವಭಾವಃ** = ಸ್ವಭಾವವು, **ಚಂಚಲಾನಾಂ**= ಚಂಚಲರ.

ವೃಂದಾವನದ ಒಳಗೆ ಗಾಳಿಯು ತಂಪಾಗಿರುತ್ತದೆ. ಕೃಷ್ಣನ ಬಳಿಯಲ್ಲಿ ಇರುತ್ತದೆ. ಇದೇ ಗಾಳಿಯು ಹೊರಗಿನಿಂದ ಕಾಡ್ಗಿಚ್ಚನ್ನು ಉಂಟು ಮಾಡುತ್ತದೆ. ಗಾಳಿಯಿಂದ ಮರಗಳಲ್ಲಿ ತಿಕ್ಕಾಟ ಉಂಟಾಗಿ ಬೆಂಕಿ ಉಂಟಾಗುತ್ತದೆ ಎಂಬ ಅಭಿಪ್ರಾಯ. ಚಂಚಲರು ಯಾವಾಗಲೂ ಒಳ್ಳೆಯವರ ಬಳಿ ಒಳ್ಳೆಯದಾಗಿಯೂ, ಕೆಟ್ಟವರ ಬಳಿ ಕೆಟ್ಟದಾಗಿಯೂ ವರ್ತಿಸುತ್ತಾರೆ. ಗಾಳಿಯೂ ಸದಾ ಚಂಚಲ.

**ಪ್ರಿಯಾಸ್ತನಾಖ್ಯಾನ್ ಪರಿರಭ್ಯ ಕುಂಭಾನ್**
**ಸುಧಾಂ ತದೀಯಾಧರಜಾಂ ಪಿಬಂತಃ ।**
**ವಿಂದಂತ್ಯಹೋ ನಾಗರಿಕಾ ನ ತಾಪಂ**
**ನ ವಾ ಪಿಪಾಸಾಂ ಗಿರಿಕುಂಜವಾಸಾಃ ॥೧೮॥**

**ಪ್ರಿಯಾ** = ಪತ್ನಿಯರ, **ಸ್ತನಾಖ್ಯಾನ್** = ಸ್ತನಗಳೆಂಬ ಹೆಸರುಳ್ಳ, **ಪರಿರಭ್ಯ** = ಆಲಿಂಗಿಸಿ, **ಕುಂಭಾನ್** = ಕಲಶಗಳನ್ನು, **ಸುಧಾಂ** = ರಸವನ್ನು, **ತದೀಯ** = ಆ ಸ್ತ್ರೀಯರ, **ಅಧರಜಾಂ** = ತುಟಿಗಳಲ್ಲಿರುವ, **ಪಿಬಂತಃ** = ಕುಡಿಯುತ್ತಾ, **ನ ವಿಂದಂತಿ** = ಹೊಂದುವುದಿಲ್ಲ, **ನಾಗರಿಕಾಃ** = ವಿಲಾಸಿ ಜನರು, **ನ ತಾಪಂ** = ಸೆಖೆಯನ್ನಾಗಲೀ, **ವಾ** = ಅಥವಾ, **ನ ಪಿಪಾಸಾಂ** = ತೃಷೆಯನ್ನಾಗಲೀ, **ಗಿರಿ** = ಪರ್ವತದ, **ಕುಂಜ** = ನೆರಳಲ್ಲಿ, **ವಾಸಾಃ** = ಇರುವವರು

ವೃಂದಾವನದ ಪರ್ವತಗಳಲ್ಲಿ ಬಳ್ಳಿಯ ಮನೆಗಳಿವೆ. ಈ ಮನೆಗಳಲ್ಲಿ ವಿಲಾಸೀ ಜನರು ವಾಸಿಸುತ್ತಾರೆ. ಇವರು ತಮ್ಮ ಪತ್ನಿಯರ ಕುಂಭದಂತಿರುವ ಸ್ತನಗಳನ್ನು ಆಲಿಂಗಿಸುತ್ತಾರೆ. ಹಾಗೆಯೇ ಅವರ ತುಟಿಯ ರಸವನ್ನು ಪಾನ ಮಾಡುತ್ತಾರೆ. ಆದ್ದರಿಂದ ಇವರಿಗೆ ಸೆಖೆಯಾಗಲೀ, ತೃಷೆಯಾಗಲೀ ಇರುವುದಿಲ್ಲ. 'ಬಾವಿಯ ನೀರು, ಗೋಳಿಮರದ ನೆರಳು, ತಾಂಬೂಲ ಹಾಗೂ ತರುಣಿಯರು ತಾಪಹಾರಕರು' ಎಂಬುದು ಪ್ರಸಿದ್ಧ.

ಜಹಾರ ಕೃಷ್ಣಸ್ತಪನೋತ್ಥತಾಪಂ
ಮುಖೇಂದುನಾ ದೃಷ್ಟಿಪಥಂ ಗತೇನ ।

**ಸುಧಾರ್ದ್ರವೀಕ್ಷಾಮಯವೃಷ್ಟಿಭಿಶ್ಚ**
**ವ್ರಜೌಕಸಾಂ ಕಾನನವಾಸಿನಾಂ ಚ ॥ ೧೯ ॥**

**ಜಹಾರ** = ಪರಿಹರಿಸಿದನು, **ಕೃಷ್ಣಃ** = ಹರಿಯು, **ತಪನ** = ಸೂರ್ಯನಿಂದ, **ಉತ್ಥ** = ಉಂಟಾದ, **ತಾಪಂ** = ದುಃಖವನ್ನು, **ಮುಖೇಂದುನಾ** = ಮುಖಚಂದ್ರನಿಂದ, **ದೃಷ್ಟಿ ಪಥಂ** = ಕಣ್ಣಿಗೆ ವಿಷಯವನ್ನು, **ಗತೇನ** = ಹೊಂದಿರುವ, **ಸುಧಾರ್ದ್ರ** = ಅಮೃತದಿಂದ ಒದ್ದೆಯಾದ, **ವೀಕ್ಷಾಮಯ** = ದರ್ಶನರೂಪವಾದ, **ವೃಷ್ಟಿಭಿಃ ಚ** = ಮಳೆಯಿಂದ, **ವ್ರಜೌಕಸಾಂ** = ಗೋಕುಲದವರ, **ಕಾನನವಾಸಿನಾಂ ಚ** = ಕಾಡಿನಲ್ಲಿ ಇರುವವರ

ಜನರಿಗೆ ಬಹಳ ತಾಪ ಆಗುತ್ತಿದೆ. ಈ ಸಂದರ್ಭದಲ್ಲಿ ಯಾರು ಕೃಷ್ಣನ ಒಡನಾಟದಲ್ಲಿ ಇದ್ದರೋ ಅವರ ತಾಪವನ್ನು ಕೃಷ್ಣನು ತನ್ನ ಮುಖವೆಂಬ ಚಂದ್ರನಿಂದ ಕಳೆದನು. ಹಾಗೆಯೇ ತನ್ನ ಅಮೃತಮಯವಾದ ನೋಟದಿಂದ ಎಲ್ಲರ ಮೇಲೂ ಮಳೆಗರೆದನು. ಆದ್ದರಿಂದ ನಂದಗೋಕುಲದ ಗೊಲ್ಲರಿಗೂ, ಕಾಡಿನ ಋಷಿಗಳಿಗೂ ಬಹಳ ತಂಪಾಯಿತು. ಚಂದ್ರೋ-ದಯವಾಗುತ್ತಿರಲು ಹಾಗೆಯೇ ಮಳೆ ಬರುತ್ತಿರಲು ತಂಪಾಗುವುದು ಪ್ರಕೃತಿಯ ಧರ್ಮ.

**ನೀಲಾಂ ಕುಂಭಕಸಂಭವಾಮಲಭತ ಸ್ವೀಯಾಂ ಸ ಜಿತ್ವಾ ವೃಷಾನ್**
**ಶೌರಿಃ ಸಪ್ತ ಸ ಚಾಪಿ ನೀಲಮಣಿಭಿರ್ನೀಲಾಂ ಕರೇ ತತ್ಪುರೀಮ್ ।**
**ಧಾತೂನ್ಸಪ್ತ ನಿಗೃಹ್ಯ ಕುಂಭಕಬಲಾಚ್ಛೃಂಗಪ್ರಹಾರೈಃ ದ್ರವತ್**
**ಕುಂಭಾಭಾಂಗಯುಜೋಽಪರೇಽಪಿ ಬಹವೋ ನೀಲಾಂ**
**ಮುಖಸ್ಯ ಪ್ರಭಾಮ್ ॥೨೦॥**

**ನೀಲಾಂ** = ನೀಲೆಯನ್ನು, **ಕುಂಭಕ** = ಕುಂಭಕನ, **ಸಂಭವಾಂ** = ಮಗಳಾದ, **ಅಲಭತ** = ಪಡೆದನು, **ಸ್ವೀಯಾಂ** = ತನ್ನವಳಾದ, **ಸಃ** = ಕೃಷ್ಣನು, **ಜಿತ್ವಾ** = ಗೆದ್ದು, **ವೃಷಾನ್** = ಎತ್ತುಗಳನ್ನು, **ಶೌರಿಃ** = ಶೂರನ ವಂಶದವನಾದ, **ಸಪ್ತ** = ಏಳು, **ಸ ಚಾಪಿ** = ಕುಂಭಕನಾದರೂ, **ನೀಲಮಣಿಭಿಃ** = ನೀಲಮಣಿಗಳಿಂದ, **ನೀಲಾಂ** = ನೀಲವಾದ, **ಕರೇ** = ಕೈಯ್ಯಲ್ಲಿ, **ತತ್ ಪುರೀಂ** = ಕೃಷ್ಣನ ಊರನ್ನು, **ಧಾತೂನ್** = ಧಾತುಗಳನ್ನು, **ಸಪ್ತ** = ಏಳನ್ನು, **ನಿಗೃಹ್ಯ** = ನಿಗ್ರಹಿಸಿ, **ಕುಂಭಕಬಲಾತ್** = ಪ್ರಾಣಾಯಾಮದ ಬಲದಿಂದ, **ಶೃಂಗ** = ಕೋಡಿನ, **ಪ್ರಹಾರೈಃ** = ಹೊಡೆತಗಳಿಂದ, **ದ್ರವತ್** = ಸೋರುವ, **ಕುಂಭ** = ಮಡಕೆಗಳ, **ಆಭಾ** = ಕಾಂತಿಯಿರುವ, **ಅಂಗ** = ಅವಯವಗಳಿಂದ, **ಯುಜಃ** = ಕೂಡಿದ, **ಅಪರೇಽಪಿ** = ಬೇರೆ, **ಬಹವಃ** = ಬಹಳ ಜನ, **ನೀಲಾಂ** = ಕಪ್ಪಾದ, **ಮುಖಸ್ಯ** = ಮುಖದ, **ಪ್ರಭಾಮ್** = ಕಾಂತಿಯನ್ನು.

ಕೃಷ್ಣನು ಉಪನಯನಾತ್ ಪೂರ್ವದಲ್ಲಿಯೇ ನೀಲಾ ಎಂಬ ಹುಡುಗಿಯನ್ನು ಲಗ್ನ-ವಾದನು. ನೀಲೆಯನ್ನು ಪಡೆಯುವುದಕ್ಕಿಂತ ಮೊದಲು ಕುಂಭಕನ ಮನೆಯಲ್ಲಿರುವ ಏಳು ಎತ್ತುಗಳನ್ನು ನಿಗ್ರಹಿಸಿದ್ದನು. ನೀಲೆಯ ತಂದೆಯ ಹೆಸರು ಕುಂಭಕ ಎಂದು. ಕೃಷ್ಣನು ಏಳನ್ನು ನಿಗ್ರಹಿಸಿ ಕುಂಭಕನಿಂದ ನೀಲೆಯನ್ನು ಪಡೆದನು. ಕುಂಭಕನೂ ಏಳು ನಿಗ್ರಹಿಸಿ ನೀತಿಯನ್ನು ಪಡೆದನು. ಅಂದರೆ ಅಭಿಪ್ರಾಯ ಈ ರೀತಿ ಇದೆ – ಕುಂಭಕನು ತನ್ನ ಮಗಳನ್ನು ಕೃಷ್ಣನಿಗೆ ಕೊಟ್ಟ ಪುಣ್ಯದ ಪ್ರಭಾವದಿಂದ ಸಂಸಾರದಲ್ಲಿ ವಿರಕ್ತನಾದ. ಪ್ರಾಣಾಯಾಮಾದಿ ಯೋಗ-ಗಳನ್ನು ಮಾಡಿ ಯೋಗಿಯಾದ. ಪ್ರಾಣಾಯಾಮದಲ್ಲಿ ರೇಚಕ, ಪೂರಕ, ಕುಂಭಕ ಎಂದು ಪ್ರಭೇದ ಇದೆ. ಈ ಕುಂಭಕದಿಂದ ಏಳನ್ನು ಎಂದರೆ ತ್ವಕ್, ಚರ್ಮ, ಮಾಂಸ ಮೊದಲಾದ ೭ರ ಗೂಡಾದ ಈ ಶರೀರವನ್ನು ನಿಗ್ರಹಿಸಿದನು. ಮರಣಾನಂತರ ಮೋಕ್ಷವನ್ನು ಪಡೆದನು. ಮೋಕ್ಷ ಎಂದರೆ ನೀಲಮಣಿಮಯಾತ್ಮಕವಾದದ್ದು. ಮೋಕ್ಷವನ್ನು ಹೊಂದುವುದು ಎಂದರೆ ದೇವರನ್ನು ಹೊಂದುವುದು ಎಂದರ್ಥ. ದೇವರು ನೀಲಮೇಘಶ್ಯಾಮ. ಈ ರೀತಿ ಕುಂಭಕನು ೭ನ್ನು ನಿಗ್ರಹಿಸಿ ನೀಲೆಯನ್ನು ಪಡೆದನು.

ನೀಲೆಯ ಸ್ವಯಂವರಕ್ಕೆ ಬಹಳ ರಾಜರುಗಳು ಸೇರಿದ್ದರು. ಅವರೂ ಕುಂಭಕನಿಂದ ನೀಲೆಯನ್ನು ಪಡೆದರು. ಈ ರಾಜರು ಎತ್ತುಗಳನ್ನು ನಿಗ್ರಹಿಸಲು ಪ್ರಯತ್ನಿಸಿದರು. ಸಾಧ್ಯ-ವಾಗಲಿಲ್ಲ. ಅವುಗಳ ಕೋಡುಗಳಿಂದ ಬಹಳವಾಗಿ ತಿವಿಯಲ್ಪಟ್ಟರು. ಇದರಿಂದಾಗಿ ಅವರ ದೇಹದಿಂದ ರಕ್ತವು ಹರಿಯುತ್ತಿತ್ತು. ಇವರ ದೇಹವಾದರೂ ಗುಡಾಣ(ಹಂಡೆ)ಯಂತೆ ಬಹಳ ದೊಡ್ಡದಾಗಿತ್ತು. ಬಹಳ ಜನರ ಮುಂದೆ ಈ ರೀತಿ ಸೋಲಾದಾಗ ಅವರ ಮುಖವು ನೀಲಬಣ್ಣಕ್ಕೆ ತಿರುಗಿತು. ಅಂದರೆ ಅವರ ಮುಖವು ಕಪ್ಪಿಟ್ಟಿತ್ತು. ಈ ರೀತಿಯಾಗಿ ಈ ಉಳಿದ ರಾಜರು ಕೂಡಾ ೭ರಿಂದ (೭ನ್ನು ನಿಗ್ರಹಿಸಲು ಪ್ರಯತ್ನಿಸಿ) ಕುಂಭಕದಿಂದ (ಹಂಡೆಯಂತಿರುವ ಶರೀರದಿಂದ ಉಂಟಾದ ನೋವಿನಿಂದ) ನೀಲೆಯನ್ನು (ಮುಖ ಕಪ್ಪಿಡುವಿಕೆಯನ್ನು) ಪಡೆದರು. ಈ ರೀತಿ ಮೂವರೂ ನೀಲೆಯನ್ನು ಪಡೆದರು ಎಂಬು-ದನ್ನು ರಾಜರು ಬಹಳ ಚಮತ್ಕಾರದಿಂದ ವರ್ಣಿಸುತ್ತಾರೆ.

ಅಥಾಪರೋ ರಾಸಭವೇಷಧಾರೀ
ವನಂ ಸಮಾಕ್ರಮ್ಯ ಮುಕುಂದಯೋಗ್ಯಮ್ ।
ಜಘಾನ ಜಂತೂನ್ ಬತ ತಾದೃಶೋಽಸೌ
ಖರಃ ಪ್ರಕೃತ್ಯೇತಿ ಮಮ ಪ್ರತರ್ಕಃ ॥ ೨೧ ॥

**ಅಥ** = ಅನಂತರ, **ಅಪರಃ** = ಬೇರೆಯವನಾದ, **ರಾಸಭ** = ಕತ್ತೆಯ, **ವೇಷ** = ರೂಪ-ವನ್ನು, **ಧಾರೀ** = ಧರಿಸಿದ, **ವನಂ** = ಕಾಡನ್ನು, **ಸಮಾಕ್ರಮ್ಯ** = ಆಕ್ರಮಿಸಿ, **ಮುಕುಂದ**

= ದೇವರಿಗೆ, **ಯೋಗ್ಯಂ** = ಉಚಿತವಾದ, **ಜಘಾನ** = ಕೊಂದನು, **ಜಂತೂನ್** = ಪ್ರಾಣಿಗಳನ್ನು, ಬತ = ದುಃಖವು, **ತಾದೃಶಃ** = ಅಂತಹವನು, **ಅಸೌ** = ಅವನು, **ಖರಃ** = ದುಷ್ಟನು, **ಪ್ರಕೃತ್ಯಾ** = ಸ್ವಭಾವದಿಂದಲೇ, ಇತಿ = ಎಂದು, **ಮಮ** = ನನ್ನ, **ಪ್ರತರ್ಕಃ** = ಊಹೆಯು.

ಈ ಸಮಯದಲ್ಲಿ ಒಬ್ಬ ಅಸುರನು ಕತ್ತೆಯ ರೂಪದಲ್ಲಿ ಬಂದನು. ದೇವರ ಕ್ಷೇತ್ರ-ವಾದ ಈ ಕಾಡನ್ನು ಹಾಳುಗೆಡಹಲು ಆರಂಭಿಸಿದನು. ಅನೇಕ ಜೀವರನ್ನು ಬಲಿ ತೆಗೆದು-ಕೊಂಡನು. ಈತನ ಚರ್ಯೆಯನ್ನು ನೋಡಿದಾಗ ಈತನು ನಿಜವಾಗಿಯೂ ಕತ್ತೆಜಾತಿಯ-ವನು ಎಂದು ಅರ್ಥವಾಗುತ್ತದೆ. ಕೆಟ್ಟದು ಮಾಡುವ ಜನರನ್ನು 'ಕತ್ತೆ' ಎಂದು ಬೈಯುವ ಪರಿಪಾಠ ಈಗಲೂ ಚಾಲ್ತಿಯಲ್ಲಿದೆ.

**ಕ್ಷುಧಾಽತಿಲೋಲಾಃ ಕಿಲ ಗೋಪಬಾಲಾಃ**
**ಸಹಾಚ್ಯುತೇನಾಭಿಯಯುರ್ವನಂ ತತ್ ।**
**ತಥಾ ಹಿ ದುಷ್ಟಸ್ಯ ವಿನಾಶತೋಽನ್ಯತ್**
**ಸತಾಂ ಮನಸ್ತೃಪ್ತಿಕರಂ ಕಿಮಸ್ತಿ ॥ ೨೨ ॥**

**ಕ್ಷುಧಾ** = ಹಸಿವೆಯಿಂದ, **ಅತಿಲೋಲಾಃ** = ಕಂಗೆಟ್ಟಿರುವ, **ಕಿಲ** = ಪ್ರಸಿದ್ಧ, **ಗೋಪ-ಬಾಲಾಃ** = ಗೋಪಾಲರು, **ಸಹ** = ಕೂಡಿ, **ಅಚ್ಯುತೇನ** = ದೇವರಿಂದ, **ಅಭಿಯಯುಃ** = ಹೊರಟರು, **ವನಂ** = ಕಾಡನ್ನು, **ತತ್** =ಆ, **ತಥಾ ಹಿ** = ಅದು ಸರಿ, **ದುಷ್ಟಸ್ಯ** = ದುಷ್ಟರ, **ವಿನಾಶತಃ** = ನಾಶಕ್ಕಿಂತ, **ಅನ್ಯತ್** = ಬೇರೆಯಾದ ಇನ್ನೊಂದು, **ಸತಾಂ** = ಸಜ್ಜನರಿಗೆ, **ಮನಃ** = ಮನಸ್ಸಿಗೆ, **ತೃಪ್ತಿಕರಂ** = ನೆಮ್ಮದಿಯನ್ನು ಮಾಡತಕ್ಕದ್ದು, **ಕಿಮ್** = ಯಾವುದು, **ಅಸ್ತಿ** = ಇದೆ.

ಇದೇ ಸಂದರ್ಭದಲ್ಲಿ ಗೊಲ್ಲರು ಹಸಿವೆ ಆಗುತ್ತಿದೆ ಎಂದು ಕೃಷ್ಣನನ್ನು ಪ್ರಾರ್ಥಿಸಿದರು. ಆಗ ಕೃಷ್ಣನು ಗೊಲ್ಲರಿಂದ ಕೂಡಿಕೊಂಡು ಈ ವನವನ್ನು ಪ್ರವೇಶಿಸಿದನು. ಈ ವನಕ್ಕೆ ಬಂದದ್ದು ಈ ಕತ್ತೆಯನ್ನು ಕೊಲ್ಲಲು. ಗೋಪಾಲಕರ ಹಸಿವೆಗೂ ಈ ಕತ್ತೆಯ ಸಂಹಾರಕ್ಕೂ ಏನು ಸಂಬಂಧ? ಈ ಗೊಲ್ಲರು ಸಾತ್ವಿಕರು. ಸಾತ್ವಿಕರು ತಮ್ಮ ಊಟಕ್ಕಿಂತ ಹೆಚ್ಚಾಗಿ ದುಷ್ಟ ನಿಗ್ರಹವನ್ನು ಆಶಿಸುತ್ತಾರೆ. ಒಬ್ಬ ಉತ್ತಮ ಕೆಲಸವನ್ನು ಮಾಡಿದಾಗ 'ಊಟಕ್ಕಿಂತಲೂ ಹೆಚ್ಚು ತೃಪ್ತಿಯಾಯಿತು' ಎಂದು ಹೇಳುವುದು ಲೋಕದ ರೂಢಿ.

**ಅಥಾಸಸಾದಾಸುರವರ್ಗವರ್ಯೋ**
**ಬಲಶ್ಚ ತಂ ಪ್ರತ್ಯಗಮತ್ ಬಲಾಢ್ಯಃ ।**

**ನಿಜಧ್ವಜಕ್ಷ್ಮಾಜಸಮಾಜರಾಜತ್**
**ವನಂ ತದಾಕ್ರಾಂತಮಿವೇರ್ಷ್ಯಮಾಣಃ ॥ ೨೩ ॥**

**ಅಥ** = ಅನಂತರ, **ಆಸಸಾದ** = ಬಂದನು, **ಅಸುರವರ್ಗ** = ದೈತ್ಯಸಮೂಹದಲ್ಲಿ, **ವರ್ಯಃ** = ಶ್ರೇಷ್ಠನಾದ, **ಬಲಶ್ಚ** = ಬಲರಾಮನು, **ತಂ** = ಅವನನ್ನು, **ಪ್ರತ್ಯಗಮತ್** = ಎದುರುಗೊಂಡನು, **ಬಲಾಢ್ಯಃ** = ಬಲಿಷ್ಠನಾದ, **ನಿಜ** = ತನ್ನ, **ಧ್ವಜ** = ಧ್ವಜವಾದ, **ಕ್ಷ್ಮಾಜ** = ತಾಳೆಮರಗಳ, **ಸಮಾಜ** = ಸಮೂಹದಿಂದ, **ರಾಜತ್** = ಶೋಭಿಸುವ, **ವನಂ** = ಕಾಡನ್ನು, **ತತ್** = ಆ ಅಸುರನಿಂದ, **ಆಕ್ರಾಂತಂ** = ಪ್ರವೇಶಿಸಿದ್ದನ್ನು, **ಈರ್ಷ್ಯಮಾಣಃ**= ಸಹಿಸದವನಾಗಿ.

ಈ ಅಸುರನು ಕೃಷ್ಣ ಬಲರಾಮರಿಗೆ ಎದುರಾದನು. ಬಲರಾಮನು ಆತನ ಜೊತೆ ಕಾದಾಡಲು ಅಣಿಯಾದನು. ಎಲ್ಲಾ ದೈತ್ಯರನ್ನೂ ಈ ತನಕ ಕೃಷ್ಣನೇ ಕೊಂದಿರುವಾಗ ಈತನನ್ನು ಕೊಲ್ಲಲು ಬಲರಾಮನು ಯಾಕೆ ಬಂದನು? ಬಲರಾಮನ ಧ್ವಜದ ಚಿಹ್ನೆ ತಾಳೆ ಮರ. ಈ ಮರಗಳಿಂದ ಈ ಕಾಡು ತುಂಬಿದೆ. ಇಂತಹ ಕಾಡನ್ನು ಈ ದೈತ್ಯನು ಹಾಳು ಮಾಡುವುದನ್ನು ನೋಡಲಾಗದೆ ಬಲರಾಮನು ಮುಂದೆ ಬಂದನು.

**ಸ ಧೇನುಕಸ್ತಂ ನಿಜಪಾರ್ಷ್ಣಿಪದ್ಭ್ಯಾಂ**
**ಪ್ರತಾಡಯನ್ ಗಾಢಮಸಹ್ಯಸತ್ತ್ವಃ।**
**ಪ್ರಗೃಹ್ಯ ತಾವುತ್ಕ್ಷಿಪತೋ ಬಲಸ್ಯ ಖಲಃ**
**ಸಹಾಯೋಽಭವದಸ್ತಮಾಯಃ ॥ ೨೪ ॥**

**ಸ** = ಆ, **ಧೇನುಕಃ** = ಧೇನುಕನು, **ತಂ** = ಬಲರಾಮನನ್ನು, **ನಿಜ** = ತನ್ನ, **ಪಾರ್ಷ್ಣಿ** = ಹಿಂಬದಿಯ, **ಪದ್ಭ್ಯಾಂ** = ಕಾಲುಗಳಿಂದ, **ಪ್ರತಾಡಯನ್** = ಹೊಡೆಯುತ್ತಾ, **ಗಾಢಂ** = ಚೆನ್ನಾಗಿ, **ಅಸಹ್ಯ** = ಬಹಳವಾದ, **ಸತ್ತ್ವಃ** = ಶಕ್ತಿಯುಳ್ಳ, **ಪ್ರಗೃಹ್ಯ** = ಹಿಡಿದು, **ತೌ** = ಆ ಕಾಲುಗಳನ್ನು, **ಉತ್ಕ್ಷಿಪತಃ** = ಮೇಲೆ ಬಿಸಾಡುವ, **ಬಲಸ್ಯ** = ಬಲರಾಮನಿಗೆ, **ಖಲಃ** = ದುಷ್ಟನು, **ಸಹಾಯಃ** = ಸಹಾಯನು, **ಅಭವತ್** = ಆದನು, **ಅಸ್ತಮಾಯಃ** = ನಷ್ಟವಾದ ಮಾಯೆಯುಳ್ಳ.

ಈ ಧೇನುಕನು ಬಹಳ ಶಕ್ತಿಯುಳ್ಳವನು. ತಾನು ನಿಜರೂಪದಿಂದಲೇ ಬಂದಿದ್ದಾನೆ. ಈತನು ತನ್ನ ಹಿಂಬದಿಯ ಕಾಲಿನಿಂದ ಬಲರಾಮನನ್ನು ಒದೆಯಲು ಆರಂಭಿಸಿದನು. ಹಿಂಬದಿಯ ಕಾಲಿನಿಂದ ಒದೆಯುವುದು ಕತ್ತೆಗಳ ಸ್ವಭಾವ. ಬಲರಾಮನೂ ಈತನನ್ನು ಹಿಂಬದಿಯ ಕಾಲಿನಿಂದ ಹಿಡಿದು ಎತ್ತಿ ಬಿಸಾಡಿ ಕೊಲ್ಲಬೇಕೆಂದು ಸಂಕಲ್ಪಿಸಿದ್ದ. ಅಸುರನ ಈ ವರ್ತನೆಯು ಬಲರಾಮನಿಗೆ ಅನುಕೂಲವೇ ಆಯಿತು.

ಉತ್ಕ್ಷಿಪ್ಯ ತಂ ತಾಲಮಹೀರುಹಾಗ್ರೇ
ಸಂಪ್ರೇಷಯಾಮಾಸ ಸತಾಂ ವಿಪಕ್ಷಮ್ ।
ವಿಷ್ವಕ್‌ಫಲಾಲಂಬಿನಿ ಪಾದಪಾಗ್ರೇ
ಧೃತ್ವೋಪಲಂ ಬಾಲ ಇವಾತ್ತಲೀಲಃ ॥ ೨೫ ॥

**ಉತ್‌ಕ್ಷಿಪ್ಯ** = ಬಿಸಾಡಿ, **ತಂ** = ಆತನನ್ನು, **ತಾಲಮಹೀರುಹ** = ತಾಳೆಮರಗಳ, **ಅಗ್ರೇ** = ತುದಿಗೆ, **ಸಂಪ್ರೇಷಯಾಮಾಸ** = ಕಳುಹಿಸಿದನು, **ಸತಾಂ** = ಸಜ್ಜನರಿಗೆ, **ವಿಪಕ್ಷಂ** = ಶತ್ರುವಾದ, **ವಿಷ್ವಕ್** = ಸುತ್ತ, **ಫಲ** = ಹಣ್ಣುಗಳಿಂದ, **ಆಲಂಬಿನಿ** = ನೇತಾಡುವ, **ಪಾದಪ** = ಮರದ, **ಅಗ್ರೇ** = ತುದಿಯಲ್ಲಿ, **ಧೃತ್ವಾ** = ಹಿಡಿದು, **ಉಪಲಂ** = ಕಲ್ಲನ್ನು, **ಬಾಲ ಇವ** = ಹುಡುಗನಂತೆ, **ಆತ್ತಲೀಲಃ**= ಆಡುವ.

ಈ ಅಸುರನು ಸಜ್ಜನರ ವಿರೋಧಿಯು. ಈತನನ್ನು ಬಲರಾಮ ಕಾಲನ್ನು ಹಿಡಿದು ಎತ್ತಿ ತಾಳೆಯ ಮರದ ಕಡೆಗೆ ಬಿಸಾಡಿದನು. ತಾಳೆಯ ಮರದಲ್ಲಿ ಬಹಳ ಹಣ್ಣುಗಳಿದ್ದವು. ಹಣ್ಣುಗಳಿದ್ದ ಮರಕ್ಕೆ ಪುಟ್ಟ ಮಕ್ಕಳು ಕಲ್ಲನ್ನು ಬಿಸಾಡುವಂತೆ ಬಲರಾಮನು ಈ ಧೇನುಕನಿಂದ ಕೂಡಿಕೊಂಡು ಆಟವಾಡಿದನು.

ವ್ಯಸುರಥ ನಿಪತನ್ ಸ ಸ್ವಾಂಘ್ರಿಪಾನೇವ ಕಾಂಶ್ಚಿತ್
ಗುರುತಮತನುರುಚ್ಚೈಃ ಪಾತಯಾಮಾಸ ದೈತ್ಯಃ।
ಹರಿಪದವಿಮುಖಾನಾಂ ಪೋಷಣಸ್ಯೋಚಿತಂ ತೇ
ಫಲಮಲಭಿಷತಾಲಂ ತೈಃ ಸಹೇತ್ಯಸ್ಮದೂಹಃ ॥ ೨೬ ॥

**ವ್ಯಸುಃ** = ಸತ್ತಿರುವ, **ಅಥ** = ಅನಂತರ, **ನಿಪತನ್** = ಬೀಳುವವನಾಗಿ, **ಸಃ** = ಆ, **ಸ್ವಾಂಘ್ರಿಪಾನ್ ಏವ** = ತನ್ನ ಮರಗಳನ್ನೇ, **ಕಾಂಶ್ಚಿತ್** = ಕೆಲವು, **ಗುರುತಮ** = ದೊಡ್ಡ, **ತನುಃ** = ಶರೀವುಳ್ಳ, **ಉಚ್ಚೈಃ** = ಚೆನ್ನಾಗಿ(ಎತ್ತರವಾದ), **ಪಾತಯಾಮಾಸ** = ಬೀಳಿಸಿದನು, **ದೈತ್ಯಃ** = ಅಸುರನು, **ಹರಿಪದ** = ದೇವರಿಗೆ, **ವಿಮುಖಾನಾಂ** = ಶತ್ರುಗಳ, **ಪೋಷಣಸ್ಯ** = ರಕ್ಷಣೆಗೆ, **ಉಚಿತಂ** =ಯೋಗ್ಯವಾದ, **ತೇ** = ಅವುಗಳು, **ಫಲಂ** = ಫಲವನ್ನು, **ಅಲಭಿಷತ** = ಹೊಂದಿದವು, **ಆಲಂ** = ಚೆನ್ನಾಗಿ, **ತೈಃ ಸಹ** = ಅವರಿಂದ ಕೂಡಿ, **ಇತಿ** = ಎಂದು, **ಅಸ್ಮತ್** = ನಮ್ಮ, **ಊಹಃ** = ಊಹೆಯು.

ಈ ದೈತ್ಯನು ದೊಡ್ಡ ಶರೀರವುಳ್ಳವನು. ಎತ್ತರದಿಂದ ತಾನು ಕೆಳಗೆ ಬೀಳುವಾಗ ಕೆಲವು ಮರಗಳನ್ನು ಉರುಳಿಸಿದನು. ಈ ಮರಗಳೂ ದೈತ್ಯರೇ ಆಗಿದ್ದರು. ಮರಗಳಾಗಿ ಹುಟ್ಟಿದ ಇವುಗಳು ಈ ಕತ್ತೆಗಳನ್ನು ತಮ್ಮ ಫಲಾದಿಗಳಿಂದ ಪೋಷಿಸುತ್ತಿದ್ದವು. ಹರಿದ್ವೇಷಿಗಳನ್ನು

ಪೋಷಿಸಿದ್ದರಿಂದ ಕರ್ತೃಗಳ ಜೊತೆಗೆ ಇವುಗಳ ನಾಶವೂ ಉಚಿತವಾಗಿದೆ. ಭಗವದ್-ದ್ವೇಷಿಗಳಿಗೆ ಪೋಷಣೆ ಕೊಡುವವರು ಕೂಡಲೇ ಕೆಟ್ಟ ಫಲವನ್ನು ಅನುಭವಿಸುತ್ತಾರೆ.

**ಮುನಿಕೃತಾಗ್ರಜನಾಮ ಗುಣೋಚಿತಂ**
**ವಿರಚಯನ್ನಿವ ಸಾನುಗಧೇನುಕಮ್ ।**
**ಹಲಧರೇಣ ಹತಂ ಸಮಕಾರಯತ್**
**ಸುರನತೋ ರಣತೋಷಿತನಾಕಿನಾ ॥ ೨೭ ॥**

**ಮುನಿ** = ಗರ್ಗಾಚಾರ್ಯರಿಂದ, **ಕೃತ** = ಮಾಡಲ್ಪಟ್ಟ, **ಅಗ್ರಜ** = ಅಣ್ಣನಿಗೆ, **ನಾಮ** = ಬಲರಾಮ ಎಂಬ ಹೆಸರು, **ಗುಣ** = ಗುಣಕ್ಕೆ, **ಉಚಿತಂ** = ಯೋಗ್ಯವನ್ನಾಗಿ, **ವಿರಚಯನ್ನಿವ** = ಮಾಡುವವನಂತೆ, **ಸಾನುಗ** = ಪರಿವಾರದಿಂದ ಕೂಡಿದ, **ಧೇನುಕಂ** = ಧೇನುಕನನ್ನು, **ಹಲಧರೇಣ** = ಬಲರಾಮನಿಂದ, **ಹತಂ** = ಸತ್ತವನನ್ನಾಗಿ, **ಸಮ-ಕಾರಯತ್** = ಮಾಡಿದನು, **ಸುರ** = ದೇವತೆಗಳಿಂದ, **ನತಃ** = ವಂದ್ಯನಾದ, ಕೃಷ್ಣನು, **ರಣ** = ಯುದ್ಧದಿಂದ, **ತೋಷಿತ**= ತೃಪ್ತರಾದ, **ನಾಕಿನಾ** = ದೇವತೆಗಳುಳ್ಳ.

ಈ ಕರ್ತೃಯನ್ನು ಕೃಷ್ಣನು ಬಲರಾಮನಿಂದ ಕೊಲ್ಲಿಸಿದನು. ಆದ್ದರಿಂದ ದೇವತೆಗಳು ಈ ಸಮಯದಲ್ಲಿ ಕೃಷ್ಣನನ್ನೇ ಹೊಗಳಿದರು. ಬಲರಾಮನಿಂದ ಏಕೆ ಕೊಲ್ಲಿಸಿದ? ಎಂದರೆ ಗರ್ಗರು ಈತನಿಗೆ ನಾಮಕರಣ ಸಂದರ್ಭದಲ್ಲಿ ಬಲರಾಮ ಎಂದು ಕರೆದಿದ್ದರು. ಈತನ ಬಲಪ್ರದರ್ಶನಕ್ಕೆ ಒಮ್ಮೆಯೂ ಅವಕಾಶ ಒದಗಿರಲಿಲ್ಲ. ಆದ್ದರಿಂದ ಆ ಹೆಸರು ವ್ಯರ್ಥ-ವಾಗುವ ಪ್ರಸಂಗ ಬಂದಿತ್ತು. ಅದನ್ನು ತಪ್ಪಿಸಲು ದೇವರು ಆತನಿಂದ ಧೇನುಕನನ್ನು ಕೊಲ್ಲಿಸಿದನು. ದುಷ್ಟರನ್ನು ಕೊಲ್ಲುವವನು ಬಲಶಾಲಿಯಾಗಿರಬೇಕು ತಾನೆ. ಬಲರಾಮನು ಕಾದಾಡಿದ ಕ್ರಮದಿಂದ ದೇವತೆಗಳು ಬಹಳ ಆನಂದಪಟ್ಟಿದ್ದರು.

**ಗ್ರೀಷ್ಮೇ ಭಾಸ್ವತಿ ಚಾಪರಾಧಕೃತಿ ಸಂಕ್ರುದ್ಧಃ ಪ್ರಲಂಬಂ ಹಲೀ**
**ಲೀಲಾಯಾಶ್ಛಲತೋ ಜಘಾನ ಮುರಜಿದ್ವ್ಯೋಮಂ ಮಯಸ್ಯಾತ್ಮಜಮ್ ।**
**ಯುಕ್ತಂ ತದ್ಧಿ ಮನಃಪ್ರಿಯಾನ್ ಜನಯಿತಾ ಸಂತರ್ಜಯನ್ ಸ್ವಾನ್ ಶಿಶೂನ್**
**ತತ್ರಾಂತಸ್ಥಶಿಲಾದಿಹಸ್ತಲಗುಡೈಸ್ತಪ್ತೋಽಪಿ ಯತ್ತಾಡಯೇತ್ ॥ ೨೮ ॥**

**ಗ್ರೀಷ್ಮೇ** = ಗ್ರೀಷ್ಮ ಋತುವು, **ಭಾಸ್ವತಿ** = ಸೂರ್ಯನು, **ಅಪರಾಧಕೃತಿ** = ಅನ್ಯಾಯ ಮಾಡುತ್ತಿರಲು, **ಸಂಕ್ರುದ್ಧಃ** = ಸಿಟ್ಟಾದ, **ಪ್ರಲಂಬಂ** = ಪ್ರಲಂಬಾಸುರನನ್ನು, **ಹಲೀ** = ಬಲರಾಮನು, **ಲೀಲಾಯಾಃ** = ಆಟದ, **ಛಲತಃ** = ನೆಪದಿಂದ, **ಜಘಾನ** = ಕೊಂದನು, **ಮುರಜಿತ್** = ಮುರಾರಿಯು, **ವ್ಯೋಮಂ** = ವ್ಯೋಮಾಸುರನನ್ನು, **ಮಯಸ್ಯ** =

ಮಯನ, **ಆತ್ಮಜಂ** = ಮಗನಾದ, **ಯುಕ್ತಂ** = ಯೋಗ್ಯವು, **ತತ್** = ಅದು, **ಮನಃಪ್ರಿಯಾನ್** = ಇಷ್ಟರಾದ, **ಜನಯಿತಾ** = ತಂದೆಯು, **ಸಂತರ್ಜಯನ್** = ಬೈಯ್ಯುತ್ತಾ, **ಸ್ವಾನ್** = ತನ್ನ, **ಶಿಶೂನ್** = ಮಕ್ಕಳನ್ನು, **ತತ್** = ಮಕ್ಕಳ, **ಪ್ರಾಂತಸ್ಥ** = ಸಮೀಪದಲ್ಲಿರುವ, **ಶಿಲಾದಿ** = ಕಲ್ಲು ಮೊದಲಾದವನ್ನು, **ಹಸ್ತ** = ಕೈಯ, **ಲಗುಡೈಃ** = ಒನಕೆಗಳಿಂದ, **ತಪ್ತಃ ಅಪಿ** = ಸಿಟ್ಟಾಗಿದ್ದರೂ, **ಯತ್** = ಯಾವ ಕಾರಣದಿಂದ, **ತಾಡಯೇತ್**= ಹೊಡೆಯುತ್ತಾನೆ.

ಗ್ರೀಷ್ಮ ಋತು ಹಾಗೂ ಸೂರ್ಯನು ಕೃಷ್ಣನಿಗೆ ವಿರೋಧ ಮಾಡುವ ಮೂಲಕ ಅಪರಾಧಿಗಳಾಗಿದ್ದಾರೆ. ಇವರನ್ನು ಶಿಕ್ಷಿಸಬೇಕಾಗಿದೆ. ಅದಕ್ಕೆ ಕೃಷ್ಣ ಬಲರಾಮರು ಕ್ರಮವಾಗಿ ವ್ಯೋಮ, ಪ್ರಲಂಬಾಸುರರನ್ನು ಕೊಂದರು. ಇವರನ್ನು ಕೊಂದದ್ದರಿಂದ ಅವರಿಗೆ ಶಿಕ್ಷೆ ಹೇಗೆ? ಅಂದರೆ ಲೋಕದಲ್ಲಿ ತಂದೆತಾಯಿಗಳು ತಮ್ಮ ಪ್ರಿಯವಾದ ಮಕ್ಕಳನ್ನು ತಿದ್ದಲು ಮಕ್ಕಳನ್ನೇ ಹೊಡೆಯುವುದಿಲ್ಲ. ಸಮೀಪದಲ್ಲಿದ್ದ ಕಂಬವೋ ಗೋಡೆಯೋ ಇದನ್ನು ಕೋಲಿನಿಂದ ಹೊಡೆಯುತ್ತಾರೆ. ಆಗ ಹೆದರಿದ ಮಕ್ಕಳು ತಮ್ಮನ್ನು ತಿದ್ದಿಕೊಳ್ಳುತ್ತಾರೆ. ಈ ಗ್ರೀಷ್ಮ ಋತು ಹಾಗೂ ಸೂರ್ಯರು ಕೃಷ್ಣನಿಗೆ ಬಹಳ ಪ್ರಿಯರು.

**ಪರಾಭವಂ ವೀಕ್ಷ್ಯ ತತೋ ನಿದಾಘಃ**
**ಸಸರ್ಜ ದಾವಾನಲಮುಜ್ಜ್ವಲಂತಮ್ ।**
**ಹರಿಃ ಪಪೌ ತಂ ಚ ಜಗನ್ನಿವಾಸೋ**
**ವಿನಾಶಶೂನ್ಯಸ್ಯ ಹಿ ಕಿಂ ನ ಕಾರ್ಯಮ್ ॥೨೯॥**

**ಪರಾಭವಂ** = ಸೋಲನ್ನು, **ವೀಕ್ಷ್ಯ** = ನೋಡಿ, **ತತಃ** = ಅನಂತರ, **ನಿದಾಘಃ** = ಗ್ರೀಷ್ಮವು, **ಸಸರ್ಜ** = ಉಂಟುಮಾಡಿತು, **ದಾವಾನಲಂ** = ಕಾಳ್ಗಿಚ್ಚನ್ನು, **ಉಜ್ಜ್ವಲಂತಂ** = ಉರಿಯುವ, **ಹರಿಃ** = ದೇವರು, **ಪಪೌ** = ಕುಡಿದನು. **ತಂ ಚ** = ಅದನ್ನು, **ಜಗನ್ನಿವಾಸಃ** = ಲೋಕಕ್ಕೆ ಆಶ್ರಯನಾದ, **ವಿನಾಶಶೂನ್ಯಸ್ಯ** = ನಾಶರಹಿತನಾದ, **ಕಿಂ** = ಯಾವುದು, **ನ ಕಾರ್ಯಂ** = ಅಸಾಧ್ಯವು.

ಎಲ್ಲಾ ರೀತಿಯಿಂದಲೂ ಸೋಲುಂಡ ಗ್ರೀಷ್ಮವು ಕೃಷ್ಣನನ್ನು ಸೋಲಿಸಲು ಮಗದೊಮ್ಮೆ ಕಾಳ್ಗಿಚ್ಚನ್ನು ಸೃಷ್ಟಿಸಿತು. ಅಂದರೆ ಪುನಃ ಕಾಡಿಗೆ ಬೆಂಕಿ ಬಿತ್ತು ಎಂದು ಅಭಿಪ್ರಾಯ. ಈ ಬೆಂಕಿಯನ್ನು ದೇವರು ನುಂಗಿದ. ಇದರಿಂದ ನಾವು ಭಯ ಪಡಬೇಕಾಗಿಲ್ಲ. ದೇವರಿಗೆ ನಾಶವಿಲ್ಲ. ಆದ್ದರಿಂದ ದೇವರು ಬೆಂಕಿಯನ್ನಲ್ಲ. ವಿಷವನ್ನು ಕುಡಿದರೂ ನಾವು ಆಶ್ಚರ್ಯವನ್ನೂ ಭಯವನ್ನೂ ಪಡಬೇಕಾಗಿಲ್ಲ.

ಮೇಘಾಃ ಸವರ್ಣಸ್ಯ ಹರೇಃ ಸಹಾಯಂ
ಪ್ರಾಯೋ ವಿಧಾತುಂ ಪರಿತಃ ಸಮೇತ್ಯ ।
ಭಾಸ್ವಂತಮಂಗೈಃ ಪಯಸಾ ನಿದಾಘ-
ಮಾಚ್ಛಾದ್ಯ ವಿಶ್ವಂ ಪುಪುಷುಸ್ತದೀಯಮ್ ॥ ೩೦ ॥

**ಮೇಘಾಃ** = ಮೋಡಗಳು, **ಸವರ್ಣಸ್ಯ** = ಒಂದೇ ಬಣ್ಣವುಳ್ಳ, **ಹರೇಃ** = ದೇವರಿಗೆ, **ಸಹಾಯಂ** = ಸಹಾಯವನ್ನು, **ಪ್ರಾಯಃ** = ಪ್ರಾಯಶಃ, **ವಿಧಾತುಂ** = ಮಾಡಲು, **ಪರಿತಃ** = ಸುತ್ತಲೂ, **ಸಮೇತ್ಯ** = ಬಂದು, **ಭಾಸ್ವಂತಂ** = ಸೂರ್ಯನನ್ನು, **ಅಂಗೈಃ** = ಶರೀರದಿಂದ, **ಪಯಸಾ** = ನೀರಿನಿಂದ, **ನಿದಾಘಂ** = ಸೆಖೆಯನ್ನು, **ಆಚ್ಛಾದ್ಯ** = ಆವರಿಸಿ, **ವಿಶ್ವಂ** = ಜಗತ್ತನ್ನು, **ಪುಪುಷುಃ** = ಪೋಷಿಸಿದವು, **ತದೀಯಂ** = ದೇವರಿಗೆ ಸೇರಿದ,

ಮಳೆಗಾಲದ ವರ್ಣನೆ – ಈ ಸಂದರ್ಭದಲ್ಲಿ ಕೃಷ್ಣನಿಗೆ ಸಹಾಯ ಮಾಡಲು ಮೇಘ-ಗಳು ಬಂದವು. ಈ ಇಬ್ಬರ ಬಣ್ಣವೂ ಒಂದೇ. ಆದ್ದರಿಂದ ಸಹಾಯದ ಬುದ್ಧಿ ಬಂತು. ಇಂತಹ ಮೋಡಗಳು ತಮ್ಮ ದೇಹಗಳಿಂದ ಕೃಷ್ಣನಿಗೆ ಉಪದ್ರವಕಾರಿಯಾದ ಸೂರ್ಯನನ್ನು ಮರೆಮಾಡಿದವು. ತಮ್ಮ ನೀರಿನಿಂದ ತಾಪವನ್ನು ಕಮ್ಮಿ ಮಾಡಿದವು. ಹೀಗೆ ಮೋಡಗಳು ದೇವರ ಸೃಷ್ಟಿಯಾದ ಈ ಜಗತ್ತನ್ನು ರಕ್ಷಿಸಿದವು.

ಆಶ್ರಿತ್ಯ ವಿಷ್ಣುಪದಮರ್ಥಿಷು ಯಚ್ಛತೋಽಂಬು
ಮೇಘಸ್ಯ ಸಾರಥಿರಭೂಜ್ಜಲನಾಯಕೋಽಪಿ ।
ನಿತ್ಯಂ ಮುಕುಂದಚರಣಾರ್ಪಿತವೈಭವಸ್ಯ
ಮರ್ತ್ಯೋಪಕಾರನಿರತಸ್ಯ ನ ಕಃ ಸಹಾಯಃ ॥ ೩೧ ॥

**ಆಶ್ರಿತ್ಯ** = ಆಶ್ರಯಿಸಿ, **ವಿಷ್ಣುಪದಂ** = ಆಕಾಶವನ್ನು, **ಅರ್ಥಿಷು** = ಅಪೇಕ್ಷೆ-ಯುಳ್ಳವರಲ್ಲಿ, **ಯಚ್ಛತಃ** = ಕೊಡತಕ್ಕ, **ಅಂಬು** = ನೀರನ್ನು, **ಮೇಘಸ್ಯ** = ಮೋಡಕ್ಕೆ, **ಸಾರಥಿಃ** = ಸಾರಥಿಯು, **ಅಭೂತ್** = ಆಯಿತು, **ಜಲನಾಯಕೋಽಪಿ** = ಸಮುದ್ರವೂ, **ನಿತ್ಯಂ** = ಯಾವಾಗಲೂ, **ಮುಕುಂದ** = ದೇವರ, **ಚರಣ** = ಪಾದ-ಗಳಲ್ಲಿ, **ಅರ್ಪಿತ** = ಇಟ್ಟಿರುವ, **ವೈಭವಸ್ಯ** = ವೈಭವವುಳ್ಳ, **ಮರ್ತ್ಯ** = ಮಾನವರಿಗೆ, **ಉಪಕಾರ** = ಉಪಕಾರದಲ್ಲಿ, **ನಿರತಸ್ಯ** = ಆಸಕ್ತನಿಗೆ, **ಕಃ** = ಯಾರು, **ನ ಸಹಾಯಃ** = ಸಹಾಯ ಇಲ್ಲ.

ಮೋಡವು ವಿಷ್ಣುಪದ(ಆಕಾಶ)ವನ್ನು ಆಶ್ರಯಿಸಿ ಜನರಿಗೆ ಮಳೆಯನ್ನು ಕೊಡುವ

ಮೂಲಕ ಉಪಕಾರ ಮಾಡುತ್ತಿದೆ. ಸಮುದ್ರವು ಮೋಡಕ್ಕೆ ನೀರು ಉಣಿಸಿದ್ದರಿಂದ ಮೋಡವು ತಾನು ಜನರಿಗೆ ಕೊಡಲು ಸಮರ್ಥವಾಯಿತು. ಮೋಡದ ಈ ಕಾರ್ಯಕ್ಕೆ ಸಮುದ್ರವು ಸಾರಥ್ಯವನ್ನು ವಹಿಸಿದಂತೆ ಆಯಿತು. ಸಮುದ್ರವು ಜಲನಾಯಕ. ಸಂಸ್ಕೃತದಲ್ಲಿ ಲಕಾರ ಡಕಾರಗಳಿಗೆ ಐಕ್ಯದ ಭಾವನೆ ಇದೆ. ಆದ್ದರಿಂದ ಸಮುದ್ರನು ಜಡನಾಯಕ ಎಂದಾಯಿತು. ಜಡನಾಯಕ ಅಂದರೆ ಮೂರ್ಖ ಎಂದರ್ಥ. ತಥಾ ಚ ಮೋಡಗಳಿಗೆ ಮೂರ್ಖರು ಸಹಾಯ ಮಾಡುತ್ತಾರೆ ಎಂದಾಯಿತು.

ಈ ಪ್ರಸಂಗದಲ್ಲಿ ಶ್ರೀರಾಜರು ಈ ರೀತಿ ಹೇಳುತ್ತಾರೆ – ನಿತ್ಯದಲ್ಲಿಯೂ ವಿಷ್ಣುವಿನ ಪಾದವನ್ನು ಆಶ್ರಯಿಸಿ ಜನರಿಗೆ ಉಪಕಾರ ಮಾಡುವವರಿಗೆ ಎಲ್ಲರೂ ಸಹಾಯ ಮಾಡುತ್ತಾರೆ. ಇಲ್ಲಿ ವಿಷ್ಣುಪದ ಎಂಬ ಶಬ್ದವು ದೇವರ ಚರಣಕ್ಕೂ ಆಕಾಶಕ್ಕೂ ಸಮಾನ-ವಾಗಿದೆ.

• • • •

**ಸಂದೇಶ**

**ಯುಕ್ತಂ ಹಿ ತನ್ಮುರರಿಪೋರನುಗಾಃ ವಿರಾಗಾಃ**
**ಯತ್ನಂ ಕದಾಚಿದಪಿ ನ ಸ್ವಕೃತೇ ಪ್ರಕುರ್ಯುಃ ॥**

ವಿರಕ್ತರಾದ ದೇವರ ಭಕ್ತರು ಸ್ವಾರ್ಥಕ್ಕಾಗಿ ಏನನ್ನೂ ಸಂಪಾದಿಸುವುದಿಲ್ಲ.

---

**ಲೋಕಸ್ಯ ಶೋಕಹರವಾರ್ಯಭಿವರ್ಷತೋಽಲಂ**
**ಮೇಘಸ್ಯ ಯೋಗಕೃದಭೂದಮತೋಽಪಿ ವಾತಃ ।**
**ಕಾಮಂ ಪರೋಪಕೃತಿಲಗ್ನಮನೋರಥಾನಾಂ**
**ಕ್ಷೇಮಂಕರತ್ವಮುಪಯಾಂತಿ ಹಿ ಶತ್ರವೋಽಪಿ ॥ ೩೨ ॥**

**ಲೋಕಸ್ಯ** = ಜನರಿಗೆ, **ಶೋಕ** = ದುಃಖವನ್ನು, **ಹರ** = ಪರಿಹರಿಸುವ, **ವಾರಿ** = ನೀರನ್ನು, **ಅಭಿವರ್ಷತಃ** = ಸುರಿಸುವ, **ಅಲಂ** = ಚೆನ್ನಾಗಿ, **ಮೇಘಸ್ಯ** = ಮೋಡಕ್ಕೆ, **ಯೋಗಕೃತ್** = ಇನ್ನೊಂದು ಮೋಡದಿಂದ ಸಂಬಂಧವನ್ನು ಮಾಡತಕ್ಕದ್ದು, **ಅಭೂತ್** = ಆಯಿತು, **ಅಮತೋಽಪಿ** = ಶತ್ರುವಾದರೂ, **ವಾತಃ** = ಗಾಳಿಯು, **ಕಾಮಂ** = ಬಹಳವಾಗಿ, **ಪರ** = ಇನ್ನೊಬ್ಬರಿಗೆ, **ಉಪಕೃತಿ** = ಉಪಕಾರದಲ್ಲಿ, **ಲಗ್ನ** = ಸಂಬದ್ಧ-ವಾದ, **ಮನೋರಥಾನಾಂ** = ಮನಸ್ಸುಳ್ಳವರಿಗೆ, **ಕ್ಷೇಮಂಕರತ್ವಂ** = ಹಿತಕರತ್ವವನ್ನು, **ಉಪಯಾಂತಿ** = ಹೊಂದುತ್ತಾರೆ, **ಶತ್ರವೋಽಪಿ** = ಶತ್ರುಗಳು ಕೂಡಾ,

ಆಕಾಶದಲ್ಲಿ ಮೋಡಗಳನ್ನು ಗಾಳಿಯು ಚದುರಿಸುತ್ತದೆ. ಆದ್ದರಿಂದ ಗಾಳಿಯು ಮೋಡಗಳಿಗೆ ಶತ್ರುವು. ಆದರೂ ಮೋಡಾಂತರದಿಂದ ಸಂಯೋಗವಾಗುವಂತೆ ಮಾಡು-

ತ್ತದೆ. ಇದು ಗಾಳಿಯು ಮೋಡಕ್ಕೆ ಮಾಡುವ ಉಪಕಾರ. ಯಾಕೆ ಉಪಕಾರ ಮಾಡುತ್ತದೆ? ಅಂದರೆ ಮೋಡಗಳು ಜನರಿಗೆ ನೀರನ್ನು ಒದಗಿಸಿ ದುಃಖವನ್ನು ಪರಿಹರಿಸುತ್ತದೆ.

**ಉದ್ಯದ್ವಿದ್ಯುತಿ ವಕ್ರಶಕ್ರಧನುಷಿ ವ್ಯೋಮಾಗ್ರಸೀಮಾಶ್ರಯೇ**
**ವರ್ಷತ್ಯೂರ್ಜಿತಗರ್ಜಿತೇಽತಿಚಕಿತಾ ಮರ್ತ್ಯಾಃ ಪಯೋಧಾರಿಣಿ ।**
**ನೇತ್ರಾಂತಭ್ರುಕುಟೀಬಲಂ ಕೃಶಲಸನ್ಮಧ್ಯೋರ್ಧ್ವಭಾಗೋದಿತಂ**
**ನಾರೀಪೀನಪಯೋಧರಂ ಭಯಹರಂ ಭೇಜುಃ ಕ್ವಣದ್ಭೂಷಣಮ್ ॥ ೩೩॥**

**ಉದ್ಯತ್** = ಪ್ರಕಾಶಿಸುವ, **ವಿದ್ಯುತಿ** = ಮಿಂಚುಳ್ಳ, **ವಕ್ರ** = ವಕ್ರವಾದ, **ಶಕ್ರಧನುಷಿ** = ಕಾಮನ ಬಿಲ್ಲುಳ್ಳ, **ವ್ಯೋಮ** = ಆಕಾಶದ, **ಅಗ್ರ** = ತುದಿಯ, **ಸೀಮಾ** = ಭಾಗವು, **ಆಶ್ರಯೇ** = ಆಶ್ರಯವಾಗಿ ಉಳ್ಳ, **ವರ್ಷತಿ** = ಮಳೆಗರೆಯುತ್ತಿರಲು, **ಊರ್ಜಿತ** = ಬಹಳವಾದ, **ಗರ್ಜಿತೇ** = ಸಿಡಿಲುಳ್ಳ, **ಅತಿ ಚಕಿತಾ** = ಭಯಗೊಂಡ, **ಮರ್ತ್ಯಾಃ** = ಮಾನವರು, **ಪಯೋಧಾರಿಣಿ** = ಮೋಡವು, **ನೇತ್ರಾಂತ** =ಕಡೆಗಣ್ಣು, **ಭ್ರುಕುಟೀ** = ಹುಬ್ಬಿನ ಕುಣಿತವು ಇವುಗಳ, **ಬಲಂ** = ಬಲವುಳ್ಳ, **ಕೃಶ** = ಕೃಶವಾದ, **ಲಸತ್** = ಶೋಭಿಸುವ, **ಮಧ್ಯ** = ಉದರದ, **ಊರ್ಧ್ವಭಾಗ** = ಮೇಲ್ಭಾಗದಲ್ಲಿ, **ಉದಿತಂ** = ಇರುವ, **ನಾರೀ** = ಸ್ತ್ರೀಯ, **ಪೀನ** = ಪುಷ್ಟವಾದ, **ಪಯೋಧರಂ** = ಸ್ತನವನ್ನು, **ಭಯಹರಂ** = ಭಯವನ್ನು ಪರಿಹರಿಸುವ, **ಭೇಜುಃ** = ಆಶ್ರಯಿಸಿದರು, **ಕ್ವಣತ್** = ಶಬ್ದಮಾಡುವ, **ಭೂಷಣಂ** = ಆಭರಣವುಳ್ಳ.

ಮೋಡಗಳು ಆಕಾಶದಲ್ಲಿ ಎತ್ತರದಲ್ಲಿ ಇವೆ. ಈ ಮೋಡಗಳಲ್ಲಿ ಮಿಂಚು ಕಾಮನ ಬಿಲ್ಲು, ಗುಡಗು ಎಲ್ಲಾ ಇವೆ. ಇಂತಹ ಮೋಡಗಳು ಬಹಳವಾಗಿ ಮಳೆಗರೆಯುತ್ತಿವೆ. ಇದರಿಂದ ಭಯಭೀತರಾದ ಜನರು (ಕಾಮಿಗಳು) ಸ್ತ್ರೀಯರ ಪಯೋಧರವನ್ನು ಆಶ್ರಯಿಸಿದರು. ಈ ಪಯೋಧರಗಳು ಸ್ತ್ರೀಯರ ಕೃಶವಾದ ಕಟಿಪ್ರದೇಶದ ಮೇಲ್ಭಾಗದಲ್ಲಿ ಇವೆ. ಇದು ಸೂಕ್ಷ್ಮವಾದ ಆಕಾಶದ ಮೇಲೆ ಇದೆ ಎಂಬುದು ದೃಷ್ಟಾಂತ. ಎದೆ ಮೇಲೆ ಹಾಕಿದ ಆಭರಣಗಳು ಶಬ್ದ ಮಾಡುತ್ತಿದ್ದವು. ಇದು ಗುಡುಗಿನ ಸಂಕೇತ.

ಲೋಕದಲ್ಲಿ ಒಬ್ಬ ರಾಜನಿಂದ ಭಯಗೊಂಡ ಜನರು ಇನ್ನೊಬ್ಬ ರಾಜನನ್ನು ಆಶ್ರಯಿಸುವಂತೆ, ಒಂದು ಪಯೋಧರದಿಂದ ಭೀತರಾದ ಜನರು ಇನ್ನೊಂದು ಪಯೋ-ಧರವನ್ನು ಆಶ್ರಯಿಸಿದರು.

**ಕಾದಂಬಿನ್ಯೈ ವಿತರತಿ ಪಯೋಬಿಂದುಮಾತ್ರಂ ಪಯೋಧೌ**
**ಆಸೀತ್ ವೃದ್ಧಿಃ ಸಕಲಸರಿತಾಂ ಸ್ವಾತ್ಮನಶ್ಚೇತಿ ಯುಕ್ತಮ್ ।**

**ನಿತ್ಯಂ ವಿಷ್ಣೋಃ ಪದಮಧಿಗತಾಯಾತ್ಯುದಾರಾಯ ದಾನಾತ್**
**ಅಬ್ಬಿಂದೂನಾಮಪಿ ಶತಗುಣಾ ವೃದ್ಧಿರದ್ಧಾ ಸ್ವವರ್ಗೇ ॥ ೩೪ ॥**

**ಕಾದಂಬಿನ್ಯೈ** = ಮೋಡಕ್ಕೆ, **ವಿತರತಿ** = ಕೊಡುತ್ತಿರಲು, **ಪಯೋಬಿಂದುಮಾತ್ರಂ** = ಕೇವಲ ನೀರಿನ ಹನಿಗಳನ್ನು, **ಪಯೋಧೌ** = ಸಮುದ್ರದಲ್ಲಿ, **ಆಸೀತ್** = ಆಯಿತು, **ವೃದ್ಧಿಃ** = ಅಭಿವೃದ್ಧಿಯು, **ಸಕಲಸರಿತಾಂ** = ಎಲ್ಲಾ ನದಿಗಳ, **ಸ್ವಾತ್ಮನಶ್ಚ** = ಸಮುದ್ರಕ್ಕೂ, **ಇತಿ** = ಎಂಬುದು, **ಯುಕ್ತಂ** = ಯೋಗ್ಯವು, **ನಿತ್ಯಂ** = ಯಾವಾಗಲೂ, **ವಿಷ್ಣೋಃ** = ದೇವರ, **ಪದಂ** = ಚರಣವನ್ನು, **ಅಧಿಗತಾಯ** = ಆಶ್ರಯಿಸಿದ, **ಅತ್ಯುದಾರಾಯ** = ತುಂಬಾ ಉದಾರಿ- ಯಾದವನಿಗೆ, **ದಾನಾತ್** = ದಾನದಿಂದ, **ಅಪ್ ಬಿಂದೂನಾಮಪಿ** = ನೀರಿನ ಒಂದು ಹನಿಯ, **ಶತಗುಣಾಃ** = ನೂರು ಪಟ್ಟು, ವೃದ್ಧಿಃ = ಅಭಿವೃದ್ಧಿಯು, **ಅದ್ಧಾ** = ಚೆನ್ನಾಗಿ, **ಸ್ವವರ್ಗೇ** = ತನ್ನವರಲ್ಲಿ.

ಸಮುದ್ರವು ಮೋಡಕ್ಕೆ ನೀರನ್ನು ಕೊಟ್ಟದ್ದು ಸ್ವಲ್ಪವೇ. ಅಂದರೆ ಸಮುದ್ರದ ನೀರು ಸ್ವಲ್ಪವೇ ಆವಿಯಾಗಿ ಮೋಡವಾದದ್ದು. ಆ ಮೋಡದಿಂದ ಮಳೆ ಸುರಿದಾಗ ನದಿಗಳಲ್ಲಿ ಸಮುದ್ರದಲ್ಲಿ ನೀರಿನ ಅಭಿವೃದ್ಧಿ ಬಹಳ ಆಯಿತು. ಇದು ಯೋಗ್ಯವೇ ಆಗಿದೆ. ಮೋಡವು ವಿಷ್ಣುಪದ(ಆಕಾಶ)ವನ್ನು ಆಶ್ರಯಿಸಿದೆ. ಹಾಗೆಯೇ ತಾನು ದಾನ ತೆಗೆದುಕೊಂಡದ್ದನ್ನು ಪೂರ್ಣವಾಗಿ ಹಿಂದಿರುಗಿಸುತ್ತದೆ. ಇದರಿಂದ ಭಗವದ್ಭಕ್ತಿ ಹಾಗೂ ಔದಾರ್ಯ ವ್ಯಕ್ತವಾಗು-ತ್ತದೆ. ಇಂತಹ ವ್ಯಕ್ತಿಗಳಿಗೆ ದಾನ ಮಾಡುವವರು ಮಾತ್ರ ಶ್ರೀಮಂತರಾಗುವುದಲ್ಲ. ಆತನ ಪರಿವಾರದವರೂ ಬೆಳೆಯುತ್ತಾರೆ. ಮೋಡಗಳಿಗೆ ದಾನ ಮಾಡಿದ್ದು ಸಮುದ್ರ . ನದಿಗಳು ಸಮುದ್ರದ ಪತ್ನಿಯರು. ಅವುಗಳೂ ಜಲದಿಂದ ಬೆಳೆದವು. ಆದ್ದರಿಂದ ದಾನ ಮಾಡುವಾಗ ಪಾತ್ರಾಪಾತ್ರ ವಿಚಾರ ಮಾಡಬೇಕು. ಸತ್‌ಪಾತ್ರದಲ್ಲಿ ಸ್ವಲ್ಪ ದಾನ ಮಾಡಿದರೂ ಅದು ಬಹಳ ಪಟ್ಟು ಬೆಳೆದು ತಿರುಗಿ ನಮಗೇ ಬರುತ್ತದೆ.

**ಮೇಘಾಗಮೋಽಸಹ್ಯಮಪಿ ಪ್ರಜಹ್ರೇ**
**ಗ್ರೀಷ್ಮಸ್ಯ ಸತ್ತ್ವಂ ಸಕಲಂ ತಥಾ ತತ್ ।**
**ಸರ್ವಂಸಹಾಜೀವನಹರ್ತುರಸ್ಯ**
**ದುರ್ವಾರತೇಜೋಽಪಿ ಕಿಮೇತಿ ವೃದ್ಧಿಮ್ ॥ ೩೫ ॥**

**ಮೇಘಾಗಮಃ** = ಮಳೆಗಾಲವು, **ಅಸಹ್ಯಮಪಿ** = ಅಸಾಧ್ಯವಾಗಿದ್ದರೂ, **ಪ್ರಜಹ್ರೇ** = ತಗ್ಗಿಸಿತು, **ಗ್ರೀಷ್ಮಸ್ಯ** = ಗ್ರೀಷ್ಮದ, **ಸತ್ವಂ** = ಪ್ರಭಾವವನ್ನು, **ಸಕಲಂ** = ಎಲ್ಲವನ್ನೂ, **ತತ್ ತಥಾ** = ಅದು ಹಾಗೆಯೇ, **ಸರ್ವಂಸಹಾ** = ಭೂಮಿಯ, **ಜೀವನ** = ಜೀವನವನ್ನು

(ನೀರನ್ನು), **ಹರ್ತುಃ** = ಅಪಹರಿಸಿದ, **ಅಸ್ಯ** = ಈ ಗ್ರೀಷ್ಮದ, **ದುರ್ವಾರ** = ಅಸಹ್ಯವಾದ, **ತೇಜೋऽಪಿ** = ಶಕ್ತಿಯೂ, **ವೃದ್ಧಿಂ** = ವೃದ್ಧಿಯನ್ನು, **ಏತಿ ಕಿಂ** = ಹೊಂದುತ್ತೇನು?

ಮೋಡಗಳು ಮಳೆಯ ಮೂಲಕ ಗ್ರೀಷ್ಮ ಋತುವಿನ ಎಲ್ಲಾ ಶಕ್ತಿಯನ್ನೂ ನಾಶ ಮಾಡಿದವು. ಯದ್ಯಪಿ ಈ ಶಕ್ತಿಯನ್ನು ಎದುರಿಸುವ ಸಾಮರ್ಥ್ಯ ಯಾರಿಗೂ ಇಲ್ಲ. ಈ ಗ್ರೀಷ್ಮ ಋತುವು ಭೂಮಿಯ ಜೀವನವನ್ನೇ ಅಪಹರಿಸಿತ್ತು. ಜೀವನ ಎಂದರೆ ನೀರು. ಭೂಮಿಯು ಇದೆಲ್ಲವನ್ನೂ ಸಹಿಸಿದ್ದಳು. ಭೂಮಿಗೆ ಸರ್ವಂ ಸಹಾ ಎಂದು ಹೆಸರಿದೆ. ಈ ರೀತಿ ಭೂಮಿಯನ್ನು ಪೀಡಿಸಿದ ಗ್ರೀಷ್ಮ ಋತು ಎಷ್ಟು ಬಲಿಷ್ಠವಾಗಿದ್ದರೂ ಮೋಡಗಳ ಕೈಯ್ಯಲ್ಲಿ ಸೋತಿತು.

**ಸಾಧೂನಾಂ ವರಮಾನಸಾಕೃತಿ ಸರಃಸಂಶೋಧಯತ್ತನ್ಮುಖ-**
**ಪ್ರಖ್ಯಂ ಪದ್ಮಚಯಂ ಪ್ರಹರ್ಷಯದಲಂ ಪಂಕಂ ಚ ಸಂಖಂಡಯತ್ ।**
**ಹೃದ್ವ್ಯೋಮೇವ ಘನಾಪಿಧಾನರಹಿತಂ ಕುರ್ವನ್ನಭಃ ಸಂಹರ-**
**ತ್ತಾಮಿಸ್ರಂ ಹರಿವೀರ್ಯಕೀರ್ತಿಸದೃಶೌ ಸೂರ್ಯೋಡುಪೌ ಸ್ಪಷ್ಟಯತ್ ॥೩೬॥**

**ಸಾಧೂನಾಂ** = ಸನ್ನ್ಯಾಸಿಗಳ, **ವರ** = ಉತ್ತಮವಾದ, **ಮಾನಸ** = ಮನಸ್ಸಿನಂತೆ, **ಆಕೃತಿ** = ಸ್ವಭಾವವುಳ್ಳ, **ಸರಃ** = ಕೊಳವನ್ನು, **ಸಂಶೋಧಯತ್** = ಶುದ್ಧಮಾಡುವ, **ತತ್** = ಸಾಧುಗಳ, **ಮುಖ** = ಮುಖದಂತೆ, **ಪ್ರಖ್ಯಂ** = ಕಾಂತಿಯುಳ್ಳ, **ಪದ್ಮಚಯಂ** = ಕಮಲಗಳ ಸಮೂಹವನ್ನು, **ಪ್ರಹರ್ಷಯತ್** = ಅರಳಿಸುವ, **ಅಲಂ** = ಚೆನ್ನಾಗಿ, **ಪಂಕಂ ಚ** = ಕೆಸರನ್ನು, **ಸಂಖಂಡಯತ್** = ಪರಿಹರಿಸುವ, **ಹೃತ್** = ಹೃದಯದ, **ವ್ಯೋಮ ಇವ** = ಆಕಾಶದಂತೆ, **ಘನಾಪಿಧಾನರಹಿತಂ** = ಮೋಡಗಳ ಆವರಣದಿಂದ ರಹಿತವನ್ನಾಗಿ, **ಕುರ್ವತ್** = ಮಾಡುವ, **ನಭಃ** = ಆಕಾಶವನ್ನು, **ಸಂಹರತ್** = ಕಮ್ಮಿ-ಮಾಡುತ್ತಾ, **ತಾಮಿಸ್ರಂ** = ಕತ್ತಲೆಯನ್ನು, **ಹರಿ** = ದೇವರ, **ವೀರ್ಯ** = ಪರಾಕ್ರಮವು, **ಕೀರ್ತಿ** = ಕೀರ್ತಿಯು ಇವುಗಳಿಗೆ, **ಸದೃಶೌ** = ಸಮಾನಗಳಾದ, **ಸೂರ್ಯ ಉಡುಪೌ** = ಸೂರ್ಯಚಂದ್ರರನ್ನು, **ಸ್ಪಷ್ಟಯತ್** = ಚೆನ್ನಾಗಿ ತೋರಿಸುವ,

ಶರದೃತುವನ್ನು ಹೀಗೆ ವರ್ಣಿಸುತ್ತಾರೆ – ಶರದ್ ಋತುವಿಗೆ ಮಧ್ವಶಾಸ್ತ್ರದ ದೃಷ್ಟಾಂತವನ್ನು ಕೊಡುತ್ತಾರೆ. ಮಳೆಯಿಂದ ಕದಡಿದ ನೀರುಳ್ಳ ಕೊಳವು ಶರತ್ ಕಾಲದಲ್ಲಿ ತಿಳಿಯಾಗುತ್ತದೆ. ಸಜ್ಜನರ ಮನಸ್ಸು ಮೊದಲು ಕೆಟ್ಟ ಶಾಸ್ತ್ರಗಳ ಪ್ರಭಾವದಿಂದ ಕದಡಿತ್ತು. ಮಧ್ವಶಾಸ್ತ್ರದ ಅಧ್ಯಯನದಿಂದ ಮನಸ್ಸು ತಿಳಿಯಾಯಿತು. ಸ್ವಚ್ಛವಾದ ಗಗನದಲ್ಲಿ ಸೂರ್ಯನು ಸ್ಪಷ್ಟವಾಗಿ ಕಾಣಿಸುವುದರಿಂದ ಕಮಲಗಳು ಚೆನ್ನಾಗಿ ಅರಳುತ್ತವೆ. ಶಾಸ್ತ್ರದಿಂದ

ಸಜ್ಜನರ ಮುಖಗಳು ಅರಳುತ್ತವೆ. ಮಳೆಗಾಲದಲ್ಲಿ ಎಲ್ಲಾ ಕಡೆಯಲ್ಲಿಯೂ ಆಗಿರುವ ಕೆಸರು ಈ ಋತುವಿನಿಂದ ಹೋಯಿತು. ಶಾಸ್ತ್ರದ ಅಧ್ಯಯನವು ಪಾಪವೆಂಬ ಕೆಸರನ್ನು ಪರಿಹರಿಸುತ್ತದೆ. ಶರತ್‌ನಲ್ಲಿ ಆಕಾಶದಲ್ಲಿ ಮೋಡಗಳು ಇರುವುದಿಲ್ಲ. ಶಾಸ್ತ್ರದ ಅಧ್ಯಯನವು ಹೃದಯಾಕಾಶದಲ್ಲಿರುವ ಅಜ್ಞಾನವನ್ನು ಸರಿಸುತ್ತದೆ. ಮಳೆಗಾಲದಲ್ಲಿ ಮೋಡಗಳಿಂದಾಗಿ ಹಗಲಿನಲ್ಲಿಯೂ ಕತ್ತಲೆ ಇರುತ್ತದೆ. ಆ ಕತ್ತಲೆ ಸರಿಯಿತು. ಶಾಸ್ತ್ರವು ಪ್ರಕೃತಿಬಂಧ ಎಂಬ ಕತ್ತಲೆಯನ್ನು ಸರಿಸುತ್ತದೆ. ಈ ಕಾಲದಲ್ಲಿ ಆಕಾಶದಲ್ಲಿ ಸೂರ್ಯ ಚಂದ್ರರು ಸ್ಪಷ್ಟವಾಗಿ ಗೋಚರಿಸುತ್ತಾರೆ. ಶಾಸ್ತ್ರವು ದೇವರ ಪರಾಕ್ರಮ, ಕೀರ್ತಿಗಳನ್ನು ಚೆನ್ನಾಗಿ ತಿಳಿಸುತ್ತದೆ.

**ಸಂಸಾರಾಖ್ಯಮಭೇದ್ಯಬಂಧನಮಿವ ಪ್ರಾವೃಟ್‌ಕೃತಂ ಬಂಧನಂ**
**ಭಿಕ್ಷೂಣಾಂ ವಣಿಜಾಮಧಃಕೃತಜಲಂ ವಿಚ್ಛೇದಯನ್ಮೋದಯತ್ ।**
**ಮೋಕ್ಷಾನಂದಮಹಾಪ್ರವಾಹತುಲನೈರ್ಗೋಕ್ಷೀರಪಾನೈರ್ಜನಾನ್**
**ಸಚ್ಛಾಸ್ತ್ರಪ್ರತಿಕೃತ್ಯಲಕ್ಷ್ಯತ ಶರತ್ಸಾಮ್ರಾಜ್ಯಮುಜ್ಜೃಂಭಿತಮ್ ॥ ೩೭ ॥**

**ಸಂಸಾರಾಖ್ಯಂ** = ಸಂಸಾರವೆಂಬ, **ಅಭೇದ್ಯ** = ಪರಿಹರಿಸಲು ಅಸಾಧ್ಯವಾದ, **ಬಂಧನಮಿವ** = ಬಂಧನದಂತೆ, **ಪ್ರಾವೃಟ್‌ಕೃತಂ** = ಮಳೆಯಿಂದ ಮಾಡಲ್ಪಟ್ಟ, **ಬಂಧನಂ** = ಬಂಧನವನ್ನು, **ಭಿಕ್ಷೂಣಾಂ** = ಸನ್ನ್ಯಾಸಿಗಳ, **ವಣಿಜಾಂ** = ವ್ಯಾಪಾರಿಗಳ, **ಅಧಃಕೃತಜಲಂ** = ನೀರನ್ನು ಕಮ್ಮಿ ಮಾಡಿದ್ದಾಗಿ, **ವಿಚ್ಛೇದಯತ್** = ಪರಿಹರಿಸಿದ್ದಕ್ಕಾಗಿ, **ಮೋದಯತ್** = ಸಂತೋಷಗೊಳಿಸುತ್ತಾ, **ಮೋಕ್ಷಾನಂದ** = ಮೋಕ್ಷಾನಂದದ, **ಮಹಾಪ್ರವಾಹ** = ಬಹಳ ಪ್ರವಾಹಕ್ಕೆ, **ತುಲನೈಃ** = ಸಮಾನಗಳಾದ, **ಗೋಕ್ಷೀರಪಾನೈಃ** = ಆಕಳ ಹಾಲಿನ ಪಾನದಿಂದ, **ಜನಾನ್** = ಜನರನ್ನು, **ಸಚ್ಛಾಸ್ತ್ರ** = ಒಳ್ಳೆಯ ಶಾಸ್ತ್ರಕ್ಕೆ, **ಪ್ರತಿಕೃತಿ** = ಸದೃಶವಾಗಿ, **ಅಲಕ್ಷ್ಯತ** = ಕಂಡಿತು. **ಶರತ್ ಸಾಮ್ರಾಜ್ಯಂ** = ಶರದೃತುವಿನ ವೈಭವವು, **ಉಜ್ಜೃಂಭಿತಂ** = ಬೆಳೆದದ್ದಾಗಿ.

ಪುನಃ ಶರದೃತುವಿನ ವರ್ಣನೆ – ಈ ಕಾಲದಲ್ಲಿ ಜಲದ ಮಟ್ಟವು ಅಧಃ ಕೆಳಗೆ ಹೋಗುತ್ತದೆ. ಕಾರಣ ಮಳೆ ಕಮ್ಮಿಯಾಗುವಿಕೆ. ಚೆನ್ನಾಗಿ ಶಾಸ್ತ್ರವನ್ನು ಓದಿದವರ ಮುಂದೆ ಮೂರ್ಖರ ಯಾವ ಆಟವೂ ನಡೆಯುವುದಿಲ್ಲ. ಮೂರ್ಖರು ಪೂರ್ಣವಾಗಿ ಕೆಳಗೆ ತಳ್ಳಲ್ಪಡುತ್ತಾರೆ. ಮಳೆಗಾಲದಲ್ಲಿ ಚಾತುರ್ಮಾಸ್ಯ ಪ್ರಯುಕ್ತ ಸನ್ನ್ಯಾಸಿಗಳ, ಹಾಗೇ ದಾರಿಯಲ್ಲಿ ಬಹಳ ರಾಡಿ ಇರುವುದರಿಂದ ಗಾಡಿಗಳ ಸಂಚಾರ ಕಮ್ಮಿಯಾದ್ದರಿಂದ ವ್ಯಾಪಾರಿಗಳ ಸಂಚಾರವೂ ಕಮ್ಮಿಯಾಗಿತ್ತು. ಒಂದೇ ಕಡೆ ಬದ್ಧರಾಗಿದ್ದರು. ಈಗ ಚಾತುರ್ಮಾಸ್ಯಕಾಲ ಮುಗಿದಿದ್ದರಿಂದ ಕೆಸರು ಇಲ್ಲವಾದ್ದರಿಂದ ಬಂಧನ ಹೋಯಿತು. ಶಾಸ್ತ್ರವು ಅನಾದಿ-

ಕಾಲದಿಂದ ಇರುವ ಲಿಂಗಶರೀರ ಎಂಬ ಬಂಧವನ್ನು ಕಳೆಯುತ್ತದೆ. ಈ ಋತುವಿನಲ್ಲಿ ಬಿಸಿಲಿಗೆ ಪಿತ್ತ ಹೆಚ್ಚಾಗುತ್ತದೆ. ಅದರ ಪರಿಹಾರಕ್ಕಾಗಿ ಶುದ್ಧವಾದ ಆಕಳಿನ ಹಾಲು ಸೇವಿಸಲು ಯೋಗ್ಯ ಎಂದು ವೈದ್ಯಶಾಸ್ತ್ರದ ಅಂಬೋಣ. ಇದರಿಂದ ಬಹಳ ಆನಂದವಾಗುತ್ತದೆ. ಶಾಸ್ತ್ರವು ಮೋಕ್ಷಾನಂದವನ್ನು ಒದಗಿಸುತ್ತದೆ. ಈ ರೀತಿಯಾಗಿ ಶರದೃತುವು ಮಧ್ವಶಾಸ್ತ್ರದಂತೆ ಪ್ರವೇಶ ಮಾಡಿತು.

**ಪದ್ಮಾಸೇವ್ಯಗುಣೌಘವಿಸ್ತೃತಿಕರಃ ಸ್ಪಷ್ಟೀಭವಚ್ಛಾರದಾ**
**ನಂದಃ ಕಂಪಿತಭೋಗಿರಾಜಶಿರಸಾ ಮಾನ್ಯಾಗಮಃ ಸಂತತಮ್ ।**
**ಸನ್ಮಾರ್ಗಾಶ್ರಿತಪಂಕಶೋಷಣಕರಃ ಸತ್ಪಾಂಥಘರ್ಮಾಪಹೋ**
**ನಿತ್ಯಂ ವಿಷ್ಣುಪದಾಶ್ರಯಃ ಪರಿಲಸತ್ಪುಣ್ಯಾಂಬುಪೂತೋಽಸಕೃತ್ ॥ ೩೮ ॥**

**ಪದ್ಮ** = ಕಮಲಗಳ, **ಆಸೇವ್ಯ** = ಸೇವಿಸಲು ಯೋಗ್ಯವಾದ, **ಗುಣ** = ಗಂಧದ, **ಓಘ** = ಸಮೂಹದ, **ವಿಸ್ತೃತಿ** = ವಿಸ್ತಾರವನ್ನು, **ಕರಃ** = ಮಾಡುವ, **ಸ್ಪಷ್ಟೀಭವತ್** = ಸ್ಪಷ್ಟಪಡಿಸುವ, **ಶಾರದ** = ಶರದೃತುವಿನ, **ಆನಂದಃ** = ಆನಂದವುಳ್ಳ, **ಕಂಪಿತ** = ಅಲುಗಾಡುವ, **ಭೋಗಿರಾಜ** = ಶೇಷನ, **ಶಿರಸಾ** = ತಲೆಯಿಂದ, **ಮಾನ್ಯ** = ಪೂಜ್ಯವಾದ, **ಆಗಮಃ** = ಆಗಮನವುಳ್ಳ, **ಸಂತತಂ** = ಯಾವಾಗಲೂ, **ಸತ್** = ಒಳ್ಳೆಯ, **ಮಾರ್ಗ** = ದಾರಿಯಲ್ಲಿ, **ಆಶ್ರಿತ** = ಇರುವವರ, **ಪಂಕ** = ಕೆಸರನ್ನು, **ಶೋಷಣಕರಃ** = ಒಣಗಿಸುವ, **ಸತ್** = ಒಳ್ಳೆಯ, **ಪಾಂಥ** = ದಾರಿಹೋಕರ, **ಘರ್ಮ** = ಸೆಖೆಯನ್ನು, **ಅಪಹಃ** = ಪರಿಹರಿಸುವ, **ನಿತ್ಯಂ** = ಯಾವಾಗಲೂ, **ವಿಷ್ಣುಪದ** = ಆಕಾಶದಲ್ಲಿ, **ಆಶ್ರಯಃ** = ಇರುವ, **ಪರಿಲಸತ್** = ಶೋಭಿಸುವ, **ಪುಣ್ಯ** = ಪವಿತ್ರವಾದ, **ಅಂಬು** = ನೀರಿನಿಂದ, **ಪೂತಃ** = ಪವಿತ್ರವಾದ, **ಅಸಕೃತ್** = ಪುನಃ ಪುನಃ.

ಶರತ್‌ಕಾಲದ ಗಾಳಿಯನ್ನು ಮಧ್ವರಿಗೆ ಹೋಲಿಸಿ ವರ್ಣಿಸುತ್ತಾರೆ – ಈ ಋತುವಿನಲ್ಲಿ ಕಮಲಗಳು ಚೆನ್ನಾಗಿ ಅರಳುತ್ತವೆ. ಅವುಗಳ ಪರಿಮಳ ಬಹಳ ಉತ್ತಮವಾದದ್ದು. ಈ ಪರಿಮಳ ಎಂಬ ಗುಣವನ್ನು ಗಾಳಿಯು ಎಲ್ಲೆಡೆ ಹರಡುತ್ತದೆ. ದೇವರ ಗುಣಗಳನ್ನು ಲಕ್ಷ್ಮಿಯು ಸದಾ ಧ್ಯಾನಿಸುತ್ತಾಳೆ. ಅಂತಹ ಗುಣಗಳನ್ನು ಈ ಮಧ್ವರು ತಮ್ಮ ಶಾಸ್ತ್ರದ ಮೂಲಕ ಲೋಕಕ್ಕೆ ಪ್ರಸರಿಸಿದರು. ಜನಗಳಿಗೆ ಪರಿಚಯಿಸಿದರು. ಗಾಳಿಯಿಂದ ಶರದೃತುವಿಗೆ ಸಂಬಂಧಪಟ್ಟ ಆನಂದವನ್ನು ಜನರು ಅನುಭವಿಸಿದರು. ಮಧ್ವರು ತನ್ನ ಶಾಸ್ತ್ರದಲ್ಲಿ ಶಬ್ದಚಮತ್ಕಾರವನ್ನು ತೋರಿಸಿದ್ದಾರೆ. ಇದರಿಂದ ಶಾರದೆಗೆ ಶಬ್ದಾಭಿಮಾನಿಗೆ ಆನಂದವಾಗಿದೆ. ಆ ಕಾಲದಲ್ಲಿ ರಾಜರುಗಳು ತಮ್ಮ ಪತ್ನಿಯರಿಂದ ಕೂಡಿಕೊಂಡು ರಾಸಲೀಲೆಗಳಲ್ಲಿ ತೊಡಗುತ್ತಿದ್ದರು. ಇದರಿಂದ ಅವರಿಗೆ ಆಯಾಸವಾಗುತ್ತಿತ್ತು. ಆ ಸಮಯದಲ್ಲಿ

ಬೀಸುವ ತಂಗಾಳಿಯನ್ನು ಈ ರಾಜರು ತಮ್ಮ ಆಯಾಸ ಪರಿಹಾರಕ್ಕಾಗಿ ತಲೆಯನ್ನು ಅಲುಗಾಡಿಸುವ ಮೂಲಕ ಮಾನನ ಮಾಡಿ ಸ್ವೀಕರಿಸುತ್ತಿದ್ದರು. ಮಧ್ವರ ಶಾಸ್ತ್ರವನ್ನು ಭೋಗಿರಾಜನಾದ ಶೇಷನು ಶಿರಸಾ ಮಾನನ ಮಾಡುತ್ತಿದ್ದನು. ಗಾಳಿಯು ಸದಾ ವಿಷ್ಣು-ಪದ(ಆಕಾಶ)ದಲ್ಲಿ ಇರುತ್ತದೆ. ಮಧ್ವರು ಸದಾ ವಿಷ್ಣುವಿನ ಚರಣವನ್ನೇ ಆಶ್ರಯಿಸಿದವರು. ಯಮುನೆಯೇ ಮೊದಲಾದ ನದೀಜಲಗಳ ಸಂಪರ್ಕದಿಂದ ಗಾಳಿಯು ಪವಿತ್ರವಾಗಿದೆ. ಮಧ್ವರು ಪುಣ್ಯ ಎಂಬ ನೀರಿನಿಂದ ಸದಾ ಪವಿತ್ರರು.

**ರಾಮಾಯೋಗಿಜನಸ್ಯ ಭೀಮಚರಿತಃ ಸದ್ವಂಶಜಾತಂ ಮುಹುಃ**
**ಪ್ರೇಮಾಲಂಬನಶಬ್ದಹೃದ್ಯವದನಂ ಕುರ್ವನ್ ಸ್ವಕೀಯಾಗಮೈಃ ।**
**ಸುಕ್ಷೇಮಂ ಸುಮನಶ್ಚ ಯಸ್ಯ ವಿದಧತ್ಸುವ್ಯಾಪ್ತಮೂರ್ತಿಃ ಕ್ಷಿತೌ**
**ಸಚ್ಛಾಸ್ತ್ರೇ ಸುಖತೀರ್ಥವನ್ಮರುದಭೂನ್ಮೂರ್ಧಾಭಿಷಿಕ್ತಸ್ತದಾ ॥ ೩೯ ॥**

**ರಾಮಾ** = ಸ್ತ್ರೀಯರ, **ಅಯೋಗಿ** = ವಿರಹವುಳ್ಳ, **ಜನಸ್ಯ** = ಜನರಿಗೆ, **ಭೀಮ** = ಭಯಾನಕವಾದ, **ಚರಿತಃ** = ಸಂಚಾರವುಳ್ಳ, **ಸತ್** = ಒಳ್ಳೆಯ, **ವಂಶಜಾತಂ** = ವಂಶಗಳ ಸಮೂಹವನ್ನು, **ಮುಹುಃ** = ಪುನಃ ಪುನಃ, **ಪ್ರೇಮ** = ಪ್ರೀತಿಗೆ, **ಆಲಂಬನ** = ವಿಷಯವಾದ, **ಶಬ್ದ** = ಧ್ವನಿಯಿಂದ, **ಹೃದ್ಯ** = ಚಂದದ, **ವದನಂ** = ರಂಧ್ರವುಳ್ಳ-ದ್ದನ್ನಾಗಿ, **ಕುರ್ವನ್** = ಮಾಡುವ, **ಸ್ವಕೀಯ** = ತನ್ನ, **ಆಗಮೈಃ** = ಆಗಮನದಿಂದ, **ಸುಕ್ಷೇಮಂ** = ಕ್ಷೇಮವನ್ನು, **ಸುಮನಃ ಚ** = ಪುಷ್ಪಗಳ, **ಯಸ್ಯ** = ಯಾವ, **ವಿದಧತ್** = ಮಾಡುವ, **ಸು** = ಚೆನ್ನಾಗಿ, **ವ್ಯಾಪ್ತ** = ಹರಡಿದ, **ಮೂರ್ತಿಃ** = ಸ್ವರೂಪವುಳ್ಳ, **ಕ್ಷಿತೌ** = ಭೂಮಿಯಲ್ಲಿ, **ಸಚ್ಛಾಸ್ತ್ರೇ** = ಒಳ್ಳೆಯ ಶಾಸ್ತ್ರದಲ್ಲಿ, **ಸುಖತೀರ್ಥವತ್** = ಆನಂದ-ತೀರ್ಥರಂತೆ, **ಮರುತ್** = ಗಾಳಿಯು, **ಅಭೂತ್** = ಆಯಿತು, **ಮೂರ್ಧ** = ತಲೆ-ಯಲ್ಲಿ, **ಅಭಿಷಿಕ್ತಃ** = ಅಭಿಷೇಕಿಸಲ್ಪಟ್ಟ, **ತದಾ** = ಆಗ.

ಮಂದವಾದ ಗಾಳಿಯು ಕಾಮೋತ್ತೇಜಕ. ಪತ್ನಿಯಿಂದ ವಿಯುಕ್ತರಾದ ಜನರಿಗೆ ಈ ಗಾಳಿಯನ್ನು ತಡೆದುಕೊಳ್ಳಲು ಆಗುವುದಿಲ್ಲ. ರಾಮಚಂದ್ರನ ವಿಶೇಷಭಕ್ತರಿಗೆ ಮಧ್ವರು ತನ್ನ ಬಹು ತಿನ್ನುವಿಕೆ, ಬಹಳ ಭಾರ ಎತ್ತುವಿಕೆ ಇವುಗಳಿಂದ ತಾನು ಭೀಮನು ಎಂದು ತೋರಿಸಿದವರು.

ಗಾಳಿ ಬೀಸುವುದರಿಂದ ಈ ಗಾಳಿಯು ಉತ್ತಮಜಾತಿಯ ಬಿದಿರಿನ ರಂಧ್ರಗಳಲ್ಲಿ ಪ್ರವೇಶ ಮಾಡುತ್ತದೆ. ಆಗ ಕೊಳಲಿನಂತಹ ಕೇಳಲು ಇಂಪಾದ ಧ್ವನಿಯು ಹೊರಡುತ್ತದೆ. ಬಿದಿರುಗಳಿಗೆ ವಂಶವೃಕ್ಷಗಳೆಂದು ಹೆಸರು. ಒಳ್ಳೆಯ ಬಿದುರುಗಳನ್ನು ಸದ್ವಂಶಗಳೆಂದು

ಕರೆಯುತ್ತಾರೆ. ಮಧ್ವರ ಶಾಸ್ತ್ರವನ್ನು ಓದುವ ಸಾತ್ವಿಕರು ಮಧ್ವಶಾಸ್ತ್ರದ ಮನೋಹರವಾದ ಶಬ್ದಗಳು ತಮ್ಮ ಬಾಯಿಯಲ್ಲಿ ಬರುವಂತೆ ಮಾಡುತ್ತಾರೆ. ಜೋರಾಗಿ ಗಾಳಿ ಬೀಸಿದರೆ ಪುಷ್ಪಗಳಿಗೆ ಹಾನಿಯಾಗುತ್ತದೆ. ನಿಧಾನವಾಗಿ ಬೀಸುವ ಗಾಳಿಯಿಂದ ಹೂಗಳಿಗೆ ಹಿತ-ವಾಗುತ್ತದೆ. ಮಧ್ವರು ಸುಮನಸಗಳಿಗೆ ಅಂದರೆ ದೇವತೆಗಳಿಗೆ ಮೋಕ್ಷವನ್ನು ಒದಗಿಸುತ್ತಾರೆ. ಗಾಳಿ ಹಾಗೂ ಮಧ್ವರು ಸರ್ವತ್ರ ವ್ಯಾಪಿಸಿದ್ದಾರೆ. ಈ ರೀತಿ ಶಾಸ್ತ್ರದಲ್ಲಿ ಮಧ್ವರಂತೆ ಋತುವಿನಲ್ಲಿ ಗಾಳಿ ಇದೆ. ಇಲ್ಲಿ ಸ್ವಾರಸ್ಯ ಏನೆಂದರೆ ಮಧ್ವರು ಸ್ವಯಂ ಗಾಳಿಯೇ; ಯಾಕೆಂದರೆ ಗಾಳಿಯ ಅಂದರೆ ವಾಯುದೇವರ ಅವತಾರ.

**ವಿಯುಕ್ತನಾರೀಮುಖಪದ್ಮಪುಂಜೈಃ**
**ಸಹಾಂಬುಜಾತಂ ಶಿಥಿಲಂ ವಿತನ್ವನ್ ।**
**ಪ್ರಬೋಧಕಲ್ಪಂ ರವಿಮಲ್ಪಕಾಂತಿಂ**
**ವಿಧಾಯ ಹೇಮಂತ ಉಪಾಜಗಾಮ ॥ ೪೦ ॥**

**ವಿಯುಕ್ತ** = ಪತಿಯಿಂದ ಅಗಲಿದ, **ನಾರೀ** = ಸ್ತ್ರೀಯರ, **ಮುಖ** = ಮುಖವೆಂಬ, **ಪದ್ಮ** = ಕಮಲಗಳ, **ಪುಂಜೈಃ** = ಸಮೂಹದಿಂದ, **ಸಹ** = ಕೂಡಿ, **ಅಂಬುಜಾತಂ** = ಕಮಲಗಳ ಗುಂಪನ್ನು , **ಶಿಥಿಲಂ** = ಬಾಡಿದ್ದನ್ನು , **ವಿತನ್ವನ್** = ಮಾಡುತ್ತಾ , **ಪ್ರಬೋಧ-ಕಲ್ಪಂ** = ಜ್ಞಾನದಂತೆ ಇರುವ, **ರವಿಂ** = ಸೂರ್ಯನನ್ನು , **ಅಲ್ಪಕಾಂತಿಂ** = ಕಾಂತಿಯು-ಳ್ಳವನನ್ನಾಗಿ, **ವಿಧಾಯ** = ಮಾಡಿ, **ಹೇಮಂತಃ** = ಹೇಮಂತ ಋತುವು, **ಉಪಾಜಗಾಮ** = ಬಂದಿತು.

ಹೇಮಂತ ಋತುವಿನ ವರ್ಣನೆ – ಚಳಿಗಾಲದಲ್ಲಿ ಪತಿಗಳು ಸಮೀಪ ಇರದಿದ್ದರೆ ಪತ್ನಿಯರ ಮುಖಕಮಲವು ಬಾಡುತ್ತದೆ. ಕಮಲಗಳೂ ಚಳಿಯನ್ನು ತಡೆಯಲು ಸಾಧ್ಯ-ವಾಗದೇ ಶಿಥಿಲಕ್ಕೊಳಗಾಗುತ್ತವೆ. ವಸ್ತುಗಳನ್ನು ಚೆನ್ನಾಗಿ ತೋರಿಸಿಕೊಡುವ ಆದ್ದರಿಂದಲೇ ಜ್ಞಾನಿಯಂತೆ ಇರುವ ಸೂರ್ಯನು ತನ್ನ ಪ್ರಖರತೆಯನ್ನು ಕಳೆದುಕೊಂಡನು. ಈ ರೀತಿಯಾಗಿ ಕಮಲಗಳನ್ನೂ, ಸೂರ್ಯನನ್ನೂ ದುರ್ಬಲಗೊಳಿಸುವ ಹೇಮಂತ ಋತು ಅಂದರೆ ಚಳಿಗಾಲವು ಆರಂಭವಾಯಿತು.

ಹಿಮಾರ್ದಿತಾಂಗಃ ಸಕೃದುಷ್ಣರಶ್ಮಿಃ
ಅಪಿ ಸ್ಮ ವಹ್ನಿಂ ಸ್ವಕರೈರ್ದಧಾನಃ ।
ವಿಶತ್ಯಜಸ್ರಂ ಜಲಧಿಂ ತತಸ್ತಾಂ
ಕಥಂ ಹಿಮಾನೀಮಬಲಾಃ ಸಹಂತೇ ॥೪೧॥

**ಹಿಮ** = ಚಳಿಯಿಂದ, **ಅರ್ದಿತ** = ಪೀಡಿತವಾದ, **ಅಂಗಃ** = ಶರೀರವುಳ್ಳ, **ಸಕೃತ್** = ಒಮ್ಮೆ, **ಉಷ್ಣರಶ್ಮಿರಪಿ** = ಸೂರ್ಯನೂ, **ವಹ್ನಿಂ** = ಬೆಂಕಿಯನ್ನು, **ಸ್ವಕರೈಃ** = ತನ್ನ ಕೈಗಳಿಂದ, **ದಧಾನಃ** = ಹೊತ್ತವನಾಗಿ, **ವಿಶತಿ ಸ್ಮ** = ಪ್ರವೇಶಿಸುತ್ತಾನೆ. **ಅಜಸ್ರಂ** = ಯಾವಾಗಲೂ, ಜಲಧಿಂ = ಸಮುದ್ರವನ್ನು, **ತತಃ** = ಆದ್ದರಿಂದ, **ತಾಂ** = ಆ, **ಕಥಂ** = ಹೇಗೆ, **ಹಿಮಾನೀಂ** = ಚಳಿ- ಯನ್ನು, **ಅಬಲಾಃ** = ಸ್ತ್ರೀಯರು, **ಸಹಂತೇ** = ಸಹಿಸುತ್ತಾರೆ.

ಚಳಿಗಾಲದಲ್ಲಿ ಜನರು ಬೆಂಕಿಯ ಮುಂದೆ ತಮ್ಮ ಕೈಗಳನ್ನು ಹಿಡಿದುಕೊಂಡು ಶರೀರವನ್ನು ಬೆಚ್ಚಗೆ ಮಾಡಿಕೊಳ್ಳುವುದು ಸ್ವಭಾವ. ಸೂರ್ಯನೂ ಕೂಡಾ ಚಳಿಯಿಂದ ಪೀಡಿತನಾಗಿ ತನ್ನ ಕೈಗಳನ್ನು ಅಂದರೆ ಕಿರಣಗಳನ್ನು ಬೆಂಕಿಯಲ್ಲಿ ಇಟ್ಟು ಸಮುದ್ರವನ್ನು ಪ್ರವೇಶಿಸಿದನು. ರಾತ್ರಿಯಲ್ಲಿ ಸೂರ್ಯನು ತನ್ನ ಕಿರಣಗಳನ್ನು ಬೆಂಕಿಯಲ್ಲಿ ಇಡುವನು ಎಂದು ಶಾಸ್ತ್ರದ ಮಾತು. ಬಹಳ ಉಷ್ಣನಾದ ಸೂರ್ಯನಿಗೂ ಚಳಿಯನ್ನು ತಡೆಯಲು ಸಾಧ್ಯವಾಗದಿರುವಾಗ ಸ್ವಯಂ ಅಬಲಾ ಎಂದು ಹೆಸರುಳ್ಳ ಸ್ತ್ರೀಯರು ಹೇಗೆ ಸಹಿಸಿ- ಯಾರು? ಈ ಸಂದರ್ಭದಲ್ಲಿ ಸ್ತ್ರೀಯರು ಪತಿಯ ಪ್ರಾರ್ಥನೆಯನ್ನು ಹೊರತಾಗಿಯೂ ತಾವಾಗಿಯೇ ಪತಿಯ ಬಳಿ ತೆರಳುತ್ತಾರೆ.

**ಪತಿಂ ವಶೀಕರ್ತುಮಯಂ ಹಿ ಕಾಲ**
**ಇತೀವ ಕೃಷ್ಣಂ ಪತಿಮಾಪ್ತುಕಾಮಾಃ।**
**ವ್ರತಂ ವಿತೇನುಃ ಕಿಲ ಗೋಪಕನ್ಯಾಃ**
**ವಿತರ್ಕ್ಯ ತಸ್ಯಾಸಮಧಾಮ ಧನ್ಯಾಃ ॥೪೨॥**

**ಪತಿಂ** = ಪತಿಯನ್ನು, **ವಶೀಕರ್ತುಂ** = ವಶೀಕರಿಸಲು, **ಅಯಂ ಹಿ** = ಇದು, **ಕಾಲಃ** = ಸಮಯವು, **ಇತೀವ** = ಎಂಬಂತೆ, **ಕೃಷ್ಣಂ** = ದೇವರನ್ನು, **ಪತಿಂ** = ಪತಿಯನ್ನಾಗಿ, **ಆಪ್ತುಕಾಮಾಃ** = ಹೊಂದುವ ಇಚ್ಛೆಯುಳ್ಳ, **ವ್ರತಂ** = ವ್ರತವನ್ನು, **ವಿತೇನುಃ** = ಮಾಡಿದರು. **ಕಿಲ** = ಪ್ರಸಿದ್ಧ, **ಗೋಪಕನ್ಯಾಃ** = ಗೋಪಸ್ತ್ರೀಯರು, **ವಿತರ್ಕ್ಯ** = ಆಲೋಚಿಸಿ, **ತಸ್ಯ** = ಕೃಷ್ಣನ, **ಅಸಮ** = ಅಸದೃಶವಾದ, **ಧಾಮ** = ಕಾಂತಿಯನ್ನು, **ಧನ್ಯಾಃ** = ಧನ್ಯರಾದ.

ಈಗ ಚಳಿಗಾಲ. ಆದ್ದರಿಂದ ಹುಡುಗರನ್ನು ವಶೀಕರಿಸಲು ಹೆಚ್ಚು ಪ್ರಯತ್ನ ಪಡ- ಬೇಕಾಗಿಲ್ಲ. ಹೆಣ್ಮಕ್ಕಳ ಬಿಸಿ ಅಪ್ಪುಗೆಯಿಂದ ಚಳಿ ದೂರ ಹೋಗುತ್ತದೆ. ಆದ್ದರಿಂದ ಪುರುಷರು ಬೇಗನೇ ಒಲಿಯುತ್ತಾರೆ ಎಂಬ ಭಾವನೆಯಿಂದ ಈ ಗೋಪಿಯರು ಕೃಷ್ಣನನ್ನು ಪಡೆಯಲು ದುರ್ಗಾಪೂಜೆಯಲ್ಲಿ ತೊಡಗಿದರು. ಪೂಜೆಗೆ ಬೇಕಾದ ಸಾಧನಗಳನ್ನು ಸಿದ್ಧ-

ಮಾಡಿಕೊಂಡಿದ್ದಾರೆ. ಕೃಷ್ಣನು ಲೋಕದ ಹುಡುಗರಂತೆ ಅಲ್ಲ. ಪ್ರಯತ್ನಪೂರ್ವಕವಾಗಿಯೇ ಅವನನ್ನು ಪಡೆಯಲು ಸಾಧ್ಯ ಎಂದು ತಿಳಿಸಲು ಅಸಮಧಾಮ ಅಂದರೆ ಎಲ್ಲಾ ತೇಜಸ್ಸಿಗಿಂತ ವಿಲಕ್ಷಣವಾದ ತೇಜಸ್ಸುಳ್ಳವನು ಎಂದು ಹೇಳಿದ್ದು. ಈತನಿಗೆ ಯಾವ ಚಳಿಯೂ ಏನೂ ಮಾಡುವುದಿಲ್ಲ. ಆದ್ದರಿಂದ ಚಳಿಯನ್ನು ಪರಿಹರಿಸಿಕೊಳ್ಳಲು ಯಾವ ಹುಡುಗಿಯರ ಬಿಸಿ ಅಪ್ಪುಗೆಯೂ ಈತನಿಗೆ ಬೇಡ. ಆದ್ದರಿಂದ ತಾನಾಗಿಯೇ ಯಾರಿಗೂ ಸುಲಭದಲ್ಲಿ ಒಲಿಯುವುದಿಲ್ಲ ಎಂದು ಅಭಿಪ್ರಾಯವು.

ಪುಮಾಂಸಮಭ್ಯರ್ಥಯಿತುಂ ಸಲಜ್ಜಾಃ
ಸಮಾಂತರಂಗಾ ವರವರ್ಣಿನೀಶ್ಚ।
ಸಹೋದರೀಂ ಶ್ರೀರಮಣಸ್ಯ ದುರ್ಗಾ-
ಮಪೂಜಯಂಸ್ತಾಃ ಕೃತವಿಶ್ವಸರ್ಗಾಮ್ ॥ ೪೩ ॥

**ಪುಮಾಂಸಂ** = ಪುರುಷದೇವತೆಯನ್ನು, **ಅಭ್ಯರ್ಚಯಿತುಂ** = ಪೂಜಿಸಲು, **ಸಲಜ್ಜಾಃ** = ನಾಚಿಕೆಯಿಂದ ಕೂಡಿದ, **ಸಮ** = ಸಮಾನವಾದ, **ಅಂತರಂಗಾಃ** = ಮನಸ್ಸುಳ್ಳ, **ವರವರ್ಣಿನೀಃ ಚ** = ಶ್ರೇಷ್ಠಸ್ತ್ರೀಯರನ್ನೂ ಕೂಡ, **ಸಹೋದರೀಂ** = ತಂಗಿಯಾದ, **ಶ್ರೀರಮಣಸ್ಯ** = ಕೃಷ್ಣನ, **ದುರ್ಗಾಂ** = ದುರ್ಗೆಯನ್ನೂ, **ಅಪೂಜಯನ್** = ಪೂಜಿಸಿದರು, **ತಾಃ** = ಗೋಪಿಯರು, **ಕೃತವಿಶ್ವಸರ್ಗಾಂ** = ಜಗತ್ತನ್ನು ಸೃಷ್ಟಿಸುವ.

ಈ ಗೋಪಿಯರು ಕೃಷ್ಣಪತಿತ್ವ ಕಾಮನೆಯಿಂದ ಮಾಡಿದ ದುರ್ಗಾಪೂಜೆಯನ್ನು ಸಕಾರಣವಾಗಿ ರಾಜರು ವಿವರಿಸುತ್ತಾರೆ – ಇಂದ್ರಾದಿ ಪುರುಷದೇವತೆಗಳನ್ನು ಅರ್ಚಿಸಲು ಈ ಹುಡುಗಿಯರು ನಾಚಿದರು. ಮದುವೆಯ ಬಗ್ಗೆ ಗಂಡಸರಲ್ಲಿ ಮಾತನಾಡಲು ಹುಡುಗಿಯರು ನಾಚುವುದು ಲೋಕರೂಢಿ. ಸ್ತ್ರೀದೇವತೆಗಳನ್ನು ಪೂಜಿಸಲು ಸಾಧ್ಯವಿಲ್ಲ. ಯಾಕೆಂದರೆ, ಅವರೂ ಕೂಡಾ ಕೃಷ್ಣನೇ ಪತಿಯಾಗಬೇಕೆಂದು ಆಶಿಸುವುದರಿಂದ ಇವರು ಮಾಡುವ ಪೂಜೆಗೆ ಅಡ್ಡಿ ಮಾಡಿ ಕೃಷ್ಣ ಇವರಿಗೆ ಸಿಗದಂತೆ ಮಾಡುತ್ತಾರೆ. ಕೃಷ್ಣನನ್ನು ತಮಗೆ ಇಟ್ಟುಕೊಳ್ಳುತ್ತಾರೆ ಎಂದು.

ಆದ್ದರಿಂದ ಉಳಿದಿರುವ ದುರ್ಗೆಯನ್ನು ಪೂಜಿಸಿದರು. ಈಕೆಯೂ ಕೃಷ್ಣನ ಪತ್ನಿ. ಈಕೆ ಹೇಗೆ ಒಪ್ಪುತ್ತಾಳೆ? ಮೂಲರೂಪದಲ್ಲಿ ಈಕೆ ಪತ್ನಿಯಾದರೂ ಅವತಾರದಲ್ಲಿ ತಂಗಿಯಾಗಿದ್ದಾಳೆ. ತಂಗಿಯು ಅಣ್ಣನನ್ನು ಮದುವೆ ಆಗುವುದಿಲ್ಲ ಎಂಬುದು ಪ್ರಸಿದ್ಧ. ಲೋಕದಲ್ಲಿ ಹುಡುಗಿಯರು ತಾವು ಇಚ್ಛಿಸಿದ ಹುಡುಗನನ್ನು ಒಲಿಸಿಕೊಳ್ಳಲು ಆತನ ಸಹೋದರಿಯನ್ನು ಓಲೈಸುವುದು ಪ್ರಸಿದ್ಧ.

ಅಥವಾ ಈ ದುರ್ಗೆಯು ಇಡೀ ಜಗತ್ತಿನ ತಾಯಿ. ತಾಯಿಯಲ್ಲಿ ಯಾವುದೇ ವಿಷಯವನ್ನು ಹುಡುಗಿಯರು ಮುಚ್ಚುಮರೆಯಿಲ್ಲದೆ ಹೇಳುತ್ತಾರೆ. ಅದಕ್ಕಾಗಿ ರಾಜರು ಈ ಶ್ಲೋಕದಲ್ಲಿ ಶ್ರೀರಮಣಸ್ಯ ಸಹೋದರೀಂ ಹಾಗೆಯೇ ಕೃತವಿಶ್ವಸರ್ಗಾಂ ಎಂದಿದ್ದಾರೆ.

ಕೃಷ್ಣಂ ಪತಿಂ ತಾಃ ಕಿಲ ಕಾಮಯಂತ್ಯೋ
ಲಕ್ಷ್ಮೀಂ ಪ್ರಸನ್ನಾಂ ವಿದಧುರ್ವ್ರತೇನ ।
ಸ್ವಪ್ರೇಯಸೀವೈರಿವಧೂಃ ಕಥಂ ತಾಃ
ತುಷ್ಟಾಃ ಪ್ರಭುಃ ಸೋಽಪರಥಾ ವಿದಧ್ಯಾತ್ ॥೪೪॥

**ಕೃಷ್ಣಂ** = ದೇವರನ್ನು, **ಪತಿಂ** = ಪತಿಯನ್ನಾಗಿ, **ತಾಃ** = ಅವರು, **ಕಾಮಯಂತ್ಯಃ ಕಿಲ** = ಇಚ್ಛಿಸಿದವರಾಗಿ, **ಲಕ್ಷ್ಮೀಂ** = ಲಕ್ಷ್ಮಿಯನ್ನು, **ಪ್ರಸನ್ನಾಂ** = ಪ್ರಸನ್ನಳನ್ನಾಗಿ, **ವಿದಧುಃ** = ಮಾಡಿದರು, **ವ್ರತೇನ** = ವ್ರತದಿಂದ, **ಸ್ವ** = ತನ್ನ, **ಪ್ರೇಯಸೀ** = **ಪತ್ನಿಯ**, **ವೈರಿ** = ಶತ್ರುಗಳಾದ, **ವಧೂಃ** = ಸ್ತ್ರೀಯರನ್ನು, **ಕಥಂ** = ಹೇಗೆ, **ತಾಃ** = ಅವರನ್ನು, **ತುಷ್ಟಾಃ** = ಸಂತುಷ್ಟರನ್ನಾಗಿ, **ಪ್ರಭುಃ** = ದೇವನು, **ಸಃ** = ಆ, **ಅಪರಥಾ** = ಇಲ್ಲದಿದ್ದರೆ, **ವಿದಧ್ಯಾತ್** = ಮಾಡಿಯಾನು.

ಈ ಹೆಣ್ಮಕ್ಕಳು ಕೃಷ್ಣನನ್ನು ಪತಿಯನ್ನಾಗಿ ಪಡೆಯಲು ಲಕ್ಷ್ಮೀಪೂಜೆಯನ್ನು ಮಾಡಲು ಆರಂಭಿಸಿದರು. ಈಕೆಯು ದೇವರ ಮೊದಲ ಪತ್ನಿಯು. ಈಕೆಯು ಈ ಬಾಲಕಿಯರಿಗೆ ಅನುಗ್ರಹ ಮಾಡಿದರೆ ಕೃಷ್ಣನು ಈ ಸ್ತ್ರೀಯರನ್ನು ಮದುವೆಯಾಗಲು ಮೊದಲಪತ್ನಿಯ ಅನುಮತಿ ಸಿಕ್ಕಿದಂತೆ. ಇಲ್ಲದಿದ್ದರೆ ಸವತಿಮಾತ್ಸರ್ಯದಿಂದ ಇವರನ್ನು ಸ್ವೀಕರಿಸಲು ಕೃಷ್ಣನಿಂದ ಅಸಾಧ್ಯವಾಗುತ್ತಿತ್ತು. ಅದಕ್ಕಾಗಿ ಇವರು ಲಕ್ಷ್ಮೀಪೂಜೆಯನ್ನು ಮಾಡಿದರು.

ನೇಮುಸ್ತಾಂ ಪ್ರಣಯಾಪರಾಧಸಮಯೇ ನಮ್ರೋಽಸ್ತು ಕೃಷ್ಣಸ್ತ್ವಿತಿ
ಪ್ರೇಮ್ಣಾ ಪುಷ್ಪಮವೇದಯನ್ಸ್ವಕಬರೀಂ ತೈಃ ಸಂದಧಾತ್ವಿತ್ಯಲಮ್ ।
ಧೂಪಂ ಮಜ್ಜನಮಾರಚಯ್ಯ ಸಹ ತದ್ಧೂಮೇನ ತಾಂ ಶೋಷಯತ್
ಆಲಿಂಗ್ಯಾತನುತಾದಿತೀವ ತಿಲಕಂ ಗಂಧಂ ಚ ತಸ್ಯೈ ದದುಃ ॥೪೫॥

**ನೇಮುಃ** = ನಮಸ್ಕರಿಸಿದರು, **ತಾಂ** = ದುರ್ಗೆಯನ್ನು, **ಪ್ರಣಯ** = ಪ್ರೀತಿಸುವ ಸಂದರ್ಭದ, **ಅಪರಾಧ** = ಅಪರಾಧದ, **ಶಮನೇ** = ಪರಿಹರಿಸುವಿಕೆಯಲ್ಲಿ, **ನಮ್ರಃ** = ವಿನೀತನು, **ಅಸ್ತು** = ಆಗಲಿ, **ಕೃಷ್ಣಸ್ತು** = ಕೃಷ್ಣನಾದರೋ, **ಇತಿ** = ಎಂದು, **ಪ್ರೇಮ್ಣಾ** = ಪ್ರೀತಿಯಿಂದ, **ಪುಷ್ಪಂ** = ಪುಷ್ಪವನ್ನು, **ಅವೇದಯನ್** = ಅರ್ಪಿಸಿದರು. **ಸ್ವಕಬರೀಂ** = ತಮ್ಮ ತಲೆಯನ್ನು, **ತೈಃ** = ಹೂಗಳಿಂದ, **ಸಂದಧಾತು** = ಮುಡಿಸಲಿ, **ಇತಿ** = ಎಂದು,

**ಅಲಂ** = ಚೆನ್ನಾಗಿ, **ಧೂಪಂ** = ಧೂಪವನ್ನು, **ಮಜ್ಜನಂ** = ಸ್ನಾನವನ್ನು, **ಆರಚಯ್ಯ** = ಮಾಡಿ, **ಸಹ** = ಕೂಡಿ, **ತದ್ಧೂಪೇನ** = ಆ ಧೂಪದಿಂದ, **ತಾಂ** = ಕೂದಲನ್ನು, **ಶೋಷಯತ್** = ಒಣಗಿಸಲಿ, **ಆಲಿಂಗ್ಯ** = ಆಲಿಂಗಿಸಿ, **ಆತನುತಾತ್** = ಮಾಡಲಿ, **ಇತೀವ** = ಎಂಬಂತೆ, **ತಿಲಕಂ** = ತಿಲಕವನ್ನೂ, **ಗಂಧಂ ಚ** = ಗಂಧವನ್ನೂ, **ತಸ್ಯೈ** = ದುರ್ಗೆಗೆ, **ದದುಃ** = ಕೊಟ್ಟರು.

ಈ ಗೋಪಿಯರು ವ್ರತಕಾಲದಲ್ಲಿ ಪ್ರತಿದಿನ ಲಕ್ಷ್ಮಿಯನ್ನು ನಮಿಸಿದರು. ಏಕೆಂದರೆ – ಕೃಷ್ಣನ ಜೊತೆ ವಿಹಾರ ಮಾಡುವಾಗ ಆಕಸ್ಮಾತ್ ಅಪರಾಧ ಏನಾದರೂ ಆದರೆ ಕೃಷ್ಣನು ಸಿಟ್ಟಾಗಬಾರದು ಎಂದು. ಎಂತಹ ಸಿಟ್ಟಿದ್ದರೂ ನಮಸ್ಕಾರದಿಂದ ತಿಳಿಯಾಗುತ್ತದೆ. ದೇವರಂತೂ ನಮಸ್ಕಾರಕ್ಕೆ ಬೇಗ ಒಲಿಯುತ್ತಾನೆ. ಕೃಷ್ಣನು ತನ್ನ ಕೈಯಿಂದ ಈ ಗೋಪಿಕೆಯರಿಗೆ ಪುಷ್ಪ ಮುಡಿಸಬೇಕೆಂದು ಗೋಪಿಯರು ಲಕ್ಷ್ಮೀಪ್ರತಿಮೆಗೆ ಪುಷ್ಪವನ್ನು ಮುಡಿಸಿದರು. ದೇವಿಗೆ ಪುಷ್ಪವನ್ನು ಮುಡಿಸುವಾಗ ಬಹಳ ಶ್ರದ್ಧೆಯಿಂದ ಕೂಡಿದ್ದರು. ಕೃಷ್ಣನ ಜೊತೆಗೆ ಸ್ನಾನ ಮಾಡಿದ ಅನಂತರ ಈ ಗೋಪಿಯರ ತಲೆಕೂದಲನ್ನು ಧೂಪದ ಹೊಗೆಯಿಂದ ಕೃಷ್ಣನು ಒಣಗಿಸಲಿ ಎಂದು ದೇವಿಗೆ ಧೂಪವನ್ನು ಅರ್ಪಿಸಿದರು. ಕೃಷ್ಣನು ಇವರನ್ನು ಆಲಿಂಗಿಸಿ ತಮ್ಮ ಮೈಯ್ಯಲ್ಲಿದ್ದ ಗಂಧವನ್ನು ಹಾಗೂ ಹಣೆಯ ತಿಲಕವನ್ನು ಇವರ ದೇಹಕ್ಕೆ ಹಾಗೂ ಹಣೆಗೆ ಲೇಪಿಸಬೇಕೆಂದು ದೇವಿಯ ಪ್ರತಿಮೆಯನ್ನು ಆಲಿಂಗಿಸಿದರು. ಹಾಗೆಯೇ ದೇವಿಗೆ ಗಂಧವನ್ನೂ ತಿಲಕವನ್ನೂ ಅರ್ಪಿಸಿದರು.

**ತಾಂಬೂಲಂ ಚ ಮುಕುಂದಚರ್ವಿತಲಸತ್ತಾಂಬೂಲಸಿದ್ಧ್ಯೈ ಪಯಃ**
**ತದ್ಬಿಂಬೋಷ್ಠಸುಧಾಪ್ತಯೇ ಮೃದುತನೌ ಭೂಷಾವಲೀಂ ಸಂದಧುಃ।**
**ರತ್ಯಂತೇ ಸಮಲಂಕರೋತು ಗಲಿತಾಕಲ್ಪೌಘಮಸ್ಮತ್ತನು-**
**ಷ್ವಿತ್ಯಾದೀಪ್ಸಿತಲಬ್ಧಯೇಽತಿಕುಶಲಾಸ್ತಾಮರ್ಚಯಾಂಚಕ್ರಿರೇ ॥ ೪೬ ॥**

**ತಾಂಬೂಲಂ ಚ** = ಎಲೆ ಅಡಿಕೆಯನ್ನು, **ಮುಕುಂದ** = ದೇವರಿಂದ, **ಚರ್ವಿತ** = ತಿನ್ನಲ್ಪಟ್ಟ, **ಲಸತ್** = ಒಳ್ಳೆಯ, **ತಾಂಬೂಲ** = ತಾಂಬೂಲದ, **ಸಿದ್ಧ್ಯೈ** = ಪ್ರಾಪ್ತಿಗೋಸ್ಕರ, **ಪಯಃ** = ಹಾಲನ್ನು, **ತತ್** = ದೇವರ, **ಬಿಂಬೋಷ್ಠ** = ತುಟಿಯ, **ಸುಧಾ** = ರಸದ, **ಆಪ್ತಯೇ** = ಪ್ರಾಪ್ತಿಗೋಸ್ಕರ, **ಮೃದುತನೌ** = ಮೆತ್ತಗಿನ ಶರೀರದಲ್ಲಿ, **ಭೂಷಾವಲೀಂ** = ಆಭರಣಗಳ ಸಮೂಹವನ್ನು, **ಸಂದಧುಃ** = ಅರ್ಪಿಸಿದರು, **ರತ್ಯಂತೇ** = ರತಿಕ್ರೀಡೆಯ ಕೊನೆಯಲ್ಲಿ, **ಸಮಲಂಕರೋತು** = ಅಲಂಕರಿಸಲಿ, **ಗಲಿತಾಕಲ್ಪೌಘಂ** = ಬಿದ್ದ ಆಭರಣಗಳ ಸಮೂಹವನ್ನು, **ಅಸ್ಮತ್ ತನುಷು** = ನಮ್ಮ ಶರೀರಗಳಲ್ಲಿ, **ಇತ್ಯಾದಿ** = ಇವೇ ಮೊದಲಾದ, **ಈಪ್ಸಿತಲಬ್ಧಯೇ** = ಇಷ್ಟದ ಲಾಭಕ್ಕೋಸ್ಕರ,

**ಅತಿಕುಶಲಾಃ** = ಬಹಳಚತುರರಾದ, **ತಾಂ** = ಅವಳನ್ನು, **ಅರ್ಚಯಾಂ ಚಕ್ರಿರೇ** = ಪೂಜಿಸಿದರು.

ದೇವರು ತಿಂದ ತಾಂಬೂಲ ತಮಗೆ ಸಿಗಬೇಕೆಂದು ದೇವಿಗೆ ತಾಂಬೂಲವನ್ನು ಅರ್ಪಿಸಿದರು. ಕೃಷ್ಣನ ತುಟಿಯ ರಸವೆಂಬ ಹಾಲು ತಮಗೆ ಸಿಗಬೇಕೆಂದು ಹಾಲನ್ನು ಅರ್ಪಿಸಿದರು. ಕೃಷ್ಣನ ಜೊತೆ ವಿಹರಿಸುವಾಗ ಮೈಮೇಲಿನ ಆಭರಣಗಳು ಚೆಲ್ಲಾಪಿಲ್ಲಿ-ಯಾಗುವುದು ಸಹಜ. ಇಂತಹ ಆಭರಣಗಳನ್ನು ಕೃಷ್ಣನು ಈ ಬಾಲಿಕೆಯರ ದೇಹಗಳಲ್ಲಿ ಚೆನ್ನಾಗಿ ಇಡಬೇಕು ಎಂಬ ಉದ್ದೇಶದಿಂದ ದೇವಿಗೆ ಆಭರಣಗಳನ್ನು ಅರ್ಪಿಸಿದರು. ಈ ರೀತಿಯಾಗಿ ತುಂಬಾ ಬುದ್ಧಿಯುಳ್ಳ ಈ ಹುಡುಗಿಯರು ಕೃಷ್ಣನಿಂದ ತಮಗೆ ಏನು ಬೇಕೋ ಅದನ್ನೆಲ್ಲಾ ದೇವಿಗೆ ಅರ್ಪಿಸಿ ಪೂಜಿಸಿದರು. ಇದನ್ನೇ ಕೃಷ್ಣನು ಗೀತೆಯಲ್ಲಿ 'ಯೇ ಯಥಾ ಮಾಂ ಪ್ರಪದ್ಯಂತೇ ತಾನ್ ತಥೈವ ಭಜಾಮ್ಯಹಂ' ನನ್ನನ್ನು ಯಾರು ಯಾವ ರೀತಿ ಆರಾಧಿಸುತ್ತಾರೋ ಅವರನ್ನು ನಾನು ಅದೇ ರೀತಿ ನೋಡಿಕೊಳ್ಳುತ್ತೇನೆ ಎಂದು ಹೇಳಿದ್ದಾನೆ.

ತತಃ ಸಪತ್ನ್ಯರ್ಚನತತ್ಪರಾಣಾಂ
ವ್ರತಂ ವಿರುದ್ಧಂ ವ್ರಜಬಾಲಿಕಾನಾಮ್ ।
ಸ ಭಗ್ನಮಾಧಾತುಮಿವಾಂಬರಾಣಿ
ಜಹಾರ ಧೀರೋಽಂಬುವಿಹಾರಕಾಲೇ ॥ ೪೭ ॥

**ತತಃ** = ಅನಂತರ, **ಸಪತ್ನೀ** = ಸಪತ್ನಿಯಾದ ರಮೆಯ, **ಅರ್ಚನ** = ಪೂಜೆಯಲ್ಲಿ, **ತತ್ಪರಾಣಾಂ** = ಆಸಕ್ತರಾದ, **ವ್ರತಂ** = ವ್ರತವನ್ನು, **ವಿರುದ್ಧಂ** = ವಿರುದ್ಧವಾದ, **ವ್ರಜಬಾಲಿಕಾನಾಂ** = ಗೋಕುಲದ ಬಾಲೆಯರ, **ಸಃ** = ಆ, **ಭಗ್ನಂ** = ನಷ್ಟವನ್ನಾಗಿ, **ಆಧಾತುಂ** = ಮಾಡಲು, **ಇವ** = ಎಂಬಂತೆ, **ಅಂಬರಾಣಿ** = ವಸ್ತ್ರಗಳನ್ನು, **ಜಹಾರ** = ಅಪಹರಿಸಿದನು, **ಧೀರಃ** = ಕೃಷ್ಣನು, **ಅಂಬು** = ನೀರಿನಲ್ಲಿ, **ವಿಹಾರಕಾಲೇ** = ಆಟವಾಡುವ ಸಮಯದಲ್ಲಿ.

ವ್ರತದಲ್ಲಿರುವ ಈ ಬಾಲಿಕೆಯರು ವಿವಸ್ತ್ರರಾಗಿ ನೀರಿನಲ್ಲಿ ಸ್ನಾನ ಮಾಡುತ್ತಿದ್ದರು. ಇವರು ನದೀ ದಡದಲ್ಲಿಟ್ಟಿದ್ದ ವಸ್ತ್ರವನ್ನು ಕೃಷ್ಣನು ಅಪಹರಿಸಿದ. ಇದರಿಂದ ಈ ಬಾಲಿಕೆ-ಯರು ನೀರಿನಿಂದ ಮೇಲೆ ಬರುವಂತಿಲ್ಲ. ಲಕ್ಷ್ಮೀಪೂಜೆ ಮಾಡುವಂತಿಲ್ಲ. ಕೃಷ್ಣ ಇವರ ಪೂಜೆಗೆ ವಿಘ್ನ ಮಾಡಿದಂತೆ ಇತ್ತು.

**ದೇಹೀಶಾಂಬರಮಸ್ಮದೀಯಮಬಲಾ ದತ್ತಂ ಕ್ವ ತದ್ವರ್ತತೇ**
**ಮಧ್ಯೇ ವಃ ಪ್ರತಿಭಾತಿ ತರ್ಹಿ ನ ಕಥಂ ಸಂದೃಶ್ಯತೇಽಸ್ಮದ್ದೃಶಾ ।**
**ಮುಗ್ಧಾಸ್ತಾರ್ಕಿಕಮೌಲಿಯುಕ್ತ್ಯಕಲಿತಂ ತನ್ನೈವ ವಃ ಶಕ್ಯತೇ**
**ದ್ರಷ್ಟುಂ ಚಂಚಲಲೋಚನೈರಿತಿವದನ್ ಕೃಷ್ಣಃ ಸ ಪುಷ್ಣಾತು ಮಾಮ್ ॥ ೪೮ ॥**

**ದೇಹಿ** = ಕೊಡು, **ಈಶ** = ಒಡೆಯನೇ, **ಅಂಬರಂ** = ಬಟ್ಟೆಯನ್ನು, **ಅಸ್ಮದೀಯಂ** = ನಮ್ಮ, **ಅಬಲಾಃ** = ಗೋಪಿಯರೇ, **ದತ್ತಂ** = ಕೊಟ್ಟಾಗಿದೆ, **ಕ್ವ**= ಎಲ್ಲಿ, **ತತ್** = ಅದು, **ವರ್ತತೇ** = ಇದೆ, **ಮಧ್ಯೇ** = ಮಧ್ಯದಲ್ಲಿ, **ವಃ** = ನಮ್ಮ, **ಪ್ರತಿಭಾತಿ** = ಹೊಳೆಯುತ್ತದೆ, **ತರ್ಹಿ** = ಹಾಗಾದರೆ, **ಕಥಂ** = ಯಾಕೆ, **ನ ಸಂದೃಶ್ಯತೇ** = ಕಾಣಿಸುವುದಿಲ್ಲ, **ಅಸ್ಮದ್ ದೃಶಾ** = ನಮ್ಮ ಕಣ್ಣಿನಿಂದ, **ಮುಗ್ಧಾಃ** = ಮುಗ್ಧರೇ, **ತಾರ್ಕಿಕಮೌಲಿಃ** = ತಾರ್ಕಿಕ-ಶ್ರೇಷ್ಠರ, **ಯುಕ್ತಿ** = ತರ್ಕಕ್ಕೆ, **ಅಕಲಿತಂ** = ಸಿಕ್ಕದಿರುವ, **ತತ್** = ಅದು, **ವಃ** = ನಿಮಗೆ, **ದ್ರಷ್ಟುಂ** = ನೋಡಲು, **ನೈವ ಶಕ್ಯತೇ** = ಸಾಧ್ಯವಿಲ್ಲ, **ಚಂಚಲ** = ಚಂಚಲವಾದ, **ಲೋಚನೈಃ** = ಕಣ್ಣುಳ್ಳ, **ಇತಿ** = ಎಂದು, **ವದನ್** = ಹೇಳುವ, **ಕೃಷ್ಣಃ** = ಕೃಷ್ಣನು, **ಸಃ** = ಆ, **ಪುಷ್ಣಾತು** = ರಕ್ಷಿಸಲಿ, **ಮಾಂ** = ನನ್ನನ್ನು.

ಬಾಲಕಿಯರು ವಸ್ತ್ರದ ಅಭಿಪ್ರಾಯದಿಂದ ಕೃಷ್ಣ ನಮಗೆ ಅಂಬರವನ್ನು ಕೊಡು ಎಂದು ಬೇಡಿದರು. ಕೃಷ್ಣನು ಅಂಬರಶಬ್ದಕ್ಕೆ ಆಕಾಶ ಎಂದು ಅರ್ಥಮಾಡಿ, ಕೊಟ್ಟಿದ್ದೇನೆ ಎಂದನು. ಆಕಾಶ ಎಂದರೆ ಕಣ್ಣಿಗೆ ಕಾಣದ ಸೂಕ್ಷ್ಮವಾದ ವಸ್ತು. ಸ್ತ್ರೀಯರ ದೇಹದ ಲಕ್ಷಣಗಳಲ್ಲಿ ಸೊಂಟದ ಭಾಗವು ಸೂಕ್ಷ್ಮವಾಗಿರಬೇಕು. ಎಲ್ಲವನ್ನೂ ಸೃಷ್ಟಿಸುವವನು ಕೃಷ್ಣನು. ಸ್ತ್ರೀಯರ ಅಂಬರದಂತೆ ಸೂಕ್ಷ್ಮವಾಗಿರುವ ಸೊಂಟದ ಭಾಗವನ್ನೂ ಆತನೇ ಸೃಷ್ಟಿಸಿದವನು. ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ಕೃಷ್ಣನು ಕೊಟ್ಟಿದ್ದೇನೆ ಎಂದು ಹೇಳಿದ್ದು. 'ಎಲ್ಲಿದೆ' ಎಂಬ ಬಾಲಕಿ-ಯರ ಪ್ರಶ್ನೆಗೆ ನಿಮ್ಮ ಮಧ್ಯದಲ್ಲೇ ಇದೆ ಎಂದನು. ಹಾಗಾದರೆ ಯಾಕೆ ನಮಗೆ ಕಾಣುವುದಿಲ್ಲ ಎಂದು ಹೆಮ್ಮಕ್ಕಳು ಕೇಳಿದ್ದಕ್ಕೆ ಕೃಷ್ಣನು ತಾರ್ಕಿಕರಿಂದಲೇ ಅದನ್ನು ಕಾಣಲು ಸಾಧ್ಯವಾಗಲಿಲ್ಲ. ಹಾಗಿರುವಾಗ ಚಂಚಲಾಕ್ಷಿಯರಾದ ನಿಮಗೆ ಹೇಗೆ ಕಾಣುತ್ತೆ ಎಂದಾಗ ಬಾಲಿಕೆಯರಾದರೂ ಜ್ಞಾನಿಗಳಾದ ಅವರು ಸುಮ್ಮಗಾದರು. ಇಂತಹ ಕೃಷ್ಣನು ನಮ್ಮನ್ನು ಕಾಪಾಡಲಿ.

ತತಃ ಕ್ರಮೇಣಾಂಕುರಿತಾಂಗಜಾತಾ
ನಿರೀಕ್ಷ್ಯ ತಾಶ್ಚಂಚಲಲೋಚನಾಂತಾಃ ।
ಸ್ವಸಂಗಯೋಗ್ಯಾ ಇತಿ ತರ್ಕಯನ್ ಸ
ದದೌ ಮುದಾ ತದ್ವಸನಾನಿ ಮಾನೀ ॥೪೯॥

**ತತಃ** = ಅನಂತರ, **ಕ್ರಮೇಣ** = ನಿಧಾನವಾಗಿ, **ಅಂಕುರಿತ** = ಚಿಗುರಿದ, **ಅಂಗಜಾತಾಃ** = ಕಾಮನುಳ್ಳ, **ನಿರೀಕ್ಷ್ಯ** = ನೋಡಿ, **ತಾಃ** = ಅವರು, **ಚಂಚಲ** = ಚಂಚಲವಾದ, **ಲೋಚ- ನಾಂತಾಃ** = ಕಡೆಗಣ್ಣುಳ್ಳ, **ಸ್ವ** = ತನ್ನ, **ಸಂಗ** = ಸಂಸರ್ಗಕ್ಕೆ, **ಯೋಗ್ಯಾಃ** = ಯೋಗ್ಯರು, **ಇತಿ** = ಎಂದು, **ತರ್ಕಯನ್** = ಆಲೋಚಿಸಿ, **ಸ** = ಆ, **ದದೌ** = ಕೊಟ್ಟನು, **ಮುದಾ** = ಸಂತೋಷದಿಂದ, **ತದ್ವಸನಾನಿ** = ಅವರ ವಸ್ತ್ರಗಳನ್ನು, **ಮಾನೀ** = ಅಭಿಮಾನಿಯಾದ.

ಈ ಬಾಲಿಕೆಯರು ಬಹಳ ಸಮಯದಿಂದ ಕೃಷ್ಣನ ಒಡನಾಟದಲ್ಲಿ ಇದ್ದವರು. ಜೊತೆಗೆ ದುರ್ಗೆಯ ಅನುಗ್ರಹವೂ ಸೇರಿತು. ಆದ್ದರಿಂದ ಇವರಿಗೆ ಕೃಷ್ಣನಲ್ಲಿ ಕಾಮವು ಹುಟ್ಟಿತು. ಈ ಗೋಪಿಯರ ಕಡೆಗಣ್ಣು ಬಹಳ ಕುಣಿಯುತ್ತಿದೆ. ಇದರಿಂದ ಈ ಗೋಪಿಯರ ಕಾಮವು ಸಲಿಗೆಯಿಂದ ಕೂಡಿದ್ದಲ್ಲ. ಭಯಮಿಶ್ರಿತ ಗೌರವದಿಂದ ಕೂಡಿದ್ದು ಎಂದು ತಿಳಿಯುತ್ತದೆ. ಇವರಲ್ಲಿ ಕಾಮೋತ್ಪತ್ತಿಯಾದ್ದರಿಂದ ಇವರು ಕೃಷ್ಣನ ಸಂಗಕ್ಕೆ ಯೋಗ್ಯರು. ಯಾಕೆಂದರೆ ಕಾಮನ ತಂದೆ ಕೃಷ್ಣ. ಕಾಮನ ಉತ್ಪತ್ತಿ ಇವರಲ್ಲಿ. ಆದ್ದರಿಂದ ಇವರು ಕಾಮನ ತಾಯಿ. ಅರ್ಥಾತ್ ಕೃಷ್ಣನ ಪತ್ನಿಯರು. ಅಂದರೆ ಲಕ್ಷ್ಮೀಸನ್ನಿಧಾನ ವಿಶೇಷವಾಗಿ ಬಂತು ಎಂದು ತಿಳಿಯಬೇಕು. ಆದ್ದರಿಂದ ಕೃಷ್ಣ ಇವರ ಬಟ್ಟೆಗಳನ್ನು ಕೊಟ್ಟ. ಈ ಕನ್ನಿಕೆಯರು ಸ್ನಾನಕಾಲ-ದಲ್ಲಿ ನಗ್ನರಾಗುವ ಮೂಲಕ ದುರಾಚಾರಿಗಳಾಗಿದ್ದರು. ಲಕ್ಷ್ಮಿಯ ಸನ್ನಿಧಾನಪಾತ್ರರಲ್ಲಿ ದುರಾಚಾರ ಕೂಡದು. ಅದಕ್ಕಾಗಿ ಕೃಷ್ಣ ಕೂಡಲೇ ಬಟ್ಟೆಯನ್ನು ಕೊಟ್ಟ. ದೇವರ ಸಂಗ-ಸುಖ ಸಿಗಬೇಕಾದರೆ ಒಂದೋ ಲಕ್ಷ್ಮೀ ಆಗಬೇಕು. ಇಲ್ಲವಾದರೆ ಲಕ್ಷ್ಮಿಯ ಸನ್ನಿಧಾನ ವಿಶೇಷವಾಗಿ ಇರಬೇಕು. ಆದ್ದರಿಂದ ದೇವರಿಗೆ ಅನ್ಯಸ್ತ್ರೀಗಮನವೆಂಬ ದೋಷ ಬರು-ವುದಿಲ್ಲ.

**ತತೋ ವನೇ ಸಂಚರಣಾದತಿಶ್ರಾಂತಾಃ ಕದಾಚನ ।**
**ಅನ್ನಾರ್ಥಿನೋ ಯಯುರ್ಗೋಪಾಃ ಪೂರ್ಣಾಂ ಯಜ್ಞಸಭಾಂ ದ್ವಿಜೈಃ ॥ ೫೦**

**ತತಃ** = ಅನಂತರ, **ವನೇ** = ಕಾಡಲ್ಲಿ, **ಸಂಚರಣಾತ್** = ಸಂಚಾರದಿಂದ, **ಅತಿಶ್ರಾಂತಾಃ** = ಬಹಳ ಬಳಲಿದ, **ಕದಾಚನ** = ಒಮ್ಮೆ, **ಅನ್ನಾರ್ಥಿನಃ** = ಊಟದ ಅಪೇಕ್ಷೆಯುಳ್ಳ, **ಯಯುಃ** = ಹೋದರು, **ಗೋಪಾಃ** = ಗೊಲ್ಲರು, **ಪೂರ್ಣಾಂ** = ತುಂಬಿದ, **ಯಜ್ಞಸಭಾಂ** = ಯಾಗಶಾಲೆಯನ್ನು, **ದ್ವಿಜೈಃ** = ಬ್ರಾಹ್ಮಣರಿಂದ.

ಒಂದು ದಿನ ಈ ಗೊಲ್ಲರು ಕೃಷ್ಣನಿಂದ ಕೂಡಿಕೊಂಡು ಕಾಡಲ್ಲಿ ಆಡುತ್ತಿದ್ದರು. ಹಸಿವೆಯೂ ಆಯಿತು. ಅಲ್ಲೇ ಪಕ್ಕದಲ್ಲಿ ವಿಪ್ರರು ಯಜ್ಞ ಮಾಡುತ್ತಿದ್ದರು. ಕೃಷ್ಣನ ಅಣತಿ-ಯಂತೆ ಆ ಬ್ರಾಹ್ಮಣರಲ್ಲಿ ಅನ್ನವನ್ನು ಯಾಚಿಸಿದರು.

**ಕ್ಷುತ್ಪೀಡಿತಾಽಪಿ ಪರಮಾನುಗಮಂಡಲೀ ಸಾ**
**ಕೃಷ್ಣಾಯ ಭೋಜ್ಯಮಿತಿ ವಿಪ್ರಚಯಂ ಯಯಾಚೇ ।**
**ಯುಕ್ತಂ ಹಿ ತನ್ಮುರರಿಪೋರನುಗಾ ವಿರಾಗಾ**
**ಯತ್ನಂ ಕದಾಚಿದಪಿ ನ ಸ್ವಕೃತೇ ಪ್ರಕುರ್ಯುಃ ॥ ೫೧ ॥**

**ಕ್ಷುತ್** = ಹಸಿವಿನಿಂದ, **ಪೀಡಿತಾ ಅಪಿ** = ಬಳಲಿದ್ದರೂ, **ಪರಮ** = ದೇವರ, **ಅನುಗ** = ಸೇವಕರ, **ಮಂಡಲೀ** = ಸಮೂಹವು, **ಸಾ** = ಆ, **ಕೃಷ್ಣಾಯ** = ದೇವರಿಗೆ, **ಭೋಜ್ಯಂ** = ಆಹಾರವು, **ಇತಿ** = ಎಂದು, **ವಿಪ್ರಚಯಂ** = ಬ್ರಾಹ್ಮಣರ ಸಮೂಹವನ್ನು, **ಯಯಾಚೇ** = ಬೇಡಿತು, **ಯುಕ್ತಂ** = ಯೋಗ್ಯವು, **ತತ್** = ಅದು, **ಮುರರಿಪೋಃ** = ದೇವರ, **ಅನುಗಾಃ** = ಸೇವಕರು, **ವಿರಾಗಾಃ** = ವಿರಕ್ತರು, **ಯತ್ನಂ** = ಪ್ರಯತ್ನವನ್ನು, **ಕದಾಚಿದಪಿ** = ಒಮ್ಮೆಯೂ ಕೂಡಾ, **ಸ್ವಕೃತೇ** = ತಮಗಾಗಿ, **ನ ಪ್ರಕುರ್ಯುಃ** = ಮಾಡುವುದಿಲ್ಲ.

ಹಸಿವೆಯಾದದ್ದು ಗೊಲ್ಲರಿಗೆ. ಆದರೆ ಅವರು ವಿಪ್ರರಲ್ಲಿ ಕೃಷ್ಣನಿಗೆ ಅನ್ನ ಕೊಡಿರಿ ಎಂದು ಬೇಡಿದರು ಹೊರತು ತಮಗಾಗಿ ಅಲ್ಲ. ಇದು ಯೋಗ್ಯವೇ ಆಗಿದೆ. ಈ ಗೊಲ್ಲರು ಕೃಷ್ಣನ ಪರಮ ಭಕ್ತರು. ಇತರ ವಿಷಯಗಳಲ್ಲಿ ವೈರಾಗ್ಯವುಳ್ಳವರು. ಭಕ್ತರು ಎಂದೂ ತಮಗಾಗಿ ಏನನ್ನೂ ಅಪೇಕ್ಷಿಸುವುದಿಲ್ಲ. ಎಲ್ಲವನ್ನೂ ದೇವರಿಗಾಗಿ ಮಾಡುತ್ತಾರೆ. ಬುಡಕ್ಕೆ ನೀರು ಹಾಕಿದರೆ ಅದು ಎಲ್ಲಾ ಕೊಂಬೆ, ರೆಂಬೆಗಳಿಗೂ ಸಿಗುತ್ತದೆ. ಪ್ರತ್ಯೇಕವಾಗಿ ಕೊಂಬೆಗಳಿಗೆ ನೀರು ಹಾಕಬೇಕಿಲ್ಲ ಎಂಬ ಸರಿಯಾದ ತಿಳುವಳಿಕೆ ಉಳ್ಳವರು. 'ದಾರಾನ್ ಸುತಾನ್ ಪ್ರಿಯಾನ್ ಪ್ರಾಣಾನ್ ಪರಸ್ಮೈ ಸನ್ನಿವೇದಯೇತ್' ಎಂಬ ಶಾಸ್ತ್ರದ ಮಾತನ್ನು ರಾಜರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

**ಸ್ವೀಯಕ್ರಿಯಾಭಂಗಭಯೇನ ವಿಪ್ರಾಃ**
**ಶ್ರೇಯಸ್ಕೃತೇ ತೇ ನ ದದುಃ ಕಿಲಾನ್ನಮ್ ।**
**ಭೃತ್ಯೈಃ ಸಹಾಶ್ನಾತಿ ಮಖೇಽಸ್ಮದೀಯ**
**ಇತ್ಥಂ ವಿದಿತ್ವೇತಿ ಮಮ ಪ್ರತರ್ಕಃ ॥೫೨॥**

**ಸ್ವೀಯ** = ತಮ್ಮ, **ಕ್ರಿಯಾ** = ಕರ್ಮದ, **ಭಂಗ** = ವಿಘ್ನದ, **ಭಯೇನ** = ಭಯದಿಂದ, **ವಿಪ್ರಾಃ** = ಬ್ರಾಹ್ಮಣರು, **ಶ್ರೇಯಸ್ಕೃತೇ** = ಮೋಕ್ಷವನ್ನು ಕೊಡುವ ದೇವರಿಗೆ, **ತೇ** = ಆ, **ನ ದದುಃ** = ಕೊಡಲಿಲ್ಲ, **ಅನ್ನಂ** = ಅನ್ನವನ್ನು, **ಭೃತ್ಯೈಃ** = ಸೇವಕರಿಂದ, **ಸಹ** = ಕೂಡಿ, **ಅಶ್ನಾತಿ** = ಉಣ್ಣುತ್ತಾನೆ, **ಮಖೇ** = ಯಾಗದಲ್ಲಿ, **ಅಸ್ಮದೀಯೇ** = ನಮ್ಮ, **ಇತ್ಥಂ** = ಈ

ರೀತಿಯಾಗಿ, **ವಿದಿತ್ವಾ** = ತಿಳಿದು, **ಇತಿ** = ಎಂದು, **ಮಮ** = ನನ್ನ, **ಪ್ರತರ್ಕಃ** = ಊಹೆಯು.

ಯಜ್ಞ ಇನ್ನೂ ಪೂರ್ಣ ಆಗಿಲ್ಲ. ಆ ಮಧ್ಯದಲ್ಲಿ ಅಡಿಗೆಯನ್ನು ಬೇರೆಯವರಿಗೆ ಉಣ ಬಡಿಸಿದರೆ ಯಾಗಕ್ಕೆ ಅಪೂರ್ಣತೆ ಬರುತ್ತದೆ. ಯಾಗದಲ್ಲಿ ಪೂರ್ಣನಾದ ದೇವರಿಗೆ ಕೊಡದೆ ಬೇರೆಯವರಿಗೆ ಕೊಡುವಂತಿಲ್ಲ ಎಂದು ತಿಳಿದ ವಿಪ್ರರು ಗೊಲ್ಲರಿಗೆ ಆಹಾರವನ್ನು ಕೊಟ್ಟಿಲ್ಲ. ಈ ವಿಪ್ರರಿಗೆ ಆ ಸಮಯದಲ್ಲಿ ಅಸುರಾವೇಶ ಆಗಿತ್ತು. ಆದ್ದರಿಂದ ಕೃಷ್ಣನು ದೇವರು ಎಂಬ ಪ್ರಜ್ಞೆ ಇರಲಿಲ್ಲ. ಆದ್ದರಿಂದಲೇ ಗೊಲ್ಲರು ಬಂದು ಆಹಾರವನ್ನು ಬೇಡಿದಾಗ 'ಯಾಗ ಮುಗಿಯದೆ ಕೊಡುವುದಿಲ್ಲ' ಎಂದು ಹೇಳಿದರು.

ಈ ವಿಪ್ರರು ಯೋಗ್ಯತೆಯಲ್ಲಿ ಒಳ್ಳೆಯವರು. ಆದರೂ ತಮ್ಮ ಈ ದುರ್ಬುದ್ಧಿಯಿಂದ ಅಧಃಪತನದತ್ತ ಸಾಗಿದಾಗ ರಾಜರು ತಮ್ಮದೇ ಶೈಲಿಯಲ್ಲಿ ಅವರನ್ನು ಉದ್ಧರಿಸುತ್ತಾರೆ – ಯಾಗದಲ್ಲಿ ಎಲ್ಲರೂ ಕೃಷ್ಣನಿಗೇ ಹವಿಸ್ಸನ್ನು ಕೊಡುವುದು. ಅಲ್ಲಿಯೂ ಕೃಷ್ಣನು ತನ್ನ ಪರಿವಾರದವರಾದ ಬ್ರಹ್ಮಾದಿಗಳಿಂದ ಕೂಡಿಕೊಂಡೇ ಸ್ವೀಕರಿಸುವುದು. ಸದ್ಯ ಈಗ ಈ ವಿಪ್ರರು ಹಾಗೆಯೇ ಮಾಡುತ್ತಿರುವುದು. ಆದ್ದರಿಂದ ಕೃಷ್ಣನಿಗೆ ಹಸಿವೆ ಆಗುವ ಪ್ರಸಂಗವೇ ಇಲ್ಲ. ಈ ದೃಷ್ಟಿಯಿಂದ ವಿಪ್ರರು ಗೊಲ್ಲರು ಬಂದು ಅನ್ನವನ್ನು ಬೇಡಿದಾಗ ಕೊಡಲಿಲ್ಲ.

• • • •

**ಸಂದೇಶ**

**ಹರೌ ಪ್ರಸನ್ನೇ ಕಿಂ ಇಹ ಅಸ್ತಿ ಅಸಾಧ್ಯಮ್ ।**

ದೇವರು ಸಂತುಷ್ಟನಾದರೆ ದುರ್ಲಭವಾದದ್ದು ಯಾವುದೂ ಇಲ್ಲ

---

**ವಿಪ್ರಾಂಗನಾಃ ಸ್ವಪ್ರಭವೇ ಪ್ರಹೃಷ್ಟಾಃ**
**ಪ್ರತ್ಯರ್ಪ್ಯ ಸರ್ಪಿರ್ದಧಿಪಾಯಸಾದಿ ।**
**ಮುಕ್ತಿಂ ಕರಸ್ಥಾಂ ಕಿಲ ತಾ ವಿತೇನುಃ**
**ಪುಂಸ್ತ್ವೇನ ಕಿಂ ಪೂರುಷಮೌಲಿಭಾಜಾಮ್ ॥ ೫೩ ॥**

**ವಿಪ್ರಾಂಗನಾಃ** = ವಿಪ್ರಪತ್ನಿಯರು, **ಸ್ವಪ್ರಭವೇ** = ತಮ್ಮ ಒಡೆಯನಿಗೆ, **ಪ್ರಹೃಷ್ಟಾಃ** = ಸಂತೋಷಪಟ್ಟು, **ಪ್ರತ್ಯರ್ಪ್ಯ** = ಅರ್ಪಿಸಿ, **ಸರ್ಪಿ** = ತುಪ್ಪ, **ದಧಿ**= ಮೊಸರು, **ಪಾಯಸಾದಿ** = ಪಾಯಸಾದಿಗಳನ್ನು, **ಮುಕ್ತಿಂ** = ಮೋಕ್ಷವನ್ನು, **ಕರಸ್ಥಾಂ** = ಕರಗತ-ವನ್ನಾಗಿ, **ತಾಃ** = ಅವರು, **ವಿತೇನುಃ** = ಮಾಡಿದರು, **ಪುಂಸ್ತ್ವೇನ ಕಿಂ** = ಪುರುಷತ್ವ-ದಿಂದೇನು, **ಪುರುಷಮೌಲಿ** = ಪುರುಷೋತ್ತಮನ, **ಭಾಜಾಂ** = ಭಕ್ತರಿಗೆ.

ಗೊಲ್ಲರು ಕೃಷ್ಣನಲ್ಲಿಗೆ ಬಂದು 'ವಿಪ್ರರು ಕೊಡುವುದಿಲ್ಲ' ಎಂದು ಹೇಳಿದರು. ಕೃಷ್ಣನು

ಇವರನ್ನು ವಿಪ್ರಪತ್ನಿಯರ ಬಳಿಗೆ ಕಳುಹಿಸಿದನು. ಈ ಪತ್ನಿಯರು ತಮ್ಮ ಪತಿಗಳಿಗಾಗಿ ಸಿದ್ಧ ಮಾಡಿದ ಅನ್ನವನ್ನು ಹಿಡಿದುಕೊಂಡು ವೇಗವಾಗಿ ಕೃಷ್ಣನಲ್ಲಿಗೆ ಬಂದರು. ಜೊತೆಗೆ, ಹಾಲು ಮೊಸರು ತುಪ್ಪಾದಿಗಳನ್ನು ತಂದರು. ಅದನ್ನೆಲ್ಲಾ ಕೃಷ್ಣನು ಗೊಲ್ಲರಿಂದ ಕೂಡಿಕೊಂಡು ಉಂಡನು. ಈ ಹೆಮ್ಮಕ್ಕಳಿಗೆ ಮೋಕ್ಷವನ್ನು ಪ್ರತಿಯಾಗಿ ಕೊಟ್ಟನು.

ನಾವು ದೇವರಿಗೆ ಶ್ರದ್ಧೆಯಿಂದ ಅರ್ಪಿಸಿದರೆ ದೇವರು ನಮ್ಮನ್ನು ಕೂಡಲೇ ಭವ-ಬಂಧನದಿಂದ ಬಿಡುಗಡೆಗೊಳಿಸುತ್ತಾನೆ.

ಬಹಳ ಜನರ ಆಕ್ಷೇಪ ಹೀಗಿದೆ – ಸ್ತ್ರೀಯರಿಗೆ ಮೋಕ್ಷ ಇಲ್ಲ. ಆದ್ದರಿಂದ ಕೃಷ್ಣ ಇವರಿಗೆ ಮೋಕ್ಷ ಹೇಗೆ ಕೊಟ್ಟ ಎಂದು. ಈ ಪ್ರಶ್ನೆಗೆ ರಾಜರು ಹೀಗೆ ಉತ್ತರ ಕೊಡುತ್ತಾರೆ. ಮೋಕ್ಷವನ್ನು ಕೊಡುವುದು ಬಿಡುವುದು ದೇವರಿಗೆ ಸೇರಿದ್ದು. ನಾವ್ಯಾರು ಪ್ರಶ್ನಿಸಲು? ಮೋಕ್ಷಕ್ಕೆ ಅಡ್ಡಿ ಸ್ತ್ರೀತ್ವ ಅಲ್ಲ. ದ್ವೇಷ. ಪುರುಷರಾಗಲೀ ಸ್ತ್ರೀಯರಾಗಲೀ ಯಾರು ಭಕ್ತಿ ಮಾಡುತ್ತಾರೋ ಅವರಿಗೆ ಮೋಕ್ಷ. ಪುರುಷರಾಗಲೀ ಸ್ತ್ರೀಯರಾಗಲೀ ಯಾರು ದ್ವೇಷಿಸು+ತ್ತಾರೋ ಅವರಿಗೆ ನರಕ.

ಈ ಗೊಲ್ಲರನ್ನು ಕೃಷ್ಣ ಯಾಕೆ ಅತ್ತಿತ್ತ ಕುಣಿಸಿದ? ಅಂದರೆ, ಇವರು ಕೃಷ್ಣನ ಬಳಿ ಇದ್ದರೂ ಇವರ ತಲೆ ಹೊಟ್ಟೆಯ ಕಡೆಗೆ ಇತ್ತು. ಕೃಷ್ಣನ ಕಡೆಗೆ ಇರಲಿಲ್ಲ. ದೇವರಲ್ಲಿ ಬೇಡುವಾಗ ಶ್ರೇಷ್ಠವಾದುದನ್ನು ಬೇಡಬೇಕು ಹೊರತು ಕ್ಷುಲ್ಲಕವಾದ ಲೌಕಿಕವಾದದ್ದನ್ನು ಅಲ್ಲ ಎಂಬ ಒಂದು ಪಾಠವನ್ನು ಕಲಿಸಲು ಗೊಲ್ಲರನ್ನು ಅತ್ತಿತ್ತ ಕುಣಿಸಿದ.

ಸ ವಿಪ್ರಪತ್ನ್ಯರ್ಪಿತಭಕ್ತಭುಕ್ತ್ಯಾ
ವಿಭುಃ ಸಮಾಸಕ್ತಮನಾ ಇವೈಂದ್ರಮ್ ।
ಅಭುಂಕ್ತ ಭೋಜ್ಯಂ ಗತಭೀರ್ಗಿರೀಂದ್ರ
ವಪುಃ ಸ್ವಕೀಯಾರ್ಪಿತಮಪ್ರತೀತಃ ॥ ೫೪ ॥

**ಸಃ** = ಆ, **ವಿಪ್ರ** = ಬ್ರಾಹ್ಮಣರ, **ಪತ್ನಿ** = ಸ್ತ್ರೀಯರಿಂದ, **ಅರ್ಪಿತ** = ಕೊಡಲ್ಪಟ್ಟ, **ಭಕ್ತ** = ಆಹಾರದ, **ಭುಕ್ತ್ಯಾ** = ಊಟದಿಂದ, **ವಿಭುಃ** = ಕೃಷ್ಣನು, **ಸಮಾಸಕ್ತಮನಾ ಇವ** = ಮನಸ್ಸುಳ್ಳವನಂತೆ, **ಐಂದ್ರಂ** = ಇಂದ್ರನ, **ಅಭುಂಕ್ತ** = ಉಂಡನು, **ಭೋಜ್ಯಂ** = ಊಟವನ್ನು, **ಗತಭೀಃ** = ಭಯ ಇಲ್ಲದವನಾಗಿ, **ಗಿರೀಂದ್ರ** = ಬೆಟ್ಟವೇ, **ವಪುಃ** = ಶರೀರವುಳ್ಳವನಾಗಿ, **ಸ್ವಕೀಯ** = ತನ್ನವರಿಂದ, **ಅರ್ಪಿತಂ** = ಕೊಡಲ್ಪಟ್ಟದ್ದನ್ನು, **ಅಪ್ರತೀತಃ** = ಯಾರಿಗೂ ಕಾಣದವನಾಗಿ.

ಈ ಗೊಲ್ಲರು ಪ್ರತಿವರ್ಷ ಇಂದ್ರನ ಪೂಜೆ ಮಾಡುತ್ತಿದ್ದರು. ಇಂದ್ರನು ಕಾಲಕಾಲಕ್ಕೆ

ಮಳೆ ಕೊಡಬೇಕು. ತನ್ಮೂಲಕ ಬೆಳೆ ಚೆನ್ನಾಗಿ ಬೆಳೆಯಬೇಕು ಎಂದು. ಆ ಕ್ರಮದಂತೆ ಒಂದು ದಿನ ಇವರು ಇಂದ್ರನ ಪೂಜೆಗೆ ಸಿದ್ಧತೆ ಮಾಡುತ್ತಿದ್ದರು. ಕೃಷ್ಣನು ಇಂದ್ರನ ಸೊಕ್ಕನ್ನು ಅಡಗಿಸಲು ಆ ಪೂಜೆಯನ್ನು ತಪ್ಪಿಸಿ ಗೋವರ್ಧನಬೆಟ್ಟಕ್ಕೆ ಪೂಜೆ ಮಾಡಲು ತಿಳಿಸಿದನು. ಇದು ವಸ್ತುಸ್ಥಿತಿ.

ರಾಜರು ಇದನ್ನು ಈ ರೀತಿ ತಿಳಿಸುತ್ತಾರೆ – ಈ ವಿಪ್ರಪತ್ನಿಯರು ಕೊಟ್ಟ ಮಾನು-ಷಾನ್ನವನ್ನು ಉಂಡ ಕೃಷ್ಣನಿಗೆ ಇದು ಇಷ್ಟವಾಯಿತು. ಇನ್ನೂ ಬೇಕೆಂದು ತೋರಿತು. ಅದಕ್ಕಾಗಿ ತಾನು ಆ ಬೆಟ್ಟದೊಳಗೆ ಸೇರಿಕೊಂಡು ಗೊಲ್ಲರು ಕೊಟ್ಟ ಆಹಾರವನ್ನು ಸ್ವೀಕರಿಸಿದನು. ತಾನು ಬೆಟ್ಟದೊಳಗೆ ಸೇರಿಕೊಂಡದ್ದನ್ನು ಯಾರಿಗೂ ತಿಳಿಸಲಿಲ್ಲ. ಇಂದ್ರನ ಬಲಿಯನ್ನು ತಪ್ಪಿಸಿದ್ದರಿಂದ ಇಂದ್ರನು ಸಿಟ್ಟಾದರೆ.... ಅದಕ್ಕಾಗಿ ಗತಭೀಃ, ವಿಭುಃ ಎಂಬ ಎರಡು ವಿಶೇಷಣಗಳು ಇವೆ. ಇಂದ್ರನಿಂದ ಸಿಗುವ ಪ್ರಯೋಜನವನ್ನು ಕೃಷ್ಣನೇ ಕೊಡುವನು ಎಂದು ತಿಳಿಸಲು ವಿಭುಃ ಎಂದೂ, ಇಂದ್ರನಿಂದ ಕೃಷ್ಣನಿಗೆ ಭಯ ಇಲ್ಲ, ಕೃಷ್ಣನಿಗೇ ಎಲ್ಲರೂ ಹೆದರುವವರು ಎಂದು ತಿಳಿಸಲು ಗತಭೀಃ ಎಂದೂ ಇದೆ.

ಭಕ್ತರು ಏನು ಕೊಟ್ಟರು ಎನ್ನುವುದಕ್ಕಿಂತ ಹೇಗೆ ಕೊಟ್ಟರು? ಎನ್ನುವುದನ್ನು ದೇವರು ನಿರೀಕ್ಷಿಸುತ್ತಾನೆ ಎನ್ನುವುದನ್ನು ರಾಜರು ಇಲ್ಲಿ ತಿಳಿಸುತ್ತಾರೆ.

**ಪ್ರದಕ್ಷಿಣೀಕೃತ್ಯ ಗಿರಿಂ ಸ್ವವರ್ಗೈ**
**ರ್ಮುದಾऽರ್ಪಿತಂ ಪರ್ವತರೂಪಧಾರೀ ।**
**ಬಲಿಂ ಚ ಕೃಷ್ಣಃ ಶತಮನ್ಯುಮನ್ಯು**
**ವಿವರ್ಧನೋऽಸಾವುರರೀಚಕಾರ ॥ ೫೫ ॥**

**ಪ್ರದಕ್ಷಿಣೀಕೃತ್ಯ** = ಪ್ರದಕ್ಷಿಣೆ ಬಂದು, **ಗಿರಿಂ** = ಬೆಟ್ಟವನ್ನು, **ಸ್ವವರ್ಗೈಃ** = ತನ್ನವರಿಂದ, **ಮುದಾ** = ಸಂತೋಷದಿಂದ, **ಅರ್ಪಿತಂ** = ಕೊಟ್ಟದ್ದನ್ನು, **ಪರ್ವತ** = ಬೆಟ್ಟದ, **ರೂಪ** = ರೂಪವನ್ನು, **ಧಾರೀ** = ಧರಿಸಿದವನಾಗಿ, **ಬಲಿಂ** = ಆಹಾರವನ್ನು, **ಕೃಷ್ಣಃ** = ಹರಿಯು, **ಶತಮನ್ಯು** = ಇಂದ್ರನ, **ಮನ್ಯು** = ಸಿಟ್ಟನ್ನು, **ವಿವರ್ಧನಃ** = ಹೆಚ್ಚಿಸಿದವನಾಗಿ, **ಅಸೌ** = ಈ, **ಉರರೀಚಕಾರ** = ಅಂಗೀಕರಿಸಿದನು.

ಕೃಷ್ಣನ ಮಾತಿನಂತೆ ಗೋಪರು ಇಂದ್ರನ ಪೂಜೆಯನ್ನು ನಿಲ್ಲಿಸಿದರು. ಬೆಟ್ಟವನ್ನು ಪೂಜಿಸಿದರು. ಪ್ರದಕ್ಷಿಣೆ ಬಂದರು. ಕೃಷ್ಣನೂ ಒಂದು ರೂಪದಿಂದ ಅವರ ಜೊತೆಗೆ ಇದ್ದನು. ಒಂದು ರೂಪದಿಂದ ಬೆಟ್ಟವನ್ನು ಪ್ರವೇಶಿಸಿ, ಗೊಲ್ಲರ ಬಲಿಯನ್ನು ಸ್ವೀಕರಿಸಿದನು. ತನಗೆ ಸಿಗುವ ಪೂಜೆ ತಪ್ಪಿತು ಎಂದು ಇಂದ್ರನು ಸಿಟ್ಟಾದನು.

ಇದಕ್ಕೆ ಕಾರಣವನ್ನು ರಾಜರು ಬಹಳ ಚೆನ್ನಾಗಿ ಉತ್ಪ್ರೇಕ್ಷಿಸುತ್ತಾರೆ – ಕೃಷ್ಣನು ಎರಡನ್ನು ಸ್ವೀಕರಿಸಿದ್ದಾನೆ. ಇದು ಎರಡೂ ಇಂದ್ರನ ಶತ್ರುಗಳು. ಪರ್ವತ ಹಾಗೂ ಬಲಿ. ಇಂದ್ರನು ಪರ್ವತಗಳ ರೆಕ್ಕೆಗಳನ್ನು ಕತ್ತರಿಸಿದವ. ಆದ್ದರಿಂದ ಅವು ಇಂದ್ರನ ಶತ್ರುಗಳು. ಅಂತಹ ಒಂದು ಬೆಟ್ಟವನ್ನು ಪ್ರವೇಶ ಮಾಡಿದ ಕೃಷ್ಣ. ಹಾಗೆಯೇ ಬಲಿ ಎಂದರೆ ಪೂಜೆ ಹಾಗೂ ಬಲಿಚಕ್ರವರ್ತಿ ಎಂದು ಎರಡು ಅರ್ಥ. ಬಲಿಚಕ್ರವರ್ತಿ ಇಂದ್ರನ ಶತ್ರು ಎಂಬುದು ಪ್ರಸಿದ್ಧ. ಇಲ್ಲಿ ಶಬ್ದದಿಂದ ಸಾಮ್ಯ . ಗೊಲ್ಲರು ಕೊಟ್ಟ ಬಲಿಯನ್ನು ಅಂದರೆ ಪೂಜೆಯನ್ನು ಸ್ವೀಕರಿಸಿದ್ದು. ಆದರೂ ಬಲಿಯನ್ನು ಸ್ವೀಕರಿಸಿದ ಎಂದು ಇಂದ್ರನು ಸಿಟ್ಟಾದನು.

> **ಸಹಸ್ರನೇತ್ರೋಽಪಿ ಸ ಕೃಷ್ಣಸತ್ತ್ವಂ**
> **ಮನಾಗವಿಜ್ಞಾಯ ದಿದೇಶ ಮೇಘಾನ್ ।**
> **ಪ್ರವರ್ಷಣಾರ್ಥಂ ನಿಗಮೈಕವೇದ್ಯೇ**
> **ಕಿಮಕ್ಷಿಬಾಹುಲ್ಯಮುಪೈತಿ ಕೃತ್ಯಮ್ ॥ ೫೬ ॥**

**ಸಹಸ್ರನೇತ್ರೋಽಪಿ** = ಸಾವಿರ ಕಣ್ಣಿದ್ದರೂ, **ಸಃ** = ಅವನು, **ಕೃಷ್ಣಸತ್ವಂ** = ದೇವರ ಶಕ್ತಿಯನ್ನು, **ಮನಾಕ್** = ಸ್ವಲ್ಪವೂ, **ಅವಿಜ್ಞಾಯ** = ತಿಳಿಯದೆ, **ದಿದೇಶ** = ಆಜ್ಞಾಪಿಸಿದನು, **ಮೇಘಾನ್** = ಮೋಡಗಳನ್ನು, **ಪ್ರವರ್ಷಣಾರ್ಥಂ** = ಮಳೆಗಾಗಿ, **ನಿಗಮೈಕವೇದ್ಯೇ** = ವೇದದಿಂದ ಮಾತ್ರ ತಿಳಿಯಲ್ಪಡುವ ದೇವರಲ್ಲಿ, **ಅಕ್ಷಿಬಾಹುಲ್ಯಂ** = ಬಹಳ ಕಣ್ಣುಗಳು, **ಕೃತ್ಯಂ** = ಪ್ರಯೋಜನವನ್ನು, **ಕಿಂ ಉಪೈತಿ** = ಹೊಂದುತ್ತದೋ.

ಸಿಟ್ಟಾದ ಇಂದ್ರನು ಮೋಡಗಳ ಮೂಲಕ ಮಳೆಗರೆಯಲು (ಅತಿವೃಷ್ಟಿಯನ್ನುಂಟು ಮಾಡಲು) ಆರಂಭಿಸಿದನು. ಕೃಷ್ಣನಿಗೆ ವಿರೋಧವನ್ನು ಮಾಡಿದನು. ಯದ್ಯಪಿ ಇಂದ್ರನಿಗೆ ಸಾವಿರ ಕಣ್ಣುಗಳಿವೆ. ಆದರೂ ಕೃಷ್ಣನು ಯಾರೆಂದು ತಿಳಿಯಲು ಸಮರ್ಥನಾಗಲಿಲ್ಲ. ಏಕೆಂದರೆ, ಕೃಷ್ಣನು ಯಾವ ಇಂದ್ರಿಯಗಳಿಗೂ ಕಾಣಿಸುವವನಲ್ಲ. ವೇದಗಳು ಮಾತ್ರ ಈತನನ್ನು ತಿಳಿಸುತ್ತವೆ. ಆದ್ದರಿಂದ ವೇದಗಳೆಂದೇ ಅವುಗಳಿಗೆ ಹೆಸರು. ಆದ್ದರಿಂದ ಇಂದ್ರನಿಗೆ ಸಾವಿರ ಅಲ್ಲ ಲಕ್ಷ ಕಣ್ಣುಗಳಿದ್ದರೂ ದೇವರನ್ನು ತಿಳಿಯುವ ವಿಷಯದಲ್ಲಿ ಏನೂ ಉಪಯೋಗವಿಲ್ಲ ಎಂದು ತಿಳಿಸಲು ಕೃಷ್ಣನನ್ನು ನಿಗಮೈಕವೇದ್ಯ ಎಂದು ಕರೆದಿದ್ದಾರೆ. ಇಂದ್ರನು ಅಸಮರ್ಥನಾದ ಎಂದು ತಿಳಿಸಲು 'ಸಹಸ್ರನೇತ್ರೋಽಪಿ' ಎಂಬ ಶಬ್ದದಿಂದ ಕರೆದಿದ್ದಾರೆ.

> **ಶತಕ್ರತೌ ವರ್ಷತಿ ವಾಸುದೇವೋ**
> **ಗಿರಿಂ ಸಮುದ್ಧೃತ್ಯ ಬಭೂವ ತೂಷ್ಣೀಮ್ ।**

**ಜಿಹೀರ್ಷುಭಿಃ ಸ್ವಾಸಮಶತ್ರುಶೌರ್ಯಂ**
**ತದಾದ್ಯವೈರ್ಯುದ್ಧರಣಂ ಹಿ ಕಾರ್ಯಮ್ ॥ ೫೭ ॥**

**ಶತಕ್ರತೌ** = ಇಂದ್ರನು, **ವರ್ಷತಿ** = ಮಳೆಗರೆಯುತ್ತಿರಲು, **ವಾಸುದೇವಃ** = ಕೃಷ್ಣನು, **ಗಿರಿಂ** = ಬೆಟ್ಟವನ್ನು, **ಸಮುದ್ಧೃತ್ಯ** = ಎತ್ತಿ, **ಬಭೂವ** = ಇದ್ದನು. **ತೂಷ್ಣೀಂ** = ಸುಮ್ಮನೆ, **ಜಿಹೀರ್ಷುಭಿಃ** = ಪರಿಹರಿಸುವ ಇಚ್ಛೆಯುಳ್ಳವರಿಂದ, **ಸ್ವ** = ತಮ್ಮ, **ಅಸಮ** = ಅಸದೃಶ (ಸಮನಲ್ಲದ), **ಶತ್ರು** = ಶತ್ರುಗಳ, **ಶೌರ್ಯಂ** = ಶಕ್ತಿಯನ್ನು, **ತತ್** = ಅವನ, **ಆದ್ಯ** = ಮೊದಲಿನ, **ವೈರಿ** = ಶತ್ರುವಿನ, **ಉದ್ಧರಣಂ** = ಎತ್ತುವಿಕೆಯು, **ಕಾರ್ಯಂ** = ಮಾಡಲ್ಪಡ- ಬೇಕು.

ಇಂದ್ರನು ಬಹಳ ಮಳೆಗರೆದ. ಆಗ ಕೃಷ್ಣನು ಬೆಟ್ಟವನ್ನು ಎತ್ತಿ ಸುಮ್ಮನೆ ನಿಂತನು. ಯಾಕೆ ಈ ರೀತಿ ಮಾಡಿದ? ಅಂದರೆ ರಾಜರು ಹೇಳುತ್ತಾರೆ – ಇಂದ್ರನು ಕೃಷ್ಣನಿಗೆ ಸಮನಲ್ಲ. ಆದರೂ ವಿರೋಧ ಮಾಡುತ್ತಿದ್ದಾನೆ. ಅಧಮ ವಿರೋಧಿಗಳನ್ನು ಎದುರಿಸುವ ಬಗೆ ಹೇಗೆಂದರೆ ಆ ವಿರೋಧಿಗಳ ಮೊದಲ ಶತ್ರುವನ್ನು ನಾವು ಚೆನ್ನಾಗಿ ಬೆಳಸಬೇಕು. ಆಗ ಅವರು ನಮ್ಮ ವಿರೋಧಿಗೆ ಉಪಟಳ ಮಾಡುತ್ತಿರುತ್ತಾರೆ. ಇದರಿಂದ ವಿರೋಧಿ ಶಾಂತ-ನಾಗುತ್ತಾನೆ. ಬೆಟ್ಟವು ಇಂದ್ರನ ಮೊದಲ ಶತ್ರು. ಆದ್ದರಿಂದ ಆ ಬೆಟ್ಟವನ್ನು ಇಂದ್ರನಿಗೆ ಮನದಟ್ಟು ಮಾಡಲು ಎತ್ತಿದನು.

ರಾಜರು ಇಲ್ಲಿ ಒಂದು ನೀತಿಯನ್ನು ತಿಳಿಸುತ್ತಾರೆ – ನಾವು ಎಂದೂ ದೇವರಿಂದ ವಿರೋಧ ಕಟ್ಟಿಕೊಳ್ಳಬಾರದು. ಕಟ್ಟಿಕೊಂಡರೆ ದೇವರು ನಮ್ಮ ವಿರೋಧಿಗಳನ್ನು ಬೆಳೆ-ಸುತ್ತಾನೆ ಎಂದು.

• • • •

**ಸಂದೇಶ**

**ನಿಗಮೈಕವೇದ್ಯೇ ಕಿಮಕ್ಷಿಬಾಹುಲ್ಯಮ್ ಉಪೈತಿ ಕೃತ್ಯಮ್**

ದೇವರು ವೇದದಿಂದಲೇ ಗಮ್ಯ. ಆತನನ್ನು ತಿಳಿಯಲು ಕಣ್ಣುಗಳು ಸಾವಿರ ಇದ್ದರೂ ಪ್ರಯೋಜನವಿಲ್ಲ. ಕಿವಿಗಳು ಸಾವಿರ ಬೇಕು.

---

**ಮಯೀಶ್ವರೇ ಭೂಭೃತಿ ಜಾಗರೂಕೇ**
**ಸ್ವಯಂ ಚ ಭೂಭೃತ್ಕಿಲ ಬುದ್ಧಿಶೂನ್ಯಃ।**
**ಸ ಇತ್ಯಮರ್ಷಾದಿವ ಭೂಧರೇಂದ್ರಂ**
**ಕರೇಣ ಭೂಮೇರುದಬೀಭಿದತ್ತಮ್ ॥ ೫೮ ॥**

**ಮಯಿ** = ನಾನು, **ಈಶ್ವರೇ** = ಸಮರ್ಥನಾದ, **ಭೂಭೃತಿ** = ಭೂಮಿಯನ್ನು ಧರಿಸಿದ,

**ಜಾಗರೂಕೇ** = ಇರುತ್ತಿರಲು, **ಸ್ವಯಂ** = ತಾನು, **ಭೂಭೃತ್** = ಭೂಧರನು, **ಬುದ್ಧಿಶೂನ್ಯಃ** = ಬುದ್ಧಿಯಿಲ್ಲದ, **ಸಃ** = ಕೃಷ್ಣನು, **ಇತಿ** = ಈ ರೀತಿಯಾಗಿ, **ಅಮರ್ಷಾದಿವ** = ಮತ್ಸರದಿಂದ ಎಂಬಂತೆ, **ಭೂಧರೇಂದ್ರಂ** = ಶ್ರೇಷ್ಠಪರ್ವತವನ್ನು, **ಕರೇಣ** = ಕೈಯಿಂದ, **ಭೂಮೇಃ** = ಭೂಮಿಯಿಂದ, **ಉದಬೀಭಿದತ್** = ಕಿತ್ತನು, **ತಂ** = ಆ.

ಭೂಧರ ಎಂಬ ಹೆಸರು ದೇವರಿಗೂ ಪರ್ವತಕ್ಕೂ ಇದೆ. ಅಂದರೆ ಭೂಮಿಯನ್ನು ಧರಿಸಿದವರು ಎಂದರ್ಥ. ಈ ಹೆಸರು ನಿಜವಾಗಿ ಯಾರಲ್ಲಿ? ಪರ್ವತದಲ್ಲೋ, ದೇವರಲ್ಲೋ? ಎಂದು ಜನರಿಗೆ ತಿಳಿಸಬೇಕಾಗಿದೆ. ಒಂದು ವೇಳೆ ಪರ್ವತಕ್ಕೆ ಈ ಹೆಸರು ನಿಜವಾದಲ್ಲಿ ಬೆಟ್ಟ ಇಲ್ಲವಾದಾಗ ಭೂಮಿಯು ಕುಸಿಯಬೇಕು. ಆದರೆ ಕುಸಿಯುವುದಿಲ್ಲ. ಆದ್ದರಿಂದ ಬೆಟ್ಟಕ್ಕೆ ಈ ಹೆಸರು ಸಾರ್ಥಕವಲ್ಲ. ಆದರೂ ಮೂರ್ಖವಾದ ಬೆಟ್ಟವು ಈ ಹೆಸರನ್ನು ಇಟ್ಟುಕೊಂಡಿದೆ ಎಂದು ತಿಳಿಸಲು ದೇವರು ಬೆಟ್ಟವನ್ನು ಭೂಮಿಯಿಂದ ಕಿತ್ತ. ಕೃಷ್ಣನಾದರೂ ಕೂರ್ಮರೂಪದಿಂದ ಕುಸಿಯುತ್ತಿರುವ ಭೂಮಿಯನ್ನು ಎತ್ತಿ ತನಗೆ ಆ ನಾಮವು ನಿಜ ಎಂದು ತೋರಿಸಿದನು. ಯೋ ದೇವಾನಾಂ ನಾಮಧಾ ಏಕ ಏವ ಎಂಬ ವೇದದ ಅರ್ಥವನ್ನು ರಾಜರು ಈ ಮೂಲಕ ದೃಢಪಡಿಸಿದರು.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**
**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗೋ ಮುದಾಂ ಪಂಚಮಃ ॥ ೫೯**

**॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಕ್ಮಿಣೀಶವಿಜಯೇ ಪಂಚಮಃ ಸರ್ಗಃ ॥೫॥**

ಈ ಗ್ರಂಥವು ರೋಮಾಂಚಕಾರಿ. ಶ್ರವಣದಿಂದ ಪಾಪವನ್ನು ಪರಿಹರಿಸುತ್ತದೆ. ಭಕ್ತಿಯಿಂದ ಚಿಂತಿಸುವವರಿಗೆ ನಾನಾ ರೀತಿಯ ಒಳ್ಳೆಯ, ಯೋಗ್ಯವಾದ ಅರ್ಥವನ್ನು ಕೊಡುತ್ತದೆ. ಕೃಷ್ಣಾವತಾರ ಆದಾಗ ಒಂದು ಸಂತೋಷ ದೇವತೆಗಳಿಗೆ ಆಗಿತ್ತು. ದೇವತೆ-ಗಳಿಗೆ ಐದನೆಯ ಆನಂದವಾಯಿತು. ಕಾವ್ಯದಲ್ಲಿ ಐದನೆಯ ಸರ್ಗವೂ ಮುಗಿಯಿತು.

* * * *

## ಷಷ್ಠಃ ಸರ್ಗಃ

**ಮಹೇಂದ್ರವಿಜ್ಞಪ್ತಘನಾಲಿಮುಕ್ತ-**
**ಪಯಃಪ್ರವಾಹಾವೃತಭಿನ್ನಭಾಗಮ್ ।**
**ಮುಕುಂದಹಸ್ತೋದ್ಧೃತಮದ್ರಿರಾಜ-**
**ಮನುದ್ಧೃತಂ ತಂ ಮನುಜಾ ವ್ಯಜಾನನ್ ॥ ೧ ॥**

**ಮಹೇಂದ್ರ** = ಇಂದ್ರನಿಂದ, **ಆಜ್ಞಪ್ತ** = ಆಜ್ಞಾಪಿಸಲ್ಪಟ್ಟ, **ಘನ** = ಮೋಡಗಳ, **ಆಲಿ** = ಸಮೂಹದಿಂದ, **ಮುಕ್ತ** = ಬಿಡಲ್ಪಟ್ಟ, **ಪಯಃ** = ನೀರಿನ, **ಪ್ರವಾಹ** = ಪ್ರವಾಹದಿಂದ, **ಆವೃತ** = ಮುಚ್ಚಿದ, **ಭಿನ್ನ** = ತುಂಡಾದ, **ಭಾಗಂ** = ಭಾಗವುಳ್ಳ, **ಮುಕುಂದ** = ದೇವರ, **ಹಸ್ತ** = ಕೈಯಿಂದ, **ಉದ್ಧೃತಂ** = ಎತ್ತಲ್ಪಟ್ಟ, **ಅದ್ರಿರಾಜಂ** = ಬೆಟ್ಟವನ್ನು, **ಅನುದ್ಧೃತಂ** = ಎತ್ತದೇ ಇದ್ದದ್ದನ್ನು, **ತಂ** = ಆ, **ಮನುಜಾಃ** = ಜನರು, **ವ್ಯಜಾನನ್** = ತಿಳಿದರು.

ಇಂದ್ರನ ಆದೇಶದಂತೆ ಮೋಡಗಳು ಬಹಳ ಮಳೆಗರೆದವು. ಎಷ್ಟು ಮಳೆ ಬಂತೆಂದರೆ, ಕೃಷ್ಣ ಯಾವ ಭಾಗದಲ್ಲಿ ಬೆಟ್ಟವನ್ನು ಕಿತ್ತಿದ್ದನೋ ಆ ಎಲ್ಲಾ ಭಾಗದಲ್ಲಿಯೂ ನೀರು ಆವರಿಸಿತು. ಕಿತ್ತ ಭಾಗವೇ ಕಾಣಲಿಲ್ಲ. ಆದ್ದರಿಂದ ಜನರು ಕೃಷ್ಣನು ಬೆಟ್ಟವನ್ನು ಕೀಳಲೇ ಇಲ್ಲವೇನೋ ಎಂದು ಭ್ರಮಿಸುವಂತೆ ಆಯಿತು.

**ವರ್ಷಾಸು ವರ್ಷಸಹತಾಮಧಿಗಮ್ಯ ವಾರ್ಷು**
**ತಪ್ತುಂ ತಪಃ ಕೃತಪದಸ್ಯ ಪದಂ ಪ್ರಪೇದೇ ।**
**ಶರ್ಮಾನ್ಯಜನ್ಮನಿ ಸಿಷಾಧಯಿಷೋರ್ಮಹೀಧ್ರೋ**
**ಹೃನ್ಮಧ್ಯಲಬ್ಧಪರಮಸ್ಯ ತದೋಪಮಾಯಾಃ ॥ ೨ ॥**

**ವರ್ಷಾಸು** = ಮಳೆಬರುವ ಕಾಲದಲ್ಲಿ, **ವರ್ಷಸಹತಾಂ** = ಮಳೆಯ ಸಹನೆಯನ್ನು, **ಅಧಿಗಮ್ಯ** = ಹೊಂದಿ, **ವಾರ್ಷು** = ನೀರಿನಲ್ಲಿ, **ತಪ್ತುಂ** = ಮಾಡಲು, **ತಪಃ** = ತಪಸ್ಸನ್ನು, **ಕೃತಪದಸ್ಯ** = ತಯಾರಾದ, **ಪದಂ** = ಸ್ಥಾನವನ್ನು, **ಪ್ರಪೇದೇ** = ಹೊಂದಿತು, **ಶರ್ಮ** = ಸುಖವನ್ನು, **ಅನ್ಯಜನ್ಮನಿ** = ಇನ್ನೊಂದು ಜನ್ಮದಲ್ಲಿ, **ಸಿಷಾಧಯಿಷೋಃ** = ಸಾಧಿಸಲು ಇಚ್ಛಿಸುವ, **ಮಹೀಧ್ರಃ** = ಬೆಟ್ಟವು, **ಹೃತ್** = ಹೃದಯದ, **ಮಧ್ಯ** = ಮಧ್ಯದಲ್ಲಿ, **ಲಬ್ಧ** = ಇರುವ, **ಪರಮಸ್ಯ** = ದೇವರುಳ್ಳ ಋಷಿಯ, **ತದಾ** = ಆಗ, **ಉಪಮಾಯಾಃ** = ಹೋಲಿಕೆಯ.

ಈ ಪರ್ವತವನ್ನು ಕಂಡಾಗ ಒಬ್ಬ ಧ್ಯಾನ ಮಾಡುವ ಋಷಿಯಂತೆ ಕಾಣುತ್ತಿತ್ತು. ಋಷಿಯು ಜಲಮಧ್ಯದಲ್ಲಿ ಇರುತ್ತಾನೆ. ತಲೆಗೆ ಮಳೆಯು ಬೀಳುತ್ತಿರುತ್ತದೆ. ಒಳಗೆ

ಹೃದಯದಲ್ಲಿ ದೇವರು ಇರುತ್ತಾನೆ. ಋಷಿಯ ಉದ್ದೇಶ ಜನ್ಮಾಂತರದಲ್ಲಿ ಸುಖದ ಪ್ರಾಪ್ತಿಯ ಅಪೇಕ್ಷೆ ಇರುತ್ತದೆ. ಈ ಬೆಟ್ಟವು ನೀರಿನಲ್ಲಿ ಇದೆ. ಮೇಲಿಂದ ಮಳೆಯು ಬೀಳು-ತ್ತಿದೆ. ಒಳಗಿನಿಂದ ಕೃಷ್ಣನು ಇದ್ದಾನೆ. ಆದ್ದರಿಂದ ಇದೂ ಕೂಡಾ ಜನ್ಮಾಂತರದಲ್ಲಿ ಸುಖ ಪಡೆಯುವ ಸಲುವಾಗಿ ತಪಸ್ಸು ಮಾಡುವಂತೆ ತೋರುತ್ತಿದೆ.

ಇದು ಋಜುಗಳ ಸ್ವಭಾವ. ಋಜುಗಳು ಎಲ್ಲಾ ಕಡೆಯೂ ದೇವರನ್ನೇ ಕಾಣುವವರು. ರಾಜರು ಋಜುಗಳಾದ್ದರಿಂದ ತಾನೂ ದೇವರನ್ನೇ ಕಾಣುತ್ತಿದ್ದಾರೆ.

• • • •

**ಸಂದೇಶ**

**ನನರ್ತಿ ಸುಹೃದಾಗಮನೇ ನರಃ**

ಆತ್ಮೀಯರು ಬಂದಾಗ ಎಲ್ಲರೂ ಕುಣಿದಾಡುತ್ತಾರೆ

**ಅಂತಃ ಕೃಪಾವಿಪುಲಧಾರವಿಲೋಚನಶ್ರೀ-**
**ಕಾಂತಾಖ್ಯಮೇಘವಿಭವೇಕ್ಷಣಲೋಲನೇತ್ರೈಃ।**
**ಸಂತೋಷಹೇತುಷು ಗುಹಾಸು ಗತೈಃ ಸ ಸತ್ವೈಃ**
**ಕ್ರಾಂತೋ ಬಹಿಶ್ಚ ಘನದರ್ಶಿಭಿರದ್ರಿರಾಸೀತ್ ॥ ೩ ॥**

**ಅಂತಃ** = ಒಳಗೆ, **ಕೃಪಾ** = ದಯೆಯೆಂಬ, **ವಿಪುಲ** = ಬಹಳ, **ಧಾರ** = ಮಳೆಯುಳ್ಳ, **ವಿಲೋಚನ** = ಕಣ್ಣುಗಳುಳ್ಳ, **ಶ್ರೀಕಾಂತಾಖ್ಯ** = ಕೃಷ್ಣನೆಂಬ, **ಮೇಘ** = ಮೋಡದ, **ವಿಭವ** = ವೈಭವದ, **ಈಕ್ಷಣ** = ನೋಡುವಿಕೆಯಲ್ಲಿ, **ಲೋಲ** = ಚಂಚಲವಾದ, **ನೇತ್ರೈಃ** = ಕಣ್ಣುಗಳುಳ್ಳ, **ಸಂತೋಷಹೇತುಷು** = ಆನಂದಕ್ಕೆ ಕಾರಣವಾದ, **ಗುಹಾಸು** = ಗುಹೆ-ಗಳಲ್ಲಿ, **ಗತೈಃ** = ಇರುವ, **ಸಃ** = ಆ, **ಸತ್ವೈಃ** = ಪ್ರಾಣಿಗಳಿಂದ, **ಕ್ರಾಂತಃ** = ಕೂಡಿದ್ದು, **ಬಹಿಶ್ಚ** = ಹೊರಗೂ, **ಘನ- ದರ್ಶಿಭಿಃ** = ಮೋಡವನ್ನು ನೋಡುವ, **ಅದ್ರಿಃ** = ಬೆಟ್ಟವು, **ಆಸೀತ್** = ಆಯಿತು.

ಈ ಬೆಟ್ಟದಲ್ಲಿ ಒಂದು ವಿಶೇಷ ಇತ್ತು. ಇದು ತನ್ನ ಒಳಗೆ ಹೊರಗೆ ಇರುವ ಎಲ್ಲರಿಗೂ ಮೋಡಗಳ ದರ್ಶನವನ್ನು ಮಾಡಿಸುತ್ತಿತ್ತು. ಹೊರಗಿರುವವರು ಮೋಡದ ದರ್ಶನ ಮಾಡುವುದು ಸಹಜ. ಒಳಗೆ ಗುಹೆಗಳಲ್ಲಿ ಇರುವವರು ಮೋಡಗಳನ್ನು ಹೇಗೆ ಕಂಡರು ಎಂಬುದನ್ನು ರಾಜರು ವರ್ಣಿಸುತ್ತಾರೆ. ಕೃಷ್ಣನು ಬೆಟ್ಟದ ಒಳಗೆ ಇದ್ದಾನೆ. ಆತನ ಮೈಬಣ್ಣ ಮೋಡದಂತೆ ನೀಲ. ಆದ್ದರಿಂದ ಕೃಷ್ಣನೇ ಮೋಡ. ಈತನು ತನ್ನ ಕಣ್ಣುಗಳಿಂದ ದಯೆಯನ್ನು ಗೊಲ್ಲರಲ್ಲಿ ಮಳೆಯಂತೆ ಸುರಿಸುತ್ತಿದ್ದಾನೆ. ಈ ರೀತಿಯಾಗಿ ಬೆಟ್ಟದ ಗುಹೆ-ಯಲ್ಲಿ ಇರುವವರು ಕೃಷ್ಣನೆಂಬ ಮೋಡವನ್ನು ಕಂಡರು.

ಈ ಶ್ಲೋಕದಲ್ಲಿ ರಾಜರು ಗುಹಾಸು ಎಂಬ ಶಬ್ದವನ್ನು ಪ್ರಯೋಗಿಸಿದ್ದಾರೆ. ಇದರ ಅಭಿಪ್ರಾಯ ಹೃದಯಗುಹೆಯಲ್ಲಿ ಇರುವವರು ಯಾವಾಗಲೂ ಭಗವಂತನನ್ನೇ ಕಾಣುವವರು. ಜೀವರು ಗಾಢ ನಿದ್ರೆಯಲ್ಲಿ ಹೃದಯಗುಹೆಯಲ್ಲಿ ಪ್ರಾಜ್ಞರೂಪೀ ಪರಮಾತ್ಮನನ್ನೇ ನೋಡಿಕೊಂಡು ಇರುವರು.

**ಸುವರ್ಣಶೃಂಗೈಃ ಕಲಶೋಪಮಾನೈಃ**
**ಮೃಗಾದಿಭಿಃ ಕೃತ್ರಿಮಸನ್ನಿಭೈಶ್ಚ।**
**ಗುಹೋಲ್ಲಸದ್ವಾರಗಣೈಃ ಸಮಂತಾತ್**
**ವೃತೋ ಗಿರಿರ್ಗೋಪುರತೀವ ವಿಷ್ಣೋಃ ॥ ೪ ॥**

**ಸುವರ್ಣಶೃಂಗೈಃ** = ಚಿನ್ನದ ಶಿಖರಗಳಿಂದ, **ಕಲಶೋಪಮಾನೈಃ** = ಕಲಶದಂತೆ ಇರುವ, **ಮೃಗಾದಿಭಿಃ** = ಪ್ರಾಣಿಗಳೇ ಮೊದಲಾದ್ದರಿಂದ, **ಕೃತ್ರಿಮಸನ್ನಿಭೈಶ್ಚ** = ಕೃತಕದಂತೆ ಇರುವ, **ಗುಹಾ** = ಗುಹೆಗಳೆಂಬ, **ಉಲ್ಲಸತ್** = ಶೋಭಿಸುವ, **ದ್ವಾರಗಣೈಃ** = ಬಾಗಿಲುಗಳ ಸಮೂಹದಿಂದ, **ಸಮಂತಾತ್** = ಸುತ್ತಲೂ, **ವೃತಃ** = ಕೂಡಿದ, **ಗಿರಿಃ** = ಬೆಟ್ಟವು, **ಗೋಪುರತೀವ** = ಗೋಪುರದಂತಿದೆ, **ವಿಷ್ಣೋಃ** = ದೇವರ.

ಎತ್ತಿದ ಬೆಟ್ಟವು ಶ್ರೀಕೃಷ್ಣದೇವಳದ ಗೋಪುರದಂತೆ ಕಾಣುತ್ತಿತ್ತು. ಗೋಪುರದಲ್ಲಿ ಶಿಖರಗಳಿವೆ. ಪ್ರಾಣಿಗಳ ಗೊಂಬೆಗಳಿವೆ. ಹಾಗೆಯೇ ನಾಲ್ಕೂ ಬದಿಯೂ ಬಾಗಿಲುಗಳಿವೆ. ಈ ಬೆಟ್ಟದಲ್ಲಿ ಸುವರ್ಣ ಶಿಖರಗಳಿವೆ. ಈ ಗೋವರ್ಧನ ಬೆಟ್ಟದ ತುದಿಭಾಗವು ಮೇರುವಿನ ತುದಿಯಂತೆ ಚಿನ್ನದ್ದು. ಈ ಬೆಟ್ಟದಲ್ಲಿರುವ ಪ್ರಾಣಿಗಳು ಚಳಿಗೆ ಸ್ತಬ್ಧವಾಗಿ ಗೊಂಬೆಗಳಂತೆ ನಿಂತಿವೆ. ನಾಲ್ಕೂ ಬದಿಗಳಲ್ಲಿಯೂ ಗುಹೆಗಳಿವೆ. ಇವುಗಳೇ ದ್ವಾರಗಳು. ದೇವಳದಲ್ಲಿ ಗೋಪುರದ ಕೆಳಗೆ ದೇವರು ಇರುತ್ತಾನೆ. ಇಲ್ಲಿ ದೇವರು ಕೃಷ್ಣ ಇದ್ದಾನೆ.

**ಬಭೌ ಸಮುತ್ತುಂಗನಗಂ ದಧಾನಃ**
**ಸ ಭಾವಿಮಲ್ಲೇಂದ್ರಜಯೋಪಯೋಗಿ।**
**ತದೀಯವಿದ್ಯಾಭ್ಯಸನಂ ವಿಧಾತುಂ**
**ಶಿಲೋಚ್ಚಯಂ ಬಿಭ್ರದಿವಾಭ್ರಲಗ್ನಮ್ ॥ ೫ ॥**

ಬಭೌ = ಶೋಭಿಸಿದನು, ಸಮುತ್ತುಂಗ = ಎತ್ತರದ, ನಗಂ = ಬೆಟ್ಟವನ್ನು, ದಧಾನಃ = ಹೊತ್ತ, ಸಃ = ಕೃಷ್ಣನು, ಭಾವಿ = ಮುಂದಿನ, ಮಲ್ಲೇಂದ್ರ = ದೊಡ್ಡಮಲ್ಲನ, ಜಯ = ಜಯಕ್ಕೆ, ಉಪಯೋಗಿ = ಅನುಕೂಲವಾದ, ತದೀಯ = ಅದಕ್ಕೆ ಸಂಬಂಧಿಸಿದ,

**ವಿದ್ಯಾಭ್ಯಸನಂ** = ಅಭ್ಯಾಸವನ್ನು, **ವಿಧಾತುಂ** = ಮಾಡಲು, **ಶಿಲೋಚ್ಚಯಂ** = ದೊಡ್ಡ ಬಂಡೆಯನ್ನು, **ಬಿಭ್ರತ್ ಇವ** = ಎತ್ತುವವನಂತೆ, **ಅಭ್ರಲಗ್ನಂ** = ಗಗನಚುಂಬಿಯಾದ.

ಈ ಬೆಟ್ಟವನ್ನು ಎತ್ತಲು ರಾಜರು ಕಾರಣವನ್ನು ಊಹಿಸುತ್ತಾರೆ – ಮಲ್ಲಯುದ್ಧ ಆರಂಭವಾಗುವ ಪೂರ್ವದಲ್ಲಿ ಮಲ್ಲರು ದೊಡ್ಡ ದೊಡ್ಡ ಬಂಡೆಗಳನ್ನು ಎತ್ತಿ ಆಚೆ ಈಚೆ ಅಲುಗಾಡಿಸುವುದು ಸಹಜ. ಇದು ಮಲ್ಲಯುದ್ಧಕ್ಕೆ ಸಿದ್ಧತೆ ನಡೆಸುವ ಅಭ್ಯಾಸಕ್ರಮ. ಕೃಷ್ಣನೂ ಮುಂದೆ ಚಾಣೂರನೊಡನೆ ಮುಷ್ಟಿಯುದ್ಧ ಮಾಡಲು ಇದೆ. ಅದರ ಅಭ್ಯಾಸಕ್ಕಾಗಿ ಈಗ ಈ ಬೆಟ್ಟವನ್ನು ಎತ್ತಿದಂತೆ ತೋರುತ್ತದೆ. ಯಾಕೆಂದರೆ ಗೊಲ್ಲರ ರಕ್ಷಣೆ ಬೇರೆ ರೀತಿಯಲ್ಲೂ ಆಗುತ್ತಿತ್ತು. ಬೆಟ್ಟವನ್ನೇ ಎತ್ತಬೇಕೆಂದಿಲ್ಲ.

ನಾವು ಮಾಡುವ ಕೆಲಸದಲ್ಲಿ ಎಷ್ಟು ಪಳಗಿದ್ದರೂ ಪೂರ್ವಾಭ್ಯಾಸ ಅಗತ್ಯ ಎಂಬುದನ್ನು ರಾಜರು ತೋರಿಸುತ್ತಾರೆ.

**ಕೃಷ್ಣಧೃತಃ ಸುರವಿಸ್ಮಯಕಾರೀ ವಿಸ್ತೃತಪುಷ್ಕರಮಧ್ಯಗತಾರ್ದ್ರಃ ।**
**ಸಿಂಧುಕಬಂಧಸಮುದ್ಧೃತಭಾಸ್ವನ್ಮಂದರಕಾಂತಿಮಚೂಚುರದದ್ರಿಃ ॥ ೬ ॥**

**ಕೃಷ್ಣಧೃತಃ** = ಕೃಷ್ಣನಿಂದ ಎತ್ತಲ್ಪಟ್ಟ, **ಸುರ** = ದೇವತೆಗಳಿಗೆ, **ವಿಸ್ಮಯ** = ಆಶ್ಚರ್ಯವನ್ನು, **ಕಾರೀ** = ಮಾಡುವ, **ವಿಸ್ತೃತ** = ವಿಶಾಲವಾದ, **ಪುಷ್ಕರ** = ನೀರಿನ, **ಮಧ್ಯ** = ಮಧ್ಯದಲ್ಲಿ, **ಗತ** = ಇರುವ, **ಆರ್ದ್ರಃ** = ಒದ್ದೆಯಾದ, **ಸಿಂಧು** = ಸಮುದ್ರದ, **ಕಬಂಧ** = ನೀರಿನಿಂದ, **ಸಮುದ್ಧೃತ** = ಎದ್ದಿರುವ, **ಭಾಸ್ವತ್** = ಶೋಭಿಸುವ, **ಮಂದರ** = ಮಂದರಪರ್ವತದ, **ಕಾಂತಿಂ** = ಶೋಭೆಯನ್ನು, **ಅಚೂಚುರತ್** = ಅಪಹರಿಸಿತು, **ಅದ್ರಿಃ** = ಪರ್ವತವು.

ಸಮುದ್ರಮಥನಕಾಲದಲ್ಲಿ ಮಂದರವು ಸಮುದ್ರದ ವಿಶಾಲ ನೀರಿನ ಮಧ್ಯದಲ್ಲಿ ಇತ್ತು. ಕೂರ್ಮರೂಪೀ ದೇವರು ಅದನ್ನು ಎತ್ತಿದ್ದ. ನೀರಿನಲ್ಲಿ ಇರುವುದರಿಂದ ಒದ್ದೆಯೂ ಆಗಿತ್ತು. ಈ ದೃಶ್ಯದಿಂದ ದೇವತೆಗಳು ಬಹಳ ಆಶ್ಚರ್ಯಪಟ್ಟಿದ್ದರು. ಆ ಸಂದರ್ಭದಲ್ಲಿ ದೇವತೆಗಳೂ ದೈತ್ಯರೂ ಇಬ್ಬರೂ ಇದ್ದರು. ಅದೇ ಹೋಲಿಕೆ ಈ ಬೆಟ್ಟಕ್ಕೆ ಇದೆ. ಈ ಬೆಟ್ಟವು ನೀರಿನಲ್ಲಿ ಇದೆ. ಕೃಷ್ಣನಿಂದ ಎತ್ತಲ್ಪಟ್ಟಿದೆ. ಮಳೆಯಿಂದ ಒದ್ದೆಯಾಗಿದೆ. ಈ ಘಟನೆಯಿಂದ ದೇವತೆಗಳು ಆಶ್ಚರ್ಯ ಪಟ್ಟಿದ್ದಾರೆ. ಇಲ್ಲಿ ದೇವತೆಗಳಲ್ಲಿಯೇ ಅಸುರರು ಇದ್ದಾರೆ. ಅಂದರೆ ಈ ಸಮಯದಲ್ಲಿ ಕೆಲವು ದೇವತೆಗಳಿಗೆ ಅಸುರಾವೇಶ ಆಗಿದೆ. ಈ ರೀತಿಯಾಗಿ ಮಂದರಪರ್ವತದಂತೆ ಈ ಬೆಟ್ಟವು ಮೆರೆಯಿತು.

**ಅನುಚಕ್ರೇಽಂಭಸಾಂಚಕ್ರೇ ಲಸತಾ ತೇನ ಭೂಭೃತಾ ।**
**ತಿತೀರ್ಷೋರ್ವ್ರಜವರ್ಗಸ್ಯ ಶಮಿತೋಪಪ್ಲವಃ ಪ್ಲವಃ ॥ ೭ ॥**

**ಅನುಚಕ್ರೇ** = ಅನುಕರಿಸಲ್ಪಟ್ಟಿತು, **ಅಂಭಸಾಂ** = ನೀರಿನ, **ಚಕ್ರೇ** = ಸಮೂಹದಲ್ಲಿ, **ಲಸತಾ** = ಶೋಭಿಸುವ, **ತೇನ** = ಆ, **ಭೂಭೃತಾ** = ಬೆಟ್ಟದಿಂದ, **ತಿತೀರ್ಷೋಃ** = ದಾಟಲು ಇಚ್ಛಿಸುವ, **ವ್ರಜವರ್ಗಸ್ಯ**= ಗೊಲ್ಲರ ಸಮೂಹಕ್ಕೆ, **ಶಮಿತ** = ಕಮ್ಮಿಯಾದ, **ಉಪಪ್ಲವ** = ಉಪದ್ರವವುಳ್ಳ, **ಪ್ಲವಃ** = ದೋಣಿಯು.

ಈ ಬೆಟ್ಟವು ಮಳೆಗಾಲದ ದೋಣಿಯಂತೆ ಇತ್ತು. ದೋಣಿಯು ನೀರಿನಲ್ಲಿ ಇರುತ್ತೆ. ನಮಗೆ ದಾಟಲು ಅನುಕೂಲವಾಗಿರುತ್ತೆ. ದೋಣಿಯ ಒಳಗೆ ಮಳೆಯ ನೀರು ಬೀಳ-ಬಾರದೆಂದು ತೆಂಗಿನ ಗರಿಗಳಿಂದ ಮಾಡು ಮಾಡುತ್ತಾರೆ. ಅದು ಒಂದು ರೀತಿ ಬೆಟ್ಟದಂತೆ ಮಧ್ಯದಲ್ಲಿ ಎತ್ತರವಾಗಿ ಇರುತ್ತೆ. ಈ ಬೆಟ್ಟವೂ ನೀರಿನಲ್ಲಿ ಇದೆ. ಈ ಗೊಲ್ಲರಿಗೆ ಭಯದಿಂದ ದಾಟಲು ಸಹಕಾರಿಯಾಗಿದೆ. ಈ ಬೆಟ್ಟದ ಒಳಗೆ ಇರುವವರಿಗೆ ಮಳೆಯ ಉಪದ್ರವ ಆಗಬಾರದೆಂದು ಈ ಬೆಟ್ಟವೇ ಸ್ವಯಂ ತೆಂಗಿನ ಗರಿಯ ಮಾಡಿನಂತೆ ಇದೆ.

**ಖಗಾನ್ ಸವೃಷ್ಟೇರ್ದ್ರುಮಕೋಟರೇಷು**
**ಮೃಗಾನ್ ಜುಗೋಪ ಸ್ವಗುಹಾಗೃಹೇಷು ।**
**ಮುನೀನ್ ಘನಾತ್ಯುಚ್ಛ್ರಿತಮೇಖಲಾಸು**
**ವಿಪತ್ಸು ಕಃ ಸ್ವೀಯಮುಪೇಕ್ಷತೇಽಗ್ರ್ಯಃ ॥೮॥**

**ಖಗಾನ್** = ಪಕ್ಷಿಗಳನ್ನು, **ಸಃ** = ಪರ್ವತವು, **ವೃಷ್ಟೇಃ** = ಮಳೆಯಿಂದ, **ದ್ರುಮ** = ಮರ-ಗಳ, **ಕೋಟರೇಷು** = ಪೊಟರೆಗಳಲ್ಲಿ, **ಮೃಗಾನ್** = ಪ್ರಾಣಿಗಳನ್ನು, **ಜುಗೋಪ** = ರಕ್ಷಿಸಿತು. **ಸ್ವ** = ತನ್ನ, **ಗುಹಾ** = ಗುಹೆಗಳೆಂಬ, **ಗೃಹೇಷು** = ಮನೆಗಳಲ್ಲಿ, **ಮುನೀನ್** = ಋಷಿಗಳನ್ನು, **ಘನ** = ಮೋಡದಿಂದ, **ಅತ್ಯುಚ್ಛ್ರಿತ** = ಎತ್ತರವಾದ, **ಮೇಖಲಾಸು** = ತೊಗಟೆಗಳಲ್ಲಿ, **ವಿಪತ್ಸು** = ಆಪತ್ತುಗಳಲ್ಲಿ, **ಕಃ** = ಯಾರು, **ಸ್ವೀಯಂ** = ತನ್ನವರನ್ನು, **ಉಪೇಕ್ಷತೇ** = ಕಡೆಗಣಿಸುತ್ತಾರೆ, **ಅಗ್ರ್ಯಃ** = ಶ್ರೇಷ್ಠರಾದ.

ಆ ಸಂದರ್ಭದಲ್ಲಿ ಪಕ್ಷಿಗಳು ಮರಗಳ ಪೊಟರೆಗಳಲ್ಲಿ, ಪ್ರಾಣಿಗಳು ಬೆಟ್ಟದ ಗುಹೆಗಳಲ್ಲಿ ಹಾಯಾಗಿದ್ದವು. ಋಷಿಗಳು ಈ ಬೆಟ್ಟದ ಮರಗಳ ತೊಗಟೆಗಳಿಂದ ರಕ್ಷಣೆ ಮಾಡಿಕೊಂಡರು. ಈ ರೀತಿ ಬೆಟ್ಟವು ಆಪತ್ತಿನ ಸಮಯದಲ್ಲಿ ಎಲ್ಲರಿಗೂ ಆಶ್ರಯ ಕೊಟ್ಟಿತು. ದೊಡ್ಡವರು ಕಷ್ಟಕಾಲದಲ್ಲಿ ತನ್ನನ್ನು ನಂಬಿದವರನ್ನು ಬಿಟ್ಟುಹಾಕುವುದಿಲ್ಲ.

ಪ್ರಸೂನಕೋಶೈರ್ಘನವರ್ಷಪಾತ-
ನಿಪಾತಿತೈರಂಕಿತಸರ್ವಗಾತ್ರಃ ।
ಮುಕುಂದಹಸ್ತಾಂಬುಜಸಂಗಸೌಖ್ಯ-
ಪ್ರಹೃಷ್ಟರೋಮಾಲಿರಿವಾದ್ರಿರಾಸ್ತೇ ॥೯॥

**ಪ್ರಸೂನ** = ಪುಷ್ಪಗಳ, **ಕೋಶೈಃ** = ಮೊಗ್ಗುಗಳಿಂದ, **ಘನ** = ಬಹಳವಾದ, **ವರ್ಷ** = ಮಳೆಯ, **ಪಾತ** = ಸುರಿಯುವಿಕೆಯಿಂದ, **ನಿಪಾತಿತೈಃ** = ಬಿದ್ದಿರುವ, **ಅಂಕಿತ** = ಚಿಹ್ನಿತವಾದ, **ಸರ್ವಗಾತ್ರಃ** = ಎಲ್ಲಾ ಶರೀರವುಳ್ಳ, **ಮುಕುಂದ** = ದೇವರ, **ಹಸ್ತಾಂಬುಜ** = ಕರಕಮಲದ, **ಸಂಗ** = ಸಂಬಂಧದ, **ಸೌಖ್ಯ** = ಸುಖದಿಂದ, **ಪ್ರಹೃಷ್ಟ**= ನೆಟ್ಟಗಾದ, **ರೋಮ** = ರೋಮ- ಗಳ, **ಆಲಿಃ ಇವ** = ಸಮೂಹದಂತೆ, **ಅದ್ರಿಃ** = ಪರ್ವತವು, **ಆಸ್ತೇ** = ಇದೆ.

ಮಳೆಯ ರಭಸಕ್ಕೆ ಮರಗಿಡಗಳಲ್ಲಿರುವ ಕುಸುಮಗಳು ಉದುರುತ್ತಿವೆ. ಈ ದೃಶ್ಯ ಇಡೀ ಪರ್ವತದಲ್ಲಿ ಕಾಣುತ್ತದೆ. ಒಂದು ಲೀಲೆಯಲ್ಲಿ ಪರ್ವತವು ರೋಮಾಂಚ-ಗೊಂಡಂತೆ ತೋರುತ್ತಿದೆ. ರೋಮಾಂಚಗೊಂಡಾಗ ಮೈಯ ರೋಮಗಳು ನೆಟ್ಟಗಾಗು-ವುದು ಸಹಜ. ಈ ಉದುರುವ ಕುಸುಮಗಳು ರೋಮಗಳಂತೆ ತೋರುತ್ತಿವೆ. ರೋಮಾಂಚಗೊಳ್ಳಲು ಕಾರಣ - ದೇವರ ಕರಕಮಲದ ಸಂಬಂಧ ಈ ಬೆಟ್ಟಕ್ಕೆ ಆಗುತ್ತಿದೆ. ದೊಡ್ಡವರ ಸ್ಪರ್ಶ ನಮಗೆ ಆದಾಗ ಹೀಗೆ ಆಗುತ್ತದೆ.

ಸ ಭೂಧರಃ ಸಾಶನಿವರ್ಷಪಾತ-
ಸಮಾಹತೋಽಪ್ಯಣ್ವಪಿ ನೋ ಚಕಂಪೇ ।
ತಥಾಹಿ ಗೋಬ್ರಾಹ್ಮಣರಕ್ಷಕಸ್ಯ
ಕ್ವ ಕೃಷ್ಣದೋರ್ದಂಡಧೃತಸ್ಯ ಕಂಪಃ ॥೧೦॥

**ಸಃ** = ಆ, **ಭೂಧರಃ** = ಬೆಟ್ಟವು, **ಸಾಶನಿ** = ಗುಡುಗಿನಿಂದ ಕೂಡಿದ, **ವರ್ಷಪಾತ** = ಮಳೆಯ ಬೀಳುವಿಕೆಯಿಂದ, **ಸಮಾಹತೋಽಪಿ** = ಹೊಡೆಯಲ್ಪಟ್ಟರು, **ಅಣ್ವಪಿ** = ಸ್ವಲ್ಪವೂ, **ನೋ ಚಕಂಪೇ** = ಅಲುಗಾಡಲಿಲ್ಲ, **ತಥಾಹಿ** = ಅದು ಸರಿ, **ಗೋ** = ಆಕಳು, **ಬ್ರಾಹ್ಮಣ** = ಬ್ರಾಹ್ಮಣರ, **ರಕ್ಷಕಸ್ಯ** = ರಕ್ಷಕನಾದ, **ಕ್ವ** = ಎಲ್ಲಿ, **ಕೃಷ್ಣ** =ದೇವರ, **ದೋರ್ದಂಡ** = ಭುಜ- ದಂಡದಿಂದ, **ಧೃತಸ್ಯ** = ಎತ್ತಲ್ಪಟ್ಟ, **ಕಂಪಃ** = ನಡುಕವು.

ಇಂದ್ರನು ಗುಡುಗು, ಮಿಂಚುಗಳಿಂದ ಕೂಡಿದ ಭಾರೀ ಮಳೆಯನ್ನು ನಿರಂತರವಾಗಿ ಸುರಿಸಿದನು. ಆದರೂ ಈ ಬೆಟ್ಟವು ಸ್ವಲ್ಪವೂ ಅಲುಗಾಡಲಿಲ್ಲ. ನಿಶ್ಚಿಂತೆಯಿಂದ ಇತ್ತು.

ಇದಕ್ಕೆ ಕಾರಣ - ಈ ಬೆಟ್ಟವು ಗೋಬ್ರಾಹ್ಮಣರಿಗೆ ರಕ್ಷಣೆಯನ್ನು ಕೊಡುತ್ತಿದೆ. ಸ್ವಯಂ ತಾನು ಕೃಷ್ಣನ ರಕ್ಷಣೆಗೆ ಒಳಪಟ್ಟಿದೆ. ಇಂತಹವರು ಯಾರಿಗಾಗಿ ಏತಕ್ಕಾಗಿ ಹೆದರಬೇಕು?

**ಪಯಃ ಶ್ರಿತಸ್ವಪ್ರತಿಬಿಂಬಲೋಲಂ**
**ಪತತ್ಪ್ರಸೂನಾಂಚಿತಶೃಂಗಜಾಲಮ್ ।**
**ಸ್ವಕುಕ್ಷಿಮಧ್ಯಾರ್ಪಿತನಂದಬಾಲಂ**
**ಜನೋಽದ್ಭುತಂ ಸಂಪುಟಮಾಶಶಂಕೇ ॥ ೧೧ ॥**

**ಪಯಃ** = ನೀರಲ್ಲಿ, **ಶ್ರಿತ** = ಇರುವ, **ಸ್ವ** = ತನ್ನ, **ಪ್ರತಿಬಿಂಬ** = ಪ್ರತಿಬಿಂಬದಿಂದ, **ಲೋಲಂ** = ಚಂದದ, **ಪತತ್** = ಬಿದ್ದಿರುವ, **ಪ್ರಸೂನ** = ಪುಷ್ಪಗಳಿಂದ, **ಅಂಚಿತ** = ಪೂಜಿಸಲ್ಪಟ್ಟ, **ಶೃಂಗಜಾಲಂ** = ಶಿಖರಗಳ ಸಮೂಹವುಳ್ಳ, **ಸ್ವ** = ತನ್ನ, **ಕುಕ್ಷಿ** = ಉದರದ, **ಮಧ್ಯ** = ಮಧ್ಯದಲ್ಲಿ, **ಅರ್ಪಿತ** = ಇರುವ, **ನಂದಬಾಲಂ** = ದೇವರುಳ್ಳ, **ಜನ** = ಜನರು, **ಅದ್ಭುತಂ** = ಆಶ್ಚರ್ಯದ, **ಸಂಪುಟಂ** = ಸಂಪುಟವನ್ನಾಗಿ, **ಆಶಶಂಕೇ** = ಎಣಿಸಿದರು.

ಈ ಬೆಟ್ಟದ ಪ್ರತಿಬಿಂಬವು ನೀರಿನಲ್ಲಿ ತಲೆಕೆಳಗಾಗಿ ತೋರುತ್ತಿದೆ. ಬೆಟ್ಟದ ತುದಿಯಲ್ಲಿ ಮರದ ಪುಷ್ಪಗಳು ಉದುರಿವೆ. ಮಧ್ಯದಲ್ಲಿ ದೇವರು ಕೃಷ್ಣನಿದ್ದಾನೆ. ಒಂದು ರೀತಿ ಈ ಬೆಟ್ಟವು ಸಂಪುಟದಂತೆ ತೋರುತ್ತಿದೆ. ಸಂಪುಟದಲ್ಲಿಯೂ ಎರಡು ಭಾಗಗಳಿವೆ. ಒಳಗೆ ಶಾಲಿಗ್ರಾಮಗಳಿವೆ. ಮೇಲೆ ಪುಷ್ಪ ತುಳಸಿಗಳಿರುತ್ತವೆ. ಇಷ್ಟು ದೊಡ್ಡ ಸಂಪುಟ ಯಾವ ಮನೆಗಳಲ್ಲಿಯೂ ಇಲ್ಲ. ಆದ್ದರಿಂದ ಅದ್ಭುತ.

ರಾಜರಿಗೆ ಈ ಪರ್ವತವು ಸಂಪುಟದಂತೆ ತೋರಿದೆ. ಇದು ತನ್ನ ಋಜುತ್ವಕ್ಕೆ ಸೂಚನೆ. ಋಜುಗಳು ಬ್ರಹ್ಮಾಂಡವನ್ನೇ ಸಂಪುಟವನ್ನಾಗಿ ಮಾಡಿ ಸಾಕ್ಷಾತ್ ದೇವರನ್ನು ಸಂಪುಟದ ಒಳಗೆ ಪೂಜಿಸುವವರು.

**ತ್ರಿವಿಷ್ಟಪಾಭ್ರಪ್ರತಿರೂಪಧಾರೀ**
**ಸ ಪರ್ವತಃ ಸ್ಫಾಟಿಕತುಂಗಶೃಂಗೇ ।**
**ಹರೇರ್ನಿದೇಶಾದಪರಾಧಿಶಕ್ರ-**
**ಘನಾಲಯೌ ತೌ ಗ್ರಸತೀವ ಲೋಕೌ ॥೧೨॥**

**ತ್ರಿವಿಷ್ಟಪ** = ಸ್ವರ್ಗದ, **ಅಭ್ರ** = ಮೋಡಗಳ, **ಪ್ರತಿರೂಪ** = ಪ್ರತಿಬಿಂಬವನ್ನು , **ಧಾರೀ** = ಧರಿಸಿದ, **ಸಃ** = ಆ, **ಪರ್ವತಃ** = ಪರ್ವತವು, **ಸ್ಫಾಟಿಕ** = ಸ್ಫಟಿಕದ **ತುಂಗ** = ಎತ್ತರವಾದ,

**ಶೃಂಗೇ** = ಶಿಖರದಲ್ಲಿ, **ಹರೇಃ** = ದೇವರ, **ನಿದೇಶಾತ್** = ಆಜ್ಞೆಯಿಂದ, **ಅಪರಾಧಿ** = ಅಪರಾಧಿಯಾದ, **ಶಕ್ರ** = ಇಂದ್ರನ, **ಘನ** = ಮೋಡಗಳ, **ಆಲಯೌ** = ಮನೆಗಳನ್ನು, **ತೌ** = ಆ, **ಗ್ರಸತೀವ** = ತಿನ್ನುವಂತಿದೆ, **ಲೋಕೌ** = ಲೋಕಗಳಾದ.

ಈ ಬೆಟ್ಟದ ತುದಿಯು ಸ್ಫಟಿಕಮಯವೂ ಹೌದು. ಇದರಲ್ಲಿ ಸ್ವರ್ಗ ಹಾಗೂ ಅಂತರಿಕ್ಷಲೋಕಗಳು ಪ್ರತಿಬಿಂಬಿಸಿವೆ. ಸ್ವರ್ಗ ಇಂದ್ರನದ್ದು. ಅಂತರಿಕ್ಷವು ಮೋಡಗಳದ್ದು. ಈ ಪರ್ವತದಲ್ಲಿರುವ ಈ ಪ್ರತಿಬಿಂಬಗಳು ಪರ್ವತವು ಈ ಎರಡೂ ಲೋಕಗಳನ್ನು ನುಂಗಿದಂತೆ ತೋರುತ್ತವೆ. ನುಂಗಲು ಕಾರಣ – ಕೃಷ್ಣನ ಅಪ್ಪಣೆ. ಅದಕ್ಕೂ ಕಾರಣ - ಇಂದ್ರ ಹಾಗೂ ಮೋಡಗಳು ಕೃಷ್ಣನಿಗೆ ಮಾಡಿದ ಅಪರಾಧ.

**ಸ ಪರ್ಯಟತ್ಕುಂಜರಪುಂಜಶೋಭಂ**
**ಧರಂ ಯದಾ ಶ್ರೀಪತಿರುದ್ದಧಾರ ।**
**ತದಾ ಸಮಸ್ಯಾಂ ಪರಿಪೂರಯಂತಿ**
**ಶಿಶೋಃ ಕರೇ ಹಸ್ತಿಸಹಸ್ರಮಸ್ತಿ ॥೧೩॥**

**ಸಃ** = ಆ, **ಪರ್ಯಟತ್** = ಸಂಚರಿಸುವ, **ಕುಂಜರ** = ಆನೆಗಳ, **ಪುಂಜ** = ಗುಂಪಿನಿಂದ, **ಶೋಭಂ** = ಶೋಭಿಸುವ, **ಧರಂ** = ಪರ್ವತವನ್ನು, **ಯದಾ** = ಯಾವಾಗ, **ಶ್ರೀಪತಿಃ** = ಕೃಷ್ಣನು, **ಉದ್ದಧಾರ** = ಎತ್ತಿದನೋ, **ತದಾ** = ಆವಾಗ, **ಸಮಸ್ಯಾಂ** = ಸಮಸ್ಯೆಯನ್ನು, **ಪರಿಪೂರಯಂತಿ** = ಪೂರ್ಣಮಾಡುತ್ತಾರೆ, **ಶಿಶೋಃ** = ಮಗುವಿನ, **ಕರೇ** = ಕೈಯ್ಯಲ್ಲಿ, **ಹಸ್ತಿ** = ಆನೆಗಳ, **ಸಹಸ್ರಂ** = ಸಾವಿರ, **ಅಸ್ತಿ** = ಇದೆ.

ಕವಿಗಳೂ ಏಕತ್ರ ಸೇರಿದಾಗ ಪರಸ್ಪರವಾಗಿ ನಾನಾ ರೀತಿಯ ಸಮಸ್ಯೆಗಳನ್ನು ವಿನೋದವಾಗಿ ಹಂಚಿಕೊಳ್ಳುತ್ತಾರೆ. ಅವುಗಳಲ್ಲಿ ಒಂದು **ಶಿಶೋಃ ಕರೇ ಹಸ್ತಿಸಹಸ್ರಮಸ್ತಿ** 'ಮಗುವಿನ ಕೈಯ್ಯಲ್ಲಿ ಸಾವಿರ ಆನೆಗಳಿವೆ' ಎಂದು. ಈ ಸಮಸ್ಯೆಗೆ ಕವಿಗಳು ಕೃಷ್ಣನು ಬೆಟ್ಟವನ್ನು ಎತ್ತಿದಾಗ ಉತ್ತರವನ್ನು ಕಂಡುಕೊಂಡರು. ಹೇಗೆಂದರೆ, ಕೃಷ್ಣನು ಎತ್ತಿದ ಬೆಟ್ಟದಲ್ಲಿ ಸಾವಿರಾರು ಆನೆಗಳು ಆಶ್ರಯ ಪಡೆದಿವೆ. ಕೃಷ್ಣನ ಕೈಯ್ಯಲ್ಲಿ ಬೆಟ್ಟ ಇದೆ. ಬೆಟ್ಟದಲ್ಲಿ ಆನೆಗಳು ಇವೆ. ಪರಂಪರಯಾ ಆನೆಗಳು ಏಳು ವರ್ಷದ ಕೃಷ್ಣನ ಕೈಯ್ಯಲ್ಲಿ ಇವೆ ಎಂದಾಯಿತು.

**ಸ ಭಾಸುರಶ್ರೀಶಕಪೋಲಲಗ್ನ-**
**ನಖೋಲ್ಲಸದ್ರತ್ನಕರಾಗ್ರಸಂಸ್ಥಃ ।**

ಬಿಭರ್ತಿ ಕೂರ್ಮಾಶ್ರಿತನಾಗರಾಜ
ಫಣಾಸ್ಥಪೃಥ್ವೀಶ್ರಿಯಮದ್ರಿರಾಜಃ ॥೧೪॥

**ಸಃ** = ಆ, **ಭಾಸುರ** = ಶೋಭಿಸುವ, **ಶ್ರೀಶ** = ದೇವರ, **ಕಪೋಲ** = ಕೆನ್ನೆಗೆ, **ಲಗ್ನ** = ಸಂಬದ್ಧವಾದ, **ನಖ** = ಉಗುರುಗಳಿಂದ, **ಉಲ್ಲಸತ್** = ಶೋಭಿಸುವ, **ರತ್ನ** = ರತ್ನದಂತಿರುವ, **ಕರ** = ಕೈಯ, **ಅಗ್ರ** = ತುದಿಯಲ್ಲಿ, **ಸಂಸ್ಥಃ** = ಇರುವ, **ಬಿಭರ್ತಿ** = ಧರಿಸುತ್ತದೆ, **ಕೂರ್ಮ** = ಆಮೆಯನ್ನು, **ಆಶ್ರಿತ** = ಆಶ್ರಯಿಸಿದ, **ನಾಗರಾಜ** = ಸರ್ಪರಾಜನ, **ಫಣ** = ಹೆಡೆಗಳಲ್ಲಿ, **ಸ್ಥ** = ಇರುವ, **ಪೃಥ್ವೀ** = ಭೂಮಿಯ, **ಶ್ರಿಯಂ** = ಕಾಂತಿಯನ್ನು, **ಅದ್ರಿರಾಜಃ** = ಪರ್ವತವು.

ಕೃಷ್ಣನ ಕೆನ್ನೆಯು ಕೂರ್ಮದ ಬೆನ್ನಿನಂತೆ ಪುಷ್ಟವಾಗಿ ಶೋಭಿಸುತ್ತಿದೆ. ಕೃಷ್ಣನು ಬೆಟ್ಟವನ್ನು ಎತ್ತಿ ಹಿಡಿದಾಗ ಆತನ ಕೈಯು ಕೆನ್ನೆಗೆ ತಾಗಿಕೊಂಡಿದೆ. ಕೈಯು ಶೇಷನ ಶರೀರದಂತೆ ಇದೆ. ಬೆರಳುಗಳು ಹೆಡೆಗಳು, ಉಗುರುಗಳು ಹೆಡೆಗಳಲ್ಲಿರುವ ರತ್ನಗಳು. ಇಂತಹ ಕೈಯಿಂದ ಕೃಷ್ಣನು ಬೆಟ್ಟವನ್ನು ಹೊತ್ತಿದ್ದಾನೆ. ಇದು ಶೇಷನು ಎತ್ತಿ ಹಿಡಿದ ಭೂಮಿಯಂತೆ ತೋರುತ್ತಿದೆ. ಶೇಷನನ್ನು ಕೂರ್ಮವು ಹೊತ್ತಿದೆ. ಇಲ್ಲಿ ಕೈಗೆ ಕೃಷ್ಣನ ಗಂಡಸ್ಥಲವು ಆಶ್ರಯವಾಗಿದೆ.

• • • •

**ಸಂದೇಶ**

**ವಿಧೇರ್ನಿದೇಶೋ ಮಹತಾಪ್ಯಲಂಘ್ಯಃ**

ಹಣೆಬರಹವನ್ನು ಅಳಿಸಲು ಸಾಧ್ಯವಿಲ್ಲ

---

ಉದ್ಗಚ್ಛದೂಷ್ಮಾವಲಿಧೂಮಲಿಂಗ-
ಮದ್ರಿಂ ದ್ರವದ್ಧಾತುರಸಾರ್ದ್ರಶೃಂಗಮ್ ।
ವಿಷ್ವಕ್ಪತದ್ರತ್ನಚಯಸ್ಫುಲಿಂಗ-
ಮಗ್ನ್ಯಸ್ತ್ರಮೀಶಾಚರಿತಂ ಪ್ರತರ್ಕೇ ॥೧೫॥

**ಉದ್ಗಚ್ಛತ್** = ಹೊರಬರುವ, **ಊಷ್ಮಾ** = ಬಾಷ್ಪಗಳ, **ಆವಲಿ** = ಸಮೂಹವೆಂಬ, **ಧೂಮ** = ಹೊಗೆಯ, **ಲಿಂಗಂ** = ಚಿಹ್ನೆಯುಳ್ಳ, **ಅದ್ರಿಂ** = ಪರ್ವತವನ್ನು, **ದ್ರವತ್** = ನೀರಾದ, **ಧಾತು** = ಸಿಂಧೂರದ, **ರಸ** = ರಸದಿಂದ, **ಆರ್ದ್ರ** = ಒದ್ದೆಯಾದ, **ಶೃಂಗಂ** = ಶಿಖರವುಳ್ಳ, **ವಿಷ್ವಕ್** = ಸುತ್ತಲೂ, **ಪತತ್** = ಬಿದ್ದಿರುವ, **ರತ್ನ** = ರತ್ನಗಳ, **ಚಯ** = ಸಮೂಹವೆಂಬ, **ಸ್ಫುಲಿಂಗಂ** = ಕಿಡಿಗಳುಳ್ಳ, **ಅಗ್ನ್ಯಸ್ತ್ರಂ** = ಆಗ್ನೇಯಾಸ್ತ್ರದಂತೆ, **ಈಶ** = ದೇವರಿಂದ, **ಆಚರಿತಂ** = ಮಾಡಲ್ಪಟ್ಟ, **ಪ್ರತರ್ಕೇ** = ತಿಳಿಯುತ್ತೇನೆ.

ಇಂದ್ರನ ಮಳೆಯನ್ನು ನಿಲ್ಲಿಸಲು ಕೃಷ್ಣನು ಆಗ್ನೇಯಾಸ್ತ್ರವನ್ನು ಪ್ರಯೋಗ ಮಾಡಿದಂತೆ ಇತ್ತು. ಸೂರ್ಯನ ಬಿಸಿಲಿಗೆ ಬಿಸಿಯಾದ ಬೆಟ್ಟಕ್ಕೆ ಮಳೆ ಬಿದ್ದಾಗ ಅಲ್ಲಿ ಬಾಷ್ಪ ಎದ್ದಿತ್ತು. ಇದು ಹೊಗೆಯಂತೆ ತೋರುತ್ತಿತ್ತು. ಆ ಬೆಟ್ಟದಲ್ಲಿ ಬಹಳ ಸಿಂಧೂರಗಳಿದ್ದವು. ಅವುಗಳು ನೀರಾಗಿ ಹರಿಯುತ್ತಿದ್ದವು. ಸಿಂಧೂರ ಕೆಂಪಾದ್ದರಿಂದ ಬೆಂಕಿಯಂತೆ ಕಾಣುತ್ತಿತ್ತು. ಆ ಬೆಟ್ಟದಲ್ಲಿ ಅಲ್ಲಲ್ಲಿ ರತ್ನಗಳು ಚೆಲ್ಲಿತ್ತು. ಇವುಗಳು ಕಿಡಿಗಳಂತೆ ಪ್ರಕಾಶ ಬೀರುತ್ತಿದ್ದವು. ಕೃಷ್ಣನು ಬೆಟ್ಟವನ್ನೇ ಆಗ್ನೇಯಾಸ್ತ್ರವನ್ನಾಗಿ ಮಾಡಿ ಇಂದ್ರನ ಮಳೆಯನ್ನು ಕಮ್ಮಿ ಮಾಡಿದನು.

**ಅದ್ರಿಸ್ತಂ ಘನಮಿಂದ್ರನೀಲಧರಣೀಕಾಂತ್ಯಾ ಶಿಖಂಡಶ್ರಿಯಾ**
**ತಸ್ಯಾಖಂಡಲಚಾಪಮಂಬುನಿಚಯಂ ಮುಕ್ತಾಫಲಾನಾಂ ರುಚಾ ।**
**ಸೌವರ್ಣಸ್ಥಲಶೋಭಯಾ ಚ ತಟಿತಂ ಪಂಚಾಸ್ಯನಾದೇನ ತ-**
**ನ್ನಾದಂ ಸಾಧು ಜಿಗಾಯ ಕಿಂ ನ ಸುಕರಂ ನಿತ್ಯಂ ಕ್ಷಮಾಧಾರಿಣಃ ॥ ೧೬ ॥**

**ಅದ್ರಿಃ** = ಪರ್ವತವು, **ತಂ** = ಆ, **ಘನಂ** = ಮೋಡವನ್ನು, **ಇಂದ್ರನೀಲ** = ನೀಲಮಣಿಯ, **ಧರಣೀ** = ಭೂಮಿಯ, **ಕಾಂತ್ಯಾ** = ಕಾಂತಿಯಿಂದ, **ಶಿಖಂಡ** = ನವಿಲುಗರಿಯ, **ಶ್ರಿಯಾ** = ಕಾಂತಿಯಿಂದ, **ತಸ್ಯ** = ಮೋಡದ, **ಅಖಂಡಲಚಾಪಂ** = ಕಾಮನಬಿಲ್ಲನ್ನು, **ಅಂಬುನಿಚಯಂ** = ಮಳೆಯ ಸಮೂಹವನ್ನು, **ಮುಕ್ತಾಫಲಾನಾಂ** = ಮುತ್ತುಗಗಳ, **ರುಚಾ** = ಕಾಂತಿಯಿಂದ, **ಸೌವರ್ಣಸ್ಥಲ** = ಬಂಗಾರದ ಭೂಮಿಯ, **ಶೋಭಯಾ** = ಕಾಂತಿಯಿಂದ, **ತಟಿತಂ** = ಮಿಂಚನ್ನು, **ಪಂಚಾಸ್ಯನಾದೇನ** = ಸಿಂಹದ ಗರ್ಜನೆಯಿಂದ, **ತನ್ನಾದಂ** = ಸಿಡಿಲಧ್ವನಿಯನ್ನು, **ಸಾಧು** = ಚೆನ್ನಾಗಿ, **ಜಿಗಾಯ** = ಗೆದ್ದಿತು, **ಕಿಂ ನ ಸುಖರಂ** = ಯಾವುದು ಸುಲಭವಲ್ಲ, **ನಿತ್ಯಂ** = ಸದಾ, **ಕ್ಷಮಾಧಾರಿಣಃ** = ಶಾಂತರಿಗೆ.

ಇಂದ್ರನ ಎಲ್ಲಾ ಆರ್ಭಟವನ್ನು ಈ ಬೆಟ್ಟವು ತಣ್ಣಗಾಗಿಸಿತು. ಈ ಬೆಟ್ಟದಲ್ಲಿ ನೀಲ ಮಣಿಯ ಜಾಗವೂ ಇದೆ. ಇದರ ಮುಂದೆ ಮೋಡದ ನೈಲ್ಯವು ಮರೆಯಾಯಿತು. ಗಗನದಲ್ಲಿ ಕಾಮನ ಬಿಲ್ಲು ಮೂಡಿತ್ತು. ನವಿಲಿನ ರೆಕ್ಕೆಗಳ ಮುಂದೆ ಕಾಮನಬಿಲ್ಲು ತಗ್ಗಿತು. ಮಳೆಯಿಂದ ಆ ಬೆಟ್ಟದಲ್ಲಿರುವ ಮುತ್ತುಗಳು ಶುಭ್ರವಾಗಿದ್ದವು. ಇವುಗಳು ಮಳೆಯ ಮುತ್ತುಗಳಂತಿರುವ ಹನಿಗಳನ್ನು ಕಮ್ಮಿ ಮಾಡಿದವು. ಈ ಬೆಟ್ಟದ ಸುವರ್ಣಮಯವಾದ ಪ್ರದೇಶದ ಪ್ರಕಾಶಕ್ಕೆ ಮಿಂಚುಗಳು ಮಿಂಚುಹುಳುಗಳಂತೆ ಆದವು. ಸಿಂಹಗಳ ಘರ್ಜನೆಯ ಮುಂದೆ ಗುಡುಗು ಕೇಳಿಸಲೇ ಇಲ್ಲ.

ಈ ಬೆಟ್ಟವು ಸದಾ ಕ್ಷಮಾಶೀಲವಾದ್ದರಿಂದ ಇಂದ್ರನನ್ನೂ ಎದುರಿಸುವ ಶಕ್ತಿ ಬಂದಿತು.

'ಕ್ಷಮಯಾ ಕಿಂ ನ ಸಾಧ್ಯತೇ' ಕ್ಷಮಾಗುಣಕ್ಕೆ ಎಲ್ಲವನ್ನೂ ಎದುರಿಸುವ ಶಕ್ತಿ ಇದೆ ಎಂದು ಹಿರಿಯರ ಮಾತು.

**ನಿರ್ಗತ್ಯ ಪಶ್ಯತಾಟೋಪಃ ಕಿಮದ್ಯಾಪ್ಯಸ್ತಿ ವಾರ್ಮುಚಾಮ್ ।**
**ಇತ್ಯುಕ್ತಃ ಕೋऽಪಿ ಗೋಪಸ್ತದ್ವಿದಿತ್ವಾ ವಕ್ತಿ ಮಾಧವಮ್ ॥ ೧೭ ॥**

**ನಿರ್ಗತ್ಯ** = ಹೋಗಿ, **ಪಶ್ಯತ** = ನೋಡಿರಿ, **ಆಟೋಪಃ** = ಗಲಾಟೆಯು, **ಕಿಂ** = ಏನು? **ಅದ್ಯಾಪಿ** = ಈಗಲೂ, **ಅಸ್ತಿ** = ಇದೆಯೋ, **ವಾರ್ಮುಚಾಂ** = ಮೋಡಗಳ, **ಇತಿ** = ಎಂದು, **ಉಕ್ತಃ** = ಹೇಳಲ್ಪಟ್ಟ, **ಕೋऽಪಿ** = ಒಬ್ಬ, **ಗೋಪಃ** = ಗೊಲ್ಲನು, **ತತ್** = ಅದನ್ನು, **ವಿದಿತ್ವಾ** = ತಿಳಿದು, **ವಕ್ತಿ** = ಹೇಳುತ್ತಾನೆ, **ಮಾಧವಂ** = ದೇವರನ್ನು.

ಬೆಟ್ಟವನ್ನು ಸತತ ಏಳು ದಿವಸಗಳ ಕಾಲ ಎತ್ತಿ ಹಿಡಿದ ಕೃಷ್ಣನು ಒಬ್ಬ ಗೊಲ್ಲನಲ್ಲಿ ಹೊರಗಿನ ಇಂದ್ರನ ಆರ್ಭಟ ಇದೆಯಾ ನೋಡು ಎಂದು ಹೇಳಿ ಕಳಿಸಿದನು. ಆತನು ಹೊರಗೆ ನೋಡಿ ಕೃಷ್ಣನಲ್ಲಿ ಈ ರೀತಿ ಹೇಳಿದನು.

**ಧಾರಾ ನೈವ ಪಯೋಮುಚಾಂ ಯದುಪತೇ ಪ್ರೇಮಾಶ್ರುಧಾರಾ ಪರಂ**
**ಸ್ವಾನಾಂ ನಾಪಿ ಚ ಗರ್ಜಿತಂ ಸ್ತುತಿಕೃತಾಂ ಸಿದ್ಧೇಶ್ವರಾಣಾಂ ಧ್ವನಿಃ ।**
**ವಿದ್ಯುನ್ನಾಮರನರ್ತಕೀಕರಚಯಾಲಂಕಾರಕಾಂತಿಃ ಪ್ರಭೋ**
**ನೋ ವಾಯುಃ ಸುರವೃಷ್ಟಪುಷ್ಪಸಹಗಾನಲ್ಪಾಲಿಪಕ್ಷೈರ್ಮರುತ್ ॥ ೧೮ ॥**

**ಧಾರಾ** = ಮಳೆಯು, **ನೈವ** = ಇಲ್ಲ, **ಪಯೋಮುಚಾಂ** = ಮೋಡಗಳ, **ಯದುಪತೇ** = ಕೃಷ್ಣನೇ, **ಪ್ರೇಮಾಶ್ರುಧಾರಾ** = ಆನಂದಾಶ್ರುಧಾರೆಯು, **ಪರಂ** = ಮತ್ತು, **ಸ್ವಾನಾಂ** = ತನ್ನವರ, **ನಾಪಿ ಚ** = ಇಲ್ಲ, **ಗರ್ಜಿತಂ** = ಗುಡುಗು, **ಸ್ತುತಿಕೃತಾಂ** = ಹೊಗಳುವ, **ಸಿದ್ಧೇಶ್ವರಾಣಾಂ** = ಉತ್ತಮ ಸಿದ್ಧರ, **ಧ್ವನಿಃ** = ಶಬ್ದವು, **ವಿದ್ಯುತ್** = ಮಿಂಚು, **ನ** = ಇಲ್ಲ, **ಅಮರನರ್ತಕೀ** = ಅಪ್ಸರೆಯರ, **ಕರಚಯ** = ಕೈಗಳ, **ಅಲಂಕಾರ** = ಆಭರಣಗಳ, **ಕಾಂತಿಃ** = ಬೆಳಕು, **ಪ್ರಭೋ** = ಒಡೆಯನೇ!, **ನೋ ವಾಯುಃ** = ಗಾಳಿಯೂ ಇಲ್ಲ, **ಸುರವೃಷ್ಟಪುಷ್ಪ** = ದೇವತೆಗಳಿಂದ ಸುರಿಸಲ್ಪಟ್ಟ ಹೂಗಳ, **ಸಹ** = ಜೊತೆಗೆ, **ಗ** = ಇರುವ, **ಅನಲ್ಪ** = ಬಹಳ, **ಅಲಿ** = ಭ್ರಮರಗಳ, **ಪಕ್ಷೈಃ** = ರೆಕ್ಕೆಗಳಿಂದ, **ಮರುತ್** = ಗಾಳಿಯು.

ಕೃಷ್ಣ! ಮಳೆಯು ಬರುತ್ತಿಲ್ಲ. ನೀರು ಬೀಳುತ್ತಿದೆಯಲ್ಲ ಎಂಬ ಕೃಷ್ಣನ ಮಾತಿಗೆ ಗೊಲ್ಲನು ಉತ್ತರಿಸುತ್ತಾನೆ – ಅದು ಮಳೆ ನೀರು ಅಲ್ಲ. ನೀನು ಬೆಟ್ಟವನ್ನು ಎತ್ತಿದ ಮಹಿಮೆಯನ್ನು ನೋಡಿದ ನಿನ್ನ ಭಕ್ತರ ಆನಂದಾಶ್ರು ಎಂದು. ಗುಡುಗೂ ಇಲ್ಲ. ಕೇಳಿಸು-

ತ್ತಿರುವ ಶಬ್ದ ಗುಡುಗಲ್ಲ. ನಿನ್ನನ್ನು ಹೊಗಳುವ ಗಂಧರ್ವಾದಿಗಳ ವಾದ್ಯಗಳ ಧ್ವನಿಯು. ಅವರು ಹಾಡಿದಾಗ ನರ್ತಿಸುವ ಅಪ್ಸರೆಯರ ಆಭರಣಗಳ ಪ್ರಕಾಶ ಹೊರತು ಬೇರೆ ಮಿಂಚು ಇಲ್ಲ. ಈ ಕಾಲದಲ್ಲಿ ದೇವತೆಗಳು ಪುಷ್ಪವೃಷ್ಟಿ ಮಾಡುತ್ತಿದ್ದಾರೆ. ಅವುಗಳ ಪರಿಮಳಕ್ಕೆ ಬಹಳ ದುಂಬಿಗಳು ಮರುಳಾಗಿ ಪುಷ್ಪಗಳ ಜೊತೆಗೆ ಹೋಗುತ್ತಿವೆ. ಆಗ ಅವುಗಳ ರೆಕ್ಕೆಗಳಿಂದ ಹೊರಟ ಗಾಳಿ ಮಾತ್ರ ಇದೆ.

**ನೀಲಂ ನೈವ ನಭಃ ಸುಲಜ್ಜಿತಶಚೀಭರ್ತುರ್ಮುಖೇ ನೀಲಿಮಾ**
**ಮೇಘಾಃ ಕ್ವಾಪಿ ನ ಸಂತಿ ಕಿಂತು ದಿವಿಜಭ್ರಾಜದ್ವಿಮಾನಾಂಬುದಾಃ ।**
**ತಾಮಿಸ್ರಂ ನಹಿ ದಿಶ್ಯಥೇದೃಶಮಪಿ ತ್ವಾಂ ಮಾನುಷಂ ಮನ್ವತಾಂ**
**ಚಿತ್ತೇಷ್ವಸ್ತಿ ನ ವೇಪಥುರ್ನಿಜಜನೇ ಭೀತೇಂದ್ರಗಾತ್ರೇ ಪರಮ್ ॥ ೧೯ ॥**

ನೀಲಂ = ನೀಲವು, **ನೈವ** = ಇಲ್ಲ, **ನಭಃ** = ಆಕಾಶವು, **ಸುಲಜ್ಜಿತ** = ನಾಚಿದ, **ಶಚೀಭರ್ತುಃ** = ಶಚಿಯ ಗಂಡನ, **ಮುಖೇ** = ಮುಖದಲ್ಲಿ, **ನೀಲಿಮಾ** = ಕಪ್ಪು, **ಮೇಘಾಃ** = ಮೋಡಗಳು, **ಕ್ವಾಪಿ** = ಎಲ್ಲಿಯೂ, **ನ ಸಂತಿ** = ಇಲ್ಲ, **ಕಿಂತು** = ಆದರೆ, **ದಿವಿಜ** = ದೇವತೆಗಳ, **ಭ್ರಾಜತ್** = ಶೋಭಿಸುವ, **ವಿಮಾನ** = ವಿಮಾನಗಳೆಂಬ, **ಅಂಬುದಾಃ** = ಮೋಡಗಳು, **ತಾಮಿಸ್ರಂ** = ಕತ್ತಲೆಯು, **ನಹಿ** = ಇಲ್ಲ, **ದಿಶಿ** = ದಿಕ್ಕಲ್ಲಿ, **ಅಥ** = ಮತ್ತು, **ಈದೃಶಮಪಿ** = ಇಂತಹ, **ತ್ವಾಂ** = ನಿನ್ನನ್ನು, **ಮಾನುಷಂ** = ಮಾನವನನ್ನಾಗಿ, **ಮನ್ವತಾಂ** = ತಿಳಿಯುವವರ, **ಚಿತ್ತೇಷು** = ಮನಸ್ಸುಗಳಲ್ಲಿ, **ಅಸ್ತಿ** = ಇದೆ, **ನ ವೇಪಥುಃ** = ನಡುಕವು ಇಲ್ಲ, **ನಿಜಜನೇ** = ನಿನ್ನವರಲ್ಲಿ, **ಭೀತ** = ಹೆದರಿದ, **ಇಂದ್ರಗಾತ್ರೇ** = ಇಂದ್ರನ ಶರೀರದಲ್ಲಿ, **ಪರಂ** = ಮತ್ತು.

ಆಕಾಶವು ನೀಲವಾಗಿಲ್ಲ. ನಿನ್ನನ್ನು ವಿರೋಧಿಸಿ ಸೋತಿರುವ ಇಂದ್ರನ ಮುಖವು ನೀಲವಾ(ಕಪ್ಪಾ)ಗಿದೆ. ಸೋತವರ ಮುಖವು ಕಪ್ಪಾಗುವುದು ಸಹಜ. ಮೋಡಗಳೂ ಇಲ್ಲ. ಆದರೂ ಸೂರ್ಯ ಕಾಣಿಸುತ್ತಿಲ್ಲ. ಯಾಕೆಂದರೆ, ನಿನ್ನ ಈ ವೈಭವವನ್ನು ನೋಡಲು ದೇವತೆಗಳು ತಮ್ಮ ವಿಮಾನಗಳಲ್ಲಿ ಆಕಾಶದಲ್ಲಿ ಸೇರಿದ್ದಾರೆ ಆದ್ದರಿಂದ. ಯಾವ ದಿಕ್ಕಿ-ನಲ್ಲಿಯೂ ಕತ್ತಲೆ ಇಲ್ಲ. ನೀನು ಇಷ್ಟು ಮಹಿಮೆಯನ್ನು ತೋರಿಸಿದರೂ ನಿನ್ನನ್ನು ಮನುಷ್ಯ ಎಂದು ತಿಳಿಯುವವರ ಮನಸ್ಸಿನಲ್ಲಿ ಕತ್ತಲೆ ಅಂದರೆ ಅಜ್ಞಾನ ಉಳಿದಿದೆ. ಚಳಿಯಿಂದ ಯಾರೂ ನಡುಗುತ್ತಿಲ್ಲ. ನಿನ್ನನ್ನು ವಿರೋಧಿಸಿ, ಸೋತು, ಎಚ್ಚೆತ್ತುಕೊಂಡು ಹೆದರಿದ ಇಂದ್ರನ ಶರೀರದಲ್ಲಿ ನಡುಕ ಇದೆ ಎಂದು ಗೊಲ್ಲನು ಉತ್ತರಿಸಿದನು. ಈ ಕ್ರಮವು ವಾದಿರಾಜರಿಗೇ ಮೀಸಲು.

**ತತಃ ಪರೀತಃ ಸ್ವೈರ್ಗೋಪೈರ್ಗೋಪೀಭಿರ್ಗೋಧನೈರಪಿ।**
**ಪ್ರತಸ್ಥೇ ಪ್ರಯತಂ ಗೋಷ್ಠಂ ಸ್ತೂಯಮಾನಃ ಸುರೈರ್ನರೈಃ ॥ ೨೦ ॥**

**ತತಃ** = ಅನಂತರ, **ಪರೀತಃ** = ಕೂಡಿದವನಾಗಿ, **ಸ್ವೈಃ** = ತನ್ನ, **ಗೋಪೈಃ** = ಗೊಲ್ಲರಿಂದ, **ಗೋಪೀಭಿಃ** = ಗೋಪಿಯರಿಂದ, **ಗೋಧನೈಃ ಅಪಿ** = ಆಕಳೆಂಬ ಸಂಪತ್ತಿನಿಂದಲೂ, **ಪ್ರತಸ್ಥೇ** = ಹೊರಟನು, **ಪ್ರಯತಂ** = ಪವಿತ್ರವಾದ, **ಗೋಷ್ಠಂ** = ಗೋಕುಲವನ್ನು, **ಸ್ತೂಯಮಾನಃ** = ಹೊಗಳಲ್ಪಡುತ್ತಾ, **ಸುರೈಃ** = ದೇವತೆಗಳಿಂದ, **ನರೈಃ** = ಮಾನವ-ರಿಂದ.

ಕೃಷ್ಣನು ಬೆಟ್ಟವನ್ನು ಇಳಿಸಿದನು. ಅನಂತರ ತನ್ನವರಾದ ಗೊಲ್ಲರಿಂದ, ಗೋಪಿಯ-ರಿಂದ, ಆಕಳುಗಳಿಂದ ಕೂಡಿಕೊಂಡು ನಂದಗೋಕುಲಕ್ಕೆ ಹೊರಟನು. ಈ ಸಮಯದಲ್ಲಿ ಎಲ್ಲರೂ ಕೃಷ್ಣನನ್ನು ಹೊಗಳುತ್ತಿದ್ದರು.

● ● ● ●

**ಸಂದೇಶ**

**ನಿರಾಗಸಂ ಕಂ ನ ವರಯೇತ್ ಶೌರಿಃ**

ನಿರಪರಾಧಿಯಾದ ಯಾರನ್ನು ತಾನೇ ದೇವರು ವರಿಸುವುದಿಲ್ಲ?

---

**ನಾಥಾಪರಾಧಕೃದುಪೇತ್ಯ ಸುಲಜ್ಜಿತೋಽಥೋ**
**ಶಕ್ರೋಽಚ್ಯುತಂ ರಹಸಿ ರಮ್ಯತಮಂ ತ್ರಿಲೋಕ್ಯಾಮ್।**
**ಮೂರ್ಧ್ನಾ ಪ್ರಣಮ್ಯ ಸದಯಂ ಸುಧಯಾಽಭ್ಯಷಿಂಚತ್**
**ಗೋವಿಂದನಾಮ ಚ ಪಠನ್ ಸ್ವಕೃತಾಘಶಾಂತ್ಯೈ ॥ ೨೧ ॥**

**ನಾಥ** = ಒಡೆಯನಿಗೆ, **ಅಪರಾಧ** = ಅನ್ಯಾಯವನ್ನು, **ಕೃತ್** = ಮಾಡಿದ, **ಉಪೇತ್ಯ** = ಬಂದು, **ಸುಲಜ್ಜಿತಃ** = ನಾಚಿದ, **ಅಥ** = ಅನಂತರ, **ಶಕ್ರಃ** = ಇಂದ್ರನು, **ಅಚ್ಯುತಂ** = ದೇವರನ್ನು, **ರಹಸಿ** = ಏಕಾಂತದಲ್ಲಿ, **ರಮ್ಯತಮಂ** = ಚಂದದ, **ತ್ರಿಲೋಕ್ಯಾಮ್** = ಮೂರುಲೋಕದಲ್ಲಿ, **ಮೂರ್ಧ್ನಾ** = ತಲೆಯಿಂದ, **ಪ್ರಣಮ್ಯ** = ನಮಸ್ಕರಿಸಿ, **ಸದಯಂ** = ದಯೆಯಿಂದ ಕೂಡಿದವನಾಗಿ, **ಸುಧಯಾ** = ಅಮೃತದಿಂದ, **ಅಭ್ಯಷಿಂಚತ್** = ಅಭಿಷೇಕಿಸಿದನು, **ಗೋವಿಂದನಾಮ** = ಗೋವಿಂದ ಎಂಬ ಹೆಸರನ್ನು, **ಪಠನ್** = ಹೇಳುತ್ತಾ, **ಸ್ವ** = ತನ್ನಿಂದ, **ಕೃತ** = ಮಾಡಲ್ಪಟ್ಟ, **ಅಘ** = ಪಾಪದ, **ಶಾಂತ್ಯೈ** = ಶಾಂತಿ-ಗೋಸ್ಕರ.

ಇಂದ್ರನಿಗೆ ಜ್ಞಾನೋದಯವಾಯಿತು. ನಾಚಿದನು. ತನ್ನ ತಪ್ಪಿನ ಅರಿವಾಗಿ ಭೂಮಿಗೆ ಇಳಿದು ಬಂದನು. ಕೃಷ್ಣನನ್ನು ಏಕಾಂತದಲ್ಲಿ ಪೂಜಿಸಿದನು. ಕೃಷ್ಣನು ಇಂದ್ರನನ್ನು ಶಿಕ್ಷಿಸಿದ್ದು

ತನಗಾಗಿ ಅಲ್ಲ. ತನಗೆ ಆದರಿಂದ ಏನೂ ಲಾಭ ಇಲ್ಲ ಎಂದು ತಿಳಿಸಲು ರಾಜರು ಅಚ್ಯುತ ಎಂಬ ಪದವನ್ನು ಬಳಸಿದ್ದಾರೆ. ಇಂದ್ರನು ಶಿರಸಾ ನಮಿಸಿದನು. ತಾನು ಬರುವಾಗ ಬಹಳ ಆಕಳುಗಳನ್ನು ತಂದಿದ್ದ. ಅವುಗಳ ಹಾಲಿನಿಂದ ಕೃಷ್ಣನಿಗೆ ಅಭಿಷೇಕ ಮಾಡಿದನು. ತಾನು ಮಾಡಿದ ಅಪರಾಧಕ್ಕೆ ಪ್ರಾಯಶ್ಚಿತ್ತವಾಗಿ ಅಚ್ಯುತ, ಅನಂತ, ಗೋವಿಂದ ಎಂಬ ನಾಮತ್ರಯಗಳನ್ನು ಜಪಿಸಿದನು. ಈ ನಾಮತ್ರಯಗಳು ಉತ್ತಮವಾದ ಪ್ರಾಯಶ್ಚಿತ್ತ.

> ಬಧ್ವಾ ನಿನಾಯ ಕಿಲ ನಂದಮಕಾಲವಾರಿ-
> ಮಧ್ಯಪ್ರವಿಷ್ಟಮನುಗಃ ಸಲಿಲೇಶ್ವರಸ್ಯ ।
> ಭೃತ್ಯಚ್ಛಲೇನ ಸ ಸಮನ್ಯುರಮುಂ ಬಬಂಧ
> ಶ್ರುತ್ವಾ ಸ್ವನಾಥಪಿತರಂ ತ್ವಿತಿ ಮೇ ಪ್ರತರ್ಕಃ ॥ ೨೨ ॥

**ಬದ್ಧ್ವಾ** = ಕಟ್ಟಿ, **ನಿನಾಯ** = ಒಯ್ದನು, **ನಂದಂ** = ನಂದನನ್ನು, **ಅಕಾಲ** = ಅಕಾಲ-ದಲ್ಲಿ, **ವಾರಿ** = ನೀರಿನ, **ಮಧ್ಯ** = ಮಧ್ಯವನ್ನು, **ಪ್ರವಿಷ್ಟಂ** = ಪ್ರವೇಶಿಸಿದ, **ಅನುಗಃ** = ಸೇವಕರು, **ಸಲಿಲೇಶ್ವರಸ್ಯ** = ವರುಣನ, **ಭೃತ್ಯಃ ಛಲೇನ** = ಸೇವಕನ ನಿಮಿತ್ತದಿಂದ, **ಸಃ** = ವರುಣನು, **ಸಮನ್ಯುಃ** = ಸಿಟ್ಟಾದವನಾಗಿ, **ಅಮುಂ** = ನಂದನನ್ನು, **ಬಬಂಧ** = ಕಟ್ಟಿದನು, **ಶ್ರುತ್ವಾ** = ಕೇಳಿ, **ಸ್ವ** = ತನ್ನ, **ನಾಥ** = ಒಡೆಯನ, **ಪಿತರಂ ತು** = ತಂದೆಯನ್ನಾಗಿ, **ಇತಿ** = ಎಂದು, **ಮೇ** = ನನ್ನ, **ಪ್ರತರ್ಕಃ** = ಊಹೆಯು.

ಒಂದು ಸಾಧನದ್ವಾದಶೀ ದಿನ ನಂದಗೋಪನು ಅಕಾಲದಲ್ಲಿ ಸ್ನಾನಕ್ಕೆ ನದಿಗೆ ಹೋಗಿದ್ದನು. ಆಗ ವರುಣನ ಸೇವಕನು ಆತನನ್ನು ಬಂಧಿಸಿ ವರುಣಲೋಕಕ್ಕೆ ಕೊಂಡೊ-ಯ್ದನು.

ರಾಜರು ಈ ರೀತಿ ಉತ್ಪ್ರೇಕ್ಷಿಸುತ್ತಾರೆ – ಈ ನಂದನು ತಾನು ಕೃಷ್ಣನ ತಂದೆ ಎಂದು ತಿಳಿದಿದ್ದನು. ಇದರಿಂದ ವರುಣನು ಸಿಟ್ಟಾಗಿದ್ದನು. ತನ್ನ ಸ್ವಾಮಿಯಾದ ಕೃಷ್ಣನಿಗೆ ಈತನು ತಂದೆ ಎಂದು ಸುಳ್ಳು ಹೇಳುತ್ತಾನೆ ಎಂಬ ಕಾರಣದಿಂದ. ಅದಕ್ಕಾಗಿ ತನ್ನ ಸೇವಕನನ್ನು ಕಳುಹಿಸಿ ನಂದನನ್ನು ಬಂಧಿಸಿದನು.

> ಕೃಷ್ಣೋಽಪಿ ವೀಕ್ಷ್ಯ ದೃಢಭಕ್ತಿಮಿವ ಪ್ರತುಷ್ಟಃ
> ಕೃತ್ಯಚ್ಛಲೇನ ನಿಜದರ್ಶನಮೇವ ದಿತ್ಸನ್ ।
> ಗತ್ವಾಽಂಬುರಾಶಿನಿಲಯಂ ಜನಕೇನ ಸಾಕ-
> ಮಭ್ಯರ್ಚಿತಃ ಸ್ವಭವನಂ ಪುನರಾಜಗಾಮ ॥ ೨೩ ॥

**ಕೃಷ್ಣಃ ಅಪಿ** = ಕೃಷ್ಣನಾದರೋ, **ವೀಕ್ಷ್ಯ** = ನೋಡಿ, **ದೃಢಭಕ್ತಿಂ** = ನಿಶ್ಚಲಭಕ್ತಿಯನ್ನು, **ಪ್ರತುಷ್ಟಃ ಇವ** = ಸಂತುಷ್ಟನಂತೆ, **ಕೃತ್ಯ** = ಕೆಲಸದ, **ಛಲೇನ** = ನಿಮಿತ್ತದಿಂದ, **ನಿಜದರ್ಶನಮೇವ** = ತನ್ನ ದರ್ಶನವನ್ನೇ, **ದಿತ್ಸನ್** = ಕೊಟ್ಟವನಾಗಿ, **ಗತ್ವಾ** = ಹೋಗಿ, **ಅಂಬುರಾಶಿ** = ವರುಣನ, **ನಿಲಯಂ** = ಮನೆಯನ್ನು, **ಜನಕೇನ** = ತಂದೆಯಿಂದ, **ಸಾಕಂ** = ಕೂಡಿಕೊಂಡು, **ಅಭ್ಯರ್ಚಿತಃ** = ಪೂಜಿಸಲ್ಪಟ್ಟು, **ಸ್ವಭವನಂ** = ತನ್ನ ಮನೆ-ಯನ್ನು, **ಪುನಃ** = ಮತ್ತೆ, **ಆಜಗಾಮ** = ಬಂದನು.

ಕೃಷ್ಣನು ವರುಣನ ಭಕ್ತಿಗೆ ಮೆಚ್ಚಿದನು. ಯಾರೂ ಕೂಡಾ ವ್ಯವಹಾರಕ್ಕಾಗಿಯೂ ತಾನು ಕೃಷ್ಣನ ತಂದೆ, ತಾಯಿ, ಅಣ್ಣ ಇತ್ಯಾದಿ ಶಬ್ದಪ್ರಯೋಗ ಮಾಡುವುದನ್ನು ವರುಣನು ಸಹಿಸುವುದಿಲ್ಲ. ಇದೇ ಆತನ ಭಕ್ತಿ. ಆದ್ದರಿಂದ ಆತನಿಗೆ ದರ್ಶನ ಕೊಡಲು ಕೃಷ್ಣನು ಆತನ ಮನೆಗೇ ಹೋದನು. ನಂದಗೋಪನನ್ನು ಬಿಡಿಸುವುದು ನೆಪ ಮಾತ್ರ. ವರುಣ-ನಿಗೂ ನಂದನನ್ನು ಒಯ್ಯುವುದಕ್ಕಿಂತಲೂ ಕೃಷ್ಣನ ದರ್ಶನವು ಮುಖ್ಯವಾಗಿತ್ತು. ಆತನಿಗೆ ದರ್ಶನ ಕೊಟ್ಟು, ನಂದನನ್ನು ಕರಕೊಂಡು ಕೃಷ್ಣನು ತಿರುಗಿ ವೃಂದಾವನಕ್ಕೆ ಬಂದನು.

**ತಪ್ತಂ ಹೇಮಕೃಶಾನುಸಂಗಿ ಗಗನೇ ವಾತಾಯನೇ ಭಾಜನೇ**
**ಮಾಹೇಂದ್ರ್ಯಾಃ ಶುಭಕುಂಡಲಂ ರಚಯಿತುಂ ದೇವೈರುಪಾಯಾದ್ದಿಶಃ।**
**ಸಂಗೃಹ್ಯಾಂಬುನಿ ಸನ್ನಿವೇಶಿತಮಿವೋತ್ತುಂಗಸ್ಫುಲಿಂಗಾವೃತಂ**
**ತೇಜೋರಾಶಿರಿನೋ ಜಗಾಮ ಜಲಧಿಂ ರಾಗಾಂಚಿತಃ ಪಶ್ಚಿಮಮ್ ॥೨೪॥**

**ತಪ್ತಂ** = ಬೆಂಕಿಗೆ ಹಾಕಿದ, **ಹೇಮ** = ಬಂಗಾರದ, **ಕೃಶಾನು** = ಬೆಂಕಿಯ, **ಸಂಗಿ** = ಸಂಬಂಧವುಳ್ಳ, **ಗಗನೇ** = ಆಕಾಶವೆಂಬ, **ವಾತಾಯನೇ** = ಗಾಳಿ ಸಂಚರಿಸುವ, **ಭಾಜನೇ** = ಪಾತ್ರದಲ್ಲಿ, **ಮಾಹೇಂದ್ರ್ಯಾಃ** = ಇಂದ್ರಸಂಬಂಧಿಯಾದ, **ಶುಭಕುಂಡಲಂ** = ಒಳ್ಳೆಯ ಆಭರಣವನ್ನು, **ರಚಯಿತುಂ** = ಮಾಡಲು, **ದೇವೈಃ** = ದೇವತೆಗಳಿಂದ, **ಉಪಾಯಾತ್** = ಉಪಾಯದಿಂದ, **ದಿಶಃ** = ದಿಕ್ಕಿಗೆ, **ಸಂಗೃಹ್ಯ** = ಹಿಡಿದು, **ಅಂಬುನಿ** = ನೀರಿನಲ್ಲಿ, **ಸನ್ನಿವೇಶಿತಮಿವ** = ಇಟ್ಟಂತೆ, **ಉತ್ತುಂಗ** = ದೊಡ್ಡದಾದ, **ಸ್ಫುಲಿಂಗ** = ಕಿಡಿಗಳಿಂದ, **ಆವೃತಂ** = ಕೂಡಿದ, **ತೇಜೋರಾಶಿ** = ತೇಜಃಪುಂಜನಾದ, **ಇನಃ** = ಸೂರ್ಯನು, **ಜಗಾಮ** = ಸೇರಿದನು, **ಜಲಧಿಂ** = ಸಮುದ್ರವನ್ನು, **ರಾಗಾಂಚಿತಃ** = ಕೆಂಪುಬಣ್ಣದಿಂದ ಕೂಡಿದ, **ಪಶ್ಚಿಮಂ** = ಪಶ್ಚಿಮವನ್ನು.

ಇನ್ನು ರಾಜರು ಸೂರ್ಯಾಸ್ತವನ್ನು ವರ್ಣಿಸುತ್ತಾರೆ – ಆಭರಣ ತಯಾರಕರು ಚಿನ್ನವನ್ನು ಮೊದಲು ತಿದಿಯಲ್ಲಿಟ್ಟು ಬೆಂಕಿಯಲ್ಲಿ ಕಾಯಿಸುತ್ತಾರೆ. ಅನಂತರ ತೆಗೆದು ನೀರಿಗೆ ಹಾಕುತ್ತಾರೆ.

ಇಲ್ಲಿ ದೇವತೆಗಳೇ ಚಿನಿವಾರರು. ಆಕಾಶದಲ್ಲಿ ಗಾಳಿ ಸಂಚಾರವಾಗುತ್ತದೆ. ಆದ್ದರಿಂದ ಆಕಾಶವೇ ತಿದಿ. ಸೂರ್ಯನೇ ಚಿನ್ನ. ಆತನಿಗೆ ಅಗ್ನಿ ಸಂಪರ್ಕವಿದೆ. ಹಗಲಿಗೆ ಅಗ್ನಿಯ ಶಕ್ತಿ ಸೂರ್ಯನಲ್ಲಿ ಸೇರುತ್ತೆ ಎಂದು ಶಾಸ್ತ್ರ. ಆದ್ದರಿಂದಲೇ ಕಾದಿದೆ; ದೀರ್ಘವಾದ ಜ್ವಾಲೆ-ಗಳಿಂದ ಕೂಡಿದೆ. ಇಂತಹ ಸೂರ್ಯನೆಂಬ ಚಿನ್ನವನ್ನು ನಿಧಾನವಾಗಿ ಪಶ್ಚಿಮಸಮುದ್ರವೆಂಬ ನೀರಲ್ಲಿ ಹಾಕಿದರು. ಈ ಚಿನ್ನದಿಂದ ಆಭರಣ ಯಾರಿಗೆ ಅಂದರೆ ಇಂದ್ರಪತ್ನಿಯಾದ ಶಚಿಗೆ. ದೇವತೆಗಳಿಗೆ ಇಂದ್ರನಂತೆಯೇ ಶಚಿಯೂ ಪೂಜ್ಯಳು. ಯಾವ ರೀತಿಯ ಆಭರಣವೆಂದರೆ ಕುಂಡಲರೂಪವಾದದ್ದು. ಸೂರ್ಯನು ಪೂರ್ವದಲ್ಲಿ ಉದಯಿಸುವಾಗ ಕುಂಡಲದಂತೆ ಚಿನ್ನದ ಬಣ್ಣದಿಂದ ಕಾಣಿಸುತ್ತಾನೆ. ಪೂರ್ವದಲ್ಲಿ ಉದಯಿಸುವುದರಿಂದಲೇ ಶಚಿಗೆ ಆಭರಣ. ಒಟ್ಟಿಗೆ ಅಭಿಪ್ರಾಯ ಸೂರ್ಯನು ಹಗಲಿಡೀ ಕಾದು ಸಾಯಂಕಾಲ ಪಶ್ಚಿಮ ಸಮುದ್ರವನ್ನು ಸೇರಿದನು.

ಕರೈರ್ಗಿರೀಂದ್ರಾನ್ ಪರಿತೋ ದಧಾನೋಽ-
ಪ್ಯಸೌ ವಿವಸ್ವಾನ್ ಪತಿತಃ ಕಿಲಾಬ್ಧೌ।
ಮಮೇತ್ಥಮಾಭಾತಿ ಸರಿಚ್ಛರೀರ-
ವಿಶೋಷಕಂ ತತ್ಪತಿರಗ್ರಸೀತ್ತಮ್ ॥ ೨೫ ॥

**ಕರೈಃ** = ಕಿರಣಗಳಿಂದ, **ಗಿರೀಂದ್ರಂ** = ಶ್ರೇಷ್ಠಪರ್ವತವನ್ನು, **ಪರಿತಃ** = ಸುತ್ತಲೂ, **ದಧಾನಃ ಅಪಿ** = ಹಿಡಿದಿದ್ದರೂ, **ಅಸೌ** = ಈ, **ವಿವಸ್ವಾನ್** = ಸೂರ್ಯನು, **ಪತಿತಃ** = ಬಿದ್ದನು, **ಅಬ್ಧೌ ಕಿಲ** = ಸಮುದ್ರದಲ್ಲಿ, **ಮಮ** = ನನಗೆ, **ಇತ್ಥಂ** = ಈ ರೀತಿ, **ಆಭಾತಿ** = ತೋರುತ್ತದೆ. **ಸರಿತ್** = ನದಿಗಳ, **ಶರೀರ**= ದೇಹಗಳಾದ ನೀರುಗಳನ್ನು, **ವಿಶೋಷಕಂ** = ಒಣಗಿಸಿದ ಸೂರ್ಯನನ್ನು, **ತತ್** = ಆ ನದಿಗಳ, **ಪತಿಃ** = ಪತಿಯಾದ ಸಮುದ್ರನು, **ಅಗ್ರಸೀತ್** = ನುಂಗಿದನು, **ತಂ** = ಆ.

ಈ ಸೂರ್ಯನು ತನ್ನ ಕಿರಣಗಳೆಂಬ ಕೈಗಳಿಂದ ಪರ್ವತವನ್ನು ಹಿಡಿದಿದ್ದನು. ಸಾಯಂಕಾಲ ಸೂರ್ಯಕಿರಣಗಳು ಪರ್ವತಗಳ ತುದಿಗಳಲ್ಲಿ ಕಾಣಿಸುತ್ತವೆ ಎಂದು ಅಭಿಪ್ರಾಯ. ಆದರೂ ಸೂರ್ಯನು ಬಿದ್ದನು.

ರಾಜರು ಹೇಳುತ್ತಾರೆ – ಸೂರ್ಯನನ್ನು ಸಮುದ್ರವು ನುಂಗಿತು. ಯಾಕೆಂದರೆ, ಈ ಸೂರ್ಯನು ಸಮುದ್ರದ ಪತ್ನಿಯರಾದ ನದಿಗಳನ್ನು ಬಹಳ ಶೋಷಿಸಿದ್ದಾನೆ ಆದ್ದರಿಂದ. ಶೋಷಕರಿಗೆ ಯಾರ ಆಶ್ರಯ ಇದ್ದರೂ ಒಂದು ದಿವಸ ಬೀಳಲೇಬೇಕು ಎಂಬ ಸಂದೇಶ ಇಲ್ಲಿದೆ.

**ತ್ಯಕ್ತ್ವಾ ಕ್ರಮೇಣ ಸಹಜಾತಮಪಿ ಸ್ವರಾಗಂ**
**ಚಕ್ರಾಬ್ಜಮಾನಿತಕರಃ ಪ್ರತತೋರ್ಧ್ವಪಾದಃ ।**
**ಆಶ್ರಿತ್ಯ ವಿಷ್ಣುಪದಮುಗ್ರತಪೋಽತಪದ್ಯಃ**
**ತಸ್ಯೈವ ಧಾಮ ಸ ಜಗಾಮ ಕುತೋಽಸ್ಯ ಪಾತಃ ॥ ೨೬ ॥**

**ತ್ಯಕ್ತ್ವಾ** = ಬಿಟ್ಟು, **ಕ್ರಮೇಣ** = ಕ್ರಮದಿಂದ, **ಸಹಜಾತಮಪಿ** = ಒಟ್ಟಿಗೆ ಇರತಕ್ಕ-ದ್ದಾದರೂ, **ಸ್ವರಾಗಂ** = ತನ್ನ ರಾಗವನ್ನು, **ಚಕ್ರ** = ಒಂದು ವಿಧದ ಪಕ್ಷಿಯು, **ಅಬ್ಜ** = ಕಮಲವು ಇವುಗಳಿಂದ, **ಮಾನಿತ** = ಆದೃತವಾದ, **ಕರಃ** = ಕೈಗಳುಳ್ಳ, **ಪ್ರತತ** = ವ್ಯಾಪಿಸಿದ, **ಊರ್ಧ್ವ** = ಮೇಲ್ಮುಖವಾದ, **ಪಾದಃ** = ಪಾದಗಳುಳ್ಳ, **ಆಶ್ರಿತ್ಯ** = ಆಶ್ರಯಿಸಿ, **ವಿಷ್ಣುಪದಂ** = ಆಕಾಶವನ್ನು, **ಉಗ್ರತಪಃ** = ಕಠಿಣತಪಸ್ಸನ್ನು, **ಅತಪತ್** = ಮಾಡಿದನೋ, **ಯಃ** = ಯಾವ ಸೂರ್ಯನು, **ತಸ್ಯೈವ** = ಆ ದೇವರ, **ಧಾಮ** = ಮನೆಯನ್ನು, **ಸಃ** = ಅವನು, **ಜಗಾಮ** = ಹೋದನು, **ಕುತಃ** = ಹೇಗೆ? **ಅಸ್ಯ** = ಸೂರ್ಯನಿಗೆ, **ಪಾತಃ** = ಪತನವು.

ಈ ಶ್ಲೋಕದಲ್ಲಿ ಸೂರ್ಯನ ಪತನವನ್ನು ನಿರಾಕರಿಸುವ ಮೂಲಕ ಸೂರ್ಯಾಸ್ತ-ವನ್ನು ವರ್ಣಿಸುತ್ತಾರೆ. ಸೂರ್ಯನು ಒಬ್ಬ ತಪಸ್ವಿಯಂತೆ ತಪಸ್ಸನ್ನು ಮಾಡಿ ದೇವರ ಮನೆಯಾದ ಸಮುದ್ರವನ್ನು ಸೇರಿದನು.

ಒಬ್ಬ ಋಷಿಯು ತಾನು ಕೈಗಳಲ್ಲಿ ಚಕ್ರಾದಿಗಳ ಮುದ್ರೆಯನ್ನು ಧರಿಸುತ್ತಾನೆ. ಹುಟ್ಟಿದ ಸ್ವಲ್ಪ ವಯಸ್ಸಿನವರೆಗೆ ವಿಷಯರಾಗ ಇರುತ್ತದೆ. ಅನಂತರ ಅದನ್ನು ಬಿಡುತ್ತಾನೆ. ಕಾಲುಗಳನ್ನು ಮೇಲೆ ಎತ್ತಿ ಶೀರ್ಷಾಸನ ಮಾಡಿ ತಪಸ್ಸು ಮಾಡುತ್ತಾನೆ. ದೇವರ ಚರಣ-ವನ್ನೇ ಆಶ್ರಯಿಸಿಕೊಂಡಿರುತ್ತಾನೆ. ಸೂರ್ಯನೂ ಇದೇ ರೀತಿ ಇದ್ದಾನೆ. ತಾನು ಹುಟ್ಟುವ ಸಮಯದಲ್ಲಿ ರಾಗ ಎಂದರೆ ಕೆಂಪು ಬಣ್ಣ ಇತ್ತು. ಅನಂತರ ಸ್ವಲ್ಪ ಹೊತ್ತಾದ ಮೇಲೆ ಕೆಂಪು ಬಣ್ಣ ಹೋಗುತ್ತದೆ. ಆದ್ದರಿಂದ ಸೂರ್ಯನೂ ವಿರಾಗಿಯಾದನು. ಚಕ್ರವಾಕ ಪಕ್ಷಿಗಳು ಹಾಗೂ ಕಮಲಗಳು ಸೂರ್ಯನ ಕರಗಳನ್ನು ಅಂದರೆ ಕಿರಣಗಳನ್ನು ಆಧರಿಸುತ್ತವೆ. ಆದ್ದರಿಂದ ಸೂರ್ಯನೂ ಚಕ್ರಾಬ್ಜಮಾನಿತಕರನಾದ. ಸೂರ್ಯಾಸ್ತದ ಸಮಯದಲ್ಲಿ ಆತನ ಕಿರಣಗಳು ಮೇಲ್ಮುಖವಾಗಿರುತ್ತವೆ. ಕವಿಗಳ ದೃಷ್ಟಿಯಲ್ಲಿ ಸೂರ್ಯನ ಕಿರಣಗಳು ಆತನಿಗೆ ಕೈಗಳೂ, ಕಾಲ್ಗಳೂ ಆಗುತ್ತವೆ. ಆದ್ದರಿಂದ, ಸೂರ್ಯನೂ ಶೀರ್ಷಾಸನ ಮಾಡಿದಂತೆ ಆಯಿತು. ಸೂರ್ಯನೂ ವಿಷ್ಣುಪದವನ್ನು (ಆಕಾಶವನ್ನು) ಆಶ್ರಯಿಸಿದ್ದಾನೆ. ಈ ರೀತಿ ತಪಸ್ವಿಯ ಎಲ್ಲಾ ಸಾಮ್ಯ ಇರುವುದರಿಂದ ಸೂರ್ಯನ ಪತನವಿಲ್ಲ.

**ತಪ್ತಂ ತಪಸ್ವಿನಿವಹಂ ಭುವಿ ಯಸ್ತತಾನ**
**ಪೃಥ್ವ್ಯಾಶ್ಚ ಜೀವನಮಪಿ ಸ್ವಕರೈರ್ಜಹಾರ।**
**ಲಕ್ಷ್ಮೀಂ ತಥೋಡುನಿಕರಸ್ಯ ವೃಥೈವ ಭಾನೋಃ**
**ಸ್ತಸ್ಯಾಸ್ಯ ಪಾತಮಪಿ ಯುಕ್ತಿಸಹಂ ವದಾಮಃ ॥ ೨೭ ॥**

**ತಪ್ತಂ** = ಕ್ಲೇಶಗೊಂಡದ್ದನ್ನಾಗಿ, **ತಪಸ್ವಿನಿವಹಂ** = ಋಷಿಗಳ ಸಮೂಹವನ್ನು, **ಭುವಿ** = ಭೂಮಿಯಲ್ಲಿ, **ಯಃ** = ಯಾರು, **ತತಾನ** = ಮಾಡಿದನೋ, **ಪೃಥ್ವ್ಯಾಃ** = ಭೂಮಿಯ, **ಜೀವನಂ** = ಜಲವನ್ನು, **ಸ್ವಕರೈಃ** = ತನ್ನ ಕರಗಳಿಂದ, **ಜಹಾರ** = ಅಪಹರಿಸಿದನೋ, **ಲಕ್ಷ್ಮೀಂ** = ಕಾಂತಿಯನ್ನು, **ತಥಾ** = ಹಾಗೆಯೇ, **ಉಡುನಿಕರಸ್ಯ** = ನಕ್ಷತ್ರಗಳ ಗುಂಪಿನ, **ವೃಥೈವ** = ವ್ಯರ್ಥವಾಗಿಯೇ, **ಭಾನೋಃ** = ಸೂರ್ಯನ, **ತಸ್ಯ ಅಸ್ಯ** = ಅಂತಹ ಸೂರ್ಯನ, **ಪಾತಮಪಿ** = ಬೀಳುವಿಕೆಯು, **ಯುಕ್ತಿ ಸಹಂ** = ಯೋಗ್ಯ ಎಂದು, **ವದಾಮ** = ಹೇಳುತ್ತೇವೆ.

ಪುನಃ ಸೂರ್ಯನ ಪತನವೆಂದೇ ಹೇಳುತ್ತಾರೆ. – ಈ ಸೂರ್ಯನು ಭೂಮಿಯಲ್ಲಿ ತಪಸ್ಸು ಮಾಡುವ ಋಷಿಗಳನ್ನು ಬಹಳ ದಣಿಸಿದ್ದಾನೆ. ಭೂಮಿಯ ಜೀವನವನ್ನೇ ಹಾಳು ಮಾಡಿದ್ದಾನೆ. ಜೀವನ ಎಂದರೆ ನೀರು. ಅದೇ ರೀತಿ ನಕ್ಷತ್ರಗಳ ತೇಜಸ್ಸನ್ನೇ ಮುಸುಕು (ಮರೆ) ಮಾಡಿದ್ದಾನೆ. ಸೂರ್ಯೋದಯವಾದರೆ ನಕ್ಷತ್ರಗಳು ಮುಸುಕಾಗುತ್ತವೆ. ಈ ರೀತಿ ಎಲ್ಲರಿಗೂ ಉಪದ್ರವಕಾರಿಯಾದ ಸೂರ್ಯನಿಗೆ ಪತನವೇ ಯೋಗ್ಯ ಎಂದು ರಾಜರು ತಿಳಿಸುತ್ತಾರೆ.

**ಸ ಲಬ್ಧಜನ್ಮಾ ದಿಶಿ ವಜ್ರಪಾಣೇಃ**
**ಪ್ರವೃದ್ಧಗಾತ್ರೋ ಗಗನಸ್ಯ ಮಧ್ಯೇ।**
**ಅಗಾದ್ವಿನಾಶಂ ದ್ಯುಮಣಿಃ ಪ್ರತೀಚ್ಯಾಂ**
**ವಿಧೇರ್ನಿದೇಶೋ ಮಹತಾऽಪ್ಯಲಂಘ್ಯಃ ॥೨೮॥**

**ಸಃ** = ಆ, **ಲಬ್ಧಜನ್ಮಾ** = ಜನ್ಮವನ್ನು ಪಡೆದವನಾಗಿ, **ದಿಶಿ** = ದಿಕ್ಕಿನಲ್ಲಿ, **ವಜ್ರಪಾಣೇಃ** = ಇಂದ್ರನ, **ಪ್ರವೃದ್ಧಗಾತ್ರಃ** = ಬೆಳೆದವನಾಗಿ, **ಗಗನಸ್ಯ** = ಆಕಾಶದ, **ಮಧ್ಯೇ** = ಮಧ್ಯದಲ್ಲಿ, **ಅಗಾತ್** = ಹೊಂದಿದನು. **ವಿನಾಶಂ** = ನಾಶವನ್ನು, **ದ್ಯುಮಣಿಃ** = ಸೂರ್ಯನು, **ಪ್ರತೀಚ್ಯಾಂ** = ಪಶ್ಚಿಮದಲ್ಲಿ, **ವಿಧೇಃ** = ದೇವರ, **ನಿದೇಶಃ** = ಆಜ್ಞೆಯು, **ಮಹತಾಮಪಿ** = ಹಿರಿಯ- ರಿಂದಲೂ, **ಅಲಂಘ್ಯಃ** = ಮೀರಲು ಅಸಾಧ್ಯವು.

ಸೂರ್ಯನು ಬಹಳ ತೇಜಸ್ವಿ. ಆದರೂ ಪೂರ್ವದಲ್ಲಿ ಹುಟ್ಟಿದ. ಆಕಾಶ ಮಧ್ಯದಲ್ಲಿ ಬೆಳೆದ. ಪಶ್ಚಿಮದಲ್ಲಿ ಮೃತನಾದ. ತೇಜಸ್ವಿಗಳೂ ಈ ರೀತಿ ಎಲ್ಲೋ ಹುಟ್ಟಿ, ಎಲ್ಲೋ

ಬೆಳೆದು, ಎಲ್ಲೋ ಸಾಯುತ್ತಾರಾ? ಎಂಬ ಪ್ರಶ್ನೆಗೆ ರಾಜರು ಉತ್ತರಿಸುತ್ತಾರೆ – ಚತು-ರ್ಮುಖ ಯಾರ ಹಣೆಯಲ್ಲಿ ಹೇಗೆ ಬರೆದಿದ್ದಾನೋ ಹಾಗೆಯೇ ಆಗಬೇಕು. ಅದಕ್ಕೆ ಯಾರೂ ಅಪವಾದವಲ್ಲ.

**ರಾಗಂ ಪಯೋಧರತಟೇ ಹರಿದಂಗನಾನಾಂ**
**ರಾಗೀ ಸಮರ್ಪ್ಯ ಸವಿತಾ ಸಮಗಾದಗಾಂತಮ್ ।**
**ಕೂಜದ್ವಿಹಂಗಮರವೈರಿವ ತಾ ರುದಂತ್ಯೋ**
**ಭೇಜುಸ್ತಮಸ್ತತಿಮಥಾಂತರಿವೋರುಮೂರ್ಛಾಮ್ ॥ ೨೯ ॥**

**ರಾಗಂ** = ಬಣ್ಣವನ್ನು, **ಪಯೋಧರ** = ಮೋಡಗಳ, **ತಟೇ** = ತುದಿಯಲ್ಲಿ, **ಹರಿದಂಗ-ನಾನಾಂ** = ದಿಕ್ಕುಗಳೆಂಬ ಸ್ತ್ರೀಯರ, **ರಾಗೀ** = ಕೆಂಪುಬಣ್ಣವುಳ್ಳ, **ಸಮರ್ಪ್ಯ** = ಇಟ್ಟು, **ಸವಿತಾ** = ಸೂರ್ಯನು, **ಸಮಗಾತ್** = ಹೊರಟನು, **ಅಗಾಂತಂ** = ಬೆಟ್ಟದ ಕೊನೆಯನ್ನು, **ಕೂಜತ್** = ಧ್ವನಿಗೈಯುವ, **ವಿಹಂಗಮ** = ಪಕ್ಷಿಗಳ, **ರವೈರಿವ** = ಧ್ವನಿಗಳಂತೆ, **ತಾಃ** = ಆ ದಿಕ್ಕುಗಳು, **ರುದಂತ್ಯಃ** = ಅಳುವಂತೆ, **ಭೇಜುಃ** = ಹೊಂದಿದವು, **ತಮಃ ತತಿಂ** = ಕತ್ತಲೆಯ ಸಮೂಹವನ್ನು, **ಅಥ** = ಅನಂತರ, **ಅಂತಃ** = ಒಳಗೆ, **ಉರುಮೂರ್ಛಾಂ ಇವ** = ಮೂರ್ಛೆಯಂತೆ.

ಒಬ್ಬ ಕಾಮುಕನು ತಾನು ದೂರ ಹೋಗುವಾಗ ತನ್ನ ಸ್ತ್ರೀಯ ಪಯೋಧರದಲ್ಲಿ ರಾಗವನ್ನು ಇಟ್ಟು ಅಂದರೆ ಮನಸ್ಸಿನಲ್ಲಿ ಅದನ್ನೇ ಚಿಂತಿಸುತ್ತಾ ಇರುತ್ತಾನೆ. ಈ ಸ್ತ್ರೀಯು ತಾನು ಕೂಗುತ್ತಾಳೆ. ಹಾಗೆಯೇ ಮೂರ್ಛೆಯನ್ನು ಹೊಂದುತ್ತಾಳೆ. ಸೂರ್ಯನೂ ಕಾಮುಕನಂತೆ ಇದ್ದಾನೆ. ತಾನು ಅಸ್ತಾಚಲದ ಕಡೆಗೆ ಹೊರಟಿದ್ದಾನೆ. ಹೊರಡುವ ಮೊದಲು ದಿಕ್ಕು ಎಂಬ ಸ್ತ್ರೀಯರ ಪಯೋಧರಗಳಲ್ಲಿ ರಾಗವನ್ನು ಇಟ್ಟನು. ಸೂರ್ಯನು ಅಸ್ತಮಿಸುವಾಗ ದಿಗಂತಗಳಲ್ಲಿರುವ ಮೋಡಗಳು ಕೆಂಪಾಗುತ್ತವೆ. ಪಯೋಧರ ಎಂಬ ಹೆಸರು ಮೋಡಗಳಿಗೂ ಸ್ತನಗಳಿಗೂ ಇದೆ. ಈ ಸಮಯದಲ್ಲಿ ಪಕ್ಷಿಗಳು ಗೂಡು ಸೇರುವ ತವಕದಲ್ಲಿ ಕೂಗುತ್ತವೆ. ಇದು ದಿಕ್ಕು ಎಂಬ ಸ್ತ್ರೀಯರು ಕೂಗುವುದೆಂದು ರಾಜರು ಉತ್ಪ್ರೇಕ್ಷಿಸುತ್ತಾರೆ. ಇಷ್ಟಾಗುವಾಗ ಕತ್ತಲಾಯಿತು. ಮೂರ್ಛೆಗೊಂಡ ಸ್ತ್ರೀಯರಲ್ಲಿ ಅಜ್ಞಾನ ಆವರಿಸುವಂತೆ ಈ ದಿಕ್ಕು ಎಂಬ ಸ್ತ್ರೀಯರಲ್ಲಿ ಕತ್ತಲು ಆವರಿಸಿತು. ರಾಜರ ಕಾವ್ಯಶೈಲಿ ಅದ್ಭುತ. ಇದೆಲ್ಲಾ ನಮಗೆ ನಿತ್ಯ ದೃಶ್ಯವಾದವುಗಳು.

**ಅಂಭೋಧಿಹೃತ್ಕೃತಪದಂ ಪ್ರತಿರೂಪಮರ್ಕಃ**
**ಸಂದೃಶ್ಯ ಸಾಧು ಧವಲೀಕೃತತಜ್ಜಲೌಘಮ್ ।**

**ಶಾಂತೋ ಹಿ ಸರ್ವಹೃದಯಂಗಮತಾಮುಪೈತೀ-**
**ತ್ಯಂತೇ ಶಮಂ ಸಮಧಿಗಮ್ಯ ವಿವೇಶ ಸೋಽಬ್ಧಿಮ್ ॥ ೩೦ ॥**

**ಅಂಬೋಧಿ** = ಸಮುದ್ರದ, **ಹೃತ್** = ಮಧ್ಯದಲ್ಲಿ, **ಕೃತಪದಂ** = ಇರುವ, **ಪ್ರತಿರೂಪಂ** = ಪ್ರತಿಬಿಂಬವನ್ನು, **ಅರ್ಕಃ** = ಸೂರ್ಯನು, **ಸಂದೃಶ್ಯ** = ನೋಡಿ, **ಸಾಧು** = ಚೆನ್ನಾಗಿ, **ಧವಲೀಕೃತ** = ಶುದ್ಧಮಾಡಲ್ಪಟ್ಟ, **ತತ್** = ಸಮುದ್ರದ, **ಜಲೌಘಂ** = ನೀರಿನ ಸಮೂಹವುಳ್ಳ, **ಶಾಂತಃ** = ಸಾಧುವು, **ಸರ್ವ** = ಎಲ್ಲರ, **ಹೃದಯಂಗಮತಾಂ** = ಹೃದಯದಲ್ಲಿರುವಿಕೆಯನ್ನು, **ಉಪೈತಿ** = ಹೊಂದುತ್ತಾನೆ, **ಇತಿ** = ಎಂದು, **ಅಂತೇ** = ಕೊನೆಯಲ್ಲಿ, **ಶಮಂ** = ಸೌಮ್ಯವನ್ನು, **ಸಮಧಿಗಮ್ಯ** = ಹೊಂದಿ, **ವಿವೇಶ** = ಪ್ರವೇಶಿಸಿದನು, **ಸಃ** =ಆ, **ಅಬ್ಧಿಂ** = ಸಮುದ್ರವನ್ನು.

ಶುಭ್ರವಾದ ಸಮುದ್ರದ ನೀರಿನ ಒಳಗೆ ಸೂರ್ಯನ ಪ್ರತಿಬಿಂಬ ತೋರುತ್ತಿದೆ. ಇದನ್ನು ಸೂರ್ಯ ನೋಡಿದ. ತಾನು ಹೊರಗೆ ಯಾಕೆ? ತನ್ನ ಪ್ರತಿಬಿಂಬ ಸಮುದ್ರದೊಳಗೆ ಯಾಕೆ? ಎಂದು ತನ್ನಲ್ಲಿ ಪ್ರಶ್ನಿಸಿಕೊಂಡನು. ತಾನೇ ಉತ್ತರವನ್ನೂ ಕಂಡುಕೊಂಡನು. ಇನ್ನೊಬ್ಬರ ಹೃದಯದಲ್ಲಿ ಇರಬೇಕಾದರೆ ಶಾಂತರಾಗಬೇಕು. ಪ್ರತಿಬಿಂಬವು ಶಾಂತವಾಗಿದೆ. ಹಾಗಾದರೆ ನಾನೂ ಶಾಂತನಾಗಬೇಕು ಎಂದು ಭಾವಿಸಿ ತಾನು ಶಾಂತನಾದ. ಕೂಡಲೇ ಸಮುದ್ರವು ಆತನನ್ನು ತನ್ನಲ್ಲಿ ಸೇರಿಸಿಕೊಂಡಿತು. ಪ್ರತಿಬಿಂಬ ಯಾವಾಗಲೂ ಶಾಂತವೇ. ಅದು ಯಾವಾಗಲೂ ನೀರಿನ ಒಳಗೇ ಇರುವುದು. ಸೂರ್ಯನು ಸದಾ ಅಸ್ತಮಿಸುವಾಗ ಶಾಂತನಾಗಿಯೇ ಇರುತ್ತಾನೆ. ಸಮುದ್ರವನ್ನೇ ಸೇರುತ್ತಾನೆ. ಇಷ್ಟೆಲ್ಲಾ ಸಹಜವಾದದ್ದನ್ನೇ ಇಟ್ಟುಕೊಂಡು ಅದನ್ನು ಆಲಂಕಾರಿಕವಾಗಿ ವರ್ಣಿಸುತ್ತಾರೆ.

• • • •

**ಸಂದೇಶ**

**ಆಶಾ ಹಿ ನೂತ್ನವಿಷಯಾ ಗಣಯಂತಿ ನೈನಃ।**

ಹೊಸವಸ್ತು ಸಿಕ್ಕಿದಾಗ ಅದನ್ನು ಅನುಭವಿಸುವ ವಿಷಯದಲ್ಲಿ ಪಾಪಪುಣ್ಯಗಳನ್ನು ಯಾರೂ ಗಮನಿಸುವುದಿಲ್ಲ.

---

**ಮಿತ್ರೇಽಂಬುಜಾತನಿಕರಸ್ಯ ನಿತಾಂತಮಿತ್ರೇ**
**ಹ್ಯಸ್ತಂ ಸಮೀಯುಷಿ ಮುಖಂ ಮುಕುಲೀಬಭೂವ।**
**ಪದ್ಮಸ್ಯ ಶುದ್ಧಜಲಗಸ್ಯ ಚ ಮುದ್ರಯಂತಿ**
**ನಷ್ಟಾಃ ಪ್ರಿಯಾಃ ಖಲು ಸಮೃದ್ಧಿಯುಜೋಽಪಿ ವಕ್ತ್ರಮ್ ॥ ೩೧ ॥**

ಮಿತ್ರೇ = ಸೂರ್ಯನು, ಅಂಬುಜಾತ = ಕಮಲಗಳ, ನಿಕರಸ್ಯ = ಗುಂಪಿಗೆ,

**ನಿತಾಂತಮಿತ್ರೇ ಹಿ** = ಚೆನ್ನಾಗಿ ಮಿತ್ರನಾದ, **ಅಸ್ತಂ** = ಮುಳುಗುವಿಕೆಯನ್ನು, **ಸಮೀಯುಷಿ** = ಹೊಂದುತ್ತಿರಲು, **ಮುಖಂ** = ಮುಖವು, **ಮುಕುಲೀಬಭೂವ** = ಮುದುಡಿತು, **ಪದ್ಮಸ್ಯ** = ಕಮಲದ, ಶುದ್ಧ ಜಲಗಸ್ಯ = ಶುದ್ಧ ನೀರಿನಲ್ಲಿರುವ, **ಮುದ್ರ-ಯಂತಿ** = ಮುದುಡಿಸುತ್ತಾರೆ, **ನಷ್ಟಾಃ** = ನಾಶ ಹೊಂದಿದ, **ಪ್ರಿಯಾಃ** = ಮಿತ್ರರು, **ಸಮೃದ್ಧಿಯುಜೋಽಪಿ** = ಶ್ರೀಮಂತರದ್ದೂ ಕೂಡ, **ವಕ್ತ್ರಂ ಖಲು** = ಮುಖವನ್ನು.

ಸೂರ್ಯನು ಕಮಲಗಳ ಮಿತ್ರನು. ಈತನು ಅಸ್ತನಾದನು. ಆಗ ಕಮಲಗಳ ಮುಖವು ಬಾಡಿತು. ಸೂರ್ಯಾಸ್ತವಾಗುವಾಗ ಕಮಲಗಳು ಮುದುಡುತ್ತವೆ. ಯದ್ಯಪಿ ಕಮಲಗಳು ತಮ್ಮ ಸಂಪತ್ತಾದ ನೀರಿನ ಮಧ್ಯದಲ್ಲೇ ಇವೆ. ಆದರೂ ಬಾಡಿದವು. ಎಷ್ಟೇ ಸಂಪನ್ನರಾದರೂ ಮಿತ್ರರನ್ನು ಕಳೆದುಕೊಂಡಾಗ ಬೇಸರಿಸುತ್ತಾರೆ.

**ಆಕಂಠೋದಕವಾಸಿ ಹೃದ್ಗಮಧುಕೃಝ್ಝುಂಕಾರರಮ್ಯೋಂಕೃತಿ**
**ಭ್ರಾಜತ್ ಕಂಟಕಕಂಟಕದ್ಯುತಿ ಮುಹುರ್ಮಂತ್ರಾರ್ಥಸಂಚಿಂತಯಾ।**
**ಈಷತ್‌ಕಂಪಿತಮೂರ್ಧಶೋಭಿ ನಲಿನಂ ಹಂಸೌಘಸಂಶಿಕ್ಷಿತಂ**
**ಸ್ವಾಂತಃ ಸ್ಥಾಪಿತಧಾತೃ ಸಾಧು ತಪತೀವಾಕಾಂಕ್ಷ್ಯ ಮಿತ್ರೋದಯಮ್ ॥೩೨॥**

**ಆಕಂಠ** = ಕುತ್ತಿಗೆ ತನಕ, **ಉದಕ** = ನೀರಿನಲ್ಲಿ, ವಾಸಿ = ವಾಸಿಸುವ, **ಹೃದ್ಗ** = ಮಧ್ಯ-ದಲ್ಲಿರುವ, **ಮಧುಕೃತ್** = ಭ್ರಮರದ, **ಝುಂಕಾರ** = ಝೇಂಕಾರವೆಂಬ, **ರಮ್ಯ** = ಇಂಪಾದ, **ಓಂಕೃತಿ** = ಓಂಕಾರವುಳ್ಳ, **ಭ್ರಾಜತ್** = ಶೋಭಿಸುವ, **ಕಂಟಕ** = ಮುಳ್ಳು-ಗಳೆಂಬ, **ಕಂಟಕ** = ರೋಮಾಂಚದ, **ದ್ಯುತಿ** = ಕಾಂತಿಯುಳ್ಳ, **ಮುಹುಃ** = ಮತ್ತು, **ಮಂತ್ರಾರ್ಥ** = ಮಂತ್ರಾರ್ಥಗಳ, **ಸಂಚಿಂತಯಾ** = ಅನುಸಂಧಾನದಿಂದ, **ಈಷತ್** = ಸ್ವಲ್ಪ, **ಕಂಪಿತ** = ಅಲ್ಲಾಡುವ, **ಮೂರ್ಧ** = ತಲೆಯಿಂದ, **ಶೋಭಿ** = ಶೋಭಿಸುವ, **ನಲಿನಂ** = ಕಮಲವು, **ಹಂಸ** = ಪಕ್ಷಿಗಳ, **ಓಘ** = ಸಮೂಹದಿಂದ, **ಸಂಶಿಕ್ಷಿತಂ** = ಚುಚ್ಚಲ್ಪಟ್ಟ, **ಸ್ವ** = ತನ್ನ, **ಅಂತ** = ಒಳಗೆ, **ಸ್ಥಾಪಿತ** = ಇಡಲ್ಪಟ್ಟ, **ಧಾತೃ** = ಬ್ರಹ್ಮವುಳ್ಳ, **ಸಾಧು** = ಚೆನ್ನಾಗಿ, **ತಪತೀವ** = ತಪಸ್ಸು ಮಾಡುವಂತಿದೆ, **ಆಕಾಂಕ್ಷ್ಯ** = ಅಪೇಕ್ಷಿಸಿ, **ಮಿತ್ರೋದಯಂ** = ಸೂರ್ಯನ ಉದಯವನ್ನು.

ಸೂರ್ಯಾಸ್ತಕಾಲದಲ್ಲಿ ಕಮಲವು ದೇವರ ಧ್ಯಾನದಲ್ಲಿ ತೊಡಗಿದಂತೆ ಇತ್ತು. ತಪಸ್ವಿಯು ಕಂಠತನಕ ಜಲದಲ್ಲಿ ಇರುತ್ತಾನೆ. ಓಂಕಾರವನ್ನು ಉಚ್ಚರಿಸುತ್ತಾನೆ. ಆನಂದ-ದಿಂದ ರೋಮಾಂಚಗೊಳ್ಳುತ್ತಾನೆ. ಮಂತ್ರಗಳ ಅರ್ಥದ ಅನುಸಂಧಾನ ಮಾಡುವಾಗ ತಲೆಯನ್ನು ಸ್ವಲ್ಪ ಅಲುಗಾಡಿಸುತ್ತಾನೆ. ತನಗಿಂತ ಹಿರಿಯ ಪರಮಹಂಸಸನ್ನ್ಯಾಸಿಗಳಿಂದ ಉಪದೇಶ ಪಡೆಯುತ್ತಾನೆ. ತನ್ನ ಒಳಗೆ ಸೃಷ್ಟಿಕರ್ತನನ್ನು ಸ್ಥಾಪಿಸುತ್ತಾನೆ. ಕಮಲವು

ನೀರಿನಲ್ಲಿದೆ. ಅದರ ಶರೀರದಂತಿರುವ ದಂಟು ಪೂರ್ಣ ನೀರಿನಲ್ಲಿರುತ್ತದೆ. ಪುಷ್ಪ ಮಾತ್ರ ನೀರ ಮೇಲೆ ಇರುತ್ತದೆ. ಕಮಲ ಅರಳಿದಾಗ ಭ್ರಮರಗಳು ರಸ ಹೀರುವ ಸಲುವಾಗಿ ಅದರಲ್ಲಿ ಕುಳಿತಿದ್ದವು. ಸೂರ್ಯಾಸ್ತ ಕಾಲದಲ್ಲಿ ಕಮಲ ಮುಚ್ಚಿದಾಗ ಅವುಗಳಿಗೆ ಗೊತ್ತಾಗದೆ ಅಲ್ಲೇ ಝೇಂಕಾರ ಮಾಡುತ್ತ ಉಳಿದವು. ಈ ಶಬ್ದವು ಕಮಲವು ಓಂಕಾರವನ್ನು ಉಚ್ಚರಿಸುವಂತಿತ್ತು. ದಂಟುಗಳಲ್ಲಿ ಇರುವ ಮುಳ್ಳುಗಳು ರೋಮಾಂಚಗೊಂಡಾಗ ನೆಟ್ಟಗೆ ನಿಲ್ಲುವ ರೋಮಗಳಂತೆ ತೋರುತ್ತಿದ್ದವು. ಒಳಗಿನ ದುಂಬಿಯ ಅಲುಗಾಟದಿಂದ ತಾವರೆಯು ಅಲುಗುತ್ತಿತ್ತು. ಇದು ಮಂತ್ರಾರ್ಥದ ಅನುಸಂಧಾನದಿಂದ ತಲೆ ಅಲುಗಾಡುವಂತಿತ್ತು. ಹಂಸಪಕ್ಷಿಗಳು ತಮ್ಮ ಕೊಕ್ಕುಗಳಿಂದ ಕಮಲಗಳನ್ನು ಕುಕ್ಕುತ್ತವೆ. ಇದು ಕಮಲಗಳಿಗೆ ಶಿಕ್ಷಣದಂತೆ ಕಮಲಗಳೂ ತಮ್ಮಲ್ಲಿ ಭ್ರಮರಗಳೆಂಬ ಚತುರ್ಮುಖನನ್ನು ಇಟ್ಟುಕೊಂಡಿವೆ. ಬ್ರಹ್ಮನು ಕಮಲಾಸನನು. ದುಂಬಿಗಳು ಈಗ ಕಮಲಾಸನಗಳು. ತಾವರೆಗಳ ತಪಸ್ಸಿನ ಉದ್ದೇಶ ಮಿತ್ರನಾದ ಸೂರ್ಯನ ಸೃಷ್ಟಿ. ಸೃಷ್ಟಿಕರ್ತ ಬ್ರಹ್ಮನಾದ್ದರಿಂದ ಆತನ ಧ್ಯಾನ ಮಾಡುವುದು ಉಚಿತ.

ದಿಗಾಯತಾಕ್ಷೀಮಪರಾಮುಪೇತ್ಯ
ದಿಶಾಪತೌ ರಾಗಮುಪೇಯುಷೀಂದುಃ।
ಅದೃಶ್ಯತೈಂದ್ರ್ಯಾಂ ದಿಶಿ ರೋಷರಕ್ತಂ
ನಿಬದ್ಧನೀಲಭ್ರುಕುಟೀವ ವಕ್ತ್ರಮ್ ॥೩೩॥

**ದಿಗಾಯತಾಕ್ಷೀಂ** = ದಿಕ್ಕೆಂಬ ಸ್ತ್ರೀಯನ್ನು, **ಅಪರಾಂ** = ಇನ್ನೊಬ್ಬಳು, **ಉಪೇತ್ಯ** = ಹೊಂದಿ, **ದಿಶಾಪತೌ** = ಸೂರ್ಯನು, **ರಾಗಂ** = ರಾಗವನ್ನು, **ಉಪೇಯುಷಿ** = ಹೊಂದುತ್ತಿರಲು, **ಇಂದುಃ** = ಚಂದ್ರನು, **ಅದೃಶ್ಯತ** = ಕಂಡನು, **ಐಂದ್ರ್ಯಾಂ** = ಇಂದ್ರ-ಸಂಬಂಧಿಯಾದ, **ದಿಶಿ** = ದಿಕ್ಕಲ್ಲಿ, **ರಕ್ತಂ** =ಕೋಪದಿಂದ ಕೆಂಪಾದ, **ನಿಬದ್ಧ** = ಗಂಟಿಕ್ಕಿದ, **ನೀಲ** = ನೀಲವಾದ, **ಭ್ರುಕುಟಿ** = ಹುಬ್ಬುಳ್ಳ, **ವಕ್ತ್ರಮಿವ** = ಮುಖದಂತೆ.

ಆರಂಭದಲ್ಲಿ ಪೂರ್ವದಿಕ್ಕೆಂಬ ಹೆಣ್ಣಲ್ಲಿ ಆಸಕ್ತನಾಗಿದ್ದ ಸೂರ್ಯನು ಸಾಯಂಕಾಲ ಪಶ್ಚಿಮದಿಕ್ಕೆಂಬ ಇನ್ನೊಂದು ಹೆಣ್ಣಿನ ಬಳಿಗೆ ಹೋದನು. ಹೋದದ್ದು ಮಾತ್ರವಲ್ಲ. ಅಲ್ಲಿ ರಾಗಯುಕ್ತನೂ ಆದನು. ಆ ಸಮಯದಲ್ಲಿ ಪೂರ್ವದಿಕ್ಕೆಂಬ ಹೆಣ್ಣು, ಸೂರ್ಯನಲ್ಲಿ ಸಿಟ್ಟಾಯಿತು. ಚಂದ್ರನಲ್ಲಿ ಕಪ್ಪು ಕಲೆಗಳಿವೆ. ಚಂದ್ರೋದಯದ ಮೂಲಕ ಸಿಟ್ಟನ್ನು ತೋರಿಸಿ ಕೊಟ್ಟಿತು. ಇದು ಮುಖ ಗಂಟಿಕ್ಕಿದಂತೆ ತೋರುತ್ತದೆ. ಉದಿಸುವಾಗ ಚಂದ್ರನು ಕೆಂಪಗಿರುತ್ತಾನೆ. ಆದ್ದರಿಂದ ಸಿಟ್ಟಾದಂತೆ ತೋರುತ್ತದೆ. ಸೂರ್ಯಾಸ್ತವಾದಾಗ ಚಂದ್ರೋದಯವಾಯಿತು ಎಂದು ಒಟ್ಟು ಅಭಿಪ್ರಾಯ.

**ನಕ್ಷತ್ರಾಲಿಭಿರಿಂದ್ರದಿಙ್ಮೃಗದೃಶಂ ಸಂಧಾಯ ಪೂರ್ವಂ ಪುನ-**
**ಸ್ತತ್ಪಾದೇ ಪ್ರಣತಿಂ ವಿಧಾಯ ನಿತರಾಮಾಶಾಂತರಾಸಕ್ತಿಜಮ್ ।**
**ತಸ್ಯಾಃ ಕೋಪಸಮಂ ತಮಃ ಪರಿಹರನ್ ಸ್ವೀಯೈಃ ಕರೈಸ್ತಾಂ ಸ್ಪೃಶನ್**
**ವಕ್ತ್ರಾಂಭೋರುಹಚುಂಬನಾಯ ಶನಕೈರುದ್ಯಾತಿ ನೂನಂ ಶಶೀ ॥ ೩೪ ॥**

**ನಕ್ಷತ್ರ** = ನಕ್ಷತ್ರಗಳೆಂಬ, **ಆಲಿಭಿಃ** = ಗೆಳತಿಯರಿಂದ, **ಇಂದ್ರದಿಙ್ಮೃತದೃಶಂ** = ಪೂರ್ವದಿಕ್ಕೆಂಬ ಸ್ತ್ರೀಯನ್ನು, **ಸಂಧಾಯ** = ಸಂಧಾನವನ್ನು ಮಾಡಿ, **ಪೂರ್ವಂ** = ಮೊದಲು, **ಪುನಃ** = ಅನಂತರ, **ತತ್** = ಆ ದಿಕ್ಕಿನ, **ಪಾದೇ** = ಪಾದದಲ್ಲಿ, **ಪ್ರಣತಿಂ** = ನಮಸ್ಕಾರವನ್ನು, **ವಿಧಾಯ** = ಮಾಡಿ, **ನಿತರಾಂ** = ಚೆನ್ನಾಗಿ, **ಅಶಾಂತರ** = ಬೇರೆ ದಿಕ್ಕಿನಲ್ಲಿ, **ಆಸಕ್ತಿಜಂ** = ಆಸಕ್ತಿಯಿಂದ ಹುಟ್ಟಿದ, **ತಸ್ಯಾಃ** = ಪೂರ್ವದಿಕ್ಕಿನ, **ಕೋಪಸಮಂ** = ಕೋಪದಂತಿರುವ, **ತಮಃ** = ಕತ್ತಲೆಯನ್ನು, **ಪರಿಹರನ್** = ಪರಿಹರಿಸುವ, **ಸ್ವೀಯೈಃ** = ತನ್ನ, **ಕರೈಃ** = ಕಿರಣಗಳಿಂದ, **ತಾಂ** = ಆ ದಿಕ್ಕನ್ನು, **ಸ್ಪೃಶನ್** = ಮುಟ್ಟುತ್ತಾ, **ವಕ್ತ್ರ** = ಮುಖವೆಂಬ, **ಅಂಭೋರುಹ** = ಕಮಲದ, **ಚುಂಬನಾಯ** = ಚುಂಬಿಸಲು, **ಶನಕೈಃ** = ಮೆಲ್ಲನೆ, **ಉದ್ಯಾತಿ** = ಉದಿಸುತ್ತಾನೆ, **ನೂನಂ** = ನಿಶ್ಚಯವಾಗಿಯೂ, **ಶಶೀ** = ಚಂದ್ರನು.

ಪ್ರಕಾರಾಂತರೇಣ ಚಂದ್ರೋದಯದ ವರ್ಣನೆ – ಪೂರ್ವದಿಗಂಗನೆಗೆ ಚಂದ್ರನಲ್ಲಿ ಕೋಪ ಇತ್ತು. ಕೋಪ ಕಪ್ಪು. ಪೂರ್ವದಿಕ್ಕಿನಲ್ಲಿ ಕತ್ತಲು ಇತ್ತು ಎಂದರ್ಥ. ಚಂದ್ರನು ತನ್ನ ಈ ಹೆಣ್ಣನ್ನು ಸಮಾಧಾನ ಮಾಡಲು ತನ್ನ ಸೇವಕರಾದ ನಕ್ಷತ್ರಗಳನ್ನು ಕಳಿಸಿದನು. ಚಂದ್ರನಿಗೆ ಉಡುಪ ಎಂದರೆ ನಕ್ಷತ್ರಗಳ ರಾಜ ಎಂದು ಹೆಸರಿದೆ. ಉಡುಗಳು ಅಂದರೆ ನಕ್ಷತ್ರಗಳು. ಚಂದ್ರೋದಯಕ್ಕಿಂತ ಮೊದಲು ನಕ್ಷತ್ರಗಳು ಕಾಣಸುತ್ತವೆ. ಆದರೂ ದಿಕ್ ಶಾಂತ-ವಾಗಲಿಲ್ಲ. ಕತ್ತಲು ಪೂರ್ಣ ಹೋಗಲಿಲ್ಲ. ಆಗ ಸ್ವಯಂ ಚಂದ್ರನೇ ಅವಳ ಕಾಲಿಗೆರಗಿದ. ಅಂದರೆ ಚಂದ್ರೋದಯವಾಯಿತು. ದಿಕ್ಕಿನ ಕೆಳ ಭಾಗದಲ್ಲಿ ಚಂದ್ರೋದಯವಾಗುವುದು. ತನ್ನ ಕಿರಣಗಳೆಂಬ ಕೈಗಳಿಂದ ಅವಳನ್ನು ಸ್ಪರ್ಶ ಮಾಡಿದನು. ಚಂದ್ರೋದಯದಿಂದ ಮೊದಲು ಬೆಳಗಾಗುವುದು ಪೂರ್ವದಲ್ಲೇ. ಕತ್ತಲು ಹೋಯಿತು. ಸಿಟ್ಟು ಕಮ್ಮಿಯಾಯಿತು. ಇನ್ನು ಆಕೆಯ ಮುಖಕಮಲವನ್ನು ಮುದ್ದಿಡಲೋ ಎಂಬಂತೆ ಚಂದ್ರನು ಮೇಲೇರಿದನು.

ಚಂದ್ರಸ್ಯ ಕೋಮಲಕರೈ ರಚಿತಾಂಗಸಂಗಾಃ
ಸಾಂದ್ರಾಂಧಕಾರಮಪಿ ತಾಃ ಸಹಸಾ ವಿಹಾಯ ।
ಈಶಂ ಸ್ವಪತ್ಸ್ವಖಿಲಜಂತುಷು ವವ್ರುರೇನಂ
ಆಶಾ ಹಿ ನೂತ್ನವಿಷಯಾ ಗಣಯಂತಿ ನೈನಃ ॥ ೩೫ ॥

**ಚಂದ್ರಸ್ಯ** = ಚಂದ್ರನ, **ಕೋಮಲಕರೈಃ** = ಕೋಮಲ ಕಿರಣಗಳಿಂದ, **ರಚಿತ** = ಮಾಡಲ್ಪಟ್ಟ, **ಅಂಗ** = ಶರೀರದ, **ಸಂಗಾಃ** = ಸಂಬಂಧವುಳ್ಳ, **ಸಾಂದ್ರ** = ನಿಬಿಡವಾದ, **ಅಂಧಕಾರಮಪಿ** = ಕತ್ತಲೆಯನ್ನು, **ತಾಃ** = ಅವರು, **ಸಹಸಾ** = ಕೂಡಲೇ, **ವಿಹಾಯ** = ಬಿಟ್ಟು, **ಈಶಂ** = ಪತಿಯನ್ನಾಗಿ, **ಸ್ವಪತ್ಸು** = ಮಲಗಿರಲು, **ಅಖಿಲಜಂತುಷು** = ಎಲ್ಲಾ ಪ್ರಾಣಿಗಳು, **ವವ್ರುಃ** = ಸ್ವೀಕರಿಸಿದರು, **ಏನಂ** = ಈ ಚಂದ್ರನನ್ನು, **ಆಶಾಃ** = ಆಸೆಗಳು, **ನೂತ್ನವಿಷಯಾಃ** = ಹೊಸ ವಿಷಯಕವಾದ, **ನ ಗಣಯಂತಿ** = ಲೆಕ್ಕಿಸುವುದಿಲ್ಲ, **ಏನಃ** = ಪಾಪವನ್ನು.

ದಿಕ್ಕುಗಳು ಸೂರ್ಯನ ಪತ್ನಿಯರು ಎಂದು ಕವಿಕಲ್ಪನೆ. ಇಂತಹವರ ಸಂಗವನ್ನು ಚಂದ್ರ ಮಾಡಿದನು. ಚಂದ್ರ ಎಂಬ ಶಬ್ದವು ಚಂದದವ ಎಂಬುದಷ್ಟೇ ಸಂಕೇತ. ಈತನು ತನ್ನ ಕಿರಣಗಳೆಂಬ ಕೈಗಳಿಂದ ಇವರ ಸಂಗ ಮಾಡಿದನು. ಇವರು ಪತಿಯ ಅಗಲು-ವಿಕೆಯಿಂದ ತುಂಬಾ ದುಃಖಿತರಾಗಿದ್ದರು. ಆದರೂ ಈಗ ದುಃಖವನ್ನು ಬಿಟ್ಟರು. ಅಂದರೆ ಕತ್ತಲೆ ಹೋಯಿತು. ರಾತ್ರಿಯಲ್ಲಿ ಎಲ್ಲರೂ ಮಲಗಿದ್ದಾಗ ಚಂದ್ರನನ್ನು ತಮ್ಮ ಪತಿಯನ್ನಾಗಿ ಸ್ವೀಕರಿಸಿದರು. ರಾತ್ರಿಯಲ್ಲಿ ಎಲ್ಲರೂ ಮಲಗುವುದು ಸಹಜ. ಈ ರೀತಿ ದಿಕ್ಕುಗಳು ಮಾಡಿದ್ದು ಸರಿಯಾ? ಎಂಬ ಪ್ರಶ್ನೆಗೆ ರಾಜರು ಉತ್ತರಿಸುತ್ತಾರೆ. ಆಶಾಗಳು ಯಾವಾಗಲೂ ಹೊಸತನ್ನೇ ಅಪೇಕ್ಷಿಸುತ್ತವೆ. ಪಾಪಕ್ಕೂ ಹೆದರುವುದಿಲ್ಲ. ಆಶಾ ಎಂಬ ಶಬ್ದಕ್ಕೆ ಆಸೆ ಹಾಗೂ ದಿಕ್ಕು ಎಂದು ಎರಡು ಅರ್ಥ. ಮಾನವನ ಆಸೆಗಳು ದಿನಕ್ಕೊಂದನ್ನು ಅಪೇಕ್ಷಿಸುತ್ತವೆ. ಯಾವ ಪಾಪಕ್ಕೂ ಹೆದರುವುದಿಲ್ಲ. ಆದ್ದರಿಂದ ದಿಕ್ಕೆಂಬ ಆಶಾಳೂ ಇನ್ನೊಬ್ಬನನ್ನು ಆಶ್ರಯಿಸಿದ್ದಾಳೆ. ಯಾವ ಪಾಪಕ್ಕೂ ಹೆದರುವುದಿಲ್ಲ.

**ಪೂರ್ವಾಬ್ಧಾವವಗಾಹ್ಯ ಫೇನನಿಚಯಶ್ರೀಖಂಡಲೇಪದ್ಯುತಿಃ**
**ಸ್ವಾಂಕಾಲಂಕೃತಿಮೂಲನೀಲತಿಲಕಸ್ತಾರೌಘಹಾರಾನ್ ದಿಶನ್ ।**
**ವ್ಯೋಮಾಖ್ಯಾಂ ಕಬರೀಂ ಪ್ರಗೃಹ್ಯ ಸುಕರೈರಾಶ್ಲಿಷ್ಯ ದಿಕ್ಕಾಮಿನೀಂ**
**ಐಂದ್ರೀಮಿಂದುರಸೌ ಚುಚುಂಬ ಸರಸೋ ರಾಗೇಣ ತಾಂ ರಂಜಯನ್ ॥೩೬**

**ಪೂರ್ವಾಬ್ಧೌ** = ಪೂರ್ವಸಮುದ್ರದಲ್ಲಿ, **ಅವಗಾಹ್ಯ** = ಮುಳುಗಿ, **ಫೇನ** = ನೊರೆಗಳ, **ನಿಚಯ** = ಸಮೂಹವೆಂಬ, **ಶ್ರೀಖಂಡ** = ಶ್ರೀಗಂಧದ, **ಲೇಪ** = ಹೆಚ್ಚುವಿಕೆಯಿಂದ, **ದ್ಯುತಿಃ** = ಕಾಂತಿಯುಳ್ಳ, **ಸ್ವ**= ತನ್ನ, **ಅಂಕ** = ಚಿಹ್ನೆ ಎಂಬ, **ಅಲಂಕೃತಿ** = ಅಲಂಕಾರಕ್ಕೆ, **ಮೂಲ** = ಮೂಲವಾದ, **ನೀಲತಿಲಕಃ** = ಕಪ್ಪು ತಿಲಕವುಳ್ಳ, **ತಾರಾ** = ನಕ್ಷತ್ರಗಳ, **ಓಘಃ** = ಸಮೂಹ- ವೆಂಬ, **ಹಾರಾನ್** = ಒಡವೆಗಳನ್ನು, **ದಿಶನ್** = ಕೊಡುತ್ತಾ, **ವ್ಯೋಮಾಖ್ಯಾಂ** = ಆಕಾಶ- ವೆಂಬ, **ಕಬರೀಂ** = ತಲೆಸೂಡಿಯನ್ನು, **ಪ್ರಗೃಹ್ಯ** =

ಹಿಡಿದು, **ಸುಕರೈಃ** = ಕಿರಣಗಳಿಂದ, **ಆಶ್ಲಿಷ್ಯ** = ಆಲಿಂಗಿಸಿ, **ದಿಕ್ಕಾಮಿನೀಂ** = ದಿಕ್ಕೆಂಬ ಸ್ತ್ರೀಯನ್ನು, **ಐಂದ್ರೀಂ** = ಪೂರ್ವದ, **ಇಂದುಃ** = ಚಂದ್ರನು, **ಅಸೌ** = ಈ, **ಚುಚುಂಬ** = ಚುಂಬಿಸಿದನು, **ಸರಸಃ** = ರಸಿಕನಾದ, **ರಾಗೇಣ** = ಅನುರಾಗದಿಂದ (ಕೆಂಪುಬಣ್ಣವುಳ್ಳದ್ದನ್ನಾಗಿ), **ತಾಂ** = ಆಕೆಯನ್ನು, **ರಂಜಯನ್** = ಪ್ರಕಾಶ- ಗೊಳಿಸುತ್ತಾ (ಮಾಡುತ್ತಾ).

ಚಂದ್ರೋದಯದ ವರ್ಣನೆ – ಪೂರ್ವದಿಕ್ಕೆಂಬ ಹೆಣ್ಣನ್ನು ರಮಿಸುವ ಮೊದಲು ರಸಿಕನು ಮೊದಲು ಸ್ನಾನ ಮಾಡಬೇಕು. ಅದಕ್ಕಾಗಿ ಚಂದ್ರನು ಪೂರ್ವಸಮುದ್ರದಲ್ಲಿ ಸ್ನಾನ ಮಾಡಿದನು. ಸಮುದ್ರದ ನೊರೆಗಳು ಆತನಿಗೆ ಶ್ರೀಗಂಧ. ಅದನ್ನು ಲೇಪಿಸಿಕೊಂಡಿದ್ದಾನೆ. ಆದ್ದರಿಂದ ಶ್ರೀಗಂಧದ ಬಣ್ಣದಿಂದ ಕೂಡಿದ್ದಾನೆ. ತನ್ನನ್ನು ಅಲಂಕರಿಸಿಕೊಂಡಿದ್ದಾನೆ. ಸಮಗ್ರ ಅಲಂಕಾರಕ್ಕೆ ಶೋಭೆ ತರುವುದು ಮುಖದ ತಿಲಕ. ಚಂದ್ರನ ಮೈಯ್ಯಲ್ಲಿ ಕಪ್ಪು ಚುಕ್ಕೆ ಇದೆ. ಅದು ಕಸ್ತೂರಿತಿಲಕದಂತೆ ಚಂದ್ರನಲ್ಲಿದೆ. ನಕ್ಷತ್ರಗಳೆಂಬ ಹಾರಗಳನ್ನು ತನ್ನ ಕಾಮಿನಿಗೆ ಕೊಡುತ್ತಿದ್ದಾನೆ. ಆಕಾಶ ಹಾಗೂ ತಲೆಸೂಡಿ ನೀಲಬಣ್ಣದಿಂದ ಸಾಮ್ಯವುಳ್ಳ ಆಕಾಶ ಎಂಬ ತಲೆಗೂದಲನ್ನು ತನ್ನ ಕಿರಣಗಳೆಂಬ ಕೈಗಳಿಂದ ಹಿಡಿದುಕೊಂಡು ಹಾಗೆಯೇ ಆಕೆಯಲ್ಲಿ ಕೆಂಪು ಬಣ್ಣವೆಂಬ ರಾಗವನ್ನು ತುಂಬಿಸಿ, ಆಲಿಂಗಿಸಿ, ಮುಖವನ್ನು ಮುದ್ದಿಸಿದನು. ಚಂದ್ರನು ಉದಿಸಿ ಮೇಲೆ ಬಂದನು ಎಂದು ತಾತ್ಪರ್ಯ.

**ಸುವರ್ಣಸಂವೀತವರೇಂದ್ರನೀಲ-**
**ಸುಮಧ್ಯನಿಷ್ಕಾಂಚಿತಕೃಷ್ಣವಕ್ಷಃ ।**
**ಸಹಾರಮನ್ವೇತ್ಯುದಿತೋರ್ಧ್ವರಶ್ಮಿ-**
**ಶಶಾಂಕಸಂಗ್ಯಭ್ರಮುದಾರತಾರಮ್ ॥ ೩೭ ॥**

**ಸುವರ್ಣ** = ಬಂಗಾರದಿಂದ, **ಸಂವೀತ** = ಕೂಡಿದ, **ವರ** = ಉತ್ತಮವಾದ, **ಇಂದ್ರನೀಲ** = ನೀಲಮಣಿಯು, **ಸುಮಧ್ಯ** = ಮಧ್ಯದಲ್ಲಿ ಉಳ್ಳ, **ನಿಷ್ಕ** = ಆಭರಣದಿಂದ, **ಅಂಚಿತ** = ಅಲಂಕೃತವಾದ, **ಕೃಷ್ಣ** = ಕೃಷ್ಣನ, **ವಕ್ಷಃ** = ಎದೆಯನ್ನು, **ಸಹಾರಂ** = ಮಾಲೆಯಿಂದ ಕೂಡಿದ, **ಅನ್ವೇತಿ** = ಅನುಕರಿಸುತ್ತದೆ, **ಉದಿತ** = ಉದಿಸಿದ, **ಊರ್ಧ್ವ** = ಮೇಲ್ಮುಖವಾದ, **ರಶ್ಮಿ** = ಕಿರಣಗಳುಳ್ಳ, **ಶಶಾಂಕ** = ಚಂದ್ರನ, **ಸಂಗಿ** = ಸಂಬಂಧವುಳ್ಳ, **ಅಭ್ರಂ** = ಗಗನವು, **ಉದಾರ** = ಬೆಳಗುವ, **ತಾರಂ** = ನಕ್ಷತ್ರವುಳ್ಳ.

ಚಂದ್ರನು ಮಿನುಗುವ ನಕ್ಷತ್ರಗಳಿಂದ ಕೂಡಿದ್ದಾನೆ. ಉದಿಸುತ್ತಿರುವುದರಿಂದ ಕಿರಣ- ಗಳು ಮೇಲ್ಮುಖವಾಗಿವೆ. ಇಂತಹ ಚಂದ್ರನ ಸಂಬಂಧವು ನೀಲವಾದ ಆಕಾಶಕ್ಕೆ ಇದೆ. ಇದನ್ನು ನೋಡಿದಾಗ ಕೃಷ್ಣನ ವಕ್ಷಃಸ್ಥಳದ ನೆನಪಾಗುತ್ತದೆ. – ಕೃಷ್ಣನ ಎದೆಯೂ ಕಪ್ಪು. ಆ

ಎದೆಯಲ್ಲಿ ಮುತ್ತುಗಳ ಒಂದು ಹಾರ. ಅದರಲ್ಲಿ ಒಂದು ಬಂಗಾರದ ಪದಕ. ಆ ಪದಕದ ಮಧ್ಯದಲ್ಲಿ ಒಂದು ಇಂದ್ರನೀಲಮಣಿ. ಇದು ಯಾವ ರೀತಿ ಇದೆಯೋ ಅದೇ ರೀತಿ ರಾತ್ರಿಯಲ್ಲಿ ಆಕಾಶವು ಚಂದ್ರನಿಂದಾಗಿ ಇತ್ತು.

• • • •

**ಸಂದೇಶ**

**ಕ್ರೋಧೋऽಪಿ ದೇವಸ್ಯ ವರೇಣ ತುಲ್ಯಃ**

ದೇವರು ಸಿಟ್ಟಾಗುವುದೂ ಒಂದು ರೀತಿಯ ವರವೇ

**ವಾರ್ವಾಹಾವೃತಸರ್ವಭಾಗಮುದಿತಂ ಬಿಂಬಂ ಶಶಾಂಕಂ ವಿಧೋಃ**
**ಈಷದ್ದರ್ಶಿತಕೋಣಮಚ್ಯುತಮನಸ್ತೋಷಂ ನಭೋऽಗ್ರಸ್ಥಿತಮ್ ।**
**ರೇಜೇ ಕುಂಕುಮಶೋಭಿ ರಮ್ಯವಸನಚ್ಛನ್ನಂ ಮರುದ್ದರ್ಶಿತ-**
**ಪ್ರಾಂತಂ ಶ್ರೀಕುಚಕೋಶಮೀಷದುದಯನ್ಮಧ್ಯೋಪರಿಷ್ಟಾದಿವ ॥ ೩೮ ॥**

**ವಾರ್ವಾಹ** = ಮೋಡದಿಂದ, **ಆವೃತ** = ಕೂಡಿದ, **ಸರ್ವಭಾಗಂ** = ಎಲ್ಲಾ ಪ್ರದೇಶ-ವುಳ್ಳ, **ಉದಿತಂ** = ಉದಯಿಸಿದ, **ಬಿಂಬಂ** = ಬಿಂಬವು, **ಶಶಾಂಕಂ** = ಮೊಲದ ಚಿಹ್ನೆ-ಯುಳ್ಳ, **ವಿಧೋಃ** = ಚಂದ್ರನ, **ಈಷತ್** = ಸ್ವಲ್ಪ, **ದರ್ಶಿತ** = ತೋರಿಸಲ್ಪಟ್ಟ, **ಕೋಣಂ** = ಮೂಲೆಯುಳ್ಳ, **ಅಚ್ಯುತ** = ದೇವರ, **ಮನಃ** = ಮನಸ್ಸಿಗೆ, **ತೋಷಂ** = ಆನಂದ-ವನ್ನು ಕೊಡುವ, **ನಭಃ** = ಆಕಾಶದ, **ಅಗ್ರಸ್ಥಿತಂ** = ತುದಿಯಲ್ಲಿರುವ, **ರೇಜೇ** = ಶೋಭಿಸಿತು, **ಕುಂಕುಮಶೋಭಿ** = ಕುಂಕುಮದಂತೆ ಶೋಭಿಸುವ, **ರಮ್ಯ** = ಒಳ್ಳೆಯ, **ವಸನ** = ಬಟ್ಟೆಯಿಂದ, **ಛನ್ನ** = ಆವೃತವಾದ, **ಮರುತ್** = ಗಾಳಿಯಿಂದ, **ದರ್ಶಿತ** = ತೋರಿಸಲ್ಪಟ್ಟ, **ಪ್ರಾಂತಂ** = ಭಾಗವುಳ್ಳ, **ಶ್ರೀ** = ಲಕ್ಷ್ಮಿಯ, **ಕುಚಕೋಶಮಿವ** = ಸ್ತನ-ಗಳಂತೆ, **ಈಷತ್** = ಸ್ವಲ್ಪ, **ಉದಯತ್** = ತೋರುವ, **ಮಧ್ಯೋಪರಿಷ್ಟಾತ್** = ಮೇಲ್ಭಾಗದ ಮಧ್ಯದಲ್ಲಿ.

ಈ ಚಂದ್ರಮಂಡಲವು ಮೊದಲು ಮೋಡಗಳಿಂದ ಪೂರ್ಣ ಆವೃತ್ತವಾಗಿತ್ತು. ಮೊಲದ ಕಪ್ಪು ಚಿಹ್ನೆಯಿಂದ ಕೂಡಿದೆ. ಕ್ರಮೇಣ ಚಂದ್ರನ ಒಂದು ಭಾಗವು ತೋರಲು ಆರಂಭಿಸಿತು. ದೇವರು ಈ ಚಂದ್ರನಿಂದ ಬಹಳ ತೃಪ್ತಿ ಪಡುತ್ತಾನೆ. ಆಕಾಶದಲ್ಲಿ ಎತ್ತರದಲ್ಲಿ ಇದೆ. ಇಂತಹ ಚಂದ್ರ ಲಕ್ಷ್ಮಿಯ ಸ್ತನದಂತೆ ತೋರುತ್ತಿದೆ.

ಲಕ್ಷ್ಮಿಯ ಸ್ತನಗಳು ಮೊದಲು ವಸ್ತ್ರದಿಂದ ಆವೃತವಾಗಿರುತ್ತವೆ. ಕುಂಕುಮಕೇಸರಿ-ಯಿಂದ ಕೂಡಿರುತ್ತವೆ. ಗಾಳಿಯಿಂದ ವಸ್ತ್ರ ಸರಿದಾಗ ಸ್ವಲ್ಪಭಾಗ ತೋರುತ್ತದೆ. ದೇವರಿಗೆ ಲಕ್ಷ್ಮಿಯ ಸ್ತನವು ಆನಂದದಾಯಕ (ಲೌಕಿಕವಾಗಿ). ಸ್ತನಗಳು ಎತ್ತರದಲ್ಲಿ ಎದೆಯಲ್ಲಿವೆ. ಎದೆಯಲ್ಲಿ ಕುಪ್ಪುಸದ ಮೇಲ್ಭಾಗದಲ್ಲಿ ಸ್ವಲ್ಪ ತೋರುವಂತಿವೆ.

**ಗತೇ ದಿಶಾಂ ಭರ್ತರಿ ದೇಶಮನ್ಯಂ**
**ದಿವಾಕರೇ ಮಂದಮುಪೇತ್ಯ ಚಂದ್ರಃ।**
**ತದಂಬರಂ ಯಜ್ಜಗೃಹೇ ಕರೈಃ ಸ್ವೈಃ**
**ತತಃ ಕಲಂಕೀತಿ ಮಮ ಪ್ರತರ್ಕಃ ॥ ೩೯ ॥**

**ಗತೇ** = ಹೋಗುತ್ತಿರಲು, **ದಿಶಾಂ** = ದಿಕ್ಕುಗಳ, **ಭರ್ತರಿ** = ಪತಿಯಾದ, **ದೇಶಂ** = ಜಾಗವನ್ನು, **ಅನ್ಯಂ** = ಬೇರೇ, **ದಿವಾಕರೇ** = ಸೂರ್ಯನು, **ಮಂದಂ** = ಮೆಲ್ಲಗೆ, **ಉಪೇತ್ಯ** = ಬಂದು, **ಚಂದ್ರಃ** = ಚಂದ್ರನು, **ತತ್** = ದಿಕ್ಕುಗಳ, **ಅಂಬರಂ** = ಅವಕಾಶ-ವನ್ನು (ಬಟ್ಟೆಯನ್ನು), **ಯತ್** = ಯಾವ ಕಾರಣದಿಂದ, **ಜಗೃಹೇ** = ಹಿಡಿದನೋ, **ಕರೈಃ** = ಕಿರಣಗಳಿಂದ, **ಸ್ವೈಃ** = ತನ್ನ, **ತತಃ** = ಆದ್ದರಿಂದ, **ಕಲಂಕೀ** = ಕಲಂಕವುಳ್ಳವನು, **ಇತಿ** = ಎಂದು, **ಮಮ** = ನನ್ನ, **ಪ್ರತರ್ಕಃ** = ಊಹೆಯು.

ದಿಕ್ಕುಗಳ ಪತಿ ಸೂರ್ಯನು ಪಶ್ಚಿಮವೆಂಬ ಊರಿಗೆ ಹೋದನು. ಆಗ ಚಂದ್ರನು (ನಿಧಾನವಾಗಿ ರಾತ್ರಿ ಕಳ್ಳತನದಿಂದ ಎಂದು ಅಭಿಪ್ರಾಯ) ಪೂರ್ವ ದಿಕ್ಕೆಂಬ ಹೆಣ್ಣಿನ ಅಂಬರವನ್ನು ತನ್ನ ಕಿರಣಗಳೆಂಬ ಕೈಗಳಿಂದ ಹಿಡಿದನು. ಅಂಬರ ಅಂದರೆ ಆಕಾಶ, ವಸ್ತ್ರ ಎಂಬ ಎರಡು ಅರ್ಥ ಇದೆ. ಪರದಾರಾವಸ್ತ್ರಕ್ಕೆ ಯಾರು ಕೈ ಹಾಕುತ್ತಾರೋ ಅವರು ಲೋಕದಲ್ಲಿ ಕಲಂಕಿಗಳು. ಈ ರೀತಿಯಾಗಿ ಚಂದ್ರನೂ ಕಲಂಕಿಯಾದ. ಹೊರತು ತನ್ನ ಕಪ್ಪು ಚುಕ್ಕೆ ಇದ್ದದ್ದರಿಂದ ಅಲ್ಲ ಎಂದು ರಾಜರು ತರ್ಕಿಸುತ್ತಾರೆ.

**ಯತ್ಪೂರ್ಣಂ ಪೌರ್ಣಮಾಸ್ಯಾಮುದಯತಿ**
**ನಿಶಿ ತತ್ಕೀರ್ತಿನಾರ್ಯಾಃ ಕುಮಾರ್ಯಾ**
**ವಕ್ತ್ರಂ ಕಸ್ತೂರಿಕಾಕ್ತಂ ಪ್ರವಿರಲಕಚವಿನ್ಯಸ್ತಪುಷ್ಪಂ ಹಿ ಮನ್ಯೇ।**
**ಸ್ತೋತ್ರವ್ಯಾಜೇನ ದೇವೈರ್ವದನವಿನಿಹಿತಂ ನಂದಸೂನೋರ್ನ ಚೇತ್**
**ತತ್ಪ್ರೀತ್ಯೈ ಗೋಪಾಂಗನಾನಾಂ**
**ಕಥಮಹಿತವಧೂವರ್ಗತಾಪಾಯ ಚ ಸ್ಯಾತ್ ॥ ೪೦ ॥**

**ಯತ್** = ಯಾವುದು, **ಪೂರ್ಣಂ** = ಪೂರ್ಣವಾಗಿ, **ಪೌರ್ಣಮಾಸ್ಯಾಂ** = ಹುಣ್ಣಿಮೆ-ಯಲ್ಲಿ, **ಉದಯತಿ** = ಉದಿಸುತ್ತದೆಯೋ, **ನಿಶಿ** = ರಾತ್ರಿಯಲ್ಲಿ, **ತತ್** = ಅದು, **ಕೀರ್ತಿನಾರ್ಯಾಃ** = ಕೃಷ್ಣನ ಕೀರ್ತಿ ಎಂಬ ಹುಡುಗಿಯ, **ಕೌಮಾರ್ಯಾಃ** = ಮಗ-ಳಾದ, **ವಕ್ತ್ರಂ** = ಮುಖವು, **ಕಸ್ತೂರಿಕಾ** = ಕಸ್ತೂರಿ ತಿಲಕದಿಂದ, **ಆಕ್ತಂ** = ಕೂಡಿದ, **ಪ್ರವಿರಲ** = ಚೆನ್ನಾಗಿ ಹರಡಿದ, **ಕಚ** = ತಲೆಕೂದಲಿನಲ್ಲಿ, **ವಿನ್ಯಸ್ತ** = ಇರುವ, **ಪುಷ್ಪಂ** =

ಹೂವುಳ್ಳದ್ದನ್ನಾಗಿ, **ಮನ್ಯೇ** = ತಿಳಿಯುತ್ತೇನೆ. **ಸ್ತೋತ್ರವ್ಯಾಜೇನ** = ಹೊಗಳುವ ನಿಮಿತ್ತದಿಂದ, **ದೇವೈಃ** = ದೇವತೆಗಳಿಂದ, **ವದನ** = ಬಾಯಲ್ಲಿ, **ವಿನಿಹಿತಂ** = ಇಟ್ಟಿರುವ, **ನಂದಸೂನೋಃ** = ಕೃಷ್ಣನ, **ನ ಚೇತ್** = ಇಲ್ಲದಿದ್ದರೆ, **ತತ್** = ಅದು, **ಪ್ರೀತ್ಯೈ** = ಆನಂದಕ್ಕೋಸ್ಕರ, **ಗೋಪಾಂಗನಾನಾಂ** = ಗೋಪಿಯರ, **ಕಥಂ** = ಹೇಗೆ, **ಅಹಿತ** = ದುಷ್ಟರ, **ವಧೂವರ್ಗ** = ಸ್ತ್ರೀಯರ ಸಮೂಹಕ್ಕೆ, **ತಾಪಾಯ ಚ** = ದುಃಖಕ್ಕೋಸ್ಕರವೂ, **ಸ್ಯಾತ್** = ಆಗುತ್ತದೆ.

ಪೂರ್ಣಮಾ ದಿವಸ ಉದಿಸುವ ಈ ಚಂದ್ರನು ಶ್ರೀಕೃಷ್ಣನ ಕೀರ್ತಿ ಎಂಬ ಮಗಳ ಮುಖವು. ಮಧ್ಯದಲ್ಲಿರುವ ಕಪ್ಪು ಕಲೆಯು ಕಸ್ತೂರಿ ತಿಲಕವು. ಚಂದ್ರನ ಸುತ್ತ ಇರುವ ನಕ್ಷತ್ರಗಳು ತಲೆಯ ಕೂದಲಿನಲ್ಲಿ ಹರಡಿದ ಪುಷ್ಪಗಳು. ದಿನದಿಂದ ದಿನಕ್ಕೆ ಕ್ಷೀಣಿಸುವುದು – ದೇವತೆಗಳು ಈ ಚಂದ್ರನನ್ನು ಇಟ್ಟದ್ದರಿಂದ. ಬಾಯಿಯಲ್ಲಿ ಇಟ್ಟುಕೊಂಡದ್ದು ಸ್ತೋತ್ರದ ನಿಮಿತ್ತದಿಂದ. ಹೊಗಳುವುದು ಬಾಯಿಯಿಂದ ತಾನೇ. ವಸ್ತ್ರವನ್ನು ಬಾಯಿಯಲ್ಲಿ ಇಟ್ಟುಕೊಂಡಾಗ ಅದು ಕ್ಷೀಣಿಸುವುದು ಸಹಜ.

ಆದ್ದರಿಂದಲೇ ಈ ಚಂದ್ರನನ್ನು ನೋಡಿದಾಗ ಗೋಪಿಯರಿಗೆ ಆನಂದ ಆಗುತ್ತಿತ್ತು. ದುಷ್ಟರ ಪತ್ನಿಯರಿಗೆ ದುಃಖವಾಗುತ್ತಿತ್ತು. ಗೋಪಿಯರಿಗೆ ಕೃಷ್ಣ ಅಂದರೆ ಬಹಳ ಇಷ್ಟ. ಆದ್ದರಿಂದ ಆತನ ಮಗಳ ಮುಖವನ್ನು ನೋಡಿದಾಗ ಆನಂದ ಆಯಿತು. ದುಷ್ಟರಿಗೆ ಕೃಷ್ಣನು ವಿರೋಧಿಯು. ಆದ್ದರಿಂದ ಅವರ ಪತ್ನಿಯರಿಗೆ ದುಃಖವಾಯಿತು. ಆದ್ದರಿಂದ ಈ ಚಂದ್ರ ನಿಶ್ಚಯವಾಗಿಯೂ ಕೃಷ್ಣನ ಮಗಳ ಮುಖವು.

> ದಿವಸಕರೇ ಹೃತತಸ್ಕರಪ್ರಚಾರೇ
> ನರನಯನಸ್ಯ ವಿದೂರವರ್ತ್ಮ ಯಾತೇ ।
> ರಜನಿಕರೋಽಯಮುಪೇತ್ಯ ಮಾನವಾನಾಂ
> ಶ್ರಮಮಧರೀಕುರುತೇ ಸ್ಮ ಪೂರ್ಣಬಿಂಬಃ ॥೪೧॥

**ದಿವಸಕರೇ** = ಸೂರ್ಯನು, **ಹೃತ** = ಕಮ್ಮಿ ಮಾಡಿದ, **ತಸ್ಕರ** = ಕಳ್ಳರ, **ಪ್ರಚಾರೇ** = ಸಂಚಾರವುಳ್ಳ, **ನರ** = ಜನರ, **ನಯನಸ್ಯ** = ಕಣ್ಣಿಗೆ, **ವಿದೂರ** = ದೂರವಾದ, **ವರ್ತ್ಮ** = ದಾರಿಯನ್ನು, **ಯಾತೇ** = ಹೋಗುತ್ತಿರಲು, **ರಜನಿಕರಃ** = ಚಂದ್ರನು, **ಅಯಂ** = ಈ, **ಉಪೇತ್ಯ** = ಬಂದು, **ಮಾನವಾನಾಂ** = ಜನರ, **ಶ್ರಮಂ** = ದುಃಖವನ್ನು, **ಅಧರೀಕುರುತೇ ಸ್ಮ** = ಕಮ್ಮಿ ಮಾಡುತ್ತಾನೆ, **ಪೂರ್ಣಬಿಂಬಃ** = ಪೂರ್ಣನಾಗಿ.

ಸೂರ್ಯನು ತನ್ನ ರಾಜ್ಯಭಾರದ ಕಾಲದಲ್ಲಿ ಅಂದರೆ ಹಗಲಿನಲ್ಲಿ ಕಳ್ಳರನ್ನೂ ಕಳ್ಳತನಕ್ಕೆ ಕಾರಣವಾದ ಕತ್ತಲೆಯನ್ನೂ ಓಡಿಸಿ ಪ್ರಜೆಗಳಿಗೆ ನೆಮ್ಮದಿಯನ್ನು ಕೊಟ್ಟನು.

ಆತನಿಗೆ ವೃದ್ಧಾಪ್ಯ ಬಂದಿತು. ಜನರ ಕಣ್ಣಿನಿಂದ ದೂರವಾದನು. ಆಗ ಚಂದ್ರನು ಆತನ ಮಗನಂತೆ ಬಂದು ತಂದೆಗಿಂತಲೂ ಹೆಚ್ಚು ಜನರಿಗೆ ತಂಪೆರೆದನು. ಪ್ರಜೆಗಳ ಅದೃಷ್ಟ ಚೆನ್ನಾಗಿದ್ದರೆ ಮಗನು ತಂದೆಗಿಂತಲೂ ಒಳ್ಳೆಯ ರಾಜ್ಯಭಾರವನ್ನು ಮಾಡಲು ಸಾಧ್ಯವಿದೆ ಎಂದಭಿಪ್ರಾಯ.

**ಸ ಮಾರಮೌರ್ವೀಸ್ಥಿತಮಲ್ಲಿಕೇಷುಃ**
**ಇವ ವ್ರಜಸ್ತ್ರೀಹೃದಯಂ ವಿಜಿತ್ಯ ।**
**ಹರೇಃ ಪದಂ ಪ್ರಾಪ ಶನೈಃ ಸ್ಮರೇಣ**
**ತಮಾತ್ಮಸಾತ್ ಕರ್ತುಮಿವೋತ್ಕ್ರಯುಕ್ತಃ ॥ ೪೨ ॥**

ಸಃ = ಚಂದ್ರನು, ಮಾರ = ಮನ್ಮಥನ, ಮೌರ್ವೀ = ಧನುಸ್ಸಿನ ಹಗ್ಗದಲ್ಲಿ, ಸ್ಥಿತ = ಇರುವ, ಮಲ್ಲಿಕಾ = ಮಲ್ಲಿಗೆ ಎಂಬ, ಇಷುಃ ಇವ = ಬಾಣದಂತೆ, ವ್ರಜಸ್ತ್ರೀಹೃದಯಂ = ಗೋಪಿಯರ ಮನಸ್ಸನ್ನು , ವಿಜಿತ್ಯ = ಗೆದ್ದು, ಹರೇಃ = ದೇವರ, ಪದಂ = ಚರಣವನ್ನು (ಆಕಾಶವನ್ನು), ಪ್ರಾಪ = ಹೊಂದಿದನು, ಶನೈಃ = ಮೆಲ್ಲಗೆ, ಸ್ಮರೇಣ = ಕಾಮನಿಂದ, ತಂ = ಕೃಷ್ಣನನ್ನು , ಆತ್ಮಸಾತ್ ಕರ್ತುಂ ಇವ = ಹಿಡಿತಕ್ಕೆ ತರುವವನಂತೆ, ಉತ್ಕ್ರಯುಕ್ತಃ = ಮೇಲ್ಮುಖವಾಗಿ ಬಿಡಲ್ಪಟ್ಟ.

ಈ ಸಂದರ್ಭದಲ್ಲಿ ಕೃಷ್ಣ - ಗೋಪಿಯರಿಗೆ ಪರಸ್ಪರ ಭೇಟಿಯಾಗುವ ಇಚ್ಛೆ ಬಂತು. ಈ ಇಚ್ಛೆಗೆ ಕಾರಣನು ಮನ್ಮಥನು. ಈತನು ತನ್ನ ಬಾಣಕ್ಕೆ ಚಂದ್ರನೆಂಬ ಬಿಳಿ ಮಲ್ಲಿಗೆಯನ್ನು ಜೋಡಿಸಿ ಮೇಲೆ ಆಕಾಶಕ್ಕೆ ಪ್ರಯೋಗಿಸಿದನು. ಆಕಾಶ ಅಂದರೆ ವಿಷ್ಣುವಿನ ಪದವೂ ಹೌದು. ತಥಾ ಚ ಕೃಷ್ಣನ ಪಾದಕ್ಕೆ ಪ್ರಯೋಗಿಸಿದನು. ಈ ಚಂದ್ರನೆಂಬ ಪುಷ್ಪವನ್ನು ನೋಡಿ, ಗೋಪಿಯರು ಕೃಷ್ಣನಲ್ಲಿ ಮನಸ್ಸುಳ್ಳವರಾದರು. ಕೃಷ್ಣನನ್ನು ಈ ಕಾಮನು ತನ್ನ ವಶಕ್ಕೆ ತೆಗೆದುಕೊಂಡನು. ಅದು ಗೋಪಿಯರಂತೆ ಅಲ್ಲ. ಗೋಪಿಯರನ್ನಾದರೆ ಕಾಮನು ನೇರವಾಗಿ ಅವರ ಮನಸ್ಸನ್ನೇ ಕುಲುಕಿದನು. ಆದರೆ ಕೃಷ್ಣನನ್ನು ಆ ರೀತಿ ಮಾಡಲು ಧೈರ್ಯವಿಲ್ಲ. ಅದಕ್ಕಾಗಿ ಕೃಷ್ಣನ ಪಾದಕ್ಕೆ ಬಾಣ ಪ್ರಯೋಗಿಸಿ ಆತನಲ್ಲಿ ಬೇಡಿಕೊಳ್ಳುವ ಮೂಲಕ ತನ್ನ ವಶಕ್ಕೆ ತೆಗೆದುಕೊಂಡನು. ಅಹಂ ಭಕ್ತಪರಾಧೀನಃ ಎಂದು ದೇವರ ಮಾತು. ಈ ರೀತಿ ಹರಿಸರ್ವೋತ್ತಮತ್ವಕ್ಕೆ ಧಕ್ಕೆ ಬಾರದಂತೆ ಕಾವ್ಯಶೈಲಿಯನ್ನು ತೋರಿ-ಸುವ ಅದ್ಭುತಶಕ್ತಿ ರಾಜರದ್ದು.

ಗಂಧರ್ವಗೀತವೃತಮಭ್ರಮಪಾರತಾರಂ
ಚಂದ್ರೇಣ ರಂಜಿತಮುದೀಕ್ಷ್ಯ ಮುದಾ ಮುಕುಂದಃ ।

ಹೂವುಳ್ಳದ್ದನ್ನಾಗಿ, **ಮನ್ಯೇ** = ತಿಳಿಯುತ್ತೇನೆ. **ಸ್ತೋತ್ರವ್ಯಾಜೇನ** = ಹೊಗಳುವ ನಿಮಿತ್ತದಿಂದ, **ದೇವೈಃ** = ದೇವತೆಗಳಿಂದ, **ವದನ** = ಬಾಯಲ್ಲಿ, **ವಿನಿಹಿತಂ** = ಇಟ್ಟಿರುವ, **ನಂದಸೂನೋಃ** = ಕೃಷ್ಣನ, **ನ ಚೇತ್** = ಇಲ್ಲದಿದ್ದರೆ, **ತತ್** = ಅದು, **ಪ್ರೀತ್ಯೈ** = ಆನಂದಕ್ಕೋಸ್ಕರ, **ಗೋಪಾಂಗನಾನಾಂ** = ಗೋಪಿಯರ, **ಕಥಂ** = ಹೇಗೆ, **ಅಹಿತ** = ದುಷ್ಟರ, **ವಧೂವರ್ಗ** = ಸ್ತ್ರೀಯರ ಸಮೂಹಕ್ಕೆ, **ತಾಪಾಯ ಚ** = ದುಃಖಕ್ಕೋಸ್ಕರವೂ, **ಸ್ಯಾತ್** = ಆಗುತ್ತದೆ.

ಪೂರ್ಣಮಾ ದಿವಸ ಉದಿಸುವ ಈ ಚಂದ್ರನು ಶ್ರೀಕೃಷ್ಣನ ಕೀರ್ತಿ ಎಂಬ ಮಗಳ ಮುಖವು. ಮಧ್ಯದಲ್ಲಿರುವ ಕಪ್ಪು ಕಲೆಯು ಕಸ್ತೂರಿ ತಿಲಕವು. ಚಂದ್ರನ ಸುತ್ತ ಇರುವ ನಕ್ಷತ್ರಗಳು ತಲೆಯ ಕೂದಲಿನಲ್ಲಿ ಹರಡಿದ ಪುಷ್ಪಗಳು. ದಿನದಿಂದ ದಿನಕ್ಕೆ ಕ್ಷೀಣಿಸುವುದು – ದೇವತೆಗಳು ಈ ಚಂದ್ರನನ್ನು ಇಟ್ಟದ್ದರಿಂದ. ಬಾಯಿಯಲ್ಲಿ ಇಟ್ಟುಕೊಂಡದ್ದು ಸ್ತೋತ್ರದ ನಿಮಿತ್ತದಿಂದ. ಹೊಗಳುವುದು ಬಾಯಿಯಿಂದ ತಾನೇ. ವಸ್ತ್ರವನ್ನು ಬಾಯಿಯಲ್ಲಿ ಇಟ್ಟುಕೊಂಡಾಗ ಅದು ಕ್ಷೀಣಿಸುವುದು ಸಹಜ.

ಆದ್ದರಿಂದಲೇ ಈ ಚಂದ್ರನನ್ನು ನೋಡಿದಾಗ ಗೋಪಿಯರಿಗೆ ಆನಂದ ಆಗುತ್ತಿತ್ತು. ದುಷ್ಟರ ಪತ್ನಿಯರಿಗೆ ದುಃಖವಾಗುತ್ತಿತ್ತು. ಗೋಪಿಯರಿಗೆ ಕೃಷ್ಣ ಅಂದರೆ ಬಹಳ ಇಷ್ಟ. ಆದ್ದರಿಂದ ಆತನ ಮಗಳ ಮುಖವನ್ನು ನೋಡಿದಾಗ ಆನಂದ ಆಯಿತು. ದುಷ್ಟರಿಗೆ ಕೃಷ್ಣನು ವಿರೋಧಿಯು. ಆದ್ದರಿಂದ ಅವರ ಪತ್ನಿಯರಿಗೆ ದುಃಖವಾಯಿತು. ಆದ್ದರಿಂದ ಈ ಚಂದ್ರ ನಿಶ್ಚಯವಾಗಿಯೂ ಕೃಷ್ಣನ ಮಗಳ ಮುಖವು.

ದಿವಸಕರೇ ಹೃತತಸ್ಕರಪ್ರಚಾರೇ
ನರನಯನಸ್ಯ ವಿದೂರವರ್ತ್ಮ ಯಾತೇ ।
ರಜನಿಕರೋಽಯಮುಪೇತ್ಯ ಮಾನವಾನಾಂ
ಶ್ರಮಮಧರೀಕುರುತೇ ಸ್ಮ ಪೂರ್ಣಬಿಂಬಃ ॥೪೧॥

**ದಿವಸಕರೇ** = ಸೂರ್ಯನು, **ಹೃತ** = ಕಮ್ಮಿ ಮಾಡಿದ, **ತಸ್ಕರ** = ಕಳ್ಳರ, **ಪ್ರಚಾರೇ** = ಸಂಚಾರವುಳ್ಳ, **ನರ** = ಜನರ, **ನಯನಸ್ಯ** = ಕಣ್ಣಿಗೆ, **ವಿದೂರ** = ದೂರವಾದ, **ವರ್ತ್ಮ** = ದಾರಿಯನ್ನು, **ಯಾತೇ** = ಹೋಗುತ್ತಿರಲು, **ರಜನಿಕರಃ** = ಚಂದ್ರನು, **ಅಯಂ** = ಈ, **ಉಪೇತ್ಯ** = ಬಂದು, **ಮಾನವಾನಾಂ** = ಜನರ, **ಶ್ರಮಂ** = ದುಃಖವನ್ನು, **ಅಧರೀಕುರುತೇ ಸ್ಮ** = ಕಮ್ಮಿ ಮಾಡುತ್ತಾನೆ, **ಪೂರ್ಣಬಿಂಬಃ** = ಪೂರ್ಣನಾಗಿ.

ಸೂರ್ಯನು ತನ್ನ ರಾಜ್ಯಭಾರದ ಕಾಲದಲ್ಲಿ ಅಂದರೆ ಹಗಲಿನಲ್ಲಿ ಕಳ್ಳರನ್ನೂ ಕಳ್ಳತನಕ್ಕೆ ಕಾರಣವಾದ ಕತ್ತಲೆಯನ್ನೂ ಓಡಿಸಿ ಪ್ರಜೆಗಳಿಗೆ ನೆಮ್ಮದಿಯನ್ನು ಕೊಟ್ಟನು.

ಆತನಿಗೆ ವೃದ್ಧಾಪ್ಯ ಬಂದಿತು. ಜನರ ಕಣ್ಣಿನಿಂದ ದೂರವಾದನು. ಆಗ ಚಂದ್ರನು ಆತನ ಮಗನಂತೆ ಬಂದು ತಂದೆಗಿಂತಲೂ ಹೆಚ್ಚು ಜನರಿಗೆ ತಂಪೆರೆದನು. ಪ್ರಜೆಗಳ ಅದೃಷ್ಟ ಚೆನ್ನಾಗಿದ್ದರೆ ಮಗನು ತಂದೆಗಿಂತಲೂ ಒಳ್ಳೆಯ ರಾಜ್ಯಭಾರವನ್ನು ಮಾಡಲು ಸಾಧ್ಯವಿದೆ ಎಂದಭಿಪ್ರಾಯ.

**ಸ ಮಾರಮೌರ್ವೀಸ್ಥಿತಮಲ್ಲಿಕೇಷುಃ**
**ಇವ ವ್ರಜಸ್ತ್ರೀಹೃದಯಂ ವಿಜಿತ್ಯ ।**
**ಹರೇಃ ಪದಂ ಪ್ರಾಪ ಶನೈಃ ಸ್ಮರೇಣ**
**ತಮಾತ್ಮಸಾತ್ ಕರ್ತುಮಿವೋತ್ಕ್ಷಿಯುಕ್ತಃ ॥ ೪೨ ॥**

**ಸಃ** = ಚಂದ್ರನು, **ಮಾರ** = ಮನ್ಮಥನ, **ಮೌರ್ವೀ** = ಧನುಸ್ಸಿನ ಹಗ್ಗದಲ್ಲಿ, **ಸ್ಥಿತ** = ಇರುವ, **ಮಲ್ಲಿಕಾ** = ಮಲ್ಲಿಗೆ ಎಂಬ, **ಇಷುಃ ಇವ** = ಬಾಣದಂತೆ, **ವ್ರಜಸ್ತ್ರೀಹೃದಯಂ** = ಗೋಪಿಯರ ಮನಸ್ಸನ್ನು, **ವಿಜಿತ್ಯ** = ಗೆದ್ದು, **ಹರೇಃ** = ದೇವರ, **ಪದಂ** = ಚರಣವನ್ನು (ಆಕಾಶವನ್ನು), **ಪ್ರಾಪ** = ಹೊಂದಿದನು, **ಶನೈಃ** = ಮೆಲ್ಲಗೆ, **ಸ್ಮರೇಣ** = ಕಾಮನಿಂದ, **ತಂ** = ಕೃಷ್ಣನನ್ನು, **ಆತ್ಮಸಾತ್ ಕರ್ತುಂ ಇವ** = ಹಿಡಿತಕ್ಕೆ ತರುವವನಂತೆ, **ಉತ್ಕ್ಷಿಯುಕ್ತಃ** = ಮೇಲ್ಮುಖವಾಗಿ ಬಿಡಲ್ಪಟ್ಟ.

ಈ ಸಂದರ್ಭದಲ್ಲಿ ಕೃಷ್ಣ - ಗೋಪಿಯರಿಗೆ ಪರಸ್ಪರ ಭೇಟಿಯಾಗುವ ಇಚ್ಛೆ ಬಂತು. ಈ ಇಚ್ಛೆಗೆ ಕಾರಣನು ಮನ್ಮಥನು. ಈತನು ತನ್ನ ಬಾಣಕ್ಕೆ ಚಂದ್ರನೆಂಬ ಬಿಳಿ ಮಲ್ಲಿಗೆಯನ್ನು ಜೋಡಿಸಿ ಮೇಲೆ ಆಕಾಶಕ್ಕೆ ಪ್ರಯೋಗಿಸಿದನು. ಆಕಾಶ ಅಂದರೆ ವಿಷ್ಣುವಿನ ಪದವೂ ಹೌದು. ತಥಾ ಚ ಕೃಷ್ಣನ ಪಾದಕ್ಕೆ ಪ್ರಯೋಗಿಸಿದನು. ಈ ಚಂದ್ರನೆಂಬ ಪುಷ್ಪವನ್ನು ನೋಡಿ, ಗೋಪಿಯರು ಕೃಷ್ಣನಲ್ಲಿ ಮನಸ್ಸುಳ್ಳವರಾದರು. ಕೃಷ್ಣನನ್ನು ಈ ಕಾಮನು ತನ್ನ ವಶಕ್ಕೆ ತೆಗೆದುಕೊಂಡನು. ಅದು ಗೋಪಿಯರಂತೆ ಅಲ್ಲ. ಗೋಪಿಯರನ್ನಾದರೆ ಕಾಮನು ನೇರವಾಗಿ ಅವರ ಮನಸ್ಸನ್ನೇ ಕುಲುಕಿದನು. ಆದರೆ ಕೃಷ್ಣನನ್ನು ಆ ರೀತಿ ಮಾಡಲು ಧೈರ್ಯವಿಲ್ಲ. ಅದಕ್ಕಾಗಿ ಕೃಷ್ಣನ ಪಾದಕ್ಕೆ ಬಾಣ ಪ್ರಯೋಗಿಸಿ ಆತನಲ್ಲಿ ಬೇಡಿಕೊಳ್ಳುವ ಮೂಲಕ ತನ್ನ ವಶಕ್ಕೆ ತೆಗೆದುಕೊಂಡನು. ಅಹಂ ಭಕ್ತಪರಾಧೀನಃ ಎಂದು ದೇವರ ಮಾತು. ಈ ರೀತಿ ಹರಿಸರ್ವೋತ್ತಮತ್ವಕ್ಕೆ ಧಕ್ಕೆ ಬಾರದಂತೆ ಕಾವ್ಯಶೈಲಿಯನ್ನು ತೋರಿ-ಸುವ ಅದ್ಭುತಶಕ್ತಿ ರಾಜರದ್ದು.

**ಗಂಧರ್ವಗೀತವೃತಮಭ್ರಮಪಾರತಾರಂ**
**ಚಂದ್ರೇಣ ರಂಜಿತಮುದೀಕ್ಷ್ಯ ಮುದಾ ಮುಕುಂದಃ ।**

**ವೃಂದಾವನಂ ಮಧುಪಮಂಜುರವಂ ಪ್ರಸೂನ**
**ಸಂದೋಹಸಾಂದ್ರಮವಿಶತ್ತರುಜಾಲನೀಲಮ್ ॥೪೩॥**

**ಗಂಧರ್ವ** = ಗಂಧರ್ವರ, **ಗೀತ** = ಹಾಡಿನಿಂದ, **ವೃತಂ** = ಕೂಡಿದ, **ಅಭ್ರಂ** = ಗಗನವನ್ನು, **ಅಪಾರತಾರಂ** = ಬಹಳ ನಕ್ಷತ್ರವುಳ್ಳ, **ಚಂದ್ರೇಣ** = ಚಂದ್ರನಿಂದ, **ರಂಜಿತಂ** = ಬೆಳಗಿಸಲ್ಪಟ್ಟ, **ಉದೀಕ್ಷ್ಯ** = ನೋಡಿ, **ಮುದಾ** = ಸಂತೋಷದಿಂದ, **ಮುಕುಂದಃ** = ದೇವರು, **ವೃಂದಾವನಂ** = ಕಾಡನ್ನು, **ಮಧುಪ** = ಭ್ರಮರಗಳ, **ಮಂಜು** = ಚಂದದ, **ರವಂ** = ಶಬ್ದವುಳ್ಳ, **ಪ್ರಸೂನ** = ಹೂಗಳ, **ಸಂದೋಹ** = ಗುಂಪುಗಳಿಂದ, **ಸಾಂದ್ರಂ** = ತುಂಬಿದ, **ಅವಿಶತ್** = ಪ್ರವೇಶಿಸಿದನು, **ತರು** = ಮರಗಳ, **ಜಾಲ** = ಗುಂಪಿನಿಂದ, **ನೀಲಂ** = ನೀಲವಾದ.

ಆಕಾಶವು ಗಂಧರ್ವರ ಸಂಗೀತದಿಂದ, ಅಪಾರ ನಕ್ಷತ್ರಗಳಿಂದ, ಚಂದ್ರನ ಶೋಭೆಯಿಂದ ಕೂಡಿತ್ತು. ಇಂತಹ ಆಕಾಶವನ್ನು ಕೃಷ್ಣನು ನೋಡಿದನು. ಅನಂತರ ತಾನು ಭ್ರಮರಗಳಿಂದ ಝೇಂಕರಿಸುವ, ಬಹಳ ಪುಷ್ಪಗಳಿಂದ ಕೂಡಿದ, ದಟ್ಟವಾದ ಮರಗಳಿಂದ ಕೂಡಿದ ವೃಂದಾವನವನ್ನು ಪ್ರವೇಶಮಾಡಿದನು. ದುಂಬಿಗಳ ಝೇಂಕಾರ ಗಂಧರ್ವರ ಸಂಗೀತಕ್ಕೆ ಸಮಾನ. ನಕ್ಷತ್ರಗಳು ಪುಷ್ಪಗಳಿಗೆ ಸಮಾನ, ಮರಗಳು ಆಕಾಶಕ್ಕೆ ಸಮಾನ. ಚಂದ್ರನ ಸ್ಥಾನದಲ್ಲಿ ಚಂದ್ರವಂಶದ ಸ್ವಯಂ ಕೃಷ್ಣನು. ರಾಜರು ತಾವು ಭೂಮಿಯಲ್ಲೇ ಊರ್ಧ್ವಲೋಕದ ವೈಭವವನ್ನು ತೋರಿಸುತ್ತಿದ್ದಾರೆ.

• • • •

**ಸಂದೇಶ**

**ನಿಜೇಷು ಶಿಕ್ಷಾSಪಿ ಹಿ ತಸ್ಯ ವಿಷ್ಣೋಃ ಪರಂ ಪರಾನುಗ್ರಹಹೇತುರೇವ**
ದೇವರು ತನ್ನ ಭಕ್ತರನ್ನು ಶಿಕ್ಷಿಸಿದರೂ ಅಂತತಃ ಅದು ಅವರ ರಕ್ಷೆಯೇ ಆಗುತ್ತದೆ

---

**ಇಂದುಃ ಸ್ವರಮ್ಯಕಿರಣೈರ್ವಿಪಿನಂ ಪ್ರಪೂರೇ**
**ಮಂದಾನಿಲಶ್ಚ ಮುದಿತೋತ್ಪಲಮಾನ್ಯಗಂಧೈಃ ।**
**ಸಾಂದ್ರಪ್ರಸೂನನಿಚಯೈಸ್ತರವಃ ಸಮಂತಾತ್**
**ಕಂದರ್ಪತಾತಮವಲೋಕ್ಯ ಪಿಕಾಶ್ಚ ಗೀತೈಃ ॥ ೪೪ ॥**

**ಇಂದುಃ** = ಚಂದ್ರನು, **ಸ್ವ**= ತನ್ನ, **ರಮ್ಯ** = ಚಂದದ, **ಕಿರಣೈಃ** = ಕಿರಣಗಳಿಂದ, **ವಿಪಿನಂ** = ಕಾಡನ್ನು, **ಪ್ರಪೂರೇ** = ತುಂಬಿದನು. **ಮಂದ** = ಮೆಲ್ಲಗಿನ, **ಅನಿಲಃ** = ಗಾಳಿಯು, **ಮುದಿತ** = ಅರಳಿದ, **ಉತ್ಪಲ** = ನೈದಿಲೆಯ, **ಮಾನ್ಯ** = ಯೋಗ್ಯವಾದ, **ಗಂಧೈಃ** = ಪರಿಮಳದಿಂದ, **ಸಾಂದ್ರ** = ನಿಬಿಡವಾದ, **ಪ್ರಸೂನ** = ಹೂಗಳ, **ನಿಚಯೈಃ** =

ಸಮೂಹಗಳಿಂದ, **ತರವಃ** = ಮರಗಳು, **ಸಮಂತಾತ್** = ಸುತ್ತಲೂ, **ಕಂದರ್ಪ** = ಕಾಮನ, **ತಾತಂ** = ತಂದೆಯನ್ನು, **ಅವಲೋಕ್ಯ** = ನೋಡಿ, **ಪಿಕಾಶ್ಚ** = ಕೋಗಿಲೆಗಳು, **ಗೀತೈಃ** = ಹಾಡುಗಳಿಂದ.

ಕೃಷ್ಣನು ವನವನ್ನು ಪ್ರವೇಶಿಸುವಾಗ ಚಂದ್ರನು ತನ್ನ ಕಿರಣಗಳಿಂದ ಆ ವನವನ್ನು ಬೆಳಗಿಸಿದನು. ಚಂದ್ರನು ಮನ್ಮಥನ ಮಿತ್ರನು. ಕೃಷ್ಣನು ಮನ್ಮಥನ ತಂದೆಯು. ಮಿತ್ರನ ತಂದೆಗೆ ಚಂದ್ರನು ಸಹಕರಿಸಿದನು. ಚಂದ್ರನ ಕಿರಣಗಳ ಸಂಬಂಧದಿಂದ ಅರಳಿದ ಕುಮುದ ಪುಷ್ಪಗಳ ಪರಿಮಳವನ್ನು ಹಿಡಿದುಕೊಂಡು ಮಂದಮಾರುತವು ಆ ಕಾಡಲ್ಲಿ ತುಂಬಿತು. ಆ ಕಾಡಿನ ಮರಗಳು ಪುಷ್ಪಗಳಿಂದ ತುಂಬಿದವು. ಕೋಗಿಲೆಗಳು ತಮ್ಮ ಹಾಡುಗಳಿಂದ ಕಾಡನ್ನು ತುಂಬಿಸಿದವು. ಇವುಗಳೆಲ್ಲಾ ಕಾಮನ ಮಿತ್ರಗಳು.

**ದೇವರಿಂದ ಸೃಷ್ಟವಾದ ಎಲ್ಲವೂ ದೇವರ ಸೇವೆಗಾಗಿ ಇರತಕ್ಕದ್ದು**

**ವಿಶ್ವಸ್ಯ ಮೋಹನ ಇತೀಶ ಯಶೋ ಮದೀಯಂ**
**ವಿಸ್ತಾರಯೇಹ ಲಲನಾಸಹಿತೋ ವಿಹೃತ್ಯ ।**
**ಇತ್ಯರ್ಥನಾಕೃದಿವ ವೃಕ್ಷತಲಪ್ರವಿಷ್ಟೈಃ**
**ಕೃಷ್ಣಾಂಘ್ರಿಮಾಸ್ಪೃಶತಿ ಹೃದ್ಯಕರೈರ್ಹಿಮಾಂಶುಃ ॥ ೪೫ ॥**

**ವಿಶ್ವಸ್ಯ** = ಜಗತ್ತಿಗೆ, **ಮೋಹನಃ** = ಮೋಹಕನು, **ಇತಿ** = ಎಂದು, **ಈಶ** = ಕೃಷ್ಣನೇ, **ಯಶಃ** = ಕೀರ್ತಿಯನ್ನು, **ಮದೀಯಂ** = ನನ್ನ, **ವಿಸ್ತಾರಯ** = ವಿಸ್ತರಿಸು, **ಇಹ** = ಈ ಕಾಡಲ್ಲಿ, **ಲಲನಾ** = ನಾರಿಯರಿಂದ, **ಸಹಿತಃ** = ಕೂಡಿಕೊಂಡು, **ವಿಹೃತ್ಯ** = ವಿಹರಿಸಿ, **ಇತಿ** = ಎಂದು, **ಅರ್ಥನಾಕೃತ್ ಇವ** = ಪ್ರಾರ್ಥನೆ ಮಾಡುವವನಂತೆ, **ವೃಕ್ಷ** = ಮರಗಳ, **ತಲ** = ಬುಡಕ್ಕೆ, **ಪ್ರವಿಷ್ಟೈಃ** = ಬಿದ್ದಿರುವ, **ಕೃಷ್ಣಾಂಘ್ರಿಂ** = ಕೃಷ್ಣನ ಚರಣವನ್ನು, **ಆಸ್ಪೃಶತಿ** = ಮುಟ್ಟುತ್ತಾನೆ, **ಹೃದ್ಯಕರೈಃ** = ಚಂದದ ಕಿರಣಗಳಿಂದ, **ಹಿಮಾಂಶುಃ** = ಚಂದ್ರನು.

ಕಾಡಿನಲ್ಲಿ ಕೃಷ್ಣನು ಅಡ್ಡಾಡಿದನು. ಸರ್ವತ್ರ ಮರಗಳ ಮಧ್ಯದಿಂದ ತೂರಿ ಬಂದ ಚಂದ್ರನ ಕಿರಣಗಳು ಕೃಷ್ಣನ ಪಾದಗಳನ್ನು ಮುಟ್ಟುತ್ತಿದ್ದವು. ಈ ದೃಶ್ಯವನ್ನು ರಾಜರು ವೈಭವೀಕರಿಸುತ್ತಾರೆ – ಕೃಷ್ಣನನ್ನೂ ಚಂದ್ರನು ಮೋಹಗೊಳಿಸಿದನು ಎಂಬ ಕೀರ್ತಿಯು ತನಗೆ ಬರಬೇಕು. ಅದಕ್ಕಾಗಿ ಕೃಷ್ಣನು ಗೋಪಿಯರಿಂದ ಕೂಡಿಕೊಂಡು ಬೆಳದಿಂಗಳಲ್ಲಿ ಈ ಕಾಡಲ್ಲಿ ವಿಹರಿಸಬೇಕು ಎಂಬ ಅಭಿಪ್ರಾಯದಿಂದ ಪ್ರಾರ್ಥಿಸುತ್ತಿರುವವನಂತೆ ಚಂದ್ರನು ತನ್ನ ಕಿರಣಗಳೆಂಬ ಕೈಗಳಿಂದ ಕೃಷ್ಣನ ಪಾದಗಳನ್ನು ಹಿಡಿದಿದ್ದಾನೋ - ಎಂದು.

**ವ್ಯಾಕೀರ್ಣಕಾಮ ಇವ ತೈರ್ವಿವಿಧೈರ್ವಿಭಾವೈ**
**ರಾಕರ್ಷಯನ್ ವ್ರಜವಧೂರ್ನಿಜಸಂಗಯೋಗ್ಯಾಃ।**
**ವೇಣುಂ ಕ್ರಮೇಣ ರಣಯನ್ ಬಹುತಾನಗಾನ**
**ಮಾನಜ್ಞಮೌಲಿರುದಗಾಯದಧೀಶ್ವರೋಽಸೌ ॥೪೬॥**

**ವ್ಯಾಕೀರ್ಣ** = ರಸವತ್ತಾದ, **ಕಾಮಃ** = ಇಚ್ಛೆಯುಳ್ಳ, **ಇವ** = ಅಂತೆ, **ತೈಃ** = ಆ, **ವಿವಿಧೈಃ** = ನಾನಾ ರೀತಿಯ, **ವಿಭಾವೈಃ** = ಉದ್ದೀಪಕವಸ್ತುಗಳಿಂದ, **ವ್ರಜವಧೂಃ** = ಗೋಕುಲದ ನಾರಿಯರನ್ನು, **ಆಕರ್ಷಯನ್** = ಸೆಳೆಯುತ್ತ, **ನಿಜ** = ತನ್ನ, **ಸಂಗ** = ಸಂಪರ್ಕಕ್ಕೆ, **ಯೋಗ್ಯಾಃ** = ಯೋಗ್ಯರಾದ, **ವೇಣುಂ** = ಕೊಳಲನ್ನು, **ಕ್ರಮೇಣ** = ನಿಧಾನವಾಗಿ, **ರಣಯನ್** = ಊದುತ್ತಾ, **ಬಹು** = ಬಹಳ, **ತಾನ** = ಧ್ವನಿಗಳುಳ್ಳ, **ಗಾನ** = ಹಾಡುಗಳ, **ಮಾನ** = ಪ್ರಮಾಣವನ್ನು, **ಜ್ಞ** = ತಿಳಿದವರಿಗೆ, **ಮೌಲಿಃ** = ಶ್ರೇಷ್ಠನಾದ, **ಉದಗಾಯತ್** = ಊದಿದನು, **ಅಧೀಶ್ವರಃ** = ಒಡೆಯನಾದ, **ಅಸೌ** = ಕೃಷ್ಣನು.

ಈ ರೀತಿಯಾಗಿ ಹಿಂದೆ ಹೇಳಿದ ನಾನಾ ರೀತಿಯ ವಿಭಾವಗಳಿಂದ ಕೃಷ್ಣನು ಕಾಮೋದ್ರಿಕ್ತನಾದವನಂತೆ ವ್ಯವಹರಿಸಿದನು. ವಿಭಾವಗಳು = ರತಿಗೆ ಉತ್ತೇಜನವನ್ನು ಕೊಡುವ ಚಂದ್ರೋದಯಾದಿಗಳು. ಕೃಷ್ಣನು ತನ್ನ ಸಂಗಕ್ಕೆ ಯೋಗ್ಯರಾದ ಗೋಪಿಯರನ್ನು ಆಕರ್ಷಿಸಿದನು. ಕೃಷ್ಣನು ಸಂಗೀತ ತಜ್ಞರಿಗೆ ಕಿರೀಟಪ್ರಾಯದಂತೆ ಇದ್ದಾನೆ.

**ಹೃದ್ಗಂ ಹೃದ್ಯನುರಂಜಯನ್ ಸವಯಸಃ ಸಂಹರ್ಷಯನ್ ಕರ್ಷಯನ್**
**ಗೋಪಸ್ತ್ರೀಹೃದಯಂ ಪಶೂನ್ ಋಷಿಗಣಾನ್ನಿಶ್ಚೇಷ್ಟಯನ್ ಸ್ಪಷ್ಟಯನ್।**
**ವಿಶ್ವಂ ಸ್ವಸ್ಯ ವಶಂ ವಿಯದ್ಗೃಹವಧೂಸ್ಸಂಮೂರ್ಛಯನ್ ಚಾರಣಾನ್**
**ಸಿದ್ಧಾನ್ ಸಂತ್ರಪಯನ್ ಸುರಾನ್ ವಿನಿಮಯನ್**
**ವೇಣುಂ ಪುಪೋಷಾಚ್ಯುತಃ ॥ ೪೭ ॥**

**ಹೃದ್ಗಂ**[1] = ಉದರದಲ್ಲಿ ಇರುವವರನ್ನು, **ಹೃದಿ** = ಉದರದಲ್ಲಿ, **ಅನುರಂಜಯನ್** = ರಮಿಸುತ್ತಾ, **ಸವಯಸಃ** = ಗೆಳೆಯರನ್ನು, **ಸಂಹರ್ಷಯನ್** = ಸಂತೋಷಗೊಳಿಸುತ್ತಾ, **ಕರ್ಷಯನ್** = ಸೆಳೆಯುತ್ತಾ, **ಗೋಪಸ್ತ್ರೀ** = ಗೋಪಿಯರ, **ಹೃದಯಂ** = ಮನಸ್ಸನ್ನು, **ಪಶೂನ್** = ಪಶುಗಳನ್ನು, **ಋಷಿಗಣಾನ್** = ಋಷಿಗಳ ಸಮೂಹವನ್ನು, **ನಿಶ್ಚೇಷ್ಟಯನ್** = ಸ್ತಬ್ಧರನ್ನಾಗಿಸಿ, **ಸ್ಪಷ್ಟಯನ್** = ಚೆನ್ನಾಗಿ ತಿಳಿಸುತ್ತಾ, **ವಿಶ್ವಂ** = ಜಗತ್ತು, **ಸ್ವಸ್ಯ** = ತನ್ನ, **ವಶಂ** = ಅಧೀನವನ್ನಾಗಿ, **ವಿಯತ್** = ಆಕಾಶವೇ, **ಗೃಹ** = ಮನೆಯಾಗಿ ಉಳ್ಳ,

---

[1] ಹೃದ್ಗಂ = ಹೃದಯಗತಂ ಕುಕ್ಷಿಸ್ಥಮಿತ್ಯರ್ಥಃ – (ವ್ಯಾ)

**ವಧೂಃ** = ದೇವ ಸ್ತ್ರೀಯರನ್ನು, **ಸಮ್ಮೂರ್ಛಯನ್** = ಮೂರ್ಛೆಗೊಳಿಸುತ್ತಾ, **ಚಾರಣಾನ್** = ಚಾರಣರನ್ನು, **ಸಿದ್ಧಾನ್** = ಸಿದ್ಧರನ್ನು, **ಸಂತ್ರಪಯನ್** = ನಾಚಿಕೆಗೊಳಿಸುತ್ತಾ, **ಸುರಾನ್** = ದೇವತೆಗಳನ್ನು, **ವಿನಮಯನ್** = ನಮ್ರರನ್ನಾಗಿಸಿ, **ವೇಣುಂ** = ಕೊಳಲನ್ನು, **ಪುಪೋಷ** = ಊದಿದನು, **ಅಚ್ಯುತಃ** = ಕೃಷ್ಣನು.

ಕೃಷ್ಣನ ಕೊಳಲ ಧ್ವನಿಗೆ ಕೃಷ್ಣನ ಉದರದಲ್ಲಿರುವ ಮುಕ್ತರು ಅಲ್ಲೇ ತೃಪ್ತಿ ಪಟ್ಟರು. ಮಿತ್ರರಾದ ಗೊಲ್ಲರು ಉಲ್ಲಸಿತರಾದರು. ಈ ಕೊಳಲ ಧ್ವನಿಯು ಗೋಪಿಯರ ಮನಸ್ಸನ್ನು ಪೂರ್ಣವಾಗಿ ಆಕರ್ಷಿಸಿತ್ತು. ಪಶುಗಳು, ಋಷಿಗಳು ತಮ್ಮ ಕೆಲಸವನ್ನು ಬಿಟ್ಟು ನಿಶ್ಚೇಷ್ಟಿತರಾದರು. ಕೊಳಲ ಧ್ವನಿಯನ್ನು ಕೇಳಲು ಆಕಾಶದಲ್ಲಿ ದೇವತಾಸ್ತ್ರೀಯರು ಸೇರಿದ್ದರು. ಅವರು ಈ ಧ್ವನಿಗೆ ತಮ್ಮನ್ನು ತಾವೇ ಮರೆತರು. ವಿಶೇಷವಾಗಿ ಸಂಗೀತವನ್ನು ತಿಳಿದವರು ಸಿದ್ಧರು, ಚಾರಣರು. ಇವರಿಗೂ ನಾಚಿಕೆಯನ್ನು ಉಂಟು ಮಾಡುವಂತಿತ್ತು. ದೇವತಾ ಪುರುಷರು ಪೂರ್ಣಶರಣಾದರು. ಈ ರೀತಿ ಕೃಷ್ಣನು ಸಮಗ್ರ ಜಗತ್ತು ತನ್ನ ಅಧೀನದಲ್ಲಿರುವುದನ್ನಾಗಿ ತೋರಿಸಿದನು.

**ಶುಷ್ಕಾಮಪಿ ಸ್ಮ ಸರಸಾಮಧರಾಮೃತೇನ**
**ಹೃದ್ಯಸ್ವನಾಮಪಿ ವಿಧಾಯ ಮೃದೂಕ್ತಿಶೂನ್ಯಾಮ್ ।**
**ಛಿದ್ರಂ ನಿಗೂಹ್ಯ ಮುರಲೀಂ ಮುರಜಿಚ್ಚುಚುಂಬೇ**
**ಸದ್ವಂಶಜಾತಲಲನಾಸು ನ ಕಸ್ಯ ಪಕ್ಷಃ ॥ ೪೮ ॥**

**ಶುಷ್ಕಾಮಪಿ** = ಒಣಗಿದ್ದರೂ, **ಸರಸಾಂ** = ರಸವುಳ್ಳದ್ದನ್ನಾಗಿ, **ಅಧರಾಮೃತೇನ** = ತುಟಿಯ ರಸದಿಂದ, **ಹೃದ್ಯ** = ಇಂಪಾದ, **ಸ್ವನಾಮಪಿ** = ಧ್ವನಿವುಳ್ಳದ್ದನ್ನಾಗಿ, **ವಿಧಾಯ** = ಮಾಡಿ, **ಮೃದು** = ಮೆತ್ತಗಿನ, **ಉಕ್ತಿ** = ಮಾತಿನಿಂದ, **ಶೂನ್ಯಾಂ** = ರಹಿತವಾದ, **ಛಿದ್ರಂ** = ರಂಧ್ರಗಳನ್ನು, **ನಿಗೂಹ್ಯ** = ಮುಚ್ಚಿ, **ಮುರಲೀಂ** = ಕೊಳಲನ್ನು, **ಮುರಜಿತ್** = ಕೃಷ್ಣನು, **ಚುಚುಂಬೇ** = ಚುಂಬಿಸಿದನು, **ಸತ್** = ಒಳ್ಳೆಯ, **ವಂಶ** = ವಂಶದಲ್ಲಿ, **ಜಾತ** = ಹುಟ್ಟಿದ, **ಲಲನಾಸು** = ಸ್ತ್ರೀಯರಲ್ಲಿ, **ಕಸ್ಯ** = ಯಾರಿಗೆ, **ನ ಪಕ್ಷಃ** = ಇಷ್ಟವಿಲ್ಲ.

ಆ ಕೊಳಲು ಪೂರ್ಣವಾಗಿ ಒಣಗಿತ್ತು. ಹಸಿಯಾಗಿದ್ದರೆ ಧ್ವನಿ ಹೊರಡುವುದಿಲ್ಲ. ಆದ್ದರಿಂದ ಕೊಳಲು ಒಣಗಿರಲೇಬೇಕು. ಒಣಗಿದ್ದರಿಂದ ಬಹಳ ಗಟ್ಟಿಯಾಗಿದೆ. ಇಂತಹ ಕೊಳಲಿಗೆ ತನ್ನ ಬಾಯಿಯ ರಸವನ್ನು ಕೃಷ್ಣನು ಕೊಟ್ಟು ಅದನ್ನು ಮೃದುವನ್ನಾಗಿ ಮಾಡಿದ. ಜಡವಾದ್ದರಿಂದ ಅದರಿಂದ ಯಾವ ಒಳ್ಳೆಯ ಧ್ವನಿಯೂ ಹೊರಡುತ್ತಿರಲಿಲ್ಲ. ಆದರೂ ಕೃಷ್ಣನು ಅದರಲ್ಲಿ ಒಳ್ಳೆಯ ಧ್ವನಿ ಹೊರಡುವಂತೆ ಮಾಡಿದನು. ಅದರಲ್ಲಿರುವ ರಂಧ್ರ-

ಗಳನ್ನು ತನ್ನ ಕೈಗಳಿಂದ ಮುಚ್ಚಿದನು. ಧ್ವನಿ ಹೊರಡಬೇಕಾದರೆ (ಕೆಲವು) ರಂಧ್ರಗಳಿಗೆ ಬೆರಳು ಇಡಬೇಕಾದದ್ದು ಸಹಜ. ಇನ್ನೊಂದು ಅರ್ಥ ರಂಧ್ರಗಳನ್ನು ಮುಚ್ಚುವುದು ಅಂದರೆ ದೋಷಗಳನ್ನು ಮುಚ್ಚುವುದು ಎಂದು. ಈ ರೀತಿ ಮಾಡಿ ಕೃಷ್ಣನು ಮುರಲಿಯನ್ನು ಮುತ್ತಿಟ್ಟನು.

ಈ ದೃಶ್ಯವನ್ನು ರಾಜರು ಲೋಕದ ಧಾಟಿಯು ವ್ಯಕ್ತವಾಗುವಂತೆಯೂ ವರ್ಣಿಸಿದ್ದಾರೆ – ಲೋಕದಲ್ಲಿ ಒಬ್ಬನು ಒಬ್ಬಳನ್ನು ವರಿಸಬೇಕೆಂದು ಅಪೇಕ್ಷಿಸುತ್ತಾನೆ. ಆದರೆ ಆಕೆ ಮಹಾ ಒರಟು. ಬಹಳ ಗಟ್ಟಿ. ಬಹಳ ದೋಷವುಳ್ಳವಳು. ಆದರೂ ಆಕೆಯನ್ನು ಮೃದುವನ್ನಾಗಿ ಮಾಡಿ ಒಳ್ಳೆಯ ಮಾತು ಅವಳಿಂದ ಬರುವಂತೆ ಮಾಡುತ್ತಾನೆ. ಅವಳಲ್ಲಿ ಇರುವ ದೋಷಗಳನ್ನು ಮರೆ ಮಾಡುತ್ತಾನೆ. ಕೊನೆಗೆ ಅವಳನ್ನು ವರಿಸುತ್ತಾನೆ. ಇಷ್ಟೆಲ್ಲಾ ಶ್ರಮ ಏಕೆಂದರೆ ಅವಳು ಒಳ್ಳೇ ವಂಶದಲ್ಲಿ ಹುಟ್ಟಿದವಳು ಎಂಬ ಒಂದೇ ಕಾರಣ.

ಅದೇ ರೀತಿ ಈ ಕೊಳಲೂ ಕೂಡಾ ಸದ್‌ವಂಶದಲ್ಲಿ ಹುಟ್ಟಿದ್ದು. ಬಿದಿರಿನ ಹಿಂಡಿಗೆ ವಂಶ ಎಂದೇ ಹೆಸರು. ಎಲ್ಲಾ ಬಿದಿರುಗಳಿಂದ ಕೊಳಲನ್ನು ಮಾಡಲು ಆಗುವುದಿಲ್ಲ. ಒಳ್ಳೇ ಬಿದಿರೇ ಆಗಬೇಕು. ಆದ್ದರಿಂದ ಕೃಷ್ಣನ ಕೈಯ್ಯಲ್ಲಿರುವ ಕೊಳಲು ಸದ್ವಂಶಜಾತ. ಆದ್ದರಿಂದ ಕೃಷ್ಣನು ಅದರ ಬಗ್ಗೆ ಬಹಳ ಮುತುವರ್ಜಿ ವಹಿಸಿದನು.

ಈ ಸಂದರ್ಭದಲ್ಲಿ ರಾಜರು ಕೃಷ್ಣನನ್ನು ಮುರಜಿತ್ ಎಂದು ಕರೆದಿದ್ದಾರೆ. ಯಾಕೆಂದರೆ ಕೃಷ್ಣನು ಮಹಾಸಮರ್ಥ. ಒಣಗಿದ್ದನ್ನು ಚಿಗುರಿಸುವ, ಚಿಗುರಿದ್ದನ್ನು ಒಣಗಿಸುವ ಎಂದು ತಿಳಿಸಲು.

**ಅಪರವಶಮಪೀಶಂ ಸ್ವಾನುರಕ್ತಂ ವಿಧತ್ತೇ**
**ಸಹಜಮಪಿ ವಿರೋಧಂ ಹಂತಿ ಜಂತುಷ್ವಭೇದ್ಯಮ್ ।**
**ವಶಯತಿ ಜಗದೇತನ್ಮಾನ್ಯತಾಮಾಪ ವೇಣು-**
**ರ್ಮಧುರನಿನದಭಾಜಾಂ ಕಿಂ ನ ಸಾಧ್ಯಂ ಹಿ ಲೋಕೇ ॥ ೪೯ ॥**

**ಅಪರವಶಂ ಅಪಿ** = ಇನ್ನೊಬ್ಬರ ಅಧೀನನಲ್ಲದಿದ್ದರೂ, **ಈಶಂ** = ಕೃಷ್ಣನನ್ನು, **ಸ್ವ** = ತನ್ನಲ್ಲಿ, **ಅನುರಕ್ತಂ** = ಆಸಕ್ತನನ್ನಾಗಿ, **ವಿಧತ್ತೇ** = ಮಾಡುತ್ತದೆ, **ಸಹಜಮಪಿ** = ಸಹಜವಾಗಿದ್ದರೂ, **ವಿರೋಧಂ** = ದ್ವೇಷವನ್ನು, **ಹಂತಿ** = ಪರಿಹರಿಸುತ್ತದೆ, **ಜಂತುಷು** = ಪ್ರಾಣಿಗಳಲ್ಲಿ, **ಅಭೇದ್ಯಂ** = ಅಪರಿಹಾರ್ಯವಾದ, **ವಶಯತಿ** = ವಶೀಕರಿಸುತ್ತದೆ. **ಜಗತ್** = ಲೋಕವನ್ನು, **ಏತತ್** = ಈ, **ಮಾನ್ಯತಾ** = ಪೂಜ್ಯತ್ವವನ್ನು, **ಆಪ** = ಹೊಂದಿತು. **ವೇಣುಃ** = ಕೊಳಲು, **ಮಧುರ** = ಇಂಪಾದ, **ನಿನದ** = ಧ್ವನಿಯನ್ನು,

**ಭಾಜಾಂ** = ಹೊಂದಿದವರಿಗೆ, **ಕಿಂ** = ಯಾವುದು, **ನ ಸಾಧ್ಯಂ** = ಅಸಾಧ್ಯವು, **ಲೋಕೇ** = ಲೋಕದಲ್ಲಿ, **ಹಿ** = ಪ್ರಸಿದ್ಧ.

ದೇವರು ಯಾರ ಅಧೀನನೂ ಅಲ್ಲ. ಆದರೂ ತನ್ನನ್ನು ಬಿಟ್ಟು ಇರಲಾರದಂತೆ ಕೊಳಲು ಮಾಡಿತು. ಕೃಷ್ಣನ ಕೊಳಲ ಧ್ವನಿಗೆ ಪರಸ್ಪರ ವಿರುದ್ಧವಾದ ಪ್ರಾಣಿಗಳು ವಿರೋಧವನ್ನು ಬಿಟ್ಟು ಒಟ್ಟಿಗೆ ಸೇರಿದವು. ಜಗತ್ತನ್ನೇ ತನ್ನ ಅಧೀನವನ್ನಾಗಿ ಮಾಡಿತು. ಕವಿಗಳೆಲ್ಲಾ ಈ ವೇಣುವನ್ನು ಬಹಳ ವರ್ಣನೆ ಮಾಡಿದರು. ಒಂದು ಕೊಳಲಿನಿಂದ ಇಷ್ಟೆಲ್ಲಾ ಆಗಲು ಕಾರಣ ಅದರ ಮಧುರವಾದ ಧ್ವನಿ. ಮೃದುವಾದ ಮಾತಿನಿಂದ ಆಗುವ ಕೆಲಸ ಗದರುವಿಕೆಯಿಂದ ಆಗುವುದಿಲ್ಲ.

**ಸ ಜಯತಿ ಯದುನಾಥಃ ಶ್ರಾವಿತಾನೇಕಗೀತಃ**
**ಕರಧೃತವರವೇಣುಃ ಕಾಮಿನೀಕಾಮಧೇನುಃ ।**
**ಸುಲಲಿತವನಮಾಲಃ ಸುಂದರಾಪಾಂಗಲೀಲಃ**
**ಸಜಲಜಲದಮೂರ್ತಿಃ ಸಾಧುಭಿರ್ಗೀತಕೀರ್ತಿಃ ॥ ೫೦ ॥**

**ಸಃ** = ಆ, **ಜಯತಿ** = ಉತ್ಕೃಷ್ಟನಾಗಿದ್ದಾನೆ, **ಯದುನಾಥಃ** = ಯದುಶ್ರೇಷ್ಠನು, **ಶ್ರಾವಿತ** = ಕೇಳಿಸಲ್ಪಟ್ಟ, **ಅನೇಕ** = ಬಹಳ, **ಗೀತಃ** = ಹಾಡುಳ್ಳ, **ಕರ** = ಕೈಯ್ಯಲ್ಲಿ, **ಧೃತ** = ಹಿಡಿದ, **ವರ** = ಉತ್ತಮವಾದ, **ವೇಣುಃ** = ಕೊಳಲುಳ್ಳ, **ಕಾಮಿನೀ** = ಸ್ತ್ರೀಯರಿಗೆ, **ಕಾಮಧೇನುಃ** = ಇಷ್ಟವನ್ನು ಕೊಡುವ, **ಸುಲಲಿತ** = ಒಳ್ಳೆಯ, **ವನಮಾಲಃ** = ಹಾರವುಳ್ಳ, **ಸುಂದರ** = ಒಳ್ಳೆಯ, **ಅಪಾಂಗ** = ಕಡೆಗಣ್ಣಿನ, **ಲೀಲಃ** = ವಿಲಾಸವುಳ್ಳ, **ಸಜಲ** = ನೀರಿನಿಂದ ಕೂಡಿದ, **ಜಲದ** = ಮೋಡದಂತೆ, **ಮೂರ್ತಿಃ** = ಸ್ವರೂಪವುಳ್ಳ, **ಸಾಧುಭಿಃ** = ಸಜ್ಜನರಿಂದ, **ಗೀತ** = ಹಾಡಲ್ಪಟ್ಟ, **ಕೀರ್ತಿಃ** = ಕೀರ್ತಿಯುಳ್ಳ.

ಕೃಷ್ಣನು ಕೈಯ್ಯಲ್ಲಿ ಕೊಳಲನ್ನು ಹಿಡಿದನು. ತನ್ನ ಭಕ್ತರಿಗೆ ಅನೇಕ ಹಾಡುಗಳನ್ನು ಕೇಳಿಸಿದನು. ಈ ಪ್ರಸಂಗದಲ್ಲಿ ತನ್ನ ಭಕ್ತರ ಅಭೀಷ್ಟಗಳನ್ನೆಲ್ಲಾ ಪೂರೈಸುತ್ತಿದ್ದನು. ಕೊರಳಲ್ಲಿ ಒಳ್ಳೆಯ ಪುಷ್ಪದ ಮಾಲಿಕೆಯನ್ನು ಧರಿಸಿ ತನ್ನ ಭಕ್ತರನ್ನೊಮ್ಮೆ ಕಡೆಗಣ್ಣಿನಿಂದ ನೋಡುವುದೇ ಆತನಿಗೆ ಆನಂದ. ಇಂತಹ ನೀಲಮೇಘಶ್ಯಾಮನಾದ ಕೃಷ್ಣನನ್ನು ಸಮಸ್ತ ಋಷಿಗಳು ಸ್ತುತಿಸುತ್ತಿದ್ದಾರೆ. ಜಯ ಜಯ ಎನ್ನುತ್ತಿದ್ದಾರೆ.

**ಚಂದ್ರೇ ಜೃಂಭತಿ ತನ್ಮುಖತ್ವಿಷಿ ಮುಹುರ್ಮಂದಾನಿಲೇ ತದ್ವಪುಃ**
**ಗಂಧೇ ವಾತಿ ವಿಯೋಗವಹ್ನಿಸಚಿವೇ ತತ್ಕೋಮಲಾಲಾಪವತ್ ।**

**ವೇಣೌ ಕೂಜತಿ ಪಂಚಬಾಣವಿಶಿಖೈಃ ಶಾಣಾಶಿತೈಸ್ತಾಡಿತಾ**
**ಮಾನಿನ್ಯೋಽಪಿ ಯಯುರ್ಮನೋಭವಪಿತುಃ ಶ್ರೇಯೋನಿಧಿಂ ಸನ್ನಿಧಿಮ್ ॥**

**ಚಂದ್ರೇ** = ಚಂದ್ರನು, **ಜೃಂಭತಿ** = ಬೆಳೆಯುತ್ತಿರಲು, **ತತ್** = ಕೃಷ್ಣನ, **ಮುಖ** = ಮುಖದಂತೆ, **ತ್ವಿಷಿ** = ಕಾಂತಿಯುಳ್ಳ, **ಮುಹುಃ** = ಮತ್ತು , **ಮಂದಾನಿಲೇ** = ಮಂದ-ವಾದ ಗಾಳಿಯು, **ತದ್** = ಕೃಷ್ಣನ, **ವಪುಃ** = ಶರೀರದ, **ಗಂಧೇ** = ಪರಿಮಳ-ದಂತಿರುವ, **ವಾತಿ** = ಬೀಸುತ್ತಿರಲು, **ವಿಯೋಗ** = ಆಗಲುವಿಕೆ ಎಂಬ, **ವಹ್ನಿ** = ಬೆಂಕಿಗೆ, **ಸಚಿವೇ** = ಗೆಳೆಯನಾದ, **ತತ್** = ಕೃಷ್ಣನ, **ಕೋಮಲ** = ಚಂದದ, **ಆಲಾಪವತ್** = ಆಲಾಪದಂತೆ, **ವೇಣೌ** = ಕೊಳಲು, **ಕೂಜತಿ** = ಕೂಗುತ್ತಿರಲು, **ಪಂಚಬಾಣ** = ಕಾಮನ, **ವಿಶಿಖೈಃ** = ಬಾಣಗಳಿಂದ, **ಶಾಣಾಶಿತೈಃ** = ಕಲ್ಲಿನಿಂದ (ಉಜ್ಜಿ) ಹರಿತವಾದ, **ತಾಡಿತಾಃ** = ಹೊಡೆಯಲ್ಪಟ್ಟ, **ಮಾನಿನ್ಯಃ ಅಪಿ** = ಗೋಪಿಯರೂ ಕೂಡಾ, **ಯಯುಃ** = ಹೊರಟರು, **ಮನೋಭವ** = ಕಾಮನ, **ಪಿತುಃ** = ತಂದೆಯಾದ, **ಶ್ರೇಯೋನಿಧಿಂ** = ಶ್ರೇಯಸ್ಸಿಗೆ ಕಾರಣವಾದ, **ಸನ್ನಿಧಿಂ** = ಸಮೀಪವನ್ನು .

ಕೃಷ್ಣನ ಮುಖದ ಕಾಂತಿಯನ್ನು ಹೋಲುವ ಚಂದ್ರನು ಮೇಲೆ ಮೇಲೆ ಬರುತ್ತಿದ್ದಾನೆ. ತಂಪಾದ ಗಾಳಿ ನಿಧಾನವಾಗಿ ಬೀಸುತ್ತಿದೆ. ಕೃಷ್ಣನ ದೇಹದ ಗಂಧದ ಪರಿಮಳವು ಆ ಗಾಳಿಯಲ್ಲಿದೆ. ಕೃಷ್ಣನ ಮಾತಿನಂತೆ ಕೊಳಲು ಧ್ವನಿ ಮಾಡುತ್ತಿದೆ. ಇದೇ ಸಂದರ್ಭದಲ್ಲಿ ಕಾಮನು ತನ್ನ ಹರಿತವಾದ ಬಾಣಗಳಿಂದ, ಈ ಗೋಪಿಯರನ್ನು ಬಡಿದೆಬ್ಬಿಸಿದನು. ಯದ್ಯಪಿ ಈ ಗೋಪಿಯರು ಬಹಳ ಅಭಿಮಾನಿನಿಯರು. ಸಾಮಾನ್ಯವಾಗಿ ಯಾವುದಕ್ಕೂ ಸೋಲುವವರಲ್ಲ . ಆದರೆ ಈಗ ಸೋತರು. ಆದ್ದರಿಂದಲೇ ರಾಜರು ಕಾಮೋತ್ತೇಜಕರಾದ ಚಂದ್ರಾದಿಗಳನ್ನು ವರ್ಣಿಸುವಾಗ ಕೃಷ್ಣ ಸಂಬಂಧವನ್ನು ಸೇರಿಸಿದರು, ಇದರ ಅರ್ಥ, ಒಂದು ಆ ಗೋಪಿಯರಲ್ಲಿ ಲಕ್ಷ್ಮಿಯ ಸನ್ನಿಧಾನ ಇದೆ ಎಂದು. ಎರಡು, ಕೃಷ್ಣನ ಗೀತೆಯ ಮಾತು – ಎಲ್ಲಿ ವಿಲಕ್ಷಣ ಶಕ್ತಿ ಇದೆಯೋ ಅಲ್ಲಿ ತನ್ನ ಶಕ್ತಿ ಇದೆ ಎಂದು. ಗೋಪಿಯರೆಲ್ಲಾ ಕಾಮೋದ್ರಿಕ್ತರಾದರು ಎಂದು ಅಭಿಪ್ರಾಯ. ಕೃಷ್ಣನ ಬಳಿಗೆ ಬಂದರು. ಪರಪುರುಷನ ಬಳಿಗೆ ಬಂದದ್ದು ತಪ್ಪಲ್ಲವೇ? ಎಂಬ ಪ್ರಶ್ನೆಗೆ ಶ್ರೇಯೋನಿಧಿ ಎಂದು ಉತ್ತರ. ದೇವರು ಶ್ರೇಯಸ್ಸುಗಳಿಗೆ ಸಮುದ್ರದಂತೆ ಇರುವವನು. ಆತನ ಬಳಿಗೆ ಹೋದರೆ ಒಳ್ಳೆಯದೆ ಆಗುವುದು ಹೊರತು ಕೆಟ್ಟದ್ದಲ್ಲ.

ರಾಜರು ಕೃಷ್ಣನನ್ನು ಮನೋಭವಪಿತಾ ಎಂದಿದ್ದಾರೆ. ಅಂದರೆ ಕಾಮನ ತಂದೆ ಎಂದು. ಲೋಕದಲ್ಲಿ ಮಕ್ಕಳ ಉಪಟಳ ಸಹಿಸಲು ಅಸಾಧ್ಯವಾದರೆ ತಂದೆಯಲ್ಲಿ ದೂರಿಡಲು ಬರುತ್ತಾರೋ ಎಂಬಂತೆ ತೋರಿಸಲು ಮನೋಭವಪಿತಾ ಎಂದು ಹೇಳಿದ್ದಾರೆ.

**ದೋಹಂ ಕಾಪಿ ವಿಹಾಯ ಕೃಷ್ಣಸುರಭಿಂ ದೋಗ್ಧುಂ ಸಮಸ್ತೇಪ್ಸಿತಂ**
**ತದ್ಬಿಂಬೋಷ್ಠಸುಧಾತಿಲುಬ್ಧಹೃದಯಾ ಭುಕ್ತಿಂ ವಿಸೃಜ್ಯಾಪರಾ ।**
**ಕಾಂತಂ ಕಾಂಚನಸದ್ಗುಣಾರ್ಣವಭೃತೇ ಭರ್ತ್ರೇ ಸ್ಪೃಹಾಂ ಬಿಭ್ರತೀ**
**ತೋಕಂ ಕೃಷ್ಣವಿಹಾರಯೋಗ್ಯವಿಭವಾ ಕನ್ಯೇತಿ ಕಾಚಿದ್ಗತಾ ॥ ೫೨ ॥**

**ದೋಹಂ** = ಹಾಲು ಕರೆಯುವುದನ್ನು, **ಕಾಪಿ** = ಒಬ್ಬಳು, **ವಿಹಾಯ** = ಬಿಟ್ಟು, **ಕೃಷ್ಣಸುರಭಿಂ** = ಕೃಷ್ಣನೆಂಬ ಸುರಭಿಯನ್ನು, **ದೋಗ್ಧುಂ** = ಕರೆಯಲು, **ಸಮಸ್ತ** = ಎಲ್ಲಾ, **ಈಪ್ಸಿತಂ** = ಅಭೀಷ್ಟವನ್ನು, **ತತ್** = ಕೃಷ್ಣನ, **ಬಿಂಬೋಷ್ಠ** = ತೊಂಡೆಕಾಯಿ-ಯಂತಿರುವ ತುಟಿಯ, **ಸುಧಾ** = ಅಮೃತದಲ್ಲಿ, **ಅತಿಲುಬ್ಧ** = ಬಹಳ ಆಸೆಯಿಂದ ಕೂಡಿದ, **ಹೃದಯಾ** = ಮನಸ್ಸುಳ್ಳ, **ಭುಕ್ತಿಂ** = ಊಟವನ್ನು, **ವಿಸೃಜ್ಯ** = ಬಿಟ್ಟು, **ಅಪರಾ** = ಇನ್ನೊಬ್ಬಳು, **ಕಾಂತಂ** = ಪತಿಯನ್ನು, **ಕಾಚನ** = ಮತ್ತೊಬ್ಬಳು, **ಸದ್ಗುಣ** = ಒಳ್ಳೆಯ ಗುಣಗಳೆಂಬ, **ಅರ್ಣವ** = ಸಮುದ್ರವನ್ನು, **ಭೃತೇ** = ಧರಿಸಿದ, **ಭರ್ತ್ರೇ** = ಕೃಷ್ಣನಿಗಾಗಿ, **ಸ್ಪೃಹಾಂ** = ಆಸೆಯನ್ನು, **ಬಿಭ್ರತೀ** = ಧರಿಸಿದವಳಾಗಿ, **ತೋಕಂ** = ಮಗುವನ್ನು, **ಕೃಷ್ಣ** = ಹರಿಗೆ, **ವಿಹಾರ** = ವಿಹಾರಕ್ಕೆ, **ಯೋಗ್ಯ** = ಉಚಿತವಾದ, **ವಿಭವಾ** = ವೈಭವವುಳ್ಳ, **ಕನ್ಯಾ ಇತಿ** = ಕನ್ಯೆ ಎಂದು, **ಕಾಚಿತ್** = ಇನ್ನೊಬ್ಬಳು, **ಗತಾ** = ಹೊರಟಳು.

ಕೃಷ್ಣನು ಕೊಳಲನ್ನು ನುಡಿಸುವ ಈ ಹೊತ್ತಿನಲ್ಲಿ ಒಬ್ಬಳು ಗೋಪಿ ತನ್ನ ಮನೆಯಲ್ಲಿ ಹಾಲು ಕರೆಯುತ್ತಿದ್ದಳು. ಹಾಲು ಕರೆಯುವುದನ್ನು ಬಿಟ್ಟಳು. ಕೃಷ್ಣನಿದ್ದಲ್ಲಿಗೆ ಬಂದಳು. ಅವಳ ಉದ್ದೇಶ ಈ ರೀತಿ ಇತ್ತು. ಆಕಳಿಂದ ಹಾಲನ್ನು ಮಾತ್ರ ಹಿಂಡಬಹುದು. ಅದೂ ಕೂಡ ತನಗೆ ಹಾಗೂ ತನ್ನ ಮನೆ ಮಂದಿಗೆ ಮಾತ್ರ. ತನ್ನ ಹಿಂದಿನ, ಮುಂದಿನ ತಲೆಮಾರಿಗೆ ಸಿಗುವುದಿಲ್ಲ. ಆದರೆ ಕೃಷ್ಣನೆಂಬ ಆಕಳನ್ನು ಹಿಂಡಿದರೆ ಹಾಲು ಮಾತ್ರ ಸಿಗುವುದಲ್ಲ; ಎಲ್ಲಾ ಅಭೀಷ್ಟಗಳೂ ಸಿಗುತ್ತವೆ. ಅದೂ ಕೂಡಾ ಹಿಂದು ಮುಂದಿನ ತಲೆಮಾರನ್ನು ಸೇರಿಸಿ. ಅದೂ ಪೂರ್ಣವಾಗಿ ಸಿಗುತ್ತದೆ ಎಂದು.

ಇನ್ನೊಬ್ಬಳು ಊಟವನ್ನು ಬಿಟ್ಟು ಬಂದಳು. ಅವಳ ಅಭಿಪ್ರಾಯ ಹೀಗಿತ್ತು – ತಾನು ಉಣ್ಣತಕ್ಕ ಅನ್ನ ಭೌತಿಕವಾದದ್ದು. ಈ ಅನ್ನದಿಂದ ಅನಾರೋಗ್ಯ ಬರುತ್ತದೆ. ಕೊನೆಗೆ ಮರಣವೇ ಗತಿ. ಈ ಊಟದಿಂದ ಹಸಿವೆ ಕಮ್ಮಿಯಾಗುವುದಿಲ್ಲ. ಜಾಸ್ತಿಯಾಗುವುದು. ಆದ್ದರಿಂದ ಈ ಊಟ ಬೇಡ. ಕೃಷ್ಣನು ಕೊಳಲೂದುವಾಗ ಆ ಕೊಳಲಿನ ಮೂಲಕ ಸುರಿಯುವ ಆತನ ಬಾಯಿಯ ರಸವನ್ನು ಪಾನ ಮಾಡಿದರೆ ಜೀವನವೂ ಸರಸವಾಗುತ್ತದೆ. ಈ ರಸವನ್ನು ಅಧರಾಮೃತ ಎಂದು ಕರೆಯುತ್ತಾರೆ. ಆದ್ದರಿಂದ ಅಮೃತಪಾನ ಮಾಡಿದಂತೆ ಆಗುತ್ತದೆ. ಅಮೃತವನ್ನು ಕುಡಿದರೆ ಮರಣ ಇಲ್ಲ ಎಂದರ್ಥ.

ಅಮೃತತ್ವವು ಸಿಗಬೇಕಾದರೆ ಈ ಊಟವನ್ನು ಬಿಡಬೇಕು. ಕೊನೇ ಪಕ್ಷ ಏಕಾದಶೀ ದಿವಸವಾದರೂ ಎಂಬ ಸಂದೇಶ ಇಲ್ಲಿದೆ.

ಇನ್ನೊಬ್ಬಳು ತಾನು ಕೈಹಿಡಿದ ಗಂಡನನ್ನೇ ಬಿಟ್ಟು ಬಂದಳು. ಆಕೆ ಈ ರೀತಿ ಆಲೋಚಿಸಿದಳು – ತಾನು ಕೈಹಿಡಿದ ಗಂಡ ಅಪ್ರಯೋಜಕ. ಆತನಲ್ಲಿ ಯಾವ ಗುಣಗಳೂ ಇಲ್ಲ. ಈತನ ಕೈ ಹಿಡಿದದ್ದಕ್ಕೆ ಒಂದು ದಿನವೂ ಗಂಡಾಂತರವು ತಪ್ಪಿದ್ದಲ್ಲ. ಕೃಷ್ಣನಾದರೂ ಗುಣಗಳಿಂದ ಸಮುದ್ರದಂತೆ ಇರುವವನು. ಬರತಕ್ಕ ಗಂಡಾಂತರಗಳನ್ನು ತಪ್ಪಿಸುವವನು. ಇಂತಹ ಕೃಷ್ಣನಿರುವಾಗ ಯಾರೋ ಕ್ಷುಲ್ಲಕನನ್ನು ಕೈಹಿಡಿದ ತನ್ನನ್ನು ಜನ ಮೂರ್ಖಳೆಂದು ಹೀಯಾಳಿಸುತ್ತಾರೆ. ಆದ್ದರಿಂದ ಕೃಷ್ಣನೇ ನನ್ನ ಗಂಡ. ಈ ಗಂಡಾಂತರ (ಅನ್ಯಗಂಡ) ಬೇಡ ಎಂದು.

ಇನ್ನೊಬ್ಬಳು ತಾನು ಹಡೆದ ಮಗುವನ್ನೇ ಬಿಟ್ಟು ಬಂದಳು. ಯಾಕೆ ಈ ರೀತಿ ಬಂದಳು. ಅಂದರೆ – ಮಗುವನ್ನು ಕರೆದುಕೊಂಡು ಬಂದರೆ ಕೃಷ್ಣನು ಆಕೆಯನ್ನು ನೋಡಿ, ಅಮ್ಮ ನೀನು ಗೃಹಿಣಿ, ನಿನಗೆ ಪತಿ ಇದ್ದಾರೆ. ಅವರನ್ನು ಬಿಟ್ಟು ಯಾಕೆ ಬಂದೆ? ಹೋಗು ಮನೆಗೆ, ನನ್ನ ಜೊತೆ ಇರಬೇಡ ಎಂದು ಗದರಿಸಿ ಮನೆಗೆ ಕಳುಹಿಸಿಯಾನು. ಆತನ ಜೊತೆ ವಿಹಾರಕ್ಕೆ ಅವಕಾಶ ಕೊಡಲಿಕ್ಕಿಲ್ಲ. ಮಗುವನ್ನು ಬಿಟ್ಟು ಹೋದರೆ ಈಕೆ ಕನ್ಯಾ ಎಂದು ಈಕೆಯ ಜೊತೆ ವಿಹಾರ ಮಾಡುತ್ತಾನೆ ಎಂಬ ಆಸೆಯಿಂದ.

ಅವನವನ ತಲೆಗೆ ಅವನವನ ಕೈ ಎಂಬ ಒಂದು ಮಾತಿದೆ. ಅಂದರೆ ಅವರವರ ಉದ್ಧಾರ ಅವರವರಿಂದಲೇ ಎಂದು. ಏಕಃ ತಪಸ್ವೀ ದೇವರ ಧ್ಯಾನ ವಿಷಯದಲ್ಲಿ ಒಬ್ಬೊಬ್ಬರೇ ಇರಬೇಕು ಎಂದು ಇದರ ಅಭಿಪ್ರಾಯ. ಆದ್ದರಿಂದ ದೇವರ ಸನ್ನಿಧಿಗೆ ಹೋಗುವಾಗ ಒಬ್ಬೊಬ್ಬರೇ ಹೋಗಬೇಕು ಎಂಬ ಸಂದೇಶ ಇಲ್ಲಿದೆ.

• • • •

ಸಂದೇಶ

ಕೃಷ್ಣ ವಿಪಕ್ಷಮೈತ್ರೀ ಕಿಮು ಸೌಖ್ಯದಾತ್ರೀ

ಕೃಷ್ಣದ್ವೇಷಿಗಳ ಸಖ್ಯವು ಕ್ಷೇಮಕರವಲ್ಲ

ಗೋಪ್ಯನ್ಯಾಽಂಜನರೂಷಿತಂ ಸ್ವನಯನಂ ಕುರ್ವಂತ್ಯಗಾತ್ ಸತ್ವರಾ
ತಜ್ಜ್ಞಾನಾಂಜನತುಷ್ಟಧೀರಿವ ಪದೋಭೂಷಾಂ ಸ್ವದೋಷ್ಣೀತರಾ ।
ಸಂಧಾಯಾಚ್ಯುತಸನ್ನಿಧಿಂ ಸಮಗಮತ್ಕೃಷ್ಣಾಂಘ್ರಿಸೇವಾಂ ಸದಾ
ತನ್ವಂತ್ಯಾಃ ಕರಭೂಷಣಂ ಮಮ ಭವೇತ್ತತ್ಪಾದಯೋರ್ಭೂಷಣಮ್ ॥೫೩॥

**ಗೋಪೀ** = ಗೋಪಿಯು, **ಅನ್ಯಾ** = ಇನ್ನೊಬ್ಬಳು, **ಅಂಜನ** = ಕಾಡಿಗೆಯಿಂದ, **ರೂಷಿತಂ** = ಕೂಡಿದ್ದನ್ನಾಗಿ, **ಸ್ವನಯನಂ** = ತನ್ನ ಕಣ್ಣನ್ನು, **ಕುರ್ವಂತೀ** = ಮಾಡುವ-ವಳಾಗಿ, **ಅಗಾತ್** = ಹೊರಟಳು, **ಸತ್ವರಾ** = ವೇಗವುಳ್ಳವಳಾಗಿ, **ತತ್** = ಕೃಷ್ಣನ, **ಜ್ಞಾನ** = ಜ್ಞಾನವೆಂಬ, **ಅಂಜನ** = ಕಾಡಿಗೆಯಿಂದ, **ತುಷ್ಟಧೀಃ** = ತೃಪ್ತವಾದ ಮನಸ್ಸುಳ್ಳವಳಂತೆ, **ಪದೋಃ** = ಕಾಲುಗಳ, **ಭೂಷಾಂ** = ಅಲಂಕಾರವನ್ನು, **ಸ್ವ** = ತನ್ನ, **ದೋಷ್ಣಿ** = ಬಾಹುಗಳಲ್ಲಿ, **ಇತರಾ** = ಇನ್ನೊಬ್ಬಳು, **ಸಂಧಾಯ** = ಇಟ್ಟು, **ಅಚ್ಯುತ ಸನ್ನಿಧಿಂ** = ದೇವರ ಬಳಿಯನ್ನು, **ಸಮಗಮತ್** = ಬಂದಳು, **ಕೃಷ್ಣ** = ಕೃಷ್ಣನ, **ಅಂಘ್ರಿ** = ಪಾದಗಳ, **ಸೇವಾಂ**= ಸೇವೆಯನ್ನು, **ಸದಾ** = ಯಾವಾಗಲೂ, **ತನ್ವಂತ್ಯಾಃ** = ಮಾಡುವ, **ಕರ-ಭೂಷಣಂ** = ಕೈಗೆ ಅಲಂಕಾರವು, **ಮಮ** = ನನಗೆ, **ಭವೇತ್** = ಆಗಲಿ, **ತತ್** = ಆ ದೇವರ, **ಪಾದಯೋಃ** = ಕಾಲುಗಳ, **ಭೂಷಣಂ** = ಆಭರಣವು.

ಇನ್ನೊಬ್ಬಳು ಗೋಪಿಯು ತನ್ನ ಕಣ್ಣುಗಳನ್ನು ಕಾಡಿಗೆಯಿಂದ ಅಲಂಕರಿಸಿಕೊಂಡು, ಕೃಷ್ಣನಿದ್ದಲ್ಲಿಗೆ ಹೊರಟಳು. ಕಾಣದೇ ಇರುವ ವಸ್ತುಗಳನ್ನು ಕಾಣಲು ಕಣ್ಣಿಗೆ ಅಂಜನಾ ಹಾಕುವುದು ಈಗಲೂ ಲೋಕದಲ್ಲಿ ರೂಢಿಯಲ್ಲಿದೆ. ಈ ಗೋಪಿಗೆ ಕೃಷ್ಣನನ್ನು ಕಾಣುವ ತವಕ. ಆದರೆ ಕೃಷ್ಣನು ಜ್ಞಾನವೆಂಬ ಅಂಜನಕ್ಕೆ ಮಾತ್ರ ಗೋಚರಿಸುವವನು. ಆ ಜ್ಞಾನವನ್ನು ಪ್ರತಿನಿಧಿಸಲು ಈಕೆ ಕಾಡಿಗೆ ಹಚ್ಚಿಕೊಂಡಳು.

ಮಗದೊಬ್ಬಳು ಕಾಲಿನ ಗೆಜ್ಜೆಯನ್ನು ಕೈಗೆ ತೊಟ್ಟುಕೊಂಡು ಹೊರಟಳು. ದೇವರ ಪಾದ ಸೇವೆಯೇ ತನ್ನ ಕೈಗೆ ಅಲಂಕಾರವು ಎಂಬ ಅಭಿಪ್ರಾಯದಿಂದ. ದೇವರ ಪಾದವನ್ನು ಸ್ಪರ್ಶಿಸುವಾಗ ಆತನ ಪಾದದ ಆಭರಣಗಳ ಸಂಪರ್ಕವು ಕೈಗಳಿಗೆ ಆಗುತ್ತದೆ.

ನಾವು ದೇವರ ಪಾದದ ಸೇವೆಯನ್ನೇ ಮಾಡಬೇಕು. ದೇವರ ಯಾವ ಅವಯವ-ಗಳಿಗೂ ಪರಸ್ಪರ ಭೇದವಿಲ್ಲ. ಆದರೂ ವಿಶೇಷವಿದೆ. ಆದ್ದರಿಂದ ಅರ್ಜುನನು ವಿನಯದಿಂದ ದೇವರ ಪಾದದ ಬಳಿ ನಿಂತನು. ದುರ್ಯೋಧನನು ತಲೆಯ ಬಳಿ ಕುಳಿತು ಬಿದ್ದನು ಎಂಬ ಸಂದೇಶ ಇಲ್ಲಿ ಅಡಕವಾಗಿದೆ.

**ಆನಂದಪೂರ್ಣತಾಂ ಕೃಷ್ಣಃ ಸ್ವಾನಾಂ ಸಂದರ್ಶಯನ್ ವಿಭುಃ ।**
**ಆನತಾ ಅಪಿ ತಾಃ ಪ್ರೀತಾ ಮಾನಿನೀರಿತ್ಯಚೀಕಥತ್ ॥ ೫೪ ॥**

**ಆನಂದ** = ಆನಂದದಿಂದ, **ಪೂರ್ಣತಾಂ** = ತುಂಬಿರುವಿಕೆಯನ್ನು, **ಕೃಷ್ಣಃ** = ಕೃಷ್ಣನು, **ಸ್ವಾನಾಂ** = ತನ್ನವರಿಗೆ, **ಸಂದರ್ಶಯನ್** = ತಿಳಿಸುವವನಾಗಿ, **ವಿಭುಃ** = ಶಕ್ತನಾದ, **ಆನತಾಃ ಅಪಿ** = ವಿನೀತರಾದ, **ತಾಃ** = ಆ, **ಪ್ರೀತಾಃ** = ಸಂತುಷ್ಟರಾದ, **ಮಾನಿನೀಃ** = ಗೋಪಿಯರನ್ನು, **ಇತಿ** = ಈ ರೀತಿಯಾಗಿ, **ಅಚೀಕಥತ್** = ಹೇಳಿದನು.

ತನಗೆ ಈ ಗೋಪಿಯರಿಂದ ಏನೂ ಆಗಬೇಕಾಗಿಲ್ಲ. ತಾನು ಸದಾ ಆನಂದದಿಂದ ಪರಿಪೂರ್ಣನು ಎಂದು ತನ್ನ ಭಕ್ತರಿಗೆ ತಿಳಿಸಬೇಕಾಗಿದೆ. ಆದ್ದರಿಂದ ಕೃಷ್ಣನು ಈ ಗೋಪಿಯರನ್ನು ಕುರಿತು ಈ ರೀತಿ ಹೇಳಿದನು. ಈ ಗೋಪಿಯರು ಯದ್ಯಪಿ ಕೃಷ್ಣನನ್ನು ಬಹಳವಾಗಿ ಬೇಡಿಕೊಂಡಿದ್ದರು. ಅವರ ಯಾವ ಬೇಡಿಕೆಗೂ ಕೃಷ್ಣ ಜಗ್ಗಲಿಲ್ಲ. ಇದರಿಂದ ಎಲ್ಲರೂ ತಿಳಿಯುವಂತಾಯಿತು. ಕೃಷ್ಣನು ಸದಾ ನಿರಪೇಕ್ಷ ವ್ಯಕ್ತಿ ಎಂದು.

**ಪಿತೃಭರ್ತೃಜನನ್ಯಾದೇಃ ಪರಿಚರ್ಯಾ ಯತೋಽರ್ಥದಾ ।**
**ವ್ರಜತ ವ್ರಜಮೇವಾತಃ ಕುರುತ ಸ್ಮರತಾಂ ಹಿತಮ್ ॥ ೫೫ ॥**

**ಪಿತೃ** = ತಂದೆಯ, **ಭರ್ತೃ** = ಪತಿಯ, **ಜನನ್ಯಾದೇಃ** = ತಾಯಿಯೇ ಮೊದಲಾದವರ, **ಪರಿಚರ್ಯಾ** = ಸೇವೆಯು, **ಯತಃ** = ಯಾವ ಕಾರಣದಿಂದ, **ಅರ್ಥದಾ** = ಇಷ್ಟವನ್ನು ಕೊಡತಕ್ಕದ್ದೋ, **ವ್ರಜತ** = ಹೋಗಿರಿ, **ವ್ರಜಮೇವ** = ಮನೆಯನ್ನು, **ಅತಃ** = ಆದ್ದರಿಂದ, **ಕುರುತ** = ಮಾಡಿರಿ, **ಸ್ಮರತಾಂ** = ಸ್ಮರಿಸುವವರ, **ಹಿತಂ** = ಅಪೇಕ್ಷಿತವನ್ನು.

ಎಲೋ ಗೋಪಿಯರೇ! ತಂದೆ, ತಾಯಿ, ಪತಿ ಇವರ ಸೇವೆಯು ಸ್ತ್ರೀಯಾದವಳಿಗೆ ಕರ್ತವ್ಯವು. ನಿಮಗೆ ಸಕಲ ಅಭೀಷ್ಟಗಳೂ ಅದರಿಂದ ಸಿಗುತ್ತವೆ. ನೀವು ಸದಾಕಾಲ ಅವರ ಬಳಿಯೇ ಇರತಕ್ಕದ್ದು. ನಿಮ್ಮ ಸೇವೆಯನ್ನು ಅವರು ಸದಾ ಅಪೇಕ್ಷಿಸುತ್ತಾರೆ. ಆದ್ದರಿಂದ ಇಲ್ಲಿಗೆ ಬಾರದೆ ಮನೆಗೆ ಹಿಂತಿರುಗಿರಿ - ಎಂದು ಕೃಷ್ಣನು ಹೇಳಿದನು.

ಸ್ತ್ರೀಯರು ಪತಿಯ ಮೂಲಕವೇ ದೇವರನ್ನು ಕಾಣಬೇಕು ಎಂಬ ಸಂದೇಶವನ್ನು ಕೃಷ್ಣನು ಇಲ್ಲಿ ಕೊಡುತ್ತಿದ್ದಾನೆ.

**ಯದೀಶ ತೇಷಾಂ ಹಿತಮೇವ ಕಾರ್ಯಂ**
**ತದಾಽಂಗ ನಾಜ್ಞಾಪಯ ಗಂತುಮಸ್ಮಾನ್ ।**
**ವಿಯೋಗದಗ್ಧೈರ್ಬತ ನಃ ಶರೀರೈ**
**ರ್ಮಹೀಂ ನ ತಾಂ ಪ್ರೇತಮಹೀಂ ವಿಧೇಹಿ ॥ ೫೬ ॥**

**ಯದಿ** = ಒಂದು ವೇಳೆ, **ಈಶ** = ಸ್ವಾಮಿಯೇ, **ತೇಷಾಂ** = ಅವರಿಗೆ, **ಹಿತಮೇವ** = ಇಷ್ಟವೇ, **ಕಾರ್ಯಂ** = ಮಾಡಲ್ಪಡಬೇಕು, **ತದಾ** = ಆಗ, **ಅಂಗ** = ಪ್ರಿಯನೇ, **ನ ಆಜ್ಞಾಪಯ** = ಆಜ್ಞಾಪಿಸಬೇಡ, **ಗಂತುಂ** = ಹೋಗಲು, **ಅಸ್ಮಾನ್** = ನಮ್ಮನ್ನು, **ವಿಯೋಗ** = ವಿರಹದಿಂದ, **ದಗ್ಧೈಃ** = ಸುಡುವ, **ಬತ** = ದುಃಖವು, **ನಃ** = ನಮ್ಮ, **ಶರೀರೈಃ** = ದೇಹಗಳಿಂದ, **ಮಹೀಂ** = ಭೂಮಿಯನ್ನು, **ತಾಂ** = ಆ, **ಪ್ರೇತಮಹೀಂ** = ಸ್ಮಶಾನವನ್ನಾಗಿ, **ನ ವಿಧೇಹಿ** = ಮಾಡಬೇಡ.

ಅವರಿಗೆ ಒಳಿತಾಗಬೇಕೆಂದು ನಮ್ಮನ್ನು ನೀನು ಇಲ್ಲಿಂದ ಕಳಿಸುತ್ತಿದ್ದಿ. ಇದರಿಂದ ಅವರಿಗೆ ಕ್ಷೇಮವಾಗುವುದಿಲ್ಲ. ಏಕೆಂದರೆ, 'ಇಲ್ಲಿಂದ ಹೊರಡಿ' ಎಂಬ ನಿನ್ನ ಮಾತಿನಿಂದ ನಮ್ಮಲ್ಲಿ ನಿನ್ನ ಅಗಲುವಿಕೆ ಎಂಬ ಬೆಂಕಿಯು ಉಂಟಾಗುತ್ತದೆ. ನಿನ್ನಿಂದ ನಾವು ದೂರ ದೂರ ಹೋದಂತೆ ಅದು ಹೆಚ್ಚಾಗುತ್ತದೆ. ನಾವು ಊರನ್ನು ತಲುಪುವಾಗ ನಾವು ಪೂರ್ಣವಾಗಿ ಸುಟ್ಟುಹೋಗುತ್ತೇವೆ. ಆಗ ಇಡೀ ವ್ರಜವು ಸ್ಮಶಾನದಂತೆ ಆಗುತ್ತದೆ. ಇದನ್ನು ನೋಡಿದ ನಮ್ಮ ಮನೆಮಂದಿ ಸ್ಮಶಾನದಲ್ಲಿ ಇರಲು ಇಚ್ಛಿಸದೆ 'ಎಲ್ಲಿಗೆ ಹೋಗುವುದು?' ಎಂಬ ಚಿಂತೆಯಲ್ಲಿ ಬೀಳುತ್ತಾರೆ. ಆದ್ದರಿಂದ ಅವರು ನೆಮ್ಮದಿಯಿಂದ ಇರಬೇಕಾದರೆ ನಮ್ಮನ್ನು ಹಿಂದೆ ಕಳಿಸಬೇಡ ಎಂದು ಗೋಪಿಯರು ಕೃಷ್ಣನನ್ನು ಅಂಗಲಾಚಿದರು.

ಇದರಿಂದ ರಾಜರು ಮರಣಶಬ್ದದ ಅರ್ಥವನ್ನು ಶಾಸ್ತ್ರೀಯವಾಗಿ ತಿಳಿಸಿದರು – ದೇಹದಿಂದ ಜೀವ ಹೋಗುವುದೇ ಮರಣ ಅಲ್ಲ. ದೇಹದಲ್ಲಿ ಜೀವ ಇದ್ದೂ ಚೆನ್ನಾಗಿ ಉಂಡು ತಿಂದು ತೇಗುವವನೂ ದೇವರನ್ನು ಬಿಟ್ಟರೆ, ಅಂದರೆ ದೇವರ ಚಿಂತನೆಯಲ್ಲಿ ಅದನ್ನು ತೊಡಗಿಸದಿದ್ದರೆ ಆತನು ಸತ್ತಂತೆಯೇ ಎಂದು.

• • • •

**ಸಂದೇಶ**

**ಸದ್ವಂಶಜಾತಲಲನಾಸು ನ ಕಸ್ಯ ಪಕ್ಷಃ**

ಕುಲೀನಳಾದ ಹೆಣ್ಣನ್ನು ಎಲ್ಲರೂ ಆಶಿಸುತ್ತಾರೆ

---

**ಪತ್ಯಾದಿಸೇವಾಽಪಿ ಭವತ್ಪ್ರಸಾದ-**
**ಪ್ರಾಪ್ತ್ಯರ್ಥಮೇವೇತಿ ವದಂತಿ ಸಂತಃ ।**
**ತ್ವತ್ಪಾದಮೂಲಂ ವಿಧಿನೋಪನೀತಾಃ**
**ಕಸ್ಮಾನ್ಮುಧಾಽಽಜ್ಞಾಪಯಸೀಶ ಗಂತುಮ್ ॥೫೭॥**

**ಪತ್ಯಾದಿ** = ಗಂಡನೇ ಮೊದಲಾದವರ, **ಸೇವಾ ಅಪಿ** = ಸೇವೆಯೂ, **ಭವತ್** = ನಿನ್ನ, **ಪ್ರಸಾದ**= ಅನುಗ್ರಹದ, **ಪ್ರಾಪ್ತ್ಯರ್ಥಮೇವ** = ಲಾಭಕ್ಕೋಸ್ಕರವೇ, **ಇತಿ** = ಎಂದು, **ವದಂತಿ** = ಹೇಳುತ್ತಾರೆ, **ಸಂತಃ** = ಸಾತ್ವಿಕರು. **ತ್ವತ್** = ನಿನ್ನ, **ಪಾದಮೂಲಂ** = ಕಾಲಿನ ಬುಡವನ್ನು, **ವಿಧಿನಾ** = ದೈವದಿಂದ, **ಉಪನೀತಾಃ** = ತರಲ್ಪಟ್ಟ, **ಕಸ್ಮಾತ್** = ಯಾಕೆ, **ಮುಧಾ** = ಸುಮ್ಮನೆ, **ಆಜ್ಞಾಪಯಸಿ** = ಆಜ್ಞಾಪಿಸುತ್ತಿ, **ಈಶ** = ಒಡೆಯನೇ, **ಗಂತುಮ್** = ಹೋಗಲು.

ಕೃಷ್ಣ! ಪತ್ಯಾದಿಗಳ ಸೇವೆ ಮಾಡಬೇಕು ಎಂದು ನೀನು ಹೇಳುತ್ತಿದ್ದಿ. ಯಾವುದಕ್ಕೋಸ್ಕರ? ಪತಿ ಸೇವೆ ಮಾಡಿದರೆ ಪತ್ಯಂತರ್ಗತ ದೇವರು ಪ್ರೀತನಾಗುತ್ತಾನೆ. ಅನಂತರ

ತನ್ನ ಪಾದದ ಬುಡಕ್ಕೆ ಆಕೆಯನ್ನು ಕರೆಸಿಕೊಳ್ಳುತ್ತಾನೆ. ಇಷ್ಟಕ್ಕೇ ತಾನೇ. ನಾವು ಈಗಾಗಲೇ ನಿನ್ನ ಪಾದಮೂಲಕ್ಕೆ ಬಂದಾಗಿದೆ. ಯಾರಿಗೆ ಫಲ ಸಿಕ್ಕಿಯಾಗಿದೆಯೋ ಅವರನ್ನು ಪುನಃ ಸಾಧನಾನುಷ್ಠಾನದಲ್ಲಿ ಹಚ್ಚುವುದು ವ್ಯರ್ಥ. ಆದ್ದರಿಂದ ನಮ್ಮನ್ನು ಇಲ್ಲಿಂದ ಹೋಗಲು ಯಾಕೆ ಹೇಳುತ್ತಿ? ಸಂಸಾರಕ್ಕೆ ವಿಮುಖನಾದವರನ್ನು ಪುನಃ ಸಂಸಾರದ ಕಡೆಗೆ ಕಳಿಸಬಾರದು.

ವೇದವ್ಯಾಸರು ಬ್ರಹ್ಮಸೂತ್ರದಲ್ಲಿ ಹೇಳಿದ 'ನ ಚ ಪುನರಾವರ್ತತೇ' ದೇವರ ಬಳಿಗೆ ಹೋದವರು ತಿರುಗಿಬಾರರು ಎಂಬ ಮಾತನ್ನು ಈ ಗೋಪಿಯರು ಕೃಷ್ಣನಿಗೆ ತಿಳಿಸಿದಂತೆ ಆಯಿತು.

• • • •

**ಸಂದೇಶ**

**ಗೃಹೀತಮಾಯಸ್ಯ ಚ ತಸ್ಯ ಪಾತಃ**

ವಂಚಕನಿಗೆ ಪತನವು ನಿಶ್ಚಿತ

**ನಾನಾಯೋನಿಷು ಸಂಭವೇ ಸತಿ ಕತಿ ಶ್ರೀನಾಥ ನೋ ಮಾತೃತಾಂ**
**ಮಾನ್ಯತ್ವಂ ಪಿತೃತಾಂ ಪ್ರಿಯತ್ವಮಗಮಂಸ್ತತ್ಕುತ್ರ ಕುರ್ಮೋಽರ್ಚನಮ್ ।**
**ವೈರಂ ವಾ ಕತಿವಾರಮೇಷು ನ ಕೃತಂ ವಿಶ್ವಾಂತರಾತ್ಮನ್ ವಿಭೋ**
**ತನ್ನಿತ್ಯಂ ಪಿತರಂ ಪತಿಂ ಚ ಜನನೀಂ ತ್ವಾಮೇವ ಸೇವಾಮಹೇ ॥ ೫೮ ॥**

**ನಾನಾಯೋನಿಷು** = ಬೇರೆ ಬೇರೆ ಜನ್ಮಗಳಲ್ಲಿ, **ಸಂಭವೇ** = ಉತ್ಪತ್ತಿಯು, **ಸತಿ** = ಉಂಟಾಗುತ್ತಿರಲು, **ಕತಿ** = ಎಷ್ಟು ಜನ, **ಶ್ರೀನಾಥ** = ರಮಾಪತಿಯೇ, **ನಃ** = ನಮಗೆ, **ಮಾತೃತಾಂ** = ತಾಯಿಯಾಗುವಿಕೆಯನ್ನು, **ಮಾನ್ಯತ್ವಂ** = ಪೂಜ್ಯತ್ವವನ್ನು, **ಪಿತೃತಾಂ** = ಪಿತೃತ್ವವನ್ನು, **ಪ್ರಿಯತ್ವಂ** = ಪತಿತ್ವವನ್ನು, **ಅಗಮನ್** = ಹೊಂದಿದದರು, **ತತ್** = ಆದ್ದರಿಂದ, **ಕುತ್ರ** = ಎಲ್ಲಿ, **ಕುರ್ಮಃ** = ಮಾಡೋಣ, **ಅರ್ಚನಮ್** = ಆರಾಧನೆಯನ್ನು, **ವೈರಂ ವಾ** = ದ್ವೇಷವನ್ನಾಗಲೀ, **ಕತಿವಾರಂ** = ಎಷ್ಟು ಸಲ, **ಏಷು** = ಇವರಲ್ಲಿ, **ನ ಕೃತಂ** = ಮಾಡಲಿಲ್ಲ, **ವಿಶ್ವ**= ಜಗತ್ತಿನ, **ಅಂತರಾತ್ಮನ್** = ನಿಯಾಮಕನೇ, **ವಿಭೋ** = ಸ್ವಾಮಿಯೇ, **ತತ್** = ಆದ್ದರಿಂದ, **ನಿತ್ಯಂ** = ಯಾವಾಗಲೂ, **ಪಿತರಂ** = ತಂದೆಯಾದ, **ಪತಿಂ** = ಗಂಡನಾದ, **ಜನನೀಂ** = ತಾಯಿಯಾದ, **ತ್ವಾಂ ಏವ** = ನಿನ್ನನ್ನೇ, **ಸೇವಾಮಹೇ** = ಭಜಿಸುತ್ತೇವೆ.

ಹೇ ಕೃಷ್ಣ! ನಾವು ಈ ತನಕ ಬಹಳ ಯೋನಿಗಳಲ್ಲಿ ಹುಟ್ಟಿದ್ದೇವೆ. ಒಂದೊಂದು ಜನ್ಮದಲ್ಲಿ ಒಬ್ಬೊಬ್ಬರು ತಂದೆ, ತಾಯಿ, ಪತಿ, ಗುರುಗಳು ಇದ್ದಾರೆ. ಆದ್ದರಿಂದ ನಾವು ಯಾವ ಜನ್ಮದ ತಂದೆ ತಾಯಿಗಳ ಸೇವೆಯನ್ನು ಮಾಡಬೇಕು. ಒಂದೇ ಚೇತನ ನಮ್ಮ

ಜೊತೆಗೆ ಎಲ್ಲಾ ಜನ್ಮದಲ್ಲಿಯೂ ಒಂದೇ ಸಂಬಂಧಿಯಾಗಿ ಇರುವುದಿಲ್ಲ. ಈ ಜನ್ಮದಲ್ಲಿ ಇರುವ ಪಿತೃ, ಪತಿಗಳ ಸೇವೆ ಮಾಡೋಣ ಎಂದರೆ ಹಿಂದಿನ ಜನ್ಮಗಳಲ್ಲಿ ಇವರು ನಮಗೆ ಶತ್ರುಗಳಾಗಿದ್ದಿರಲೂ ಬಹುದು. ಅಂತಹವರ ಸೇವೆಯನ್ನು ಈ ಜನ್ಮದಲ್ಲಿ ಮಾಡಿದರೆ ನಮಗೇನೂ ಲಾಭವಿಲ್ಲ. ಏಕೆಂದರೆ ಜನ್ಮಾಂತರದ ದ್ವೇಷವನ್ನು ಈ ಜನ್ಮದ ಸೇವೆಯು ವಜಾ ಮಾಡುತ್ತದೆ. ಎಲ್ಲ ಜನ್ಮದಲ್ಲಿಯೂ ನಮ್ಮ ಜೊತೆಗೇ ಇರುವ ಒಬ್ಬನೇ ಚೇತನ ನೀನು. ನಮಗೆ ಪಿತ್ರಾದಿ ಚೇತನರು ಅನೇಕರಿದ್ದರೂ ಅವರೆಲ್ಲರಲ್ಲೂ ಇದ್ದುಕೊಂಡು ಅವರಿಗೆ ಪಿತೃತ್ವಾದಿಗಳನ್ನು ಕೊಟ್ಟವನು ನೀನೇ. ಅವರಲ್ಲಿ ಪಿತ್ರಾದಿ ರೂಪಗಳಿಂದ ಇರುವವನು ನೀನೇ. ಆದ್ದರಿಂದ ತಂದೆತಾಯಿಯರ ಸೇವೆ ಅಂದರೆ ನಿನ್ನ ಸೇವೆ ಎಂದೇ ಅರ್ಥ. ಇದನ್ನು ತಿಳಿಸಲು ರಾಜರು ವಿಶ್ವಾಂತರಾತ್ಮನ್ ಎಂಬ ಶಬ್ದವನ್ನು ಪ್ರಯೋ-ಗಿಸಿದ್ದಾರೆ.

> ಜಗತ್ಪಿತಾ ತ್ವಂ ನ ಪಿತಾ ಕಿಮಾಸಾಂ
> ಜಗತ್ಪ್ರಸೂತಿರ್ಜನನೀ ನ ಕಿಂ ನಃ ।
> ಜಗತ್ಪತಿಃ ಕಿಂ ನ ಪತಿಃ ಸಖೇ ನಃ
> ತದನ್ಯಜುಷ್ಟ್ಯಾಲಮರಿಷ್ಟವೃಷ್ಟ್ಯಾ ॥೫೯॥

ಜಗತ್ ಪಿತಾ = ಲೋಕಕ್ಕೆ ತಂದೆಯಾದ, ತ್ವಂ = ನೀನು, ನ ಕಿಂ = ಅಲ್ಲವೇನು? ಪಿತಾ = ತಂದೆಯು, ಆಸಾಂ = ಈ ಗೋಪಿಯರಿಗೆ, ಜಗತ್ = ಜಗತ್ತನ್ನು, ಪ್ರಸೂತಿಃ = ಹಡೆದಿರುವ, ಜನನೀ = ತಾಯಿಯು, ನ ಕಿಂ = ಅಲ್ಲವೇನು? ನಃ = ನಮಗೆ, ಜಗತ್ ಪತಿಃ = ಜಗತ್ತಿನ ಗಂಡನು, ಪತಿಃ = ಗಂಡನು, ಸಖೇ = ಕೃಷ್ಣನೇ, ನಃ = ನಮಗೆ, ತತ್ = ಆದ್ದರಿಂದ, ಅನ್ಯಜುಷ್ಟ್ಯಾ = ಅನ್ಯರ ಸೇವೆಯಿಂದ, ಅಲಂ = ಸಾಕು, ಅರಿಷ್ಟ = ಅನಿಷ್ಟದ, ವೃಷ್ಟ್ಯಾ = ವರ್ಷಣೆಯುಳ್ಳ.

ಕೃಷ್ಣ, ನೀನು ಜಗತ್ತಿಗೆ ತಂದೆ, ತಾಯಿ, ಪತಿ. ನಾವು ಅಂತಹ ಜಗತ್ತಿನಲ್ಲಿ ಸೇರಿದವರು. ಆದ್ದರಿಂದ ನಮಗೂ ತಂದೆ, ತಾಯಿ ಮತ್ತು ಪತಿಯ ಸ್ಥಾನದಲ್ಲಿ ನೀನು ಇದ್ದಿ. ಆದ್ದರಿಂದ ನಿನ್ನ ಪರಿತ್ಯಾಗದಿಂದ ತಂದೆತಾಯಿಗಳನ್ನು ಬಿಟ್ಟ ದೋಷ ನಮಗೆ ಬರುವುದು. ನಿನ್ನನ್ನು ಬಿಟ್ಟು ಅನ್ಯರನ್ನು ಸ್ವೀಕರಿಸಿದರೆ ನಮಗೆ ವ್ಯಭಿಚಾರದೋಷವೂ ಬರುವುದು.

> ಕಾಂತಃ ಸ ಏವ ಯಃ ಸ್ಥೈರ್ಯಶೌರ್ಯಸೌಂದರ್ಯಸಾಗರಃ ।
> ಸುಖಸ್ಯಾಂತಕರಂ ಕಾಂತಮಪರಂ ತರ್ಕಯಾಮಹೇ ॥ ೬೦ ॥

**ಕಾಂತಃ** = ಗಂಡನು, **ಸ ಏವ** = ಅವನೇ, **ಯಃ** = ಯಾರು, **ಸ್ಥೈರ್ಯ** = ದೃಢತೆ-ಯಿಂದ, **ಶೌರ್ಯ** = ಪರಾಕ್ರಮದಿಂದ, **ಸೌಂದರ್ಯ** = ಚಂದದಿಂದ, **ಸಾಗರಃ** = ಸಮುದ್ರನು. **ಸುಖಸ್ಯ** = ನೆಮ್ಮದಿಯ, **ಅಂತಕರಂ** = ನಾಶವನ್ನು ಮಾಡುವ, **ಕಾಂತಂ** = ಪತಿಯನ್ನಾಗಿ, **ಅಪರಂ** = ಇನ್ನೊಬ್ಬನನ್ನು, **ತರ್ಕಯಾಮಹೇ** = ತಿಳಿಯುತ್ತೇವೆ.

ಕೃಷ್ಣ, 'ಕಮು ಕಾಂತೌ' ಎಂಬ ಧಾತುವಿನಿಂದ ಕಾಂತ ಎಂಬ ಶಬ್ದ ನಿಷ್ಪನ್ನವಾಗಿದೆ. ಇದಕ್ಕೆ ಮನೋಹರ ಎಂದರ್ಥ. ದಾರ್ಢ್ಯದಿಂದ, ಪರಾಕ್ರಮದಿಂದ, ಅಲಂಕಾರಾದಿಗಳಿಂದ ಮನೋಹರ ಎಂಬೆಲ್ಲಾ ಅರ್ಥವುಳ್ಳ ಕಾಂತ ಎಂಬ ಹೆಸರು ನಿನಗೇ ಸರಿ. ಆದ್ದರಿಂದ ನಮಗೆ ನೀನೇ ಕಾಂತ.

'ಕಸ್ಯ ಅಂತಃ ಯಸ್ಮಾತ್ ಸಃ ಕಾಂತಃ' ಎಂದು ಸಮಸ್ತ ಪದವೂ ಇದೆ. ಇದರ ಅರ್ಥ ಸುಖವನ್ನು ನಾಶ ಪಡಿಸುವವನು ಎಂದು. ಈ ಅರ್ಥವು ನಾವು ಈ ಜನ್ಮದಲ್ಲಿ ಕೈ ಹಿಡಿದ ಗಂಡಂದಿರಿಗೆ ಸರಿಯಾಗಿ ಕೂಡುತ್ತೆ. ನಮಗಿರುವ ಅಲ್ಪ ಸ್ವಲ್ಪ ಸುಖವನ್ನೂ ಇವರು ಕಸಿದುಕೊಳ್ಳುವರು ಎಂದು ಈ ಗೋಪಿಯರ ಜ್ಞಾನವನ್ನು ರಾಜರು ಈ ರೀತಿ ಪ್ರದರ್ಶಿಸುತ್ತಾರೆ.

**ಯಃ ಸಾರಭಾಗಮನುಭೂಯ ಶರೀರಭಾಜಾಂ**
**ಶಿಷ್ಟಂ ಪ್ರಯಚ್ಛಸಿ ಕಿಲಾರಸಮಲ್ಪಭೋಗ್ಯಮ್ ।**
**ದುಃಖಾತಿದೂರ ಗತಪಾರ ಸುಖೈಕಭೋಕ್ತುಃ**
**ತಸ್ಯೇಶ ಭೋಗಮಖಿಲಂ ತವ ತರ್ಕಯಾಮಃ ॥ ೬೧ ॥**

**ಯಃ** = ಯಾರು, **ಸಾರಭಾಗಂ** = ಮುಖ್ಯ ಅಂಶವನ್ನು, **ಅನುಭೂಯ** = ಅನುಭವಿಸಿ, **ಶಿಷ್ಟಂ** = ಶೇಷವನ್ನು, **ಶರೀರಭಾಜಾಂ** = ಜೀವರುಗಳಿಗೆ, **ಪ್ರಯಚ್ಛಸಿ** = ಕೊಡು-ತ್ತಿಯೋ, **ಅರಸಂ** = ಸತ್ವ ಇಲ್ಲದ, **ಅಲ್ಪಭೋಗ್ಯಂ** = ಜೀವರಿಂದ ಭೋಗ್ಯವಾದ, **ದುಃಖ** = ದುಃಖದಿಂದ, **ಅತಿದೂರ** = ದೂರನೇ (ಅಗಮ್ಯನೇ), **ಗತಪಾರ** = ಕೊನೆ ಇಲ್ಲದವನೇ, **ಸುಖೈಕಭೋಕ್ತುಃ** = ಕೇವಲ ಸುಖವನ್ನು ಅನುಭವಿಸುವ, **ತಸ್ಯ** = ಆ, **ಈಶ** = ಒಡೆಯನೇ, **ಯೋಗ್ಯಂ** = ಉಚಿತವಾದ, **ಅಖಿಲಂ** = ಎಲ್ಲವನ್ನೂ, **ತವ** = ನಿನಗೆ, **ತರ್ಕಯಾಮಃ** = ಸಂಕಲ್ಪಿಸಿದ್ದೇವೆ.

ನಾವು ಉಪಯೋಗಿಸುವ ಪ್ರತಿಯೊಂದು ವಸ್ತುವನ್ನೂ ಮೊದಲು ದೇವರಿಗೆ ಅರ್ಪಿಸಬೇಕು. ದೇವರು ಅದರ ಸಾರಭಾಗವನ್ನು ಸ್ವೀಕರಿಸುತ್ತಾನೆ. ಈ ಸಾರಭಾಗವು ನಮಗೆ ಜೀರ್ಣಕ್ಕೆ ಬರತಕ್ಕದ್ದಲ್ಲ. ನಮಗೆ ಜೀರ್ಣಕ್ಕೆ ಬರುವ, ಆದರಿಂದ ಅಲ್ಪ ಜೀವರಿಂದ ಭೋಗಿಸಲು ಯೋಗ್ಯವಾದ ಭಾಗವನ್ನು ನಮಗೆ ಕೊಡುತ್ತಾನೆ. ಈ ವಿಷಯವನ್ನು ಶುಭಂ

ಪಿಬತ್ಯಸೌ ನಿತ್ಯಂ ನಾಶುಭಂ ಸ ಹರಿಃ ಪಿಬೇತ್' ದೇವರು ಯೋಗ್ಯವಾದ ಸಾರಭಾಗ-ವನ್ನು ಸ್ವೀಕರಿಸುತ್ತಾನೆ. ಅಸಾರಭಾಗವನ್ನು ಸ್ವೀಕರಿಸುವುದಿಲ್ಲ ಎಂಬೀ ಪ್ರಮಾಣಗಳು ತಿಳಿಸುತ್ತವೆ.

ಸಾರಭಾಗವನ್ನು ಸ್ವೀಕರಿಸಿದಾಗ ಮಾತ್ರ ನಿನಗೆ ನೆಮ್ಮದಿ, ಇಲ್ಲದಿದ್ದರೆ ದುಃಖ ಎಂಬ ಪ್ರಸಂಗ ನಿನಗಿಲ್ಲ. ಏಕೆಂದರೆ ನೀನು ದುಃಖವನ್ನು ದಾಟಿದವನು. ಹಾಗಾದರೆ ನೀನು ಯಾಕೆ ಸ್ವೀಕರಿಸುತ್ತೀ ? ಎಂಬ ಪ್ರಶ್ನೆಗೆ ಉತ್ತರ ಗತಪಾರ ಎಂದು. ಅಂದರೆ ಪ್ರಶ್ನಾತೀತ. ಯಾರೂ ನಿನ್ನ ಬಗ್ಗೆ ಏನೂ ಪ್ರಶ್ನೆ ಮಾಡುವಂತಿಲ್ಲ. ಎಲ್ಲಾ ವಿಧಿನಿಯಮಗಳ ಗಡಿಯನ್ನು ಮೀರಿದವ. ಸದಾ ಆನಂದದಿಂದಲೇ ಇರುವ ನಿನಗೆ ನಮ್ಮನ್ನು ನಾವು ನಮಗಾಗಿ ಅರ್ಪಿಸಿಕೊಳ್ಳುತ್ತಿದ್ದೇವೆ. ನಮ್ಮ ಗಂಡಂದಿರು ನಮ್ಮನ್ನು ಉಪಯೋಗಿಸಿ-ಕೊಳ್ಳುವ ಮೊದಲು ದೇವರ ನೈವೇದ್ಯಕ್ಕೆಂದು ಕಳಿಸಿದ್ದಾರೆ. ನಿನಗೆ ನೈವೇದ್ಯ ಆದ ಮೇಲೆ ಅವರು ನಮ್ಮನ್ನು ಸ್ವೀಕರಿಸುತ್ತಾರೆ. ಇದರಿಂದ ಅವರಿಗೂ ನಮಗೂ ಕ್ಷೇಮ. ಈ ವಿಷಯವನ್ನು ನೀನು 'ಭುಂಜಂತೇ ತೇ ತ್ವಘಂ ಪಾಪಾಃ ಯೇ ಪಚಂತ್ಯಾತ್ಮಕಾರ-ಣಾತ್' ಯಾರು ಎಲ್ಲಾ ವಸ್ತುಗಳನ್ನು ದೇವರಿಗೆ ಸಮರ್ಪಿಸದೇ ತನಗಾಗಿ ಉಪ-ಯೋಗಿಸುತ್ತಾರೋ ಅವರು ಪಾಪಿಗಳಾಗುತ್ತಾರೆ ಎಂದು ಗೀತೆಯ ಮೂಲಕ ತಿಳಿಸುತ್ತೀ ಎಂಬುದನ್ನು ಈ ಗೋಪಿಯರು ಸೂಚಿಸುತ್ತಾರೆ.

ಧರ್ಮೋ ನ ವೋಽಯಂ ಶ್ರುತಿಸಂಗತಾಕ್ಷ್ಯೋ  
ಧರ್ಮೋ ನವೋಽಯಂ ಶ್ರುತಿಸಂಗತಾಕ್ಷ।  
ಮಾನ್ಯಂ ಭಜಧ್ವಂ ರಮಣಂ ವಿಹಾಯ  
ಮಾನ್ಯಂ ಭಜಾಮೋ ರಮಣಂ ವಿಹಾಯ ॥೬೨॥

ಧರ್ಮಃ ನ = ಧರ್ಮವಲ್ಲ, ವಃ = ನಿನಗೆ, ಅಯಂ = ಇದು, ಶ್ರುತಿ = ಕಿವಿತನಕ, ಸಂಗತ = ಇರುವ, ಅಕ್ಷ್ಯಃ = ಕಣ್ಣುಳ್ಳವರೇ, ಧರ್ಮ = ಧರ್ಮವು, ನವಃ = ಹೊಸ, ಅಯಂ = ಇದು, ಶ್ರುತಿ = ವೇದದಲ್ಲಿ, ಸಂಗತ = ಸಂಬದ್ಧವಾದ, ಅಕ್ಷ = ದೃಷ್ಟಿಯುಳ್ಳವನೇ, ಮಾ ಭಜಧ್ವಂ = ಭಜಿಸಬೇಡಿರಿ, ಅನ್ಯಂ = ಇನ್ನೊಬ್ಬನನ್ನು, ರಮಣಂ = ಪತಿಯನ್ನು, ವಿಹಾಯ = ಬಿಟ್ಟು, ಮಾನ್ಯಂ = ಪೂಜ್ಯನನ್ನು, ಭಜಾಮಃ = ಭಜಿಸುತ್ತೇವೆ, ರಮಣಂ = ಪತಿಯನ್ನು, ವಿಹಾಯ = ಬಿಟ್ಟು.

ರಾಜರು ಈ ರೀತಿಯಾದ ಮುಂಬರುವ ಅನೇಕ ಶ್ಲೋಕಗಳಲ್ಲಿ ಒಂದೇ ರೀತಿಯ ಶಬ್ದಗಳನ್ನು ಬಳಸಿ ಸರಸ್ವತಿಯನ್ನು ಪೂರ್ಣವಾಗಿ ತನ್ನ ಹಿಡಿತದಲ್ಲಿ ಇಟ್ಟುಕೊಂಡು ತನ್ನ

ಸ್ವರೂಪವನ್ನು ಸೂಚಿಸುತ್ತಾರೆ. ಈ ಶ್ಲೋಕದಲ್ಲಿ ಪದಗಳನ್ನು ತುಂಡುಮಾಡುವ ಕ್ರಮದಲ್ಲಿ ಕೃಷ್ಣ ಗೋಪಿಯರ ಪ್ರಶ್ನೋತ್ತರಗಳು ಸೇರಿವೆ.

ಎಲೋ ಗೋಪಿಯರೇ! ನೀವು ಶ್ರುತಿಸಂಗತಾಕ್ಷಿಯರು. ಕಿವಿಗೆ ತಾಗಿಕೊಂಡಿರುವ ಕಣ್ಣುಳ್ಳವರು. ಅಂದರೆ ವಿಶಾಲಾಕ್ಷಿಯರು. ಇದು ೩೨ ಲಕ್ಷಣಗಳಲ್ಲಿ ಒಂದು. ಇದರಿಂದ ಗೋಪಿಯರಲ್ಲಿ ಲಕ್ಷ್ಮಿಯ ಸನ್ನಿಧಾನವು ಸೂಚಿತವಾಗುತ್ತದೆ. ಪರಪುರುಷನೊಡನೆ ಇರುವುದು ನಿಮಗೆ ಧರ್ಮವಲ್ಲ ಎಂದು ಕೃಷ್ಣನು ಲೋಕದ ಧರ್ಮವನ್ನು ಸಹಜವಾಗಿ ತಿಳಿಸಿದನು. ಇದಕ್ಕೆ ಗೋಪಿಯರು ಅದೇ ರೀತಿಯಾದ ಶಬ್ದಗಳಿಂದ ಉತ್ತರಿಸುತ್ತಾರೆ – ಹೇ ಶ್ರುತಿಸಂಗತಾಕ್ಷ ಕೃಷ್ಣ, ಇದು ನಮಗೆ ಹೊಸದಾದ ಧರ್ಮ. ಲೋಕದಲ್ಲಿ ಕೈಹಿಡಿದ ಜೀವನೆಂಬ ಗಂಡನಿರುವಾಗ ದೇವರನ್ನು ಪತಿಯನ್ನಾಗಿ ಸ್ವೀಕರಿಸುವ ಭಾಗ್ಯ ನಮಗಲ್ಲದೇ ಬೇರಾರಿಗೂ ಬಂದಿಲ್ಲ. ಇದು ಧರ್ಮವೇ. **ಧಾರಕತ್ವಾತ್ ಧರ್ಮಃ.** ಹೀಗೆ ಮಾಡುವುದರಿಂದ ನಾವು ನರಕಕ್ಕೆ ಹೋಗುವುದಿದ್ದರೆ ಇದು ಅಧರ್ಮ ಆಗುತ್ತಿತ್ತು. ನಮ್ಮ ಉದ್ಧಾರವೇ ಆಗುತ್ತದೆ. ಆದ್ದರಿಂದ ಇದೊಂದು ಹೊಸತಾದ ಧರ್ಮ. ನೀನು ಇದನ್ನು ಒಪ್ಪಲೇ ಬೇಕು. ಯಾಕೆಂದರೆ ನೀನು ಶ್ರುತಿಸಂಗತಾಕ್ಷನು. ವೇದದಲ್ಲಿ ನೆಟ್ಟ ದೃಷ್ಟಿಯುಳ್ಳವನು. ವೇದವು ಈ ರೀತಿಯಾದ ಧರ್ಮವನ್ನು ಒಪ್ಪುತ್ತದೆ.

ನಿಮ್ಮ ಗಂಡನನ್ನು ಬಿಟ್ಟು ಅನ್ಯರನ್ನು ಭಜಿಸಬೇಡಿರಿ ಎಂದು ತಿಳಿಸಲು ಮಾ ಅನ್ಯಂ ಮಾ = ಬೇಡ, ಅನ್ಯಂ = ಇನ್ನೊಬ್ಬರನ್ನು ಎಂಬರ್ಥದಲ್ಲಿ ಮಾನ್ಯಂ ಎಂದು ಒಟ್ಟಿಗೆ ಪ್ರಯೋಗ ಮಾಡಿದನು. ಗೋಪಿಯರು - ಕೃಷ್ಣ ನೀನು ಮಾನ್ಯಂ ಭಜಧ್ವಂ ಎಂದಿದ್ದಿ. ನಾವೂ ಮಾನ್ಯಂ = ಪೂಜ್ಯನನ್ನೇ ಭಜನೆ ಮಾಡುತ್ತೇವೆ. ಗಂಡನನ್ನು ಬಿಡುತ್ತೇವೆ - ಎಂದರು. ಇಲ್ಲಿ ಗೋಪಿಯರು ಮಾನ್ಯಂ ಎಂಬುದಕ್ಕೆ ಬೇರೆ ಬೇರೆ ಶಬ್ದವನ್ನು ಇಟ್ಟುಕೊಳ್ಳದೇ ಒಂದೇ ಪದವನ್ನಾಗಿ ಇಟ್ಟುಕೊಂಡು ಪೂಜ್ಯ ಎಂದು ಅರ್ಥ ಮಾಡಿ ಪೂಜ್ಯನಾದ ನಿನ್ನನ್ನೇ ಆರಾಧಿಸುತ್ತೇವೆ ಎಂದರು.

ಈ ಗೋಪಿಯರು ದೇವತಾಸ್ತ್ರೀಯರಾದ್ದರಿಂದ ಕೇವಲ ವಿಶಾಲಾಕ್ಷಿಯರು ಮಾತ್ರ ಅಲ್ಲ, ವೇದದಲ್ಲಿಯೂ ನೆಟ್ಟ ದೃಷ್ಟಿಯುಳ್ಳವರು. ಆದ್ದರಿಂದಲೂ ಕೃಷ್ಣನ ಸಂಗಕ್ಕೆ ಯೋಗ್ಯರು. ದೇವರ ಬಾಯಿಂದ ಬಂದ ಶಬ್ದಗಳನ್ನೇ ಉಪಯೋಗಿಸಿಕೊಂಡು ತಾವು ದೇವರಲ್ಲಿ ಮಾತನಾಡಿದ್ದರಿಂದ ಇವರಲ್ಲಿ ಕೃಷ್ಣನಲ್ಲಿ ಪ್ರೇಮವು ಉಕ್ಕಿದೆ ಎಂದು ಅಭಿಪ್ರಾಯ.

ಶಾಸ್ತ್ರೀಯವಾಗಿ ವಿಚಾರಿಸಿದಾಗ ಲೌಕಿಕಪತಿಯೇ ಪರಪುರುಷ. ಜನ್ಮಜನ್ಮಕ್ಕೂ ನಮ್ಮ ಜೊತೆಗಿರುವುದಿಲ್ಲ. ಸದಾ ನಮ್ಮ ಜೊತೆಗೇ ಇರುವ ದೇವರೇ ಸ್ವಪುರುಷ.

ಕೃಷ್ಣನೂ ಕೇವಲ ವೇದಜ್ಞ ಅಲ್ಲ. ವಿಶಾಲಾಕ್ಷನೂ ಹೌದು. ಈ ರೀತಿ ತನ್ನ ಸಮಾನ -ಧರ್ಮವುಳ್ಳವರಾದ್ದರಿಂದ ಕೃಷ್ಣ ಅವರನ್ನು ಸ್ವೀಕರಿಸಿದನು.

ತನ್ನ ಸಮಾನಧರ್ಮವುಳ್ಳವರು ಹೆಣ್ಣಾಗಲೀ, ಗಂಡಾಗಲೀ ದೇವರು ಸ್ವೀಕರಿಸು-ತ್ತಾನೆ ಎಂಬುದಕ್ಕೆ ಇದು ಒಂದು ಸಂಕೇತ.

**ಹಿತಾಹಿತಾಜ್ಞಾ ಬತ ಯೂಯಮಂಗನಾ**
**ಯತೋ ಹ್ಯಧರ್ಮೇ ಮತಿರಸ್ತಿ ನಿಶ್ಚಲಾ ।**
**ಹಿತಾಹಿತಜ್ಞಾ ವಯಮಚ್ಯುತ ಪ್ರಭೋ**
**ಯತೋ ಹ್ಯಧರ್ಮೇ ಮತಿರಸ್ತಿ ನಿಶ್ಚಲಾ ॥೬೩॥**

**ಹಿತ** = ಒಳ್ಳೆಯದನ್ನು, **ಅಹಿತ** = ಕೆಟ್ಟದ್ದನ್ನು, **ಅಜ್ಞಾಃ** = ತಿಳಿಯದಿರುವ, **ಬತ** = ದುಃಖವು, **ಯೂಯಂ** = ನೀವು, **ಅಂಗನಾಃ** = ಸ್ತ್ರೀಯರೇ, **ಯತಃ** = ಯಾವ ಕಾರಣ-ದಿಂದ, **ಅಧರ್ಮೇ** = ಅನ್ಯಾಯದಲ್ಲಿ, **ಮತಿಃ** = ಮನಸ್ಸು, **ಅಸ್ತಿ** = ಇದೆ, **ನಿಶ್ಚಲಾ** = ದೃಢವಾದ, **ಹಿತ** = ಬ್ರಹ್ಮನಿಂದ, **ಆಹಿತ** = ಪಡೆದ, **ಆಜ್ಞಾಃ** = ಅಪ್ಪಣೆಯುಳ್ಳ, **ವಯಂ** = ನಾವು, **ಅಚ್ಯುತ** = ದೋಷ ಇಲ್ಲದ, **ಪ್ರಭೋ** = ಸ್ವಾಮಿಯೇ, **ಯತಃ** = ಯಾವ ಕಾರಣದಿಂದ, **ಅಧರ್ಮೇ** = ದೇವರ ಧರ್ಮದಲ್ಲಿ, **ಮತಿಃ** = ಮನಸ್ಸು, **ಅಸ್ತಿ** = ಇದೆ, **ನಿಶ್ಚಲಾ** = ದೃಢವಾದ.

ಇಲ್ಲಿಯೂ ಇದೇ ಧಾಟಿ ಇದೆ. ಈ ಗೋಪಿಯರು ಎಲ್ಲವನ್ನೂ ತ್ಯಜಿಸಿ ತನಗಾಗಿ ಇಲ್ಲಿ ಬಂದವರು. ದೇವರಿಗಾಗಿ ಯಾರು ಎಲ್ಲವನ್ನೂ ತ್ಯಜಿಸುತ್ತಾರೋ, ತ್ಯಜಿಸಿದರೆ ಮಾತ್ರ ಸಾಲದು, ದೇವರ ಬಳಿಗೆ ಹೋಗಬೇಕು. ಅಂತಹವರನ್ನು ದೇವರು ಎಂದೂ ಬಿಡುವು-ದಿಲ್ಲ. ಆದರೂ ಪರೀಕ್ಷೆ ಮಾಡಿಯೇ ಸ್ವೀಕರಿಸುತ್ತಾನೆ ಎಂಬುದನ್ನು ರಾಜರು ಈ ಶ್ಲೋಕದಲ್ಲಿ ತಿಳಿಸುತ್ತಾರೆ. ಅಂತರಾರ್ಥ ಒಂದು ಅರ್ಥ ಇದೆ. ಹೊರಗಿನ ಅರ್ಥ ಒಂದು ಇದೆ.

ಹೊರಗಿನ ಅರ್ಥ – ಎಲೋ ಅಂಗನೆಯರೇ! ನಿಮಗೆ ಇಷ್ಟಾನಿಷ್ಟಗಳ ತಿಳಿವಳಿಕೆ ಇಲ್ಲ. ಯಾಕೆಂದರೆ ನೀವು ಪರಪುರುಷಸಂಗ ಎಂಬ ಅಧರ್ಮದಲ್ಲಿ ದೃಢವಾದ ಮನಸ್ಸುಳ್ಳವರಾಗಿದ್ದೀರಿ. ಆದ್ದರಿಂದ ಹಿಂದೆ ಹೋಗಿ.

**ಅಂತರಾರ್ಥ** – ಎಲೋ ಗೋಪಿಯರೇ! ನೀವು ಹಿತಾಹಿತಜ್ಞರು. ಅಂದರೆ ಹಿತನಿಂದ = ಬ್ರಹ್ಮನಿಂದ. ಆಹಿತ = ಕೊಡಲ್ಪಟ್ಟ ಆಜ್ಞಾವುಳ್ಳವರು. ಬ್ರಹ್ಮನು ಸಕಲ ಹಿತವನ್ನೇ ಉಪದೇಶಿಸುವವನು. ಈ ಸ್ತ್ರೀಯರಿಗೂ, ನೀವು ಭೂಮಿಯಲ್ಲಿ ಗೋಪಿಯರಾಗಿ ಹುಟ್ಟಿರಿ. ನಿಮ್ಮನ್ನು ತೃಪ್ತಿಪಡಿಸಲು ದೇವರು ನೀವಿದ್ದಲ್ಲಿಗೆ ಬರುವನು ಎಂದು ಹೇಳಿದ್ದನು. ಬ್ರಹ್ಮನು ದೇವರಿಗೆ ಬಹಳ ಪ್ರಿಯನು. ಆದ್ದರಿಂದ ಆತನ ಮಾತನ್ನು ದೇವರು ಖಂಡಿತವಾಗಿಯೂ ನಡೆಸಿಕೊಡುತ್ತಾನೆ. ಅಧರ್ಮೇ ಅಂದರೆ ಅನ್ಯಾಯದಲ್ಲಿ ಎಂದು ಅರ್ಥ ಅಲ್ಲ. ಅ = ದೇವರು, 'ಅ ಇತಿ ಬ್ರಹ್ಮ' ಎಂಬ ವೇದ ಇದೆ. ಅ = ಧರ್ಮ ಅಂದರೆ ದೇವರನ್ನು ಸ್ವೀಕರಿಸುವ ಧರ್ಮದಲ್ಲಿ ದೃಢವಾದ ಮನಸ್ಸು. ಎಂತಹ ಪ್ರಸಂಗದಲ್ಲಿಯೂ ಚಂಚಲವಾಗುವುದಿಲ್ಲ. ಈ ಅಭಿಪ್ರಾಯವನ್ನೇ ಗೋಪಿಯರು ಈ ಶ್ಲೋಕದ ಉತ್ತರಾರ್ಧದಲ್ಲಿ ತಿಳಿಸುತ್ತಾರೆ – ನಾವು ಹಿತಾಹಿತಜ್ಞರು. ಒಳ್ಳೆಯದು ಯಾವುದ ಕೆಟ್ಟದು ಯಾವುದು ಎಂಬುದನ್ನು ತಿಳಿದವರು. ಆದ್ದರಿಂದಲೇ ನಾವು ನಮ್ಮ ಈ ಜನ್ಮದ ಪತಿಯನ್ನು ಬಿಟ್ಟು ಜನ್ಮ ಜನ್ಮಗಳಲ್ಲಿಯೂ ಪತಿಯಾದ ನಿನ್ನನ್ನು ಅರಸಿಕೊಂಡು ಬಂದಿದ್ದೇನೆ. ಅಧರ್ಮದಲ್ಲಿ ದೇವರನ್ನೇ ಪತಿಯನ್ನಾಗಿ ಪಡೆಯುವ ಧರ್ಮದಲ್ಲಿ ದೃಢವಾದ ಮನಸ್ಸುಳ್ಳವರಾಗಿದ್ದೇವೆ.

ಇದು ರಾಜರ ಮಾತಿನ ಚಳಕ. ಸರಸ್ವತಿಯನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿರುವವರು.

● ● ● ●

ಸಂದೇಶ

**ಮಧುರನಿನದಭಾಜಾಂ ಕಿಂ ನ ಸಾಧ್ಯಂ ಹಿ ಲೋಕೇ**

ಮೃದುಭಾಷಿಗಳ ಹಿಡಿತಕ್ಕೆ ಎಲ್ಲರೂ ಬರುತ್ತಾರೆ

---

**ವಾಗ್ವೈಖರೀಮಿವ ನಿರೀಕ್ಷ್ಯ ಸ ವಲ್ಲವೀನಾಂ**
**ಪ್ರೀತಃ ಪ್ರಿಯೋಕ್ತಿಪರಿರಂಭಣಚುಂಬನಾದ್ಯೈಃ ।**
**ಸುಪ್ತಂ ಪ್ರಬೋಧ್ಯ ಮದನಂ ಸಮಭೂದದೃಶ್ಯಃ**
**ಸತ್ಯಾಂ ವಿಧಾತುಮಿವ ಕಾಮಿವಿದೂರತಾಂ ಸ್ವಾಮ್ ॥ ೬೪ ॥**

**ವಾಗ್‌ವೈಖರೀಂ** = ಮಾತಿನ ಚಮತ್ಕಾರವನ್ನು, **ನಿರೀಕ್ಷ್ಯ ಇವ** = ನೋಡಿದಂತೆ, **ಸಃ** = ಕೃಷ್ಣನು, **ವಲ್ಲವೀನಾಂ** = ನಾರಿಯರ, **ಪ್ರೀತಃ** = ತುಷ್ಟನಾದ, **ಪ್ರಿಯ** = ಇಷ್ಟವಾದ, **ಉಕ್ತಿ** = ಮಾತು, **ಪರಿರಂಭಣ** = ಆಲಿಂಗನ, **ಚುಂಬನ** = ಮುತ್ತಿಡುವಿಕೆ, **ಆದ್ಯೈಃ** = ಮೊದಲಾದ್ದರಿಂದ, **ಸುಪ್ತಂ** = ಅಡಗಿರುವ, **ಪ್ರಬೋಧ್ಯ** = ಎಬ್ಬಿಸಿ, **ಮದನಂ** = ಕಾಮನನ್ನು, **ಸಮಭೂತ್** = ಆದನು, **ಅದೃಶ್ಯಃ** = ಕಾಣದವನು, **ಸತ್ಯಾಂ** = ಸತ್ಯವನ್ನಾಗಿ,

**ವಿಧಾತುಮಿವ** = ಮಾಡುವವನಂತೆ, **ಕಾಮಿ** = ಸ್ತ್ರೀಯರಿಗೆ, **ವಿದೂರತಾಂ** = ದೂರತ್ವ-ವನ್ನು, **ಸ್ವಾಂ** = ತನ್ನ.

ಈ ಗೋಪಿಯರ ಶಾಸ್ತ್ರೀಯ ಮಾತುಗಳಿಂದ ದೇವರು ಪ್ರೀತನಾದ. ಕೃಷ್ಣನು ಆಡಿದ ಶಬ್ದಗಳನ್ನೇ ಬಳಸಿ ದೇವರ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟಿದ್ದಾರೆ. ಇಂತಹ ಮಾತುಗಳನ್ನು ಕೇಳಿದ ಕೃಷ್ಣನು ಆಕೆಯ ಜೊತೆ ಸಲ್ಲಾಪ ಮಾಡಿದನು. ಅವರನ್ನು ಆಲಿಂಗಿಸಿದನು, ಚುಂಬಿಸಿದನು. ಇವರ ಕಾಮವನ್ನು ಉದ್ದೀಪನಗೊಳಿಸಿದನು. ಕಾಮದಿಂದ ದೇವರನ್ನು ಕೂಡಬೇಕು ಎಂದು ಗೋಪಿಯರು ಆಲೋಚಿಸುತ್ತಿರುವಾಗ ದೇವರು ಕಾಣದಾದನು.

ಇದು ಶಾಸ್ತ್ರದ ನಿಯಮ - ಕಾಮದಿಂದ ಆರಾಧಿಸುವವರಿಗೆ ದೇವರು ಸಿಗು-ವುದಿಲ್ಲ. ಪ್ರೇಮದಿಂದ ಆರಾಧಿಸಬೇಕು. ಈ ಗೋಪಿಯರಿಗೆ ಸ್ವಲ್ಪ ಅಹಂಕಾರವೂ ಇತ್ತು. ಕೃಷ್ಣನಿಗೆ ನಾವು ಬೇಕು ಎಂದು. ಇದು ರಜೋಗುಣ. ಆದ್ದರಿಂದಲೂ ದೇವರು ಅದೃಶ್ಯನಾದನು.

**ತಾಃ ಪತ್ಯಪತ್ಯಭವನೇಷು ವಿರಕ್ತಚಿತ್ತಾಃ**
**ಶ್ರೀಪುಂಡರೀಕನಯನೇಕ್ಷಣಕಾರ್ಯಸಕ್ತಾಃ।**
**ಆರಣ್ಯಕೇಷು ಮುನಿವರ್ಗ ಇವಾತಿಮುಗ್ಧಾಃ**
**ಚೇರುರ್ವಿಮೃಗ್ಯ ಬಹುಧಾ ತಮರಣ್ಯಕೇಷು ॥ ೬೫ ॥**

**ತಾಃ** = ಆ ನಾರಿಯರು, **ಪತಿಃ** = ಗಂಡನು, **ಅಪತ್ಯ** = ಮಕ್ಕಳು, **ಭವನೇಷು** = ಮನೆಗಳಲ್ಲಿ, **ವಿರಕ್ತ** = ವೈರಾಗ್ಯದಿಂದ ಕೂಡಿದ, **ಚಿತ್ತಾಃ** = ಮನಸ್ಸುಳ್ಳವರಾಗಿ, **ಶ್ರೀಪುಂಡರೀಕನಯನ** = ಕಮಲಾಕ್ಷನ, **ಈಕ್ಷಣ** = ದರ್ಶನವೆಂಬ, **ಕಾರ್ಯೇ** = ಕೆಲಸ-ದಲ್ಲಿ, **ಸಕ್ತಾಃ** = ಆಸಕ್ತರಾಗಿ, **ಆರಣ್ಯಕೇಷು** = ಉಪನಿಷತ್ತುಗಳಲ್ಲಿ, **ಮುನಿವರ್ಗ ಇವ** = ಋಷಿಗಳಂತೆ, **ಅತಿಮುಗ್ಧಾಃ** = ಬಹಳ ಸಾಧುಗಳಾದ, **ಚೇರುಃ** = ತಿರುಗಾಡಿದರು, **ವಿಮೃಗ್ಯ** = ಹುಡುಕಿ, **ಬಹುಧಾ** = ಬಹಳ, **ತಂ** = ಕೃಷ್ಣನನ್ನು, **ಅರಣ್ಯಕೇಷು** = ಕಾಡಿನಲ್ಲಿ.

ಯೋಗ್ಯರು ಶಾಸ್ತ್ರಶ್ರವಣಮಾತ್ರದಿಂದಲೇ ವಿರಕ್ತರಾಗುತ್ತಾರೆ. ದೇವರನ್ನು ನೋಡ-ಬೇಕೆಂದು ಕುತೂಹಲಿಗಳಾಗುತ್ತಾರೆ. ಹೀಗಿರುವಾಗ ಕಾಣುತ್ತಿದ್ದ ದೇವರು ಕಾಣದಾದಾಗ ಗೋಪಿಯರಿಗೆ ಹೇಗಾಗಬೇಡ. ಆದ್ದರಿಂದಲೇ ಎಲ್ಲಾ ವಸ್ತುಗಳನ್ನೂ ದ್ವೇಷಿಸಲು ಆರಂಭಿಸಿದರು. ಚೆನ್ನಾಗಿ ವಿರಕ್ತರಾದರು. ಕೃಷ್ಣನನ್ನು ಕಾಣುವ ಒಂದೇ ಹಂಬಲ ಅವರಿ-ಗಿತ್ತು. ಆದ್ದರಿಂದ ಏಕಾಗ್ರತೆಯಿಂದ ದೇವರನ್ನು ಅರಣ್ಯದಲ್ಲಿ ಹುಡುಕಲು ತೊಡಗಿದರು.

ಇದೇ ಧರ್ಮವನ್ನು ಹೊಂದಿದ ಋಷಿಗಳು ಆರಣ್ಯಕಗಳಲ್ಲಿ ಅಂದರೆ ಉಪನಿಷತ್ತುಗಳಲ್ಲಿ ದೇವರನ್ನು ಹುಡುಕುವಂತೆ.

ಋಜುಗಳನ್ನು ಹೊರತು ಪಡಿಸಿ ಬೇರೆ ಎಲ್ಲಾ ಅಪರೋಕ್ಷಜ್ಞಾನಿಗಳಿಗೂ ದರ್ಶನದ ತಿರೋಭಾವ ಇದೆ ಎಂದು ಇದರಿಂದ ತಿಳಿಯುತ್ತದೆ.

**ಸಮಮುದಿತವಿಮೋಹಾವಸ್ಥಯಾ ಕ್ವಾಪಿ ಮುಗ್ಧಾಃ**
**ಸಮುದಿತಘನಚಿಂತಾವಸ್ಥಯಾ ಕ್ವಾಪಿ ಶಾಂತಾಃ ।**
**ವಶಯಿತುಮಿವ ಕಾಂತಂ ಯೋಗಿಪೂಗೈಕಚಿಂತ್ಯಂ**
**ಮಧುರವಚನದಕ್ಷಾಸ್ತಂ ಜಗುಸ್ತಾಃ ಪರೋಕ್ಷಮ್ ॥ ೬೬ ॥**

**ಸಮಂ** = ಚೆನ್ನಾಗಿ, **ಉದಿತ** = ಉಂಟಾದ, **ವಿಮೋಹಾವಸ್ಥಯಾ** = ಮೂರ್ಛಾವಸ್ಥೆಯಿಂದ, **ಕ್ವಾಪಿ** = ಕೆಲವು ಕಡೆ, **ಮುಗ್ಧಾಃ** = ಮೋಹಗೊಂಡ, **ಸಮುದಿತ** = ಉಂಟಾದ, **ಘನ** = ಬಹಳವಾದ, **ಚಿಂತಾ** = ಧ್ಯಾನವೆಂಬ, **ಅವಸ್ಥಯಾ** = ಅವಸ್ಥೆಯಿಂದ, **ಕ್ವಾಪಿ** = ಕೆಲವೊಮ್ಮೆ, **ಶಾಂತಾಃ** = ಶಾಂತರಾದ, **ವಶಯಿತುಮ್ ಇವ** = ವಶಮಾಡಿಕೊಳ್ಳುವವರಂತೆ, **ಕಾಂತಂ** = ಕೃಷ್ಣನನ್ನು, **ಯೋಗಿ** = ಋಷಿಗಳ, **ಪೂಗ** = ಗುಂಪಿನಿಂದ, **ಏಕ** = ಮುಖ್ಯವಾಗಿ, **ಚಿಂತ್ಯಂ** = ಧ್ಯಾನಯೋಗ್ಯನಾದ, **ಮಧುರ** = ಚಂದದ, **ವಚನ** = ಮಾತಿನಲ್ಲಿ, **ದಕ್ಷಾ** = ಸಮರ್ಥರಾದ, **ತಂ** = ಕೃಷ್ಣನನ್ನು, **ಜಗುಃ** = ಕೊಂಡಾಡಿದರು, **ತಾಃ** = ಗೋಪಿಯರು, **ಪರೋಕ್ಷಂ** = ಪರೋಕ್ಷವಾಗಿ.

ಕೃಷ್ಣನ ಅದರ್ಶನದಿಂದ ಈ ಹೆಮ್ಮಕ್ಕಳು ಒಮ್ಮೊಮ್ಮೆ ಮನಸ್ಸಿನ ಸ್ಥಿಮಿತವನ್ನು ಕಳೆದು ಕೊಳ್ಳುತ್ತಿದ್ದರು. ಆಗ ಆಡಬಹುದಾದ ಆಡಬಾರದ ಎಲ್ಲಾ ಮಾತುಗಳನ್ನೂ ಆಡುತ್ತಿದ್ದರು. ಶಾಂತಚಿತ್ತರಾದಾಗ ಧ್ಯಾನಿಸುತ್ತಾ ಒತ್ತಟ್ಟಿಗೆ ಇರುತ್ತಿದ್ದರು. ಇಂತಹ ಗೋಪಿಯರು ವಶಪಡಿಸುವ ಸಲುವಾಗಿಯೋ ಎಂಬಂತೆ ಸ್ತುತಿಸಲು ಅಣಿಯಾದರು. ಇವರು ಚೆನ್ನಾಗಿ ಸ್ತುತಿಸುವುದರಲ್ಲಿ ಬಹಳ ಸಮರ್ಥರು. ಆದರೆ ಕೃಷ್ಣನು ಅಷ್ಟು ಬೇಗನೇ ದರ್ಶನ ಕೊಡುವುದಿಲ್ಲ.

ಮಹಾ ಋಷಿಗಳೂ ಕೂಡಾ ಇವನನ್ನು ಕಾಣಲು ಶ್ರಮಿಸುತ್ತಾರೆ ಎಂದು ತಿಳಿಸಲು ಇವ ಶಬ್ದವನ್ನು ಸೇರಿಸಿದ್ದಾರೆ.

**ರೋಮ್ಣಾಂ ಹರ್ಷಣಕಾರಿಣಿ ಶ್ರವಣತಃ ಪಾಪೌಘವಿಧ್ವಂಸಿನಿ**
**ಪ್ರೇಮ್ಣಾ ಚಿಂತಯತಾಂ ವಿಚಿತ್ರವಿಮಲಶ್ಲಾಘ್ಯಾರ್ಥಸಂದಾಯಿನಿ ।**

**ಸಂಜಾತೇ ಭುವಿ ರುಗ್ಮಿಣೀಶವಿಜಯೇ ಸದ್ವಾದಿರಾಜೋದಿತೇ**
**ಸಂಜಾತಃ ಸುರಮಂಡಲೀಷು ಮಹಿತಃ ಸರ್ಗಶ್ಚ ಷಷ್ಠೋ ಮುದಾಮ್ ॥ ೬೭ ॥**

॥ ಇತಿ ಶ್ರೀವಾದಿರಾಜತೀರ್ಥಪ್ರಣೀತರುಕ್ಮಿಣೀಶವಿಜಯೇ ಷಷ್ಠಃ ಸರ್ಗಃ ॥ ೬ ॥

ಈ ಗ್ರಂಥವು ರೋಮಾಂಚಕಾರಿ. ಶ್ರವಣದಿಂದ ಪಾಪವನ್ನು ಪರಿಹರಿಸುತ್ತದೆ. ಭಕ್ತಿಯಿಂದ ಚಿಂತಿಸುವವರಿಗೆ ನಾನಾ ರೀತಿಯ ಒಳ್ಳೆಯ, ಯೋಗ್ಯವಾದ ಅರ್ಥವನ್ನು ಕೊಡುತ್ತದೆ. ಕೃಷ್ಣಾವತಾರ ಆದಾಗ ಒಂದು ಸಂತೋಷ ದೇವತೆಗಳಿಗೆ ಆಗಿತ್ತು. ದೇವತೆ-ಗಳಿಗೆ ಆರನೆಯ ಆನಂದವಾಯಿತು. ಕಾವ್ಯದಲ್ಲಿ ಆರನೆಯ ಸರ್ಗವೂ ಮುಗಿಯಿತು.

ಇಲ್ಲಿಗೆ ಶ್ರೀರುಗ್ಮಿಣೀಶವಿಜಯ ಕನ್ನಡಾನುವಾದದಲ್ಲಿ ಆರನೆಯ ಸರ್ಗವು ಮುಗಿಯಿತು

----

ಶ್ರೀಮಧ್ವೇಶಾರ್ಪಣಮಸ್ತು



ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಂ
ಪ್ರಕ್ಷಯಂ ಯಾಂತಿ ದುಃಖಾನಿ ಯನ್ನಾಮತಃ ।
ಅಕ್ಷರೋ ಯೋಽಜರಃ ಸರ್ವದೈವಾಮೃತಃ
ಕುಕ್ಷಿಗಂ ಯಸ್ಯ ವಿಶ್ವಂ ಸದಾಽಜಾದಿಕಮ್ ॥

ಜೀವರುಗಳ ಆಶಯವೇ ಹೀಗಿದೆ – ಸ್ವಲ್ಪ ಕೆಲಸ ಬಹಳ ಫಲ. ಅಲ್ಪ ಪ್ರಾಯಶ್ಚಿತ್ತ. ಬಹಳ ಸಮಸ್ಯೆಗಳ ಪರಿಹಾರ. ಸಾತ್ವಿಕರ ಇಂತಹ ಆಶಯಕ್ಕೆ ಆಚಾರ್ಯ ಮಧ್ವರು ಸ್ಪಂದಿಸಿದ್ದಾರೆ. ಈ ಮೇಲಿನ ಹಾಡನ್ನು ಹೇಳಿದ್ದಾರೆ. ಜೀವರ ಇಚ್ಛೆ ಈಡೇರದೇಕಾದರೆ ಮಾಡಿದ ಕೆಲಸವನ್ನು ಆ ಆ ದೇವತೆಗಳಿಗೆ ಅರ್ಪಿಸದೆ ಅಂತರ್ಯಾಮಿಯಾದ ದೇವರಿಗೆ ಅರ್ಪಿಸದೇಕು. ಆಗ ಬಹಳ ಸಿಗುವುದು ಮಾತ್ರವಲ್ಲ, ಸಿಕ್ಕಿದ ಫಲ ಮುಗಿಯುವುದೂ ಇಲ್ಲ. ಹಾಗೆಯೇ ಕೆಲವೇ ಸಮಸ್ಯೆಗಳು ಪರಿಹೃತವಾಗದೆ ಎಲ್ಲವೂ ಪರಿಹೃತವಾಗುತ್ತದೆ. ಕೊಡುವ ದೇವರಿಗಂತೂ ಮುಪ್ಪು ಮರಣ ಇಲ್ಲ. ತೆಗೆದುಕೊಳ್ಳುವ ಜೀವರು ಭೂಮಿಯಲ್ಲಿ ಇರುವ ತನಕ ಕೊಡುವನು ನಂತರ ಜೀವರನ್ನೇ ತೆಗೆದು ತನ್ನ ಉದರದಲ್ಲಿ ಇರಿಸುವನು ರಕ್ಷಿಸುವನು.

ಆದ್ದರಿಂದ ಹುಲು ಮಾನವನನ್ನು ಮನ್ನಿಸುವುದು ದೇಡ ದೇವರನ್ನು ಸಂತೋಷಗೊಳಿಸೋಣ.

–ಶ್ರೀ ಶ್ರೀವಿಶ್ವಪ್ರಿಯತೀರ್ಥ ಶ್ರೀಪಾದರು
ಶ್ರೀಅದಮಾರು ಮಠ.

ISBN:978-93-81807-41-5